# ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳ ವಿಶ್ಲೇಷಣೆ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ


ಸಂಶೋಧಕರು

ಶಿವಾನಂದ ಬಸವಣ್ಣೆಪ್ಪ ಟವಳಿ

ಮಾರ್ಗದರ್ಶಕರು

ಡಾ. ಜೆ. ಎ. ಹಡಗಲಿ

ಮುಖ್ಯಸ್ಥರು, ಕನ್ನಡ ವಿಭಾಗ

ಜೆ. ಎಸ್. ಎಸ್. ಮಹಾವಿದ್ಯಾಲಯ, ಧಾರವಾಡ

ಮಾನ್ಯತಾ ಸಂಸ್ಥೆ

ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ,

ವಿದ್ಯಾಗಿರಿ, ಧಾರವಾಡ ೫೮೦೦೦೪





ಭಾಷಾನಿಕಾಯ

ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೧೮

# ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳ ವಿಶ್ಲೇಷಣೆ

ಪಿಹೆಚ್‌ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ



ಸಂಶೋಧಕರು
**ಶಿವಾನಂದ ಬಸವಣ್ಣೆಪ್ಪ ಟವಳಿ**

ಮಾರ್ಗದರ್ಶಕರು
**ಡಾ. ಜೆ. ಎ. ಹಡಗಲಿ**
ಮುಖ್ಯಸ್ಥರು, ಕನ್ನಡ ವಿಭಾಗ
ಜೆ. ಎಸ್. ಎಸ್. ಮಹಾವಿದ್ಯಾಲಯ, ಧಾರವಾಡ

**ಮಾನ್ಯತಾ ಸಂಸ್ಥೆ**
ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ ಸಂಶೋಧನಾ ಕೇಂದ್ರ,
ವಿದ್ಯಾಗಿರಿ, ಧಾರವಾಡ-೫೮೦೦೦೪




ಭಾಷಾ ನಿಕಾಯ
ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ
ಹಂಪಿ – ೫೮೩ ೨೭೬
೨೦೧೮

# ಮಾರ್ಗದರ್ಶಕರ ಪ್ರಮಾಣ ಪತ್ರ

**'ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳ ವಿಶ್ಲೇಷಣೆ'** ಎಂಬ ವಿಷಯದ ಕುರಿತಾದ ಪಿಎಚ್.ಡಿ. ಸಂಶೋಧನಾ ಮಹಾಪ್ರಬಂಧವನ್ನು **ಶಿವಾನಂದ ಬಸವಣ್ಣೆಪ್ಪ ಟವಳಿ** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಸಂಶೋಧನಾ ಮಹಾಪ್ರಬಂಧವು ಇದಕ್ಕೂ ಮೊದಲು ಯಾವುದೇ ಪದವಿಗಾಗಿ ಎಲ್ಲಿಯೂ ಸಾದರಪಡಿಸಿಲ್ಲ ಮತ್ತು ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿಲ್ಲ. ಈ ಪೂರ್ವದಲ್ಲಿ ಪಸ್ತುತ ಮಹಾಪ್ರಬಂಧವು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸಿದ್ದೇನೆ.

ಸ್ಥಳ : ಧಾರವಾಡ

ದಿನಾಂಕ: 22-3-18

**ಡಾ. ಜೆ. ಎ. ಹಡಗಲಿ**

ಮಾರ್ಗದರ್ಶಕರು

ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ

ಸಂಶೋಧನಾ ಕೇಂದ್ರ,

ವಿದ್ಯಾಗಿರಿ, ಧಾರವಾಡ-೫೮೦೦೦೪

# ಘೋಷಣಾ ಪ್ರಮಾಣ ಪತ್ರ

**'ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳ ವಿಶ್ಲೇಷಣೆ'** ಎಂಬ ವಿಷಯದ ಕುರಿತಾದ ಪಿಎಚ್.ಡಿ. ಸಂಶೋಧನಾ ಮಹಾಪ್ರಬಂಧವನ್ನು ನಾನು **ಡಾ. ಜೆ. ಎ. ಹಡಗಲಿ** ಸಹ ಪ್ರಾಧ್ಯಾಪಕರು, ಜೆ. ಎಸ್. ಎಸ್. ಬನಶಂಕರಿ ಕಲಾ, ವಾಣಿಜ್ಯ ಮತ್ತು ಎಸ್. ಕೆ. ಗುಬ್ಬಿ ವಿಜ್ಞಾನ ಮಹಾವಿದ್ಯಾಲಯ, ವಿದ್ಯಾಗಿರಿ, ಧಾರವಾಡ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಸಂಶೋಧನಾ ಮಹಾಪ್ರಬಂಧವು ಇದಕ್ಕೂ ಮೊದಲು ಯಾವುದೇ ಪದವಿಗಾಗಿ ಎಲ್ಲಿಯೂ ಸಾದರಪಡಿಸಿಲ್ಲ ಮತ್ತು ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲ್ಪಟ್ಟಿಲ್ಲ. ಈ ಪೂರ್ವದಲ್ಲಿ ಪಸ್ತುತ ಮಹಾಪ್ರಬಂಧವು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸಿದ್ದೇನೆ.

ಸ್ಥಳ : ಧಾರವಾಡ

ದಿನಾಂಕ: ೨೨-೦೭-೨೦೧೮

**ಶಿವಾನಂದ ಬಸವಣ್ಣೆಪ್ಪ ಟವಳಿ**

ಸಂಶೋಧಕರು

ಜೆ. ಎಸ್. ಎಸ್. ಡಾ. ಡಿ. ವೀರೇಂದ್ರ ಹೆಗ್ಗಡೆ

ಸಂಶೋಧನಾ ಕೇಂದ್ರ,

ವಿದ್ಯಾಗಿರಿ, ಧಾರವಾಡ-೫೮೦೦೦೪

# ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳ ವಿಶ್ಲೇಷಣೆ

## ಪರಿವಿಡಿ


**ಅಧ್ಯಾಯ – ೧**

**ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ** ೧–೧೫

೧.೧ ಪ್ರವೇಶ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

೧.೪ ಅಧ್ಯಯನದ ವಿಧಾನ

೧.೫ ಅಧ್ಯಯನದ ಮಹತ್ವ

**ಅಧ್ಯಾಯ – ೨**

**ಜನಪದ ಗೀತೆಗಳು; ಇದುವರೆಗಿನ ಅಧ್ಯಯನಗಳ ಸಮೀಕ್ಷೆ** ೧೬–೩೭

೨.೧ ಜನಪದ – ಜಾನಪದ

೨.೧.೧ ವಿದೇಶಿ ಚಿಂತನೆಯಲ್ಲಿ ಜಾನಪದ ವ್ಯಾಖ್ಯಾನ

೨.೧.೨ ದೇಶಿ ಚಿಂತನೆಯಲ್ಲಿ ಜಾನಪದ ವ್ಯಾಖ್ಯಾನ

೨.೨ ಜನಪದ ಸಾಹಿತ್ಯ

೨.೨.೧ ಜನಪದ ಸಾಹಿತ್ಯದ ಸ್ವರೂಪ

೨.೨.೨ ಜನಪದ ಗೀತೆ

೨.೨.೩ ಜನಪದ ಗೀತೆಯ ಪ್ರಕಾರಗಳು

೨.೩. ಕನ್ನಡ ಜನಪದ ಗೀತೆಗಳ ಅಧ್ಯಯನಗಳ ಸಮೀಕ್ಷೆ

**ಅಧ್ಯಾಯ – ೩**

**ಸಂಬಂಧದ ಪರಿಕಲ್ಪನೆ** ೩೮–೫೯

೩.೧ ಸಂಬಂಧ ಪದದ ಅರ್ಥ

೩.೨ ಸಂಬಂಧಗಳ ವರ್ಗೀಕರಣ

೩.೩ ಸಂಬಂಧವಾಚಕಗಳು

೩.೩.೧ ಕೌಟುಂಬಿಕ ನೆಲೆಯಲ್ಲಿ ಸಂಬಂಧವಾಚಕಗಳು
೩.೩.೨ ವೈವಾಹಿಕ ನೆಲೆಯಲ್ಲಿ ಸಂಬಂಧವಾಚಕಗಳು
೩.೩.೩ ಸಾಮಾಜಿಕ ನೆಲೆಯಲ್ಲಿ ಸಂಬಂಧವಾಚಕಗಳು
೩.೩.೪ ಇತರೆ ಸಂಬಂಧವಾಚಕಗಳು
೩.೪ ಜನಪದರ ಸಂಬಂಧಗಳ ಸ್ವರೂಪ
**ಅಧ್ಯಾಯ – ೪**
**ಜನಪದರ ಮಾನವ ಸಂಬಂಧಗಳು** **೬೦–೧೫೬**
೪.೧ ಜನಪದರ ಕೌಟುಂಬಿಕ ಸಂಬಂಧಗಳು
೪.೧.೧ ತಂದೆ – ಮಗ
೪.೧.೨ ತಾಯಿ – ಮಗ
೪.೧.೩ ತಂದೆ – ಮಗಳು
೪.೧.೪ ತಾಯಿ – ಮಗಳು
೪.೧.೫ ಅಣ್ಣ – ತಂಗಿ
೪.೧.೬ ಅಣ್ಣ – ತಮ್ಮ
೪.೧.೭ ಅಕ್ಕ – ತಂಗಿ
೪.೧.೮ ಅಕ್ಕ – ತಮ್ಮ
೪.೧.೯ ಅಜ್ಜ–ಅಜ್ಜಿ–ಮೊಮ್ಮಕ್ಕಳು
೪.೨ ಜನಪದರ ವೈವಾಹಿಕ ಸಂಬಂಧಗಳು
೪.೨.೧ ಗಂಡ – ಹೆಂಡತಿ
೪.೨.೨ ಅತ್ತೆ – ಸೊಸೆ
೪.೨.೩ ಮಾವ – ಸೊಸೆ
೪.೨.೪ ಮಾವ – ಅಳಿಯ
೪.೨.೫ ಅತ್ತೆ – ಅಳಿಯ
೪.೨.೬ ಭಾವ – ನಾದಿನಿ
೪.೨.೭ ಅತ್ತಿಗೆ – ನಾದಿನಿ

೪.೨.೮ ಅತ್ತಿಗೆ – ಮೈದುನ
೪.೨.೯ ನೆಗೆಣ್ಣಿ – ಓರಗಿತ್ತಿ
೪.೨.೧೦ ಸೋದರಮಾವ – ಸೋದರ ಸೊಸೆ
೪.೩ ಜನಪದರ ಸಾಮಾಜಿಕ ಸಂಬಂಧಗಳು
೪.೩.೧ ಗುರು–ಶಿಷ್ಯರು
೪.೩.೨ ನಲ್ಲ–ನಲ್ಲೆ
೪.೩.೩ ಗೆಳತಿ–ಗೆಳತಿಯರು
೪.೩.೪ ಗೆಳೆಯ–ಗೆಳೆಯರು
೪.೩.೫ ನೆರೆಹೊರೆಯ ಬಾಂಧವ್ಯ

**ಅಧ್ಯಾಯ – ೫**

**ಜನಪದರ ಮಾನವೇತರ ಸಂಬಂಧಗಳು** ೧೫೭–೧೯೧

೫.೧ ಎತ್ತು ಮತ್ತು ಜನಪದರ ಸಂಬಂಧ
೫.೨ ಭೂಮಿ ಮತ್ತು ಜನಪದರ ಸಂಬಂಧ
೫.೩ ಗ್ರಾಮದೇವತೆ ಮತ್ತು ಜನಪದರ ಸಂಬಂಧ
೫.೪ ದೇವರು ಮತ್ತು ಜನಪದರ ಸಂಬಂಧ
೫.೫ ಪ್ರಕೃತಿ ಮತ್ತು ಜನಪದರ ಸಂಬಂಧ
೫.೬ ಮಳೆ ಮತ್ತು ಜನಪದರ ಸಂಬಂಧ
೫.೭ ಪಶುಪಕ್ಷಿ ಮತ್ತು ಜನಪದರ ಸಂಬಂಧ

**ಅಧ್ಯಾಯ – ೬**

**ಜನಪದರ ಅಲಕ್ಷಿತ ಸಂಬಂಧಗಳು** ೧೯೨–೨೦೯

೬.೧ ಬಂಜೆ ಮತ್ತು ಜನಪದರ ಸಂಬಂಧ
೬.೨ ವಿಧವೆ ಮತ್ತು ಜನಪದರ ಸಂಬಂಧ
೬.೩ ಸವತಿ ಮತ್ತು ಜನಪದರ ಸಂಬಂಧ
೬.೪ ಸೂಳೆ ಮತ್ತು ಜನಪದರ ಸಂಬಂಧ
೬.೫ ಮಲತಾಯಿ ಮತ್ತು ಮಲಮಕ್ಕಳ ಸಂಬಂಧ

**ಅಧ್ಯಾಯ – ೭**

**ಜನಪದರ ಸಂಬಂಧಗಳು ಹಾಗೂ ಆಧುನಿಕತೆಯ ಮುಖಾಮುಖಿ** ೨೧೦–೨೨೯

೭.೧ ಹಳ್ಳಿ ಮತ್ತು ನಗರ

೭.೨ ಬಡವ ಮತ್ತು ಶ್ರೀಮಂತ

೭.೩ ಕೆಳವರ್ಗ ಮತ್ತು ಮೇಲ್ವರ್ಗ

೭.೪ ಅನಕ್ಷರಸ್ಥ ಮತ್ತು ಅಕ್ಷರಸ್ಥ

೭.೫ ಯುವಕರು ಮತ್ತು ವೃದ್ಧರು

೮.೬ ಗಂಡು ಮತ್ತು ಹೆಣ್ಣು

**ಅಧ್ಯಾಯ – ೮**

**ಸಮಾರೋಪ** ೨೩೦–೨೪೯

೮.೧ ಅಧ್ಯಯನದ ಫಲಿತಗಳು

**ಅನುಬಂಧ** ೨೫೦–೨೬೩

ಅನುಬಂಧ ೧ – ಆಕರ ಗ್ರಂಥಗಳು

ಅನುಬಂಧ ೨ – ಪರಾಮರ್ಶನ ಗ್ರಂಥಗಳು

ಅನುಬಂಧ ೩ – ಸಂಶೋಧನಾ ಪ್ರಬಂಧಗಳು

ಅನುಬಂಧ ೪ – ಲೇಖನಸೂಚಿ

ಅನುಬಂಧ ೫ – ವಿಶ್ವಕೋಶ ಹಾಗೂ ನಿಘಂಟುಗಳು

ಅಧ್ಯಾಯ ೧.

# ಅಧ್ಯಯನದ

# ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ಅಧ್ಯಾಯ ೧.

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ೧.೧ ಪ್ರವೇಶ

ಜಗತ್ತು ತುಂಬಾ ವೈವಿಧ್ಯವೂ, ವಿಶಾಲವೂ ಆಗಿದೆ. ಇಂತಹ ಜಗತ್ತಿನಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಪರಿಸರದಲ್ಲಿ ಹೇಗೆ ಭಿನ್ನತೆಯಿದೆಯೋ ಅದೇ ರೀತಿ ಜನರ ಸಂಸ್ಕೃತಿಯಲ್ಲಿ ಭಿನ್ನತೆ ಕಾಣುತ್ತೇವೆ. ಆಯಾ ಪ್ರದೇಶದಲ್ಲಿ ವಾಸಿಸುವ ಜನರು ತಮ್ಮದೇ ಆದ ಸಂಸ್ಕೃತಿಯೊಂದಿಗೆ ಲಿಖಿತ ಹಾಗೂ ಮೌಖಿಕ ಪರಂಪರೆ ಹೊಂದಿದ್ದಾರೆ. ಲಿಪಿಯು ಬರಹಕ್ಕಿಳಿಯುವ ಮುಂಚೆ ವಾಕ್ ಕೌಶಲ್ಯವೇ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ವರ್ಗಾವಣೆಯಾಗುತ್ತಿತ್ತು. ವಾಕ್ ಪರಂಪರೆಯು ಮೊದಲು ಚಿಹ್ನೆ, ಸಂಕೇತಗಳ ಮೂಲಕ ಲಿಪಿಗಿಳಿಯಿತು. ಇದು ಜಗತ್ತಿನ ಅತಿ ದೊಡ್ಡ ಸ್ಥಿತ್ಯಂತರ. ವೇಗವಾಗಿ ಓಡುವ ಆಧುನಿಕ ಜಗತ್ತು ಲಿಪಿಗೆ ಮತ್ತು ಬರಹಕ್ಕೆ ಪ್ರಾಶಸ್ತ್ಯವನ್ನು ನೀಡಿ, ಲೋಕಜ್ಞಾನವುಳ್ಳ ವಾಕ್ ಪರಂಪರೆಯನ್ನು ಕಡೆಗಣಿಸಿತು. ಆದರೆ ಲಿಪಿ ರೂಪಗೊಂಡದ್ದು ವಾಕ್ ಕೌಶಲ್ಯದ ಮೂಲಕ ಎಂಬುದನ್ನು ಮರೆಯುವಂತಿಲ್ಲ. ಈ ಹಿಂದೆ ತನಗರಿವಿಲ್ಲದಂತೆಯೇ ಮಾನವ ಕುಲವು ಬಹುದೊಡ್ಡ ವಾಕ್ ಪರಂಪರೆಯನ್ನು ಸೃಷ್ಟಿಸಿದೆ. ಆಧುನಿಕ ಕಾಲಘಟ್ಟದಲ್ಲಿ ವಾಕ್ ಪರಂಪರೆಯ ಮಹತ್ವ ತಿಳಿದು ಸಂಗ್ರಹ, ಅಧ್ಯಯನದ ಅರಿವು ಮೂಡಿದ ಬಳಿಕ ಇಂದು ಹೆಚ್ಚು ಹೆಚ್ಚು ಸಂಶೋಧನೆಗಳು ನಡೆಯುತ್ತಿವೆ. ಇದರಿಂದ ಮೌಖಿಕ ಪರಂಪರೆಯ ಬಹುದೊಡ್ಡ ಚರಿತ್ರೆಯೇ ರೂಪುಗೊಳ್ಳುತ್ತಿದೆ. ಕಾಲ, ದೇಶಕ್ಕನುಗುಣವಾಗಿ ವೈವಿಧ್ಯತೆ ಕಂಡುಬಂದರೂ, ಇಂದು ಮೌಖಿಕ ಪರಂಪರೆ ಎಲ್ಲ ದೇಶಗಳಲ್ಲೂ ಒಂದೇ ರೀತಿಯ ಗುಣಧರ್ಮಗಳನ್ನು ಹೊಂದಿದೆ. ಪ್ರಸ್ತುತ ಕಾಲಘಟ್ಟದಲ್ಲಿ ಹಲವಾರು ಅಧ್ಯಯನಗಳಿಂದ ಮೌಖಿಕ ಪರಂಪರೆಯು ನೂತನ ಆಯಾಮಗಳನ್ನು ಪಡೆಯುತ್ತಲಿದೆ.

ವಾಕ್ ಕೌಶಲ್ಯಕ್ಕೆ ಲಿಪಿಯು ಬಂದ ಮೇಲೆ ಸಮಾಜದಲ್ಲಿ ತೀವ್ರತರವಾದ ಬದಲಾವಣೆಗಳಾದವು. ಅಕ್ಷರಸ್ಥರು ಮತ್ತು ಅನಕ್ಷರಸ್ಥರೆಂಬ ಎರಡು ವರ್ಗಗಳು ಸಮಾಜದಲ್ಲಿ ಅಸ್ತಿತ್ವಕ್ಕೆ ಬಂದವು. ವಾಕ್ ಕೌಶಲ್ಯದ ಮೂಲಕ ಬಂದ ಪರಂಪರೆಯು ಪರಿಷ್ಕೃತಗೊಂಡು, ಬರಹಕ್ಕಿಳಿದು ಶಿಷ್ಟಪದವಾಯಿತು. ಹಾಗೆಯೇ ಉಳಿದದ್ದು ಜಾನಪದವೆಂದು ಗುರುತಿಸಲ್ಪಟ್ಟಿತು. ಇಷ್ಟಕ್ಕೆ ಲಿಖಿತವಾದುದೆಲ್ಲ ಶಿಷ್ಟ, ಮೌಖಿಕ ಪರಂಪರೆಯಲ್ಲವೂ ಜಾನಪದವೆಂದು ಹೇಳಲಾಗುವುದಿಲ್ಲ. ಲಿಖಿತವಾಗಿರುವ ಸಾಹಿತ್ಯದಲ್ಲಿ ಮೌಖಿಕ ಪರಂಪರೆಯನ್ನು ಅನುಸರಿಸಿದ ಎಷ್ಟೋ ವಿಷಯಗಳು ಅಡಕಗೊಂಡಿವೆ. ಹಾಗೆಯೇ ಮೌಖಿಕವಾಗಿರುವುದರಲ್ಲಿ ಶಿಷ್ಟತೆಯ ಅಂಶಗಳನ್ನು ಕಾಣುತ್ತೇವೆ. ಹಾಗಾಗಿ

ಯಾವುದೇ ಒಂದು ಸಂಸ್ಕೃತಿಯನ್ನು ಅಧ್ಯಯನ ಮಾಡುವಾಗ ಕೇವಲ ಲಿಖಿತ ದಾಖಲೆಗಳೇ ಅಧೀಕೃತವೆಂದು ಭಾವಿಸಲಾಗದು. ಏಕೆಂದರೆ ಮೌಖಿಕ ಪರಂಪರೆಯೂ ಅಷ್ಟೇ ಮುಖ್ಯವಾಗಿರುತ್ತದೆ. ಉದಾಹರಣೆಗೆ ಕರ್ನಾಟಕದ ಸಂಸ್ಕೃತಿ ಕುರಿತಾದ ಅಧ್ಯಯನದ ಶಾಸನ, ಹಸ್ತಪ್ರತಿಗಳೆಷ್ಟು ಮುಖ್ಯವೋ ಅಷ್ಟೇ ಆ ಕಾಲಘಟ್ಟದ ಮೌಖಿಕ ಪರಂಪರೆಯೂ ಮುಖ್ಯವಾಗಿರುತ್ತದೆ. ಮೌಖಿಕ ಪರಂಪರೆಯ ಕುರಿತಾದ ಅಧ್ಯಯನಗಳು ಬಹುಮುಖ ಚಿಂತನೆಗೆ ಅವಕಾಶ ಒದಗಿಸುತ್ತವೆ.

ಲಿಖಿತ ಹಾಗೂ ಮೌಖಿಕ ಪರಂಪರೆಗಳೆರಡೂ ಒಂದಕ್ಕೊಂದು ಪೂರಕ ಸಂಬಂಧ ಹೊಂದಿದ ಅಭಿವ್ಯಕ್ತಿ ಮಾರ್ಗಗಳಾಗಿವೆ. ಕರ್ನಾಟಕದ ಸಂಸ್ಕೃತಿಯನ್ನು ತಿಳಿಯುವಾಗ ಹಲ್ಮಿಡಿ ಶಾಸನ, ಕವಿರಾಜಮಾರ್ಗದಂತಹ ಲಿಖಿತ ದಾಖಲೆಗಳು ಪ್ರಧಾನವಾಗಿರುತ್ತವೆ. ಇಂತಹ ಪ್ರಧಾನ ದಾಖಲೆಗಳಲ್ಲಿಯೂ ಮೌಖಿಕ ಪರಂಪರೆಯ ಕುರುಹುಗಳಿವೆ. ಇವುಗಳಿಂದಾಗಿ ಕರ್ನಾಟಕದ ಮೌಖಿಕ ಪರಂಪರೆಯ ಅಧ್ಯಯನದ ಕುರಿತಾಗಿ ಆಸಕ್ತಿ ಮೊಳೆತು ಎರಡು ಶತಮಾನಗಳೇ ಕಳೆದಿವೆ. ಲಿಖಿತ ಪರಂಪರೆಯು ಕಟ್ಟಿದ ಕರ್ನಾಟಕದ ಸಂಸ್ಕೃತಿಯು ಮೌಖಿಕ ಪರಂಪರೆಯಲ್ಲಿ ಭಿನ್ನವಾಗಿ ಚಿತ್ರಣಗೊಂಡಿದೆ. ಈ ಕುರಿತಾದ ದೀರ್ಘಕಾಲೀನ ಅಧ್ಯಯನಗಳು ಕರ್ನಾಟಕದ ಸಾಂಸ್ಕೃತಿಕ ರೂಪವನ್ನು ಸ್ಪಷ್ಟ ಆಕಾರದಲ್ಲಿ ತರಲು ಪ್ರಯತ್ನಿಸಿವೆ. ಇನ್ನು ಹೆಚ್ಚಿನ ನಿಖರತೆಗಾಗಿ ಮೌಖಿಕ ಪರಂಪರೆಯ ಕುರಿತ ಅಧ್ಯಯನಗಳು ನಡೆಯಬೇಕಿದೆ. ಹಾಗಾದಲ್ಲಿ ಮಾತ್ರ ಕರ್ನಾಟಕದ ಸಂಸ್ಕೃತಿಯು ಅನಾವರಣಗೊಳ್ಳಲು ಸಾಧ್ಯ. ವಿಭಿನ್ನ ಆಲೋಚನಾ ಕ್ರಮಗಳಿಂದ ಜಾನಪದದಲ್ಲಿನ ಸಂಸ್ಕೃತಿಯ ಭಿನ್ನತೆಯನ್ನು ಗುರುತಿಸಲು ಸಾಧ್ಯವಾಗುತ್ತದೆ. ಜಾನಪದವು ಮನುಷ್ಯತ್ವದ ಮೂಲಬೇರುಗಳನ್ನು ಹುಡುಕಿ, ಮಾನವನ ಅಸ್ತಿತ್ವವನ್ನು ಶೋಧಿಸಲು ನೆರವಾಗುತ್ತದೆ. ಮಾನವಿಕ ಅಧ್ಯಯನದ ಭಾಗವಾಗಿ ರೂಪುಗೊಂಡ ಜಾನಪದದ ಅಧ್ಯಯನಗಳು ಇತ್ತೀಚೆಗೆ ಸಾಕಷ್ಟು ಮಹತ್ವವನ್ನು ಪಡೆದುಕೊಂಡಿವೆ.

## ೧.೨ ಅಧ್ಯಯನದ ಉದ್ದೇಶ

ಮಾನವನು ಅನುಭವದಲ್ಲಿದ್ದುಕೊಂಡು ಅನುಭವದೊಳಗಿನ ಎಲ್ಲ ಅಂಶಗಳನ್ನು ತಿಳಿದು ಅದರಂತೆ ಆಚರಿಸಿ ತನ್ನ ಬದುಕಿನ ಸಾರ್ಥಕತೆಗಾಗಿ ಪ್ರಯತ್ನಿಸುತ್ತಾನೆ. ಮಾನವನಿಗೆ ಉಚಿತವಾದ ಅತ್ಯುನ್ನತ ಆದರ್ಶಗಳಿಗಾಗಿ ಬದುಕುವುದರಲ್ಲಿ, ಅವನು ಪರಿಸರ ಹಾಗೂ ವಿಶ್ವದೊಡನೆ ಪ್ರತಿಕ್ರಿಯಿಸುವುದು ಅನಿವಾರ್ಯವಾಗುತ್ತದೆ. ಇಂದು ಸಮಾಜ, ಸಂಸ್ಕೃತಿ, ಮನುಷ್ಯ ಸಂಬಂಧಗಳನ್ನು ಅರ್ಥಮಾಡಿಕೊಳ್ಳಲು ಮಾನವಿಕ ವಿಜ್ಞಾನದ ಅನೇಕ ಶಾಖೆಗಳು ಬೇರೆ ಬೇರೆ ನೆಲೆಯಲ್ಲಿ ಶೋಧಿಸುತ್ತಿವೆ. ಇಂತಹ ಜ್ಞಾನಶಾಖೆಗಳು ಜಾಗತಿಕವಾಗಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆ ಹೊರಟು ಅಲ್ಲಲ್ಲಿಯೇ ನೆಲೆಸುತ್ತವೆ. ಹೀಗೆ ಯುರೋಪ್‌ನಿಂದ ಭಾರತಕ್ಕೆ ವಲಸೆ ಬಂದ ಜ್ಞಾನ ಶಾಖೆಗಳಲ್ಲಿ ಜಾನಪದ ಅಧ್ಯಯನವೂ ಒಂದು. ಹೀಗೆ ವಲಸೆ ಬಂದ ಜಾನಪದ ಅಧ್ಯಯನವು ಭಾರತೀಯ ಚಿಂತನೆಗೆ ಹೊಂದುವಂತೆ ಹಲವು ರೂಪುಗಳನ್ನು ಪಡೆಯುತ್ತಾ ಬಂದಿದೆ. ಕನ್ನಡದಲ್ಲಿನ

ಜಾನಪದ ಅಧ್ಯಯನ ಕ್ರಮವೂ ವಲಸೆ ಬಂದದ್ದು ಪಶ್ಚಿಮದಿಂದಲೇ. ಆದರೆ ಇಂದು ಕನ್ನಡವು ತನ್ನದೇ ಆದ ಅಧ್ಯಯನ ಕ್ರಮವನ್ನು ಹೊಂದಿದೆ. ಕನ್ನಡ ಜಾನಪದ ಅಧ್ಯಯನದಲ್ಲಿ ಅನ್ಯ ಹಾಗೂ ಸ್ವಂತಿಕೆಯ ಮುಖಾಮುಖಿಯನ್ನು ಕಾಣುತ್ತೇವೆ. ಇವುಗಳಿಂದ ನೂತನ ಆಲೋಚನಾ ಕ್ರಮಗಳು ರೂಪುಗೊಳ್ಳುತ್ತವೆ.

ಮಾನವನ ವ್ಯವಸ್ಥಿತ ಬಂಧ-ಸಂಬಂಧಗಳಿಂದ ಸಮಾಜ ರೂಪುಗೊಂಡಿದೆ. ಕಾಲ, ದೇಶ ಮತ್ತು ಪ್ರಾದೇಶಿಕ ಭಿನ್ನತೆಗಳಿಗೆ ಅನುಗುಣವಾಗಿ ಅಲ್ಲಿಯ ಸಂಸ್ಕೃತಿ ನಿರ್ಧಾರವಾಗುತ್ತದೆ. ಆದರೆ ವೇಗವಾಗಿ ಓಡುತ್ತಿರುವ ಜಗತ್ತಿನಲ್ಲಿ ಸಂಸ್ಕೃತಿ ಕುಂಠಿತಗೊಳ್ಳುತ್ತಿದೆ. ಆದ್ದರಿಂದ ನಮಗೆ ಏನೂ ಮಾಡಲು ಸಾಧ್ಯವಾಗುತ್ತಿಲ್ಲ. ಬದಲಾಗುತ್ತಿರುವ ಪ್ರಸ್ತುತ ಜಗತ್ತಿನಲ್ಲಿ ಸಂಸ್ಕೃತಿಯನ್ನು ಕಾಪಾಡಿಕೊಳ್ಳುವುದು ಅಗತ್ಯ. ಬದಲಾದ ಕಾಲಘಟ್ಟದಲ್ಲಿ ಸಂಶೋಧನೆ, ಅಧ್ಯಯನ, ವಿಮರ್ಶೆ, ಚಿಂತನೆಗಳ ಮೂಲಕ ಸಮಾಜದ ಲೋಪದೋಷಗಳನ್ನು ಸರಿಪಡಿಸಿಕೊಳ್ಳಲಾಗುತ್ತಿದೆ. ಏಕೆಂದರೆ ಅಧ್ಯಯನವೆಂಬುದು ಜೀವನದ ಪ್ರತಿಯೊಂದು ಕ್ಷಣದಲ್ಲೂ ನಡೆಯಬಹುದಾದ ಸಹಜ ಕ್ರಿಯೆ. ಸಾಹಿತ್ಯ ಕ್ಷೇತ್ರದಲ್ಲೂ ಇದರ ಕಾರ್ಯವನ್ನು ಅಲ್ಲಗಳೆಯಲಾಗದು. ಜನಪದರ ಜೀವನಾನುಭವವೇ ಜಾನಪದ. ಜಾನಪದದಲ್ಲಿನ ಜನರ ಜೀವನ, ಸಮಾಜ, ಸಂಸ್ಕೃತಿ, ಸಾಹಿತ್ಯ, ಕಲೆ, ಚಿತ್ರಕಲೆ, ವೈದ್ಯ ಪದ್ಧತಿ ಹೀಗೆ ಜಾನಪದದಲ್ಲಿ ಹುದುಗಿರುವ ಅನೇಕ ವಿಷಯಗಳನ್ನು ಅಧ್ಯಯನ ಮಾಡುವುದು ಇಂದು ಅಗತ್ಯವೆನಿಸಿದೆ. ಕನ್ನಡ ಸಾಹಿತ್ಯದ ಅಡಿಪಾಯವೆನಿಸಿದ ಜನಪದ ಸಾಹಿತ್ಯವನ್ನು ತೂಗಿ ನೋಡಿ ಅಲ್ಲಿರುವ ಧನಾತ್ಮಕ ಚಿಂತನೆಗಳನ್ನು ಆಯ್ದುಕೊಂಡು ಪ್ರಸ್ತುತಪಡಿಸಬೇಕಾಗಿದೆ. ಋಣಾತ್ಮಕ ಚಿಂತನೆಗಳನ್ನು ಪರಾಮರ್ಶಿಸಬೇಕಾದ ಅನಿವಾರ್ಯತೆಯಿದೆ. ಇದು ಒಂದು ಸಮಾಜವನ್ನು, ಜನರ ಜೀವನವನ್ನು ರೂಪಿಸುವ ಅಧ್ಯಯನ ಕ್ರಮವಾಗಿದೆ. ಪ್ರಸ್ತುತ ಅಧ್ಯಯನವು ಬೇರೆ ಬೇರೆ ಸಂಸ್ಕೃತಿಯ ನೆಲೆಯಲ್ಲಿ ಚಿಂತಿಸುತ್ತದೆ. ಜನಪದರ ಸಂಸ್ಕೃತಿಯನ್ನು ಬಿಂಬಿಸುವ ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳನ್ನು ವಿಶ್ಲೇಷಣೆಗೆ ಒಳಪಡಿಸುವುದೇ ಪ್ರಸ್ತುತ ಸಂಶೋಧನಾ ಅಧ್ಯಯನದ ಮುಖ್ಯ ಆಶಯವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕಿರುವ ಉದ್ದೇಶಗಳನ್ನು ಕೆಳಕಂಡಂತೆ ಪಟ್ಟಿ ಮಾಡಲಾಗಿದೆ.

೧. ಜನಪದ ಗೀತೆಗಳಲ್ಲಿ ಕಂಡುಬರುವ ಬಂಧ-ಸಂಬಂಧಗಳ ನೆಲೆಯನ್ನು ಗುರುತಿಸುವುದು ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದು. ಕರ್ನಾಟಕದ ಸಂಸ್ಕೃತಿಗೆ ಪ್ರಾಚೀನ ಪರಂಪರೆಯಿದೆ. ಅದಕ್ಕೆ ಜಾನಪದದ ಕೊಡುಗೆ ಅಪಾರವಾದುದು. ಜಾನಪದ ಅಧ್ಯಯನದ ಹಿನ್ನೆಲೆಯಲ್ಲಿ ಸಮಾಜ, ಸಂಸ್ಕೃತಿ, ಚರಿತ್ರೆಯ ಕುರಿತಾಗಿ ವಿಭಿನ್ನ ಗ್ರಹಿಕೆಗಳಲ್ಲಿ ಚಿಂತನೆ ನಡೆದಿದೆ. ಆದರೆ ಪ್ರಸ್ತುತ ಕಾಲಘಟ್ಟದಲ್ಲಿ ಅನ್ಯ ಸಂಸ್ಕೃತಿಯ ಪ್ರಭಾವದಲ್ಲಿ ಕಳೆದುಹೋಗುತ್ತಿರುವ ಕರ್ನಾಟಕದ ಜನಪದ ಸಂಸ್ಕೃತಿಯ ಅನನ್ಯತೆಯನ್ನು ತಿಳಿಸಿಕೊಡುವ ಅಗತ್ಯವಿದೆ. ಕನ್ನಡ ಪರಂಪರೆಯ ಅರಿವನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನ ಅವಶ್ಯವೆನಿಸಿದೆ.

೨. ಜನಪದರ ಆದರ್ಶ ಹಾಗೂ ವಿಷಮ ಸಂಬಂಧಗಳನ್ನು ಪರಿಚಯಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದ್ದು, ಅವರು ಆದರ್ಶ ಜೀವನಕ್ಕೆ ನೀಡಿರುವ ಬೆಂಬಲವನ್ನು ತಿಳಿದು ಬದುಕನ್ನು ಪ್ರೀತಿಸುವ ಗುಣವನ್ನು ಇಂದಿನ ಸಮಾಜವು ಪಡೆಯಬೇಕಾಗಿದೆ. ಆದ್ದರಿಂದ ಮಾದರಿ ಸಂಬಂಧಗಳನ್ನು ಪರಿಚಯಿಸುವುದು ತೀರ ಪ್ರಸ್ತುತವೆನಿಸಿದೆ. ಆಧುನಿಕ ಜಗತ್ತಿನ ವೈಶಿಷ್ಟ್ಯವೆನಿಸಿದ ವ್ಯಾಪಾರೀ ಮನೋಭಾವವು ಅಳಿದು ಮನುಷ್ಯನ ಮನಸ್ಸನ್ನು ಗೆಲ್ಲುವ ಸಾಮಾಜಿಕವಾಗಿ ಸಮಾನ, ಸಹಜ, ಸಹೃದಯ, ಶಾಂತ ವಾತಾವರಣ ನಿರ್ಮಾಣವಾಗಬೇಕಾಗಿದೆ. ಅಂತಹ ನೆಲೆಗಟ್ಟಿನಲ್ಲಿ ಚಿಂತಿಸುವ ಅಗತ್ಯವಿದೆ.

೩. ಜಾತಿ–ಮತ, ಆಸ್ತಿ–ಅಂತಸ್ತು, ಹಣ–ಅಧಿಕಾರಗಳೇ ಪ್ರಧಾನವಾಗಿರುವ ಇಂದಿನ ಕಾಲಘಟ್ಟದಲ್ಲಿ ಮಾನವೀಯ ಸಂಬಂಧಗಳು ಶಿಥಿಲಗೊಳ್ಳುತ್ತಿವೆ. ಇಂತಹ ಸಂದರ್ಭಗಳಲ್ಲಿ ಮಾನವೀಯ ನೆಲೆಗಳನ್ನೊಳಗೊಂಡ ಜನಪದರ ಮಾದರಿ ಸಂಬಂಧಗಳನ್ನು ಪರಿಚಯಿಸುವ ಅಗತ್ಯವಿದೆ. ಇಂದು ಅವಿಭಕ್ತ ಕುಟುಂಬಗಳು ವಿಘಟನೆಗೊಳ್ಳುತ್ತಿರುವುದಕ್ಕೆ ಸಂಬಂಧಗಳಲ್ಲಿನ ವಿಷಮತೆಯೇ ಕಾರಣ. ತಂದೆ–ಮಕ್ಕಳ, ಅಣ್ಣ–ತಮ್ಮಂದಿರ ಹೀಗೆ ಹಲವಾರು ಮಾದರಿ ಸಂಬಂಧಗಳ ಪರಿಚಯದ ಅಗತ್ಯ ಸಮಾಜಕ್ಕಿದೆ. ಇದರಿಂದ ಅಲ್ಪಮಟ್ಟಿಗಾದರೂ ಅವಿಭಕ್ತ ಕುಟುಂಬಗಳ ವಿಘಟನೆ ತಡೆಯಬಹುದೆಂಬ ಸಮಾಜಮುಖಿ ಆಶಯ.

೪. ಆಧುನಿಕತೆಯ ನೆಪದಲ್ಲಿ ಕ್ಷೀಣಗೊಳ್ಳುತ್ತಿರುವ ರಕ್ತಸಂಬಂಧಗಳು, ದೂರದ ನೆಂಟಸ್ತಿಕೆ, ಸ್ನೇಹಮಯ ಸಂಬಂಧಗಳನ್ನು ಪ್ರಸ್ತುತ ಸಮಾಜಕ್ಕೆ ತಿಳಿಸುವ ಉದ್ದೇಶ ಹೊಂದಿದೆ. ಏಕೆಂದರೆ ಪ್ರಸ್ತುತ ಕಾಲಘಟ್ಟದ ಜನರಲ್ಲಿ ಬದಲಾಗುತ್ತಿರುವ ಇಲ್ಲವೇ ನಶಿಸುತ್ತಿರುವ ಮಾನವೀಯ ಸಂಬಂಧಗಳನ್ನು ಬಿಗಿಗೊಳಿಸಲು ಜನಪದರಲ್ಲಿನ ಸಂಬಂಧಗಳನ್ನು ವಿಶ್ಲೇಷಿಸುವ ಅಗತ್ಯವಿದೆ.

೫. ಸಾಂಸ್ಕೃತಿಕ ಬದಲಾವಣೆಯ ದೃಷ್ಟಿಯಿಂದ ಜನಪದ ಸಾಹಿತ್ಯದ ಅಧ್ಯಯನವು ಅವಶ್ಯಕವೆನಿಸಿದೆ. ಏಕೆಂದರೆ ರಕ್ತಸಂಬಂಧಗಳ ಜೊತೆಯಲ್ಲಿಯೇ ಸ್ನೇಹ–ಪ್ರೀತಿ–ವಿಶ್ವಾಸದ ದ್ಯೋತಕವಾಗಿರುವ ಮಾನವೀಯ ಸಂಬಂಧಗಳಲ್ಲಿರುವ ನಂಬಿಕೆಯು ಇಂದು ಮರೆಯಾಗುತ್ತಿದೆ. ಜನಪದರಲ್ಲಿನ ಸಂಬಂಧಗಳನ್ನು ಕಟ್ಟಿಕೊಡುವ ಮೂಲಕ ಪ್ರಸ್ತುತ ನವ ನಾಗರಿಕ ಸಮಾಜವನ್ನು ಬಾಂಧವ್ಯಗಳ ಮೂಲಕ ಪುನರ್ ನಿರ್ಮಾಣ ಮಾಡುವ ಅವಶ್ಯಕತೆಯಿದೆ.

೬. ಜನಪದರು ಸಂಬಂಧಗಳು ಹಾಗೂ ಆಧುನಿಕ ಕಾಲದ ನಾಗರಿಕ ಸಂಬಂಧಗಳು ನಡುವಿನ ವ್ಯತ್ಯಾಸಗಳನ್ನು ಅವಲೋಕನ ಮಾಡುವ ಇಚ್ಛೆಯಿದೆ. ಇದು ಜನಪದರು ಹೊಂದಿದ್ದ ಸಂಬಂಧಗಳು ಮತ್ತು ಪ್ರಸ್ತುತ ಆಧುನಿಕ ಕಾಲಘಟ್ಟದ ಜನರಲ್ಲಿನ ಸಂಬಂಧಗಳ ಕುರಿತು ತಿಳಿಸುವ ಹಾಗೂ ಸಂಬಂಧಗಳನ್ನು ತುಲನಾತ್ಮಕ ದೃಷ್ಟಿಕೋನವನ್ನಿಟ್ಟುಕೊಂಡು ಅಧ್ಯಯನ

ಕೈಗೊಳ್ಳುವ ಉದ್ದೇಶವಿದೆ. ಮಧುರ ಬಾಂಧವ್ಯಗಳ ಪರಿಚಯದೊಂದಿಗೆ ಗತಕಾಲದ ಅಪರೂಪದ ಸಂಬಂಧಗಳನ್ನು ಪ್ರಸ್ತುತ ಸಮಾಜಕ್ಕೆ ತಿಳಿಸಿಕೊಡುವ ಅಗತ್ಯತೆಯಿದೆ.

೭. ಜನಪದರ ಸಂಬಂಧಗಳಲ್ಲಿ ಮಾನವೀಯ ಮೌಲ್ಯಗಳು ಮನೆಮಾಡಿವೆ. ಜನಪದರಲ್ಲಿನ ಸಂಬಂಧಗಳ ಜೊತೆಗೆ ತ್ಯಾಗ, ಮಮತೆ, ವಾತ್ಸಲ್ಯ, ಪ್ರೀತಿ, ಪ್ರೇಮ, ಸ್ನೇಹ, ಸಹೋದರತೆ, ಬಲಿದಾನ, ಸರಸ, ಕಕ್ಕುಲಾತಿ, ಕೃತಜ್ಞತೆ ಮುಂತಾದ ಮಾನವೀಯ ಮೌಲ್ಯಗಳನ್ನು ಪರಿಚಯ ಮಾಡಿಕೊಡುವುದು ಸಂಶೋಧನಾ ಅಧ್ಯಯನದ ಉದ್ದೇಶವಾಗಿದೆ.

೮. ಜನಪದ ಗೀತೆಗಳಲ್ಲಿ ಕಂಡುಬರುವ ಅಲಕ್ಷಿತ ಸಂಬಂಧಗಳನ್ನು ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶಗಳಲ್ಲಿ ಒಂದು. ಜನಪದರ ಸಂಬಂಧಗಳಲ್ಲಿನ ಆಚರಣೆ, ನಿಷೇಧಗಳ ಕುರಿತಾಗಿ ತಿಳಿಯುವ ಪ್ರಯತ್ನವನ್ನು ಇಲ್ಲಿ ಮಾಡುವ ಹಂಬಲವಿದೆ.

೯. ಜನಪದ ಗೀತೆಗಳಲ್ಲಿನ ಮಾನವೇತರ ಸಂಬಂಧಗಳನ್ನು ವಿಶ್ಲೇಷಿಸುವ ಉದ್ದೇಶವಿದೆ. ಕೇವಲ ಮಾನವ–ಮಾನವರ ನಡುವಿನ ಸಂಬಂಧಗಳಷ್ಟೇ ಅಲ್ಲದೇ ದೇವರು, ಬಸವ (ಎತ್ತು), ಪ್ರಕೃತಿ, ಭೂಮಿ, ಪಶುಪಕ್ಷಿಗಳೊಂದಿಗೆ ಜನಪದರು ಹೊಂದಿರುವ ಅವಿನಾಭಾವ ಸಂಬಂಧಗಳ ಕುರಿತಾಗಿ ಚರ್ಚಿಸುವ ಉದ್ದೇಶವಿದೆ. ಬಹುಪಾಲು ಶ್ರಮಿಕರಾದ ಜನಪದರು ಪ್ರಾಣಿ, ಪಕ್ಷಿ, ಪರಿಸರದೊಂದಿಗೆ ನಿತ್ಯವೂ ವ್ಯವಹರಿಸುತ್ತಾರೆ. ಅಂತಹ ಅಪರೂಪದ ಬಾಂಧವ್ಯಗಳನ್ನು ಅವಲೋಕಿಸುವ ಕಾರ್ಯವು ಪ್ರಸ್ತುತ ಅಧ್ಯಯನದಿಂದ ನಡೆಯಬೇಕಿದೆ.

೧೦. ಸಮಾಜದಲ್ಲಿ ಏರ್ಪಟ್ಟ ಅಸಮಾನತೆಯನ್ನು ತೊಡೆದು ಬದುಕುವ ಅನಿವಾರ್ಯತೆ ಇಂದಿನ ಜಗತ್ತಿಗೆ ಉಂಟಾಗಿದೆ. ದುರ್ಬಲರ ಬದುಕು ಉತ್ತಮವಾಗಿ ರೂಪುಗೊಳ್ಳಲು ಪ್ರಸ್ತುತ ಅಧ್ಯಯನ ನೆರವಾಗಬಲ್ಲುದು. ಜನಪದ ಗೀತೆಗಳಲ್ಲಿನ ಅಭಿವ್ಯಕ್ತವಾದ ಜನಪದರ ಸಂಸ್ಕೃತಿಯ ಸರ್ವಸಮತಾವಾದದ ಸಂಬಂಧಗಳು ಸಹಕಾರಿಯಾಗಿದೆ.

ಕನ್ನಡ ಜಾನಪದ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಆರಂಭಕಾಲದ ಅಧ್ಯಯನಗಳನ್ನು ಅವಲೋಕಿಸಿದಾಗ ಸಂಗ್ರಹ ಹಾಗೂ ಸಮೀಕ್ಷೆ ಮಾದರಿಗಳೇ ಹೆಚ್ಚಾಗಿವೆ. ಅನಂತರದ ಅವಧಿಯಲ್ಲಿ ವಿಮರ್ಶಾ ಮಾದರಿಗಳು ಬಂದವು. ಇತ್ತೀಚಿನ ಕಾಲಘಟ್ಟಗಳಲ್ಲಿ ಜಾನಪದ ಅಧ್ಯಯನವು ತಾತ್ವಿಕ ಸ್ವರೂಪವನ್ನು ಪಡೆಯುತ್ತಿದೆ. ಅದು ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಕೌಟುಂಬಿಕ ಹೀಗೆ ಬಹುಶಿಸ್ತೀಯ ನೆಲೆಯಲ್ಲಿ ಶೋಧನಾ ಕಾರ್ಯವು ನಡೆಯುತ್ತಿದೆ. ಜನಪದರ ಸಂಬಂಧಗಳ ನೆಲೆಯಲ್ಲಿ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯನ್ನು ಚಿಂತನೆಗೊಳಪಡಿಸುವುದು ಪ್ರಸ್ತುತ ಅಧ್ಯಯನದ ಆಶಯವಾಗಿದೆ. ಸಂಶೋಧನೆಯ ಮಹತ್ವವನ್ನು ಕೇವಲ ಜಾನಪದ ಸಂಗ್ರಹ,

ಸಮೀಕ್ಷೆಗಳಿಗೆ ಮೀಸಲಾಗಿರಿಸದೇ ಸಾಂಸ್ಕೃತಿಕ ನೆಲೆಯಲ್ಲಿ ಸಂಬಂಧಗಳನ್ನು ವಿಶ್ಲೇಷಿಸುವ ಅಧ್ಯಯನವೆಂದು ಪರಿಗಣಿಸಿ ಕನ್ನಡದ ಚಿಂತನೆಯಾಗಿ ಗ್ರಹಿಸಬೇಕಾಗಿದೆ.

### ೧.೩ ಅಧ್ಯಯನದ ಸ್ವರೂಪ ಮತ್ತು ವ್ಯಾಪ್ತಿ

ಜನಪದ ಸಾಹಿತ್ಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಾಗ ಸಹಜವಾಗಿಯೇ ಎರಡು ಪ್ರಶ್ನೆಗಳು ಆರಂಭದಲ್ಲಿ ಒಡಮೂಡುತ್ತವೆ. ಮೊದಲನೆಯದು ಜನಪದ ಸಾಹಿತ್ಯದ ಯಾವ ಪ್ರಕಾರವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ ? ಎಂಬುದು. ಏಕೆಂದರೆ ಜನಪದ ಸಾಹಿತ್ಯದಲ್ಲಿ ಜನಪದ ಗೀತೆ, ಜನಪದ ಕಥೆ, ಒಗಟು, ಒಡಪು ಮತ್ತು ಗಾದೆಗಳು ಹೀಗೆ ಅನೇಕ ಪ್ರಕಾರಗಳಿವೆ. ಈ ಪ್ರಕಾರಗಳಲ್ಲಿ ನಿಖರವಾಗಿ ಯಾವ ಪ್ರಕಾರವೆಂಬುದನ್ನು ನಿರ್ದಿಷ್ಟಪಡಿಸಬೇಕಾಗುತ್ತದೆ. ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳ ವಿಶ್ಲೇಷಣೆ ಎಂಬುದು ಅಧ್ಯಯನದ ವಿಷಯವಾಗಿದ್ದು, ಶೀರ್ಷಿಕೆಯಲ್ಲಿಯೇ 'ಜನಪದ ಗೀತೆ' ಎಂದು ಸ್ಪಷ್ಟವಾಗಿ ತಿಳಿಸಿ ಮೂಡಬಹುದಾದ ಗೊಂದಲವನ್ನು ನಿವಾರಿಸಲಾಗಿದೆ. ಜನಪದ ಗೀತೆಗಳಲ್ಲಿ ಕಂಡುಬರುವ ಕೌಟುಂಬಿಕ, ವೈವಾಹಿಕ, ಸಾಮಾಜಿಕ ಹಾಗೂ ಮಾನವೇತರ ಸಂಬಂಧಗಳನ್ನು ವಿಶ್ಲೇಷಿಸುವುದೇ ಅಧ್ಯಯನದ ಮುಖ್ಯ ತಿರುಳಾಗಿದೆ. ಇದರೊಂದಿಗೆ ಜನಪದರ ಆಚರಣೆಗಳು, ಸಂಸ್ಕಾರಗಳು, ನಂಬಿಕೆಗಳು, ಜೀವನದೃಷ್ಟಿ, ಜೀವನ ವಿಧಾನ, ದೇವರು, ಧಾರ್ಮಿಕ ವಿಧಾನಗಳು, ಪರಸ್ಪರ ಸಂಬಂಧಗಳು, ಹಬ್ಬ-ಹರಿದಿನಗಳು ಮುಂತಾದ ಅಂಶಗಳೂ ಕೂಡ ಸ್ಪಷ್ಟವಾಗುತ್ತವೆ.

ಜನಪದ ಗೀತೆಗಳಲ್ಲಿ ವಿದ್ವಾಂಸರು ಅನೇಕ ಪ್ರಕಾರಗಳನ್ನು ಗುರುತಿಸಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ಗಂಡಸರ ಮತ್ತು ಹೆಂಗಸರ ಹಾಡುಗಳೆಂದು ಕೆಲವರು ಗುರುತಿಸಿದ್ದಾರೆ. ಇವುಗಳನ್ನು ಮತ್ತೆ ವಿಭಜಿಸಿ ಕುಟ್ಟುವ ಪದಗಳು, ಬೀಸುವ ಪದಗಳು, ಹಂತಿ ಪದಗಳು, ಕೆಲಸದ ಹಾಡುಗಳು, ಆಚರಣೆಗೆ ಸಂಬಂಧಿಸಿದ ಹಾಡುಗಳು, ಋತು ಮತ್ತು ವೃತ್ತಿ ಸಂಬಂಧಿತ ಗೀತೆಗಳು, ರಸಾನುಭೂತಿ ಗೀತೆಗಳು ಈ ಪ್ರಕಾರವಾಗಿ ಹಲವಾರು ವಿಧಗಳಲ್ಲಿ ಗೀತೆಗಳನ್ನು ವಿಂಗಡಿಸಿದ್ದಾರೆ. ಹಲವಾರು ವಿದ್ವಾಂಸರು ಸಂಗ್ರಹಿಸಿ, ಸಂಪಾದಿಸಿದ ಜನಪದ ಗೀತೆಗಳು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ.

ಜನಪದ ಸಾಹಿತ್ಯವು ಜಾನಪದದ ಅವಿಭಾಜ್ಯ ಅಂಗ. ಜಾನಪದದಲ್ಲಿ ಕಲೆಯ ಮುಖವೂ ಇದೆ; ಶಾಸ್ತ್ರದ ಮುಖವೂ ಇದೆ. ಕಲೆಯ ಮುಖ ಆಸ್ವಾದನೆಗೆ ಸಂಬಂಧಿಸಿದ್ದಾದರೆ, ಶಾಸ್ತ್ರದ ಮುಖ ಅಧ್ಯಯನಕ್ಕೆ ಸಂಬಂಧಿಸಿದ್ದು. ಸಂಗ್ರಹ, ವಿಭಜನೆ, ವಿಶ್ಲೇಷಣೆ, ಅಧ್ಯಯನ ಇವುಗಳಿಂದ ಯಾವುದೇ ನಿರ್ಣಾಯಕ ಘಟ್ಟಕ್ಕೆ ತಲುಪಿದೊಡನೆ ವಾಸ್ತವವಾಗಿ ಶಾಸ್ತ್ರದ ಭಾಗ ಮುಗಿದಂತೆ. ಜಾನಪದ ಅಧ್ಯಯನ ಎನ್ನುವುದು ಕೇವಲ ಒಂದು ಶಾಸ್ತ್ರವಲ್ಲ; ಅದು ಹಲವು ಶಾಸ್ತ್ರಗಳ ಸಮಷ್ಟಿ. ಅನಕ್ಷರಸ್ಥರ, ನಾಗರಿಕತೆಯ

ಕೆಳಹಂತದ ಜನರ ಪಾಲಿಗೆ ಅದೊಂದು ವಿಶ್ವಕೋಶ. ಎಲ್ಲ ಜನರ ಬಾಹ್ಯ ಮತ್ತು ಆಂತರಿಕ ಜೀವನ ಕ್ರಮಗಳು, ನಡಾವಳಿಗಳು, ನಂಬಿಕೆಗಳು, ಆಚರಣೆಗಳು ಇತ್ಯಾದಿ ಜಾನಪದದ ಪರಿಧಿಯಲ್ಲಿ ಸಮಾವೇಶಗೊಳ್ಳುತ್ತವೆ. ಆದ್ದರಿಂದ ಜಾನಪದವನ್ನು ಶಾಸ್ತ್ರ ಮತ್ತು ಕಲೆಗಳಿಗೆ ಸಂಬಂಧಿಸಿದಂತೆ ವಿಭಿನ್ನ ಆಯಾಮಗಳಲ್ಲಿ ಅಭ್ಯಸಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಜನಪದರ ಸಂಬಂಧಗಳನ್ನು ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ.

ಎರಡನೆಯದಾಗಿ ಪ್ರಸ್ತುತ ಅಧ್ಯಯನವು ಯಾವ ಕಾಲಘಟ್ಟದ ಮಿತಿಯೊಳಗೆ ನಡೆಯುತ್ತದೆ ? ಎಂಬ ಪ್ರಶ್ನೆ ಒಡಮೂಡುತ್ತದೆ. ಇದನ್ನು ನಿರ್ದಿಷ್ಟಪಡಿಸಬೇಕಾದರೆ ಕನ್ನಡ ಜನಪದ ಸಾಹಿತ್ಯ ಬೆಳೆದು ಬಂದ ಮಾರ್ಗವನ್ನು ಅವಲೋಕಿಸಿಬೇಕಾಗುತ್ತದೆ. ಆಯಾ ಅವಧಿಯ ಮುಖ್ಯ ಧೋರಣೆಯನ್ನು ಆಧರಿಸಿ ನಂ. ತಪಸ್ವೀಕುಮಾರ್ ಅವರು ಕನ್ನಡ ಜನಪದ ಸಾಹಿತ್ಯಾಧ್ಯಯನದಲ್ಲಿ ಆರು ವಿಭಾಗಗಳನ್ನಾಗಿ ವಿಂಗಡಿಸಿ ಈ ಕೆಳಕಂಡಂತೆ ಅವುಗಳನ್ನು ಹೆಸರಿಟ್ಟು ಕರೆಯುವುದರಲ್ಲಿ ಔಚಿತ್ಯವಿದೆ ಎಂದಿದ್ದಾರೆ. ಅವುಗಳೆಂದರೆ–

"೧. ೧೯೦೦ಕ್ಕಿಂತ ಹಿಂದಿನ ಕಾಲ – ಪೋಷಕ ಯುಗ

೨. ೧೯೦೧–೧೯೩೦ರ ಅವಧಿ – ಅರುಣೋದಯ ಕಾಲ

೩. ೧೯೩೧–೧೯೫೦ರ ಅವಧಿ – ಪ್ರಥಮ ಸುವರ್ಣಸಂಚಯ ಘಟ್ಟ

೪. ೧೯೫೧–೧೯೬೦ರ ಅವಧಿ – ಸಮೃದ್ಧ ಸುಗ್ಗಿಯ ಕಾಲ

೫. ೧೯೬೧–೧೯೭೦ರ ಅವಧಿ – ನವಮನ್ವಂತರ ದಶಕ

೬. ೧೯೭೧–೧೯೮೦ರ ಅವಧಿ – ದ್ವಿತೀಯ ಸುವರ್ಣಸಂಚಯ ಘಟ್ಟ" (ನಂ. ತಪಸ್ವೀಕುಮಾರ್, ೧೯೮೧, ಪು–೨೫) ಹೀಗೆ ಕಾಲವನ್ನಿಟ್ಟುಕೊಂಡು ವಿಭಾಗಿಸಿ ವಿಂಗಡಣೆಯನ್ನು ಸೌಲಭ್ಯದ ಹಾಗೂ ದಶಕದ ಪ್ರಧಾನ ಲಕ್ಷಣಗಳ ಆಧಾರದ ಮೇಲೆ ಮಾಡಿಕೊಂಡಿರುವುದಾಗಿ ತಿಳಿಸಿದ್ದಾರೆ.

ಕನ್ನಡ ಜನಪದ ಸಾಹಿತ್ಯದ ಸಂಗ್ರಹ, ಸಂಪಾದನೆ ಹಾಗೂ ಅಧ್ಯಯನಗಳು ಸಾಗಿಬಂದ ಮಾರ್ಗವನ್ನು ಅನುಲಕ್ಷಿಸಿ ಪ್ರಸ್ತುತ ಅಧ್ಯಯನದಲ್ಲಿ ಕಾಲಘಟ್ಟದ ಪರಿಮಿತಿಯೊಳಗೆ ಮೂರು ಹಂತದಲ್ಲಿ ವಿಂಗಡಣೆಯನ್ನು ಗುರುತಿಸಿಕೊಂಡಿದ್ದೇನೆ. ಅವು–

೧. ೧೯೨೦–೧೯೬೦ರ ಅವಧಿ – ಅರುಣೋದಯ ಕಾಲ

೨. ೧೯೬೧–೧೯೮೦ರ ಅವಧಿ – ಸಮೃದ್ಧತೆಯ ಕಾಲ

೩. ೧೯೮೧ರಿಂದ ಈವರೆಗೆ – ಆಧುನಿಕ ಕಾಲಘಟ್ಟ

ಕನ್ನಡ ಜಾನಪದ ಸಂಗ್ರಹ, ಸಂಪಾದನೆ, ಅಧ್ಯಯನ, ಸಂಶೋಧನೆಗಳೆಡೆಗೆ ಮೊದಲು ಗಮನ ಹರಿಸಿದವರು ಪಾಶ್ಚಾತ್ಯ ವಿದ್ವಾಂಸರು. ಆಡಳಿತ, ಧರ್ಮಪ್ರಚಾರ ಮುಂತಾದ ಉದ್ದೇಶಗಳಿಗಾಗಿ

ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ನೆಲೆಸಿದ್ದ ಅವರು ಕನ್ನಡ ಜಾನಪದ ಕ್ಷೇತ್ರಕ್ಕೆ ಮುನ್ನುಡಿ ಹಾಡಿದರು. ಪಾಶ್ಚಾತ್ಯರ ಪ್ರೇರಣೆಯಿಂದಾಗಿ ಜನಪದ ಸಾಹಿತ್ಯದ ಸತ್ವವನ್ನು ಬಲ್ಲಂತಹ ಕನ್ನಡದ ವಿದ್ವಾಂಸರು ಸಂಗ್ರಹ ಕಾರ್ಯವನ್ನು ಆರಂಭಿಸಿದರು. ಕನ್ನಡ ಜನಪದ ಸಾಹಿತ್ಯಾಧ್ಯಯನ ಆರಂಭಕಾಲದಲ್ಲಿ ಪತ್ರಿಕೆಗಳು ಪ್ರಚಾರದ ಮೂಲಕ ಪ್ರಚೋದನೆಗೆ ಒಳಗಾಯಿತು. ನಂ. ತಪಸ್ವೀಕುಮಾರ್ ಅಭಿಪ್ರಾಯದಂತೆ "೧೯೧೯ರ ಜನವರಿಯಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾದ 'ಲಾವಣಿಗಳು' ಎಂಬ ಲೇಖನವೇ ನನಗೆ ತಿಳಿದಮಟ್ಟಿಗೆ ಕನ್ನಡ ಜನಪದ ಗೀತೆಯನ್ನು ಕುರಿತಂತೆ ಕನ್ನಡದಲ್ಲಿ ಪ್ರಕಟವಾದ ಪ್ರಥಮ ಲೇಖನ" (ನಂ. ತಪಸ್ವೀಕುಮಾರ್, ೧೯೮೧, ಪು–೬೯) ಎಂದು ಗುರುತಿಸಿದ್ದಾರೆ. ಹೀಗೆ ಪ್ರಾರಂಭಗೊಂಡು ಕನ್ನಡ ಜನಪದ ಸಾಹಿತ್ಯಕ್ಕೆ ಅಡಿಪಾಯ ಒದಗಿಸಿಕೊಟ್ಟಿತು. ಜನಪದ ಸಾಹಿತ್ಯದ ಸೊಗಸು ಆ ಕಾಲದ ಬರಹಗಾರರನ್ನು ಆಕರ್ಷಿಸಿತು. ನವೋದಯ ಸಾಹಿತ್ಯದ ಪ್ರಭಾವದಿಂದಾಗಿ 'ಜನಪದ ಗೀತೆ' ಎಂಬ ಹೆಸರಿನಲ್ಲಿ ಜನಪದರ ಜೀವನಾನುಭವಗಳು ಸಂಗ್ರಹವಾಗತೊಡಗಿದವು. ೧೯೩೧ರಲ್ಲಿ ಪ್ರಕಟಗೊಂಡ 'ಗರತಿಯ ಹಾಡು' ಎಂಬ ಜನಪದ ಗೀತೆಗಳ ಸಂಕಲನವು ಬಿಡಿ ಜನಪದ ಗೀತೆಗಳ ಸಂಗ್ರಹವಾಗಿದೆ. ಹಲಸಂಗಿ ಗೆಳೆಯರಾದ ಸಿಂಪಿ ಲಿಂಗಣ್ಣ, ಕಾಪಸೆ ರೇವಪ್ಪ, ಮಧುರಚೆನ್ನ, ಪಿ. ಧೂಲಾ ಸಾಹೇಬ ಅವರ ಸಂಗ್ರಹ ಕಾರ್ಯವು ಶ್ಲಾಘನೀಯವಾದದು. ಜನಪದ ಗೀತೆಗಳ ಈ ಸಂಗ್ರಹ ಕಾರ್ಯವು ಮುಂದಿನ ಸಂಗ್ರಹಕಾರರಿಗೆ ಪ್ರೇರಣೆ ಒದಗಿಸಿತು.

ಸಮಾಜದಲ್ಲಿರುವ ಉತ್ತಮ ಗೀತೆಗಳನ್ನು ಆಯ್ದು ಸಂಗ್ರಹಿಸುವ ಉದ್ದೇಶದಿಂದ ಇದೇ ಹಲಸಂಗಿ ಗೆಳೆಯರು 'ಜೀವನ ಸಂಗೀತ'(೧೯೩೩), 'ಮಲ್ಲಿಗೆ ದಂಡೆ'(೧೯೩೫) ಎಂಬ ಸಂಕಲನಗಳನ್ನು ಹೊರತಂದರು. ಸಮಾಜಕ್ಕೆ ಮಾದರಿಯೆನಿಸುವ ಉತ್ತಮ ಗೀತೆಗಳನ್ನು ಸಂಗ್ರಹಿಸುವ ತಮ್ಮ ಉದ್ದೇಶವನ್ನು ಗರತಿಯ ಹಾಡು ಕೃತಿಯ ಅರಿಕೆಯಲ್ಲಿಯೇ ಹೇಳಿಕೊಂಡಿದ್ದಾರೆ. ಇದು 'ಈಜು ಮರಿಬೇಡ ಜೂಜು ಕಲಿಬೇಡ' ಎಂಬ ಗಾದೆಯಂತೆಯೇ ಸಮಾಜಕ್ಕೆ ಆದರ್ಶ ಸಂಸ್ಕೃತಿಯನ್ನು ಮಾತ್ರ ಒದಗಿಸಬೇಕೆಂಬ ಉದ್ದೇಶವನ್ನು ಹೊಂದಿದ್ದರೆಂಬುದು ತಿಳಿದುಬರುತ್ತದೆ.

ಇದಕ್ಕೂ ಪೂರ್ವದಲ್ಲಿ ನಡಕೇರಿಯಂಡ ಚಿಣ್ಣಪ್ಪ ಸಂಪಾದಿತ 'ಪಟ್ಟೋಳೆ ಪಳಮೆ' (೧೯೨೪)ಯು ಕೊಡಗಿನ ಸಂಸ್ಕೃತಿಯನ್ನು ಆಧರಿಸಿದ ಗೀತೆಗಳನ್ನು ಹೊಂದಿದೆ. ಮುಂದೆ ಅರ್ಚಕ ರಂಗಸ್ವಾಮಿಯ ಸಂಪಾದಿತ 'ಹುಟ್ಟಿದ ಹಳ್ಳಿಯ ಹಾಡು'(೧೯೩೩), ದೇವುಡು ನರಸಿಂಹಶಾಸ್ತ್ರಿಯ ಸಂಪಾದಿತ 'ಕರ್ನಾಟಕ ಸಂಸ್ಕೃತಿ'(೧೯೩೫), ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸಂಪಾದಿತ ಕರ್ನಾಟಕ 'ಜನಪದ ಸಾಹಿತ್ಯ'(೧೯೩೭), ವಿಠೋಬ ತೊರ್ಕೆ ಅವರ 'ಹಳ್ಳಿಯ ಹಾಡುಗಳು'(೧೯೩೩), ಮ. ಗ. ಶೆಟ್ಟಿ ಬಂಕಿಕೋಡ್ಲ ಸಂಪಾದಿತ 'ಒಕ್ಕಲಿಗರ ಹಾಡು'(೧೯೨೮), ಜಿ ಎನ್ ರಂಗಸ್ವಾಮಿ 'ಕೆಲವು ಹಳ್ಳಿಯ ಹಾಡುಗಳು'(೧೯೩೫), ಎಸ್. ಪಿ. ರಂಗಣ್ಣನವರ 'ಹಳ್ಳಿಯ ಹಾಡುಗಳು'(೧೯೩೫), ಗೊರೂರು

ರಾಮಸ್ವಾಮಿ ಅಯ್ಯಂಗಾರ್ ಅವರ 'ಹಳ್ಳಿಯ ಹಾಡುಗಳು'(೧೯೩೮), 'ಹಳ್ಳಿಯ ಬಾಳು'(೧೯೪೩), ಬೆಟಗೇರಿ ಕೃಷ್ಣಶರ್ಮ ಅವರ 'ಕರ್ನಾಟಕ ಜನಜೀವನ'(೧೯೩೯) ಎನ್. ಅನಂತರಂಗಾಚಾರ್ 'ಮನೌಮಿಯ ಚೌಪದ'(೧೯೪೦), ಬಿ. ಎನ್. ರಂಗಸ್ವಾಮಿ ಅವರ 'ಹಳ್ಳಿಯ ಪದಗಳು'(೧೯೪೦), ಎಂ. ಎಸ್. ಅನಂತಪದ್ಮನಾಭರಾಯರು ಸಂಪಾದಿಸಿದ 'ಕೊಡಗಿನ ಜನಪದ ಸಾಹಿತ್ಯ'(೧೯೪೫) ಮೊದಾದದ ಸಂಗ್ರಹಗಳು ಸ್ವಾತಂತ್ರ್ಯ ಸಿಗುವ ಪೂರ್ವದಲ್ಲಿ ಸಂಗ್ರಹವಾದವು.

ಸ್ವಾತಂತ್ರ್ಯ ನಂತರದಲ್ಲಿ ಎಲ್. ಗುಂಡಪ್ಪ ಅವರ 'ನಾಡಪದಗಳು'(೧೯೪೭), 'ಅರುಂಧತಿ'(೧೯೫೧), 'ನಮ್ಮ ಹಳ್ಳಿಯ ಹಾಡುಗಳು'(೧೯೫೨), ಕೆ. ಆರ್. ಲಿಂಗಪ್ಪ ಅವರ 'ಮನೌಮಿ ಪದಗಳು'(೧೯೪೫), 'ಮಲೆನಾಡ ಮಡಿಲಲ್ಲಿ'(೧೯೫೪), ಬಸವರಾಜ ಕಟ್ಟೀಮನಿ ಸಂಪಾದಿತ 'ನವಿಲೂರ ಮನೆಯಿಂದ'(೧೯೫೨), ಬಿ. ಎಸ್. ಗದ್ದಗಿಮಠ ಅವರ 'ನಾಲ್ಕು ನಾಡಪದಗಳು'(೧೯೫೨), 'ಕನ್ನಡ ಜನಪದ ಗೀತೆಗಳು'(೧೯೫೫), 'ಕಂಬಿಯ ಹಾಡುಗಳು'(೧೯೫೫), 'ಜನತಾ ಗೀತೆಗಳು'(೧೯೫೬), ದೊಡ್ಡ ಭಾವೆಪ್ಪ ಮೂಗಿ ಸಂಪಾದಿತ 'ದೊರೆ ಮಲ್ಲಸಜ್ಜನ ದುಂದುಮಿ'(೧೯೫೧), 'ಕಿತ್ತೂರ ಕಾಳಗ'(೧೯೫೯), ಗೊ. ರು. ಚನ್ನಬಸಪ್ಪ ಸಂಪಾದಿತ 'ಬಾಗೂರು ನಾಗಮ್ಮ ಮತ್ತು ಇತರ ಹಾಡು'(೧೯೫೩), 'ಮೈದುನ ರಾಮಣ್ಣ'(೧೯೫೬), ಕರಾಕೃ ಸಂಪಾದಿತ 'ಜಾನಪದ ಕಥನ ಗೀತೆಗಳು'(೧೯೫೯), 'ಆಯ್ದ ಮುತ್ತುಗಳು'(೧೯೫೮), 'ಆಯ್ದ ನಾಡ ಹಾಡುಗಳು'(೧೯೬೧), 'ಮಲ್ಲಿಗೆ ನಗುತಾವ'(೧೯೫೮), 'ಆಯ್ದ ಜನಪದ ಗೀತೆಗಳು'(೧೯೬೦), 'ಜೇನ ಹನಿಗಳು', 'ಜಾನಪದ ಪ್ರೇಮಗೀತೆಗಳು', 'ಅಂಬಿಗರ ಗಂಗ ಮತ್ತು ಇತರ ಹಾಡುಗಳು'(೧೯೫೭), ಎಂ. ಬಿ. ಮರಕಿಣಿ ಸಂಪಾದಿತ 'ದಕ್ಷಿಣ ಕನ್ನಡದ ಜಾನಪದ ಗೀತೆಗಳು'(೧೯೬೦), ಸ. ಚ. ಮಹದೇವನಾಯಕ ಸಂಪಾದಿತ 'ಹಳ್ಳಿಯ ಹಾಡುಗಳು'(೧೯೫೮), ಜೀ. ಶಂ. ಪರಮಶಿವಯ್ಯ ಸಂಪಾದಿತ 'ಅವರ ನೆನೆದೆವು'(೧೯೬೦), ಹಾರೇಶ ಮೇಟಿ ಸಂಪಾದಿತ 'ಹಂತಿಯ ಪದಗಳು'(೧೯೬೦), ಎ. ಸಿ. ಅಂಚಗಿಮಠ ಸಂಪಾದಿತ 'ಹಂತಿಯ ಪದಗಳು'(೧೯೫೯), ಬಿ. ಜಿ. ಜಾನಕಿ ಸಂಪಾದಿತ 'ಹಂತಿಯ ಪದಗಳು'(೧೯೫೯), ಎಸ್. ಸಾಲಿಮಠ ಅವರ 'ಹಂತಿಯ ಹಾಡುಗಳು'(೧೯೫೭), ವಿನೀತ ರಾಮಚಂದ್ರರಾಯ ಅವರ 'ಹಳ್ಳಿಯ ಹಾಡುಗಳು'(೧೯೬೦), ಹೆರೂರು ಮೆನನ್ ಸಂಪಾದಿತ 'ತವರೂರ ಹರಕೆ'(೧೯೫೫), ಎಚ್. ಎಮ್. ಶಂಕರನಾರಾಯಣ್ ಸಂಪಾದಿತ 'ಜನಪದ ಮುಕ್ತಕಗಳು'(೧೯೫೩), ಪದಾರು ಮಹಾಬಲೇಶ್ವರ ಭಟ್ ಸಂಪಾದಿತ 'ಜಾನಪದ ಸಾಹಿತ್ಯ'(೧೯೫೫), 'ಹೆಮ್ಮೆಕ್ಕಳ ಹಾಡುಗಳು'(೧೯೫೬), ಎಂ. ಜೀವನ್ ಸಂಪಾದಿತ 'ಜಾನಪದ ಗೀತೆಗಳು'(೧೯೫೫), ಈಶ್ವರಚಂದ್ರ ಚಿಂತಾಮಣಿ ಸಂಪಾದಿತ 'ಗರತಿಯ ಮನೆಯಿಂದ'(೧೯೫೫) ಹೀಗೆ ೧೯೬೦ರ ಪೂರ್ವದಲ್ಲಿ ಅನೇಕ ಜನಪದ ಗೀತೆಗಳ ಸಂಗ್ರಹಗಳು ಹೊರಬಂದವು.

ಕನ್ನಡ ಜನಪದ ಸಾಹಿತ್ಯ ಸಂಗ್ರಹ ಕಾರ್ಯವು ಸಾಗಿ ಬಂದ ಮಾರ್ಗವನ್ನು ಅವಲೋಕಿಸಿ ಪ್ರಸ್ತುತ ಅಧ್ಯಯನದ ಅನುಕೂಲತೆಗಾಗಿ ೧೯೩೧ ರಿಂದ ೧೯೬೦ರ ವರೆಗಿನ ನಿರ್ದಿಷ್ಟ ಕಾಲಾವಧಿಯನ್ನು ನಿಗದಿಪಡಿಸಿಕೊಳ್ಳಲಾಗಿದೆ. ಈ ಕಾಲಾವಧಿಯಲ್ಲಿ ಸಂಗ್ರಹಗೊಂಡ ಆಯ್ದ ಕೆಲವು ಜನಪದ ಗೀತೆಗಳ ಸಂಗ್ರಹಗಳನ್ನು ಪ್ರಸ್ತುತ ಅಧ್ಯಯನಕ್ಕೆ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ನವೋದಯ ಸಾಹಿತ್ಯದ ಪ್ರೇರಣೆಯೊಂದಿಗೆ ಆರಂಭದ ಕಾಲಘಟ್ಟದಲ್ಲಿ ಜನಪದ ಗೀತೆ ಹಾಗೂ ಗಾದೆಗಳು ಸಾಕಷ್ಟು ಪ್ರಮಾಣದಲ್ಲಿ ಸಂಗ್ರಹಗೊಂಡವು. ಮೊದಲ ಘಟ್ಟದ ಜಾನಪದ ಸಾಹಿತ್ಯ ಸಂಗ್ರಹಕ್ಕೆ ಅದರದ್ದೇ ಆದ ಮಹತ್ವವಿದೆ. ಇಲ್ಲಿ ಜನಪದರ ಬದುಕಿನ ರೀತಿ-ನೀತಿ, ಆಚಾರ-ವಿಚಾರ, ಸಂಸ್ಕೃತಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಒದಗಿಸಲಾಗಿತ್ತು. ನಂತರದ ಕಾಲಘಟ್ಟದಲ್ಲಿ ಸಂಗ್ರಹ ಕಾರ್ಯದ ಜೊತೆಗೆ ಸಂಶೋಧನೆಯಲ್ಲಿ ವಿಶ್ಲೇಷಣಾ ಮಾದರಿಯ ಅಧ್ಯಯನಗಳು ಬೆಳೆದು ಬಂದವು.

ಜನಪದ ಗೀತೆಗಳ ಸಂಪಾದನಾ ಕಾರ್ಯವು ಕನ್ನಡದ ಮಟ್ಟಿಗೆ ಸಾಕಷ್ಟು ನಡೆದಿದೆ. ಆರಂಭಕಾಲದಲ್ಲಿ ನವೋದಯ ಸಾಹಿತ್ಯದ ಪ್ರೇರಣೆಯೊಂದಿಗೆ ೧೯೬೦ಕ್ಕೂ ಪೂರ್ವದಲ್ಲಿ ಜನಪದ ಗೀತೆಗಳ ಸಂಗ್ರಹಗಳು ಸಾಕಷ್ಟು ಹೊರಬಂದಿವೆ. ಅವುಗಳಲ್ಲಿ ಪಸ್ತುತ ಅಧ್ಯಯನಕ್ಕೆ ಈ ಕೆಳಕಂಡ ಕೃತಿಗಳನ್ನು ಮೂಲ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

- ಗರತಿಯ ಹಾಡು (೧೯೩೧) – (ಸಂ.) ಹಲಸಂಗಿ ಗೆಳೆಯರು
- ಜೀವನ ಸಂಗೀತ (೧೯೩೩) – (ಸಂ.) ಹಲಸಂಗಿ ಗೆಳೆಯರು
- ಮಲ್ಲಿಗೆ ದಂಡೆ (೧೯೩೫) – (ಸಂ.) ಕಾಪಸೆ ರೇವಪ್ಪ
- ಹಳ್ಳಿಯ ಹಾಡುಗಳು(೧೯೩೮) – (ಸಂ.) ಗೊರೂರು ರಾಮಸ್ವಾಮಿ ಅಯ್ಯಂಗಾರ್
- ಹೆಣ್ಣು ಮಕ್ಕಳ ಪದಗಳು – (ಸಂ.) ತೀ. ನಂ. ಶ್ರೀಕಂಠಯ್ಯ
- ಹಳ್ಳಿಯ ಬಾಳು (೧೯೪೩) – (ಸಂ.) ಗೊರೂರು ರಾಮಸ್ವಾಮಿ ಅಯ್ಯಂಗಾರ್
- ನಾಡಪದಗಳು (೧೯೪೭) – (ಸಂ.) ಎಲ್. ಗುಂಡಪ್ಪ
- ನಮ್ಮ ಹಳ್ಳಿಯ ಹಾಡುಗಳು (೧೯೫೨) – (ಸಂ.) ಮತಿಘಟ್ಟ ಕೃಷ್ಣಮೂರ್ತಿ
- ನಾಲ್ಕು ನಾಡಪದಗಳು (೧೯೫೨) – (ಸಂ.) ಬಿ.ಎಸ್. ಗದ್ದಗೀಮಠ
- ನವಿಲೂರ ಮನೆಯಿಂದ (೧೯೫೨) – (ಸಂ.) ಬಸವರಾಜ ಕಟ್ಟೀಮನಿ
- ಕರ್ನಾಟಕದ ಜಾನಪದ ಗೀತೆಗಳು(೧೯೫೩)–(ಸಂ.) ಆರ್. ಎಸ್. ಪಂಚಮುಖಿ
- ಹೆಣ್ಣು ಮಕ್ಕಳ ಪದಗಳು(೧೯೫೩) – ತೀ. ನಂ. ಶ್ರೀಕಂಠಯ್ಯ
- ಕನ್ನಡ ಜಾನಪದ ಗೀತೆಗಳು (೧೯೫೫) – (ಸಂ.) ಬಿ. ಎಸ್. ಗದ್ದಗಿಮಠ

- ಜನಪದ ಗೀತೆ (೧೯೫೫) – (ಸಂ.) ಎಸ್. ಕೆ. ಕರೀಂಖಾನ್
- ಜನತಾ ಗೀತೆಗಳು (೧೯೫೬) – (ಸಂ.) ಬಿ. ಎಸ್. ಗದ್ದಗಿಮಠ
- ಜೇನ ಹನಿಗಳು (೧೯೫೭) – (ಸಂ.) ಕರಾಕೃ
- ಜಾನಪದ ಪ್ರೇಮಗೀತೆಗಳು (೧೯೫೭) – (ಸಂ.) ಕರಾಕೃ
- ಅಂಬಿಗರ ಗಂಗ ಮತ್ತು ಇತರ ಹಾಡುಗಳು (೧೯೫೭) – (ಸಂ.) ಕರಾಕೃ
- ಆಯ್ದ ಮುತ್ತುಗಳು (೧೯೫೮) – (ಸಂ.) ಕರಾಕೃ
- ಮಲ್ಲಿಗೆ ನಗುತಾವೆ (೧೯೫೮) – (ಸಂ.) ಕರಾಕೃ
- ಜನಪದ ಕಥನ ಗೀತೆಗಳು (೧೯೫೯) – (ಸಂ.) ಕರಾಕೃ
- ಹಳ್ಳಿಯ ಹಾಡುಗಳು (೧೯೬೦) – (ಸಂ.) ವಿನೀತ ರಾಮಚಂದ್ರರಾಯ
- ಅವರ ನೆನೆದೆವು (೧೯೬೦) – (ಸಂ.) ಜೀ. ಶಂ. ಪರಮಶಿವಯ್ಯ

ಈ ಮೇಲೆ ಸೂಚಿಸಿದ ಪ್ರಾಥಮಿಕ ಆಕರಗಳನ್ನು ಆಧಾರವಾಗಿಟ್ಟುಕೊಂಡು ಆಧುನಿಕ ಪರಂಪರೆಗೆ ಜನಪದರ ಮಾದರಿ ಸಂಬಂಧಗಳನ್ನು ಸಮಾಜಕ್ಕೆ ತಿಳಿಸುವ ಅಂಶವು ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿದೆ. ಇಲ್ಲಿ ನವೋದಯ ಕಾಲಘಟ್ಟವನ್ನು ಪರಿಗಣನೆಗೆ ತೆಗೆದುಕೊಂಡು ಆ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ಕೆಲವು ಆಯ್ದ ಸಂಪಾದಿತ ಜನಪದ ಗೀತೆಗಳ ಸಂಕಲನಗಳಲ್ಲಿ ಹುದುಗಿರುವ ಸಂಬಂಧಗಳ ನೆಲೆ, ಮೌಲ್ಯಗಳನ್ನು ತಿಳಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಹೊಂದಿದೆ. ಈ ಅಧ್ಯಯನದ ಉದ್ದೇಶಗಳು ಈಡೇರುವ ಸಲುವಾಗಿ ಸಂದರ್ಭಕ್ಕನುಗುಣವಾಗಿ, ದೃಷ್ಟಾಂತಗಳನ್ನು ನೀಡುವುದಕ್ಕಾಗಿ ಜನಪದ ಗೀತೆಗಳನ್ನು ಆಕರ ಕೃತಿಗಳಿಂದ ಬಳಸಿಕೊಳ್ಳಲಾಗಿದೆ.

## ೧.೪ ಅಧ್ಯಯನದ ವಿಧಾನ

ಜಾನಪದ ವಿಮರ್ಶೆ, ಜಾನಪದ ಚಿಂತನೆಗಳ ಮರುವಿಮರ್ಶೆ, ಸಂಗ್ರಹಿತ ಪಠ್ಯಗಳನ್ನು ವ್ಯಾಖ್ಯಾನಿಸುವುದು ಪ್ರಸ್ತುತ ಅಧ್ಯಯನದ ಕೆಲಸವಲ್ಲ. ಕನ್ನಡ ಜನಪದ ಗೀತೆಗಳಲ್ಲಿ ಕಂಡುಬರುವ ಸಂಬಂಧಗಳನ್ನು ವಿಶ್ಲೇಷಿಸುವುದೇ ಅಧ್ಯಯನದ ಮುಖ್ಯ ಉದ್ದೇಶವೆಂದು ಈ ಹಿಂದೆಯೇ ಸ್ಪಷ್ಟಪಡಿಸಲಾಗಿದೆ. ಈಗಾಗಲೇ ವಿದ್ವಾಂಸರು ಸಂಗ್ರಹಿಸಿದ ಜನಪದ ಗೀತೆಗಳನ್ನು ಆಧಾರವಾಗಿಟ್ಟುಕೊಂಡು ಅಭ್ಯಾಸ ಮಾಡಿ, ಅವುಗಳಲ್ಲಿ ಕಂಡುಬರುವ ಸಂಬಂಧಗಳನ್ನು ವಿಶ್ಲೇಷಿಸುವುದು ಅಧ್ಯಯನದ ಉದ್ದೇಶ. ಈಗಾಗಲೇ ಸಂಗ್ರಹಿಸಲಾದ ಕನ್ನಡ ಜನಪದ ಗೀತೆಗಳ ಸಂಕಲನಗಳನ್ನು ಅಧ್ಯಯನಕ್ಕೆ ಆಕರಗಳನ್ನಾಗಿ ಬಳಸಲಾಗಿದೆ. ಅಗತ್ಯವೆನಿಸಿದ ಸಂದರ್ಭಗಳಲ್ಲಿ

ಜನಪದ ಸಾಹಿತ್ಯದ ಇತರೆ ಪ್ರಕಾರದ ಕೃತಿಗಳನ್ನು ಅಧ್ಯಯನಕ್ಕೆ ಪೂರಕವಾಗಿ ಪರಾಮರ್ಶಿಸಲಾಗಿದೆ. ಆದ್ದರಿಂದ ಜಾನಪದ ಅಧ್ಯಯನ ಮಾದರಿಗಳಲ್ಲಿ ಒಂದಾದ ಕ್ಷೇತ್ರಕಾರ್ಯವು ಪ್ರಸ್ತುತ ಪ್ರಬಂಧಕ್ಕೆ ಅನ್ವಯಿಸುವುದಿಲ್ಲ.

ಕನ್ನಡದಲ್ಲಿ ಸಾಹಿತ್ಯ ಸಂಶೋಧನೆಗಾಗಿ ಸಮೀಕ್ಷಾ ಮಾದರಿ, ಸಂಗ್ರಹ ಮಾದರಿ, ವಿಶ್ಲೇಷಣಾ ಮಾದರಿ, ತೌಲನಿಕ ಮಾದರಿ ಹೀಗೆ ಇನ್ನೂ ಅನೇಕ ಅಧ್ಯಯನದ ಮಾದರಿಗಳಿವೆ. ಆದರೆ ಪ್ರಸ್ತುತ ಅಧ್ಯಯನವು ವಿಶ್ಲೇಷಣಾ ಮಾದರಿಗೆ ಸೇರಿದ್ದಾಗಿದೆ. ಕನ್ನಡ ಜಾನಪದ ಸಂಶೋಧನೆಗಳ ಹಿನ್ನೆಲೆಯನ್ನು ಗಮನಿಸಿದಾಗ ಸಂಗ್ರಹ, ಸಂಪಾದನೆ ಕಾರ್ಯ ಈ ಹಿಂದೆ ಸಾಕಷ್ಟು ನಡೆದಿವೆ. ನಂತರದಲ್ಲಿ ಜಾನಪದದಲ್ಲಿನ ಸಾಹಿತ್ಯ, ಛಂದಸ್ಸು ಹಾಗೂ ಭಾಷೆ ಕುರಿತಾದ ಅಧ್ಯಯನಗಳು ಪ್ರಾಶಸ್ತ್ಯ ಪಡೆದವು. ಪ್ರಸ್ತುತ ಕಾಲಘಟ್ಟದಲ್ಲಿ ಸಂಶೋಧನಾ ಅಧ್ಯಯನವು ವಿಭಿನ್ನ ಆಯಾಮಗಳತ್ತ ಮುಖ ಮಾಡಿದ್ದು, ಜಾನಪದದಲ್ಲಿ ತಾತ್ವಿಕತೆ, ತಾತ್ವಿಕ ಸ್ವರೂಪ, ಸಾಮಾಜಿಕ, ಚಾರಿತ್ರಿಕ ಹಾಗೂ ಮನಃಶಾಸ್ತ್ರೀಯ ಮೌಲ್ಯಗಳ ಕುರಿತಾದ ಅಧ್ಯಯನಗಳತ್ತ ಸಂಶೋಧನೆ ನಡೆಯುತ್ತಿದೆ. ಅಂತಹದೇ ಪ್ರಯತ್ನ ಪ್ರಸ್ತುತ ಅಧ್ಯಯನದ ಮೂಲ ಉದ್ದೇಶಗಳಲ್ಲಿ ಒಂದಾಗಿದೆ. ಆದ್ದರಿಂದ ಅನೇಕ ವಿದ್ವಾಂಸರು ಸಂಗ್ರಹಿಸಿದ ಜಾನಪದ ಪಠ್ಯಗಳನ್ನು ಅಧ್ಯಯನಕ್ಕೆ ಪ್ರಾಥಮಿಕ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಜನಪದರ ಜೀವನವನ್ನು ಬಿಂಬಿಸುವ ಬಿಡಿ ಗೀತೆಗಳನ್ನು ಇಲ್ಲಿ ಸಂದರ್ಭೋಚಿತವಾಗಿ ಬಳಸಲಾಗಿದೆ. ಅಲ್ಲದೇ ಕಥನಗೀತಗಳು, ಲಾವಣಿಗಳು, ಗೀಗೀ ಪದಗಳು ಮುಂತಾದ ಪ್ರಕಾರಗಳನ್ನು ಅವಶ್ಯವಿದ್ದಲ್ಲಿ ಪರಿಗಣನೆಗೆ ತೆಗೆದುಕೊಂಡು ಅಧ್ಯಯನ ಮಾಡಲಾಗಿದೆ.

ಜಾನಪದ ಗೀತೆಗಳಲ್ಲಿನ ಸಂಬಂಧಗಳನ್ನು ಹುಡುಕುವಾಗ ಕೇವಲ ಜಾನಪದ ಶಿಸ್ತನ್ನು ಅವಲಂಬಿಸಬೇಕಿಲ್ಲ. ಮಾನವಿಕ ವಿಜ್ಞಾನದ ಹಲವು ಶಾಖೆಗಳಾದ ಸಮಾಜಶಾಸ್ತ್ರ, ಮಾನವಶಾಸ್ತ್ರ, ಸಾಹಿತ್ಯ ಅಧ್ಯಯನ, ಇತಿಹಾಸ, ಮಹಿಳಾ ಅಧ್ಯಯನ ಮುಂತಾದ ಜ್ಞಾನಶಾಖೆಗಳ ಹಿನ್ನೆಲೆಯಲ್ಲಿ ಜನಪದ ಗೀತೆಗಳಲ್ಲಿ ಸಂಬಂಧಗಳನ್ನು ಗುರುತಿಸಿ ವಿಶ್ಲೇಷಿಸಬಹುದಾಗಿದೆ. ಜನಪದರ ಉದ್ದೇಶದಂತೆ ಇಲ್ಲಿ ಅವರ ಮನೋಭಾವಗಳ ಹಿನ್ನೆಲೆಯಲ್ಲಿ ಸಂಬಂಧಗಳನ್ನು ಚರ್ಚಿಸಲಾಗಿದೆ. ಸಾಹಿತ್ಯ ರಚನೆಯು ಅವರ ಉದ್ದೇಶಕ್ಕೆ ಹೊರತಾಗಿದ್ದು, ಮೌಲ್ಯ, ತತ್ವ, ಸಂಬಂಧ ಇವುಗಳನ್ನು ಮಾನವನಲ್ಲಿ ರೂಪಿಸಿ, ಉತ್ತಮ ಸಮಾಜ ನಿರ್ಮಾಣವೇ ಅವರ ಉದ್ದೇಶವಾಗಿತ್ತು. ಜನಪದರ ಆಶಯವನ್ನು ಗಮನದಲ್ಲಿ ಇಟ್ಟುಕೊಂಡು ಅಧ್ಯಯನ ಸಾಗುತ್ತದೆ. ಈಗಾಗಲೇ ಹೇಳಿರುವಂತೆ ಸಂಗ್ರಹಿತ ಜಾನಪದ ಗೀತೆಗಳ ಪಠ್ಯಗಳೇ ಮೂಲ ಆಕರಗಳಾಗಿರುವುದರಿಂದ ಕ್ಷೇತ್ರ ಕಾರ್ಯವು ಪ್ರಸ್ತುತ ಅಧ್ಯಯನದ ವಿಧಾನವಲ್ಲ.

## ೧.೪ ಅಧ್ಯಯನದ ಮಹತ್ವ

ಮಾನವರು ಸಾಮಾಜಿಕ ಜೀವನವನ್ನು ಜೀವಿಸಲು ಪ್ರಾರಂಭಿಸಿದಂದಿನಿಂದಲೇ ಸಾಹಿತ್ಯ, ಕಲೆ, ಸಂಸ್ಕೃತಿಗಳು ಬೆಳೆಯತೊಡಗಿದವು. ಹೀಗೆ ಜನರ ಜೀವನದೊಂದಿಗೆ ಹುಟ್ಟಿಕೊಂಡಿದ್ದು ಜಾನಪದ. ತಮ್ಮ ಜೀವನವನ್ನು ಸರಳ, ಸುಂದರಗೊಳಿಸಿಕೊಳ್ಳುವುದಕ್ಕಾಗಿ ಸಾಹಿತ್ಯವನ್ನು ಸೃಷ್ಟಿ ಮಾಡಿಕೊಂಡರು. ಸರಳವೂ, ನೇರವೂ ಆಗಿರುವ ಸಾಹಿತ್ಯವೂ ಜನಪದರ ವಾಸ್ತವ ಜೀವನಕ್ಕೆ ನಿಕಟ ಸಂಬಂಧ ಹೊಂದಿದೆ. ಜನಪದರ ಜೀವನದಲ್ಲಿ ನೋವಿದೆ–ನಲಿವಿದೆ, ಹುಟ್ಟಿದೆ–ಸಾವಿದೆ, ಮಾವಿದೆ–ಬೇವಿದೆ ಹೀಗೆ ಕಂಡುಬಂದ ಏರಿಳಿತಗಳನ್ನು ಅವರು ಅಭಿವ್ಯಕ್ತಿಸಿದ್ದಾರೆ. ಜನಪದರ ಜೀವನದ ಕೆಲವೊಂದು ಮೌಲ್ಯಗಳು ಆಧುನಿಕ ಯುಗದ ನವಪೀಳಿಗೆಗೆ ಮಾದರಿಯೆನಿಸಿವೆ. ಅಂತಹ ಶ್ರೇಷ್ಠ ಮೌಲ್ಯಗಳ ಕುರಿತು ಬೆಳಕು ಚೆಲ್ಲುವುದರೊಂದಿಗೆ ಸಮಾಜದ ಬದುಕನ್ನು ಸುಧಾರಿಸುವುದು ಅಧ್ಯಯನದ ಪ್ರಮುಖ ಅಂಶಗಳಲ್ಲಿ ಒಂದಾಗಿದೆ.

ಜಾನಪದವು ಅಕ್ಷಯ ಪಾತ್ರೆಯಿದ್ದಂತೆ. ಪಾತ್ರೆಯಲ್ಲಿ ಕೈ ಹಾಕಿದಂತೆಲ್ಲ ಹೊಸಹೊಸದು ಶೋಧನೆ ಆಗುತ್ತಲಿದೆ. ಪ್ರತಿಯೊಂದು ಅಧ್ಯಯನವು ಜಾನಪದದಲ್ಲಿನ ಅನೇಕ ಅಂಶಗಳನ್ನು ಹುಡುಕಿ ತೆಗೆಯುವ ಪ್ರಯತ್ನ ಮಾಡುತ್ತ ಬಂದಿವೆ. ಇಲ್ಲಿ ಜ್ಞಾನ, ಚರಿತ್ರೆ, ಅನುಭವ, ಬದುಕು, ಸಂಸ್ಕೃತಿ, ಸಾಹಿತ್ಯ, ಸಿದ್ಧಾಂತ ಮೊದಲಾದ ಮಹತ್ವದ ಅಂಶಗಳು ಹುದುಗಿವೆ. ಹಲವಾರು ಸಂಶೋಧನಾ ಅಧ್ಯಯನಗಳ ನೆರವಿನೊಂದಿಗೆ ಅವುಗಳನ್ನು ಸಮಾಜದ ಮುಂದೆ ತರಬಹುದಾಗಿದೆ.

ಸರಳವಾಗಿ ಬದುಕಿದ ಜನಪದರು ಆದರ್ಶ ಜೀವನ ನಡೆಸಿದ್ದಾರೆ. ಅವರ ಬದುಕಲ್ಲಿ ನೋವಿದ್ದಾಗಲೂ, ಕಷ್ಟವಿದ್ದಾಗಲೂ ಆದರ್ಶಗಳನ್ನು ಬಿಟ್ಟುಕೊಡದ ಅವರ ಬದುಕು ಇಂದಿಗೂ ಅನುಕರಣೀಯ. ಆದ್ದರಿಂದ ಪ್ರಸ್ತುತ ಅಧ್ಯಯನವು ಜನಪದರ ಬದುಕನ್ನು ಅನಾವರಣಗೊಳಿಸಿ, ಇತರರಿಗೆ ಮಾದರಿಯಾಗುವಂತೆ ಪ್ರೇರಣೆ ಒದಗಿಸುತ್ತದೆ. ಆಧುನೀಕರಣ, ಪಾಶ್ಚಾತೀಕರಣ, ಜಾಗತೀಕರಣ, ಖಾಸಗೀಕರಣ, ಕೈಗಾರೀಕರಣದ ಸಂದರ್ಭದಲ್ಲಿ ಬದಲಾದ ಮತ್ತು ಬದಲಾಗುತ್ತಿರುವ ಜೀವನ ಕ್ರಮದ ಬಗ್ಗೆ ಬಡಿದೆಚ್ಚರಿಸುವ ಕಾರ್ಯ ಪ್ರಸ್ತುತ ಅಧ್ಯಯನದಿಂದಾಗುತ್ತದೆ ಎಂಬ ಆಶಯವಿದೆ.

ತಂದೆ–ತಾಯಿ–ಮಕ್ಕಳೆಂಬ ಸಂಬಂಧಗಳು ಕೃತಕವಾಗಿ, ಯಾಂತ್ರಿಕ ಬದುಕಿನಲ್ಲಿರುವ ಜನರಿಗೆ ಜನಪದರ ಅನ್ಯೂನ್ಯ ಮಾದರಿ ಸಂಬಂಧಗಳು ದಾರಿದೀಪವಾಗಬಹುದು. ಅಂತೆಯೇ ಜನಪದ ಸಾಹಿತ್ಯ ಕುರಿತು ವಿಶ್ಲೇಷಣಾತ್ಮಕ ಶೈಲಿಯ ಅಧ್ಯಯನವು ಸಾಹಿತ್ಯದ ಬೆಳವಣಿಗೆಗೆ ಹಾಗೂ ಜನಪದ ಸಂಪ್ರದಾಯ ಉಳಿವಿಗೆ ನೆರವನ್ನು ನೀಡುತ್ತದೆ. ಅಲ್ಲದೇ ಪ್ರಸ್ತುತ ಅಧ್ಯಯನದ ಮಹತ್ವವನ್ನು ಗುರುತಿಸುತ್ತಾ ಹೋದರೆ ಕೌಟುಂಬಿಕ, ವೈವಾಹಿಕ, ಸಾಮಾಜಿಕ ಹಾಗೂ ವಿಶೇಷ ಸಂಬಂಧಗಳ

ಕುರಿತಂತೆ ಜ್ಞಾನವನ್ನು ನೀಡುತ್ತದೆ. ಸಮಾಜ, ಕುಟುಂಬದಲ್ಲಿನ ಬಾಂಧವ್ಯಗಳನ್ನು ಅನಾವರಣಗೊಳಿಸುವ ಮಹತ್ವದ ಸದಾಶಯಗಳನ್ನು ಹೊಂದಿದೆ.

ಮಾನವನ ಸಂವೇದನೆಗಳ ಸೂಕ್ಷ್ಮತೆ ಹಾಗೂ ಹರವು ಚಿಂತಿಸಿದಷ್ಟೂ ಗಹನವಾದದ್ದು. ಅಂತರಂಗದ ಭಾವನೆಗಳು ಹೊರಹೊಮ್ಮಲು ಯಾವಾಗಲೂ ತುಡಿಯುತ್ತವೆ. ಅನೇಕ ಸಂದರ್ಭಗಳಲ್ಲಿ ಜನಪದರ ಒಳಹೊರಗಿನ ಸಂಸ್ಕಾರ, ಆಚರಣೆ, ನಂಬಿಕೆ ಹಾಗೂ ಸಾಮಾನ್ಯ ಜೀವನವು ಜನಪದ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಜನಪದ ಸಾಹಿತ್ಯವು ಸಾಮಾನ್ಯ ಜನರಿಂದ ರೂಪುಗೊಂಡ ಸರಳ, ಸಹಜ, ಸುಂದರ ಸಾಹಿತ್ಯವಾಗಿದೆ. ಇಂತಹ ಸಾಹಿತ್ಯದಲ್ಲಿ ಕೃತಕ ವರ್ಣನೆಗಳು ಕಡಿಮೆ. ಪ್ರಸ್ತುತ ಕಾಲಘಟ್ಟದಲ್ಲಿ ಜನಪದ ಸಾಹಿತ್ಯವನ್ನು ವಿವಿಧ ಮಗ್ಗಲುಗಳಿಂದ ಅಭ್ಯಸಿಸುವುದು ಪ್ರಯೋಜನಕಾರಿ. ಮಾನವೀಯ ಮೌಲ್ಯಗಳು ನಶಿಸುತ್ತಿರುವ ಜಾಗತೀಕರಣದ ಸಂದರ್ಭದಲ್ಲಿ ಪ್ರಸ್ತುತ ಅಧ್ಯಯನವು ಮಹತ್ವ ಪಡೆಯುತ್ತದೆಂಬ ನಂಬಿಕೆಯನ್ನು ಹೊಂದಲಾಗಿದೆ.

# ಅಧ್ಯಾಯ ೨

# ಜನಪದ ಗೀತೆಗಳು:

# ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಅಧ್ಯಾಯ ೨.

# ಜನಪದ ಗೀತೆಗಳು; ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಮಾನವನ ಸಾಮೂಹಿಕ ಜೀವನ ಆರಂಭವಾಗಿದ್ದು ನಾಗರಿಕತೆಗಳ ಕಾಲದಲ್ಲಿ ಬೆಂಕಿ, ಬೇಟೆ, ಬೇಸಾಯ ಮುಂತಾದವುಗಳ ಜೊತೆಜೊತೆಯಲ್ಲಿಯೇ ಮಾನವ ಭಾಷೆಯನ್ನು ಹಂತಹಂತವಾಗಿ ರೂಢಿಸಿಕೊಂಡು ಬಂದಿದ್ದಾನೆ. ಭಾಷೆಯು ಲಿಪಿಯನ್ನು ರೂಢಿಸಿಕೊಳ್ಳುವುದಕ್ಕಿಂತಲೂ ಪೂರ್ವದಿಂದಲೇ ಆದಿಮಾನವರ ಗುಂಪುಗಳು ತಮ್ಮ ಭಾವನೆಗಳನ್ನು ಶಾಬ್ದಿಕ ರೂಪದಲ್ಲಿ ಅಭಿವ್ಯಕ್ತಿಗೊಳಿಸುತ್ತಾ ಬಂದರು. ತಮಗುಂಟಾದ ನೋವು–ನಲಿವು, ಸೋಲು–ಗೆಲುವುಗಳನ್ನು ಹಾಡು–ಕತೆ, ಕುಣಿತ–ಮೆರೆತಗಳಲ್ಲಿ ಮೂರ್ತಗೊಳಿಸಿದರು. ತಮ್ಮ ಅನುಭವವನ್ನು ಜನರು ಅನೇಕ ಸಂದರ್ಭಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಜನರು ಅಭಿವ್ಯಕ್ತಿಸಿದ ಕಾವ್ಯ, ಕತೆ, ಗೀತೆ, ಹಾಡು, ಕ್ರೀಡೆ, ಒಗಟು, ಒಡಪು, ಗಾದೆ ಮುಂತಾದವುಗಳೆಲ್ಲವನ್ನು ವಿದ್ವಾಂಸರು ಜಾನಪದ ಎಂದಿದ್ದಾರೆ. "ಒಂದರ್ಥದಲ್ಲಿ ಜಾನಪದ ಅಥವಾ ಪರಂಪರೆ ಮಾನವನ ಸಮಸ್ತ ಕಲೆ ಹಾಗೂ ಸಂಸ್ಕೃತಿಗಳಿಗೂ ಮೂಲಾಧಾರ" (ನಂ. ತಪಸ್ವಿಕುಮಾರ, ೧೯೮೨ ಪು–೧೩) ಏಕೆಂದರೆ ಜಾನಪದ ಜಗತ್ತು ತುಂಬಾ ವೈವಿಧ್ಯವೂ, ವಿಶಾಲವೂ ಆಗಿದೆ. ಕಾಲಕ್ಕೆ ತಕ್ಕಂತೆ ಬದಲಾಗುತ್ತಿರುವ ಜಗತ್ತಿನಲ್ಲಿ ಬದುಕಿನ ವಿದ್ಯಮಾನಗಳನ್ನು ತಾಳ್ಮೆಯಿಂದ ಅರಿತುಕೊಳ್ಳಬೇಕಾದ ಅವಶ್ಯಕತೆ ಇದೆ. ಆದುದರಿಂದ ಈ ಅಧ್ಯಾಯದಲ್ಲಿ ಜಾನಪದ ಎಂದರೇನು? ಜನಪದ–ಜಾನಪದದ ನಡುವಿನ ವ್ಯತ್ಯಾಸವೇನು? ಎಂಬುದರಿಂದ ಹಿಡಿದು ಇದುವರೆಗೆ ಜನಪದ ಸಾಹಿತ್ಯದ ಕುರಿತು ನಡೆದ ಅಧ್ಯಯನಗಳನ್ನು ಪ್ರಸ್ತುತ ಅಧ್ಯಯನದ ನೆಲೆಗಳಲ್ಲಿ ಅವಲೋಕನ ಮಾಡಲಾಗಿದೆ.

### ೨.೧ ಜನಪದ – ಜಾನಪದ

ಯಾವುದೇ ವಿಷಯ ಅಥವಾ ಕ್ಷೇತ್ರದ ಅಧ್ಯಯನಕ್ಕಿಳಿಯುವ ಮೊದಲು ಆಯಾ ವಿಷಯ ಅಥವಾ ಕ್ಷೇತ್ರದ ಕುರಿತಾಗಿ ಸ್ಪಷ್ಟ ಕಲ್ಪನೆ ಹೊಂದುವುದು ಮುಖ್ಯ. ಹೊಸತಾಗಿ ಜಾನಪದ ಕ್ಷೇತ್ರ ಪ್ರವೇಶ ಮಾಡುವವರಿಗೆ 'ಜನಪದ–ಜಾನಪದ' ಪದಗಳ ಕುರಿತಾಗಿ ತಿಳುವಳಿಕೆ ಇರಬೇಕಾಗುತ್ತದೆ. ಈಗಾಗಲೇ ಹಲವಾರು ವಿದ್ವಾಂಸರು ಈ ಕುರಿತು ಸಾಕಷ್ಟು ಚರ್ಚಿಸಿದ್ದಾರೆ. ಕನ್ನಡದಲ್ಲಿ ಹಾ. ಮಾ. ನಾಯಕ ಅವರು Folk, Folklore ಎಂಬ ಇಂಗ್ಲಿಷಿನ ಪಾರಿಭಾಷಿಕ ಪದಗಳಿಗೆ ಸೂಕ್ತವಾದ ಸಂವಾದಿ ಪದಗಳನ್ನು ಸೂಚಿಸಿದ್ದಾರೆ. ಅವರ ಪ್ರಕಾರ Folk ಎಂಬುದಕ್ಕೆ ಜನಪದ, Folklore ಎಂಬುವುದಕ್ಕೆ

ಜಾನಪದ ಸೂಕ್ತವಾದ ಪದಗಳು. ಈ ಮೊದಲು 'ಜನಪದ-ಜಾನಪದ' ಎಂಬ ಪದಗಳ ಕುರಿತಾಗಿ ಕನ್ನಡ ವಿದ್ವಾಂಸರಲ್ಲಿ ಅನೇಕ ಚರ್ಚೆ, ಸಂವಾದಗಳು ನಡೆದು ನಂತರದಲ್ಲಿ ೧೯೬೬ರಲ್ಲಿ ಬಳಕೆಗೆ ತಂದರು. ಹಾ. ಮಾ. ನಾಯಕರು ಜನಪದ ಸಾಹಿತ್ಯ ಮತ್ತು ಅದರ ಅಧ್ಯಯನದ ಮಹತ್ವವನ್ನು ವೈಜ್ಞಾನಿಕವಾಗಿ ಯೋಚಿಸಿ 'ಜಾನಪದ' ಎಂತಲೂ, Folk ಜಾನಪದದ ಒಂದು ಬಿಡಿ ಘಟಕವಾಗಿ 'ಜನಪದ' ಎಂತಲೂ ವಿವರಿಸಿದರು. "ಜನಪದವನ್ನು ಇಂಗ್ಲಿಷನಲ್ಲಿ ಫೋಕ್ (Folk) ಎಂದೂ, ಜಾನಪದವನ್ನು ಫೋಕ್‌ಲೋರ್ (Folklore) ಎಂದೂ, ಜಾನಪದ ಸಾಹಿತ್ಯಕ್ಕೆ ಫೋಕ್ ಲಿಟರೇಚರ್ (Folk Literature) ಎಂದೂ, ಜಾನಪದ ವಿಜ್ಞಾನಕ್ಕೆ ಫೋಕ್ ಸೈನ್ಸ್ (Folk Sceince) ಎಂದೂ ಜಾನಪದ ಭಾಷಾವಿಜ್ಞಾನಕ್ಕೆ ಫೋಕ್ ಲಿಂಗ್ವಿಸ್ಟಿಕ್ಸ್ (Folk Linguistics) ಎಂದು ಹೆಸರಿಸಲಾಗುತ್ತದೆ." (ಕೆ. ಕೆಂಪೇಗೌಡ, ೨೦೧೦, ಪು-೧೭) ಪಶ್ಚಿಮದ ಪ್ರಭಾವದ ನಡುವೆಯೂ ಕನ್ನಡ ಜಾನಪದ ತಜ್ಞರು ಸ್ವಂತ ಆಲೋಚನೆಗಳನ್ನು ರೂಢಿಸಿಕೊಳ್ಳುವ ಪ್ರಯತ್ನಗಳು ನಡೆದಿರುವುದು ಗಮನಕ್ಕೆ ಬರುತ್ತದೆ. ಜಾನಪದ ಅಧ್ಯಯನಗಳ ಕುರಿತು ಚರ್ಚಿಸುವಾಗ ಪಶ್ಚಿಮದ ವಿಚಾರಗಳನ್ನು ಅಲ್ಲಗಳೆಯುವಂತಿಲ್ಲ. ಪಾಶ್ಚಿಮಾತ್ಯ ವಿದ್ವಾಂಸರ ವಿಚಾರಗಳನ್ನು ಇಲ್ಲಿ ಅವಲೋಕಿಸಿ, ಕನ್ನಡದ ಜಾನಪದ ಅಧ್ಯಯನಗಳಲ್ಲಿ ಅದು ಹೇಗೆ ಬದಲುಗೊಂಡಿದೆ ಎಂಬ ಕಾಳಜಿ ಪ್ರಸ್ತುತ ಅಧ್ಯಾಯದಲ್ಲಿದೆ.

'Folk' ಎನ್ನುವ ಪದದ ಬಳಕೆಯನ್ನು ಕನ್ನಡ ಭಾಷೆಯಲ್ಲಿ ಜನ, ಜನಾಂಗ, ಯಾವುದೋ ಒಂದು ಗೊತ್ತಾದ ಜನಸಮೂಹವೆಂದು ಅರ್ಥೈಸಿಕೊಳ್ಳಬೇಕು. ಆಕ್ಸ್‌ಫರ್ಡ್ ಅರ್ಥಕೋಶದ ಪ್ರಕಾರ ಒಂದೇ ಮೂಲಕ್ಕೆ ಸೇರಿದ ತಮ್ಮದೇ ಆದ ಪ್ರದೇಶ ಅಥವಾ ರಾಜ್ಯವನ್ನು ಪಡೆದ ಒಂದು ಜನಾಂಗಗಳ ಗುಂಪು, ಮೂಲ ನಿವಾಸಿಗಳ ಸ್ಥಿತಿಯಿಂದ ರಾಜಕೀಯ ಅಥವಾ ಸಾಮಾಜಿಕ ವ್ಯವಸ್ಥೆಯತ್ತ ಹೊರಳುತ್ತಿರುವ ಜನ ಎಂದರೆ ಜನಪದ. "Folk" ಎನ್ನುವುದು 'ಜನ, ಮಂದಿ, ಜನಾಂಗ, ಕುಲ, ಜನಸಾಮಾನ್ಯರ ಒಂದು ಗೊತ್ತಾದ ವರ್ಗದ ಜನರು, ಸಂಕೀರ್ಣ ಸ್ವಭಾವದ ನಾಗರಿಕ ಸಮಾಜದಲ್ಲಿ ಹಳೆಯ ಗುಂಪು, ಮೂಲ ಸಂಸ್ಕೃತಿಯನ್ನು ಒಯ್ಯುವ ಸಾಮಾಜಿಕ ವರ್ಗ ಅಥವಾ ಸಂಪ್ರದಾಯದೊಂದಿಗೆ ಹೆಣೆದ ಸಮಾಜ, ಹಳೆಯ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿರುವ ಸಾಮಾನ್ಯರ ಸಮೂಹ." (ಹಾ. ಮಾ. ನಾಯಕ, ೧೯೭೧, ಪು-೧೭)

Folklore ಎಂಬುದು Folk ಮತ್ತು lore ಎಂಬೆರೆಡು ಟ್ಯೂಟಾನಿಕ್ ಪದಗಳ ಸಂಯೋಜಿತ ರೂಪ. "೧೮೪೬ರಲ್ಲಿ ಡಬ್ಲ್ಯು. ಜೆ. ಥಾಮಸ್ Folklore ಎಂಬ ಅಚ್ಚ ಆಂಗ್ಲೋಸ್ಯಾಕ್ಸನ್ ಮೂಲದ ಪದವನ್ನು ಸೃಷ್ಟಿಸಿ ಅಥೇನಿಯಂ ಎಂಬ ಪತ್ರಿಕೆಯ ಸಂಪಾದಕರಿಗೆ ಪತ್ರ ಬರೆದು ತಿಳಿಸಿದ." (ಜಿ. ಶಂ. ಪರಮಶಿವಯ್ಯ, ೧೯೯೮, ಪು-೧೧) ಅಲ್ಲದೇ ಸಮಾಜದ ಗ್ರಾಮೀಣ ವಲಯಕ್ಕೆ ಸೇರಿದ ಅನಕ್ಷರಸ್ಥರಾದ ಕೆಳಸ್ತರದ ಜನರು ಸೃಷ್ಟಿಸುವ ಸಾಂಸ್ಕೃತಿಕವಾದ ಸಮಸ್ತ ಅಂಶಗಳನ್ನು 'ಜಾನಪದ' ಎಂದು ಕರೆದನು. ಹಾಗಾಗಿ ಹಳ್ಳಿಗರ ಬದುಕು, ಕಲೆ, ಕುಣಿತ, ವೇಷ, ಹಾಡು, ಕಥೆ, ಗಾದೆ ಎಲ್ಲವನ್ನು

ಜಾನಪದದಲ್ಲಿ ಅಧ್ಯಯನಕ್ಕೆ ಗುರುತಿಸಲಾಯಿತು. ಜನಪದಕ್ಕೆ ಸಂಬಂಧಿಸಿದ ಪರಂಪರಾನುಗತ ವಸ್ತುವಿಷಯಗಳನ್ನು ಜಾನಪದ ಎನ್ನುತ್ತಾರೆ. Folk ಮತ್ತು lore ಪದಗಳು ಒಂದಕ್ಕೊಂದು ಬೆಸೆದುಕೊಂಡು ಹೊಸ ವಿಜ್ಞಾನವೊಂದನ್ನು ನಿರ್ದೇಶಿಸುವ ಪದಗಳಾಗಿ ಬಳಕೆಯಾಗುತ್ತ ಬಂದಿವೆ. ಜನಪದ ಹಾಗೂ ಜಾನಪದ ಹೀಗೆಯೇ ಅರ್ಥವ್ಯಾಪ್ತಿಯನ್ನು ತುಂಬಿಕೊಂಡು ಬಳಕೆಗೊಳ್ಳುತ್ತಿವೆ.

### ೨.೧.೧ ವಿದೇಶಿ ಚಿಂತನೆಯಲ್ಲಿ ಜಾನಪದ ವ್ಯಾಖ್ಯಾನ

ಯಾವುದೇ ದೇಶದ ಇಲ್ಲವೇ ರಾಜ್ಯದ ಜಾನಪದವನ್ನು ಅಧ್ಯಯನ ಮಾಡುವಾಗ ಆಯಾ ದೇಶದ ಜಾಗತಿಕ ಜಾನಪದ ಅಧ್ಯಯನಕ್ಕೆ ಇಲ್ಲವೇ ರಾಜ್ಯದ ಜಾನಪದವನ್ನು ಸೇರಿಸಿ ನೋಡುವ ವಿಧಾನ ಚಾಲ್ತಿಯಲ್ಲಿದೆ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಚರ್ಚೆಗೆ ಅನುಕೂಲವಾಗಲೆಂದು ಪಶ್ಚಿಮದ ಜಾನಪದ ಗ್ರಹಿಕೆಯನ್ನು ಅವಲೋಕಿಸಲಾಗಿದೆ. ಇದು ಕರ್ನಾಟಕದ ಜಾನಪದ ಅಧ್ಯಯನಗಳ ಮೇಲಿನ ಪ್ರಭಾವವನ್ನು ಗುರುತಿಸಲು ಅನುಕೂಲವಾಗಲಿದೆ. ಜಾನಪದ ಅಧ್ಯಯನಕ್ಕೆ ಪ್ರೇರಣೆ ದೊರೆತದ್ದು ಮುಖ್ಯವಾಗಿ ಎರಡು ಮೂಲಗಳಿಂದ. ಮೊದಲನೆಯದು ಜರ್ಮನ್ ತತ್ವಶಾಸ್ತ್ರಜ್ಞ ಹರ್ಡರ್ ೧೮ನೆಯ ಶತಮಾನದ ಕೊನೆಯಲ್ಲಿ ಯುರೋಪಿಯನ್ ಅಭಿಜಾತವಾದದ ವಿರುದ್ಧವಾಗಿ ಪ್ರತಿಪಾದಿಸಿದ ರಮ್ಯರಾಷ್ಟ್ರೀಯವಾದ. ಇದರಿಂದಾಗಿ ಜರ್ಮನಿ, ಫಿನ್ಲೆಂಡ್, ಐರ್ಲೆಂಡ್ ಮೊದಲಾದ ದೇಶಗಳಲ್ಲಿ ಜಾನಪದದ ಸಂಗ್ರಹ ಹಾಗೂ ಸಂಪಾದನಾ ಕಾರ್ಯ ನಡೆಸಲು ಕಾರಣವಾಯಿತು. ಎರಡನೆಯದಾಗಿ ಯುರೋಪಿನಲ್ಲಿ ಕೈಗಾರಿಕಾ ಕ್ರಾಂತಿಯ ಕಾರಣದಿಂದ ಗ್ರಾಮೀಣ ಪ್ರದೇಶದ ಜನ ನಗರಗಳಿಗೆ ವಲಸೆ ಹೋಗಲು ಪ್ರಾರಂಭಿಸಿದ ಮೇಲೆ ತಮ್ಮ ಗ್ರಾಮೀಣ ಪರಂಪರೆ, ನಂಬಿಕೆ, ಸಂಪ್ರದಾಯ, ಕಲೆಗಳನ್ನು ಕೈಬಿಡಲಾರಂಭಿಸಿದರು. ೧೯ನೆಯ ಶತಮಾನದ ಮಧ್ಯಭಾಗದ ವೇಳೆಗೆ ಯುರೋಪಿನಲ್ಲಿ ಗ್ರಾಮೀಣ ಪ್ರದೇಶಗಳಿಗೆ ಸಂಬಂಧಿಸಿದ ಈ ಬಗೆಯ ವಿಷಯಗಳನ್ನು ಸಂಗ್ರಹಿಸಿ ಅವುಗಳನ್ನು 'ಪ್ರಾಚೀನ ನಡಾವಳಿಗಳು' (popular antiquities) ಎಂದು ಕರೆದರು. ಇವುಗಳನ್ನೇ ಇಂಗ್ಲೆಂಡಿನ ಪ್ರಾಚೀನ ಸಂಶೋಧಕ ಡಬ್ಲ್ಯೂ. ಜೆ. ಥಾಮಸ್ ೧೮೪೬ರಲ್ಲಿ Folklore ಎಂಬ ಸಂಯುಕ್ತ ಪದದಲ್ಲಿ ವಿಶ್ಲೇಷಿಸಿದನು. ಹೀಗೆ ಪ್ರಾರಂಭವಾದ ಜಾನಪದ ಅಧ್ಯಯನ ಪ್ರತ್ಯೇಕ ಜ್ಞಾನಶಿಸ್ತಾಗಿ ಕಾಲಕ್ರಮೇಣ ರೂಪುಗೊಂಡಿತು.

ಜಾನಪದ ವಿಷಯದ ಕುರಿತು ಕಳೆದ ಶತಮಾನದಿಂದಲೂ ವಿದ್ವಾಂಸರಲ್ಲಿ ಸಾಕಷ್ಟು ಚಿಂತನೆ ನಡೆಯುತ್ತಾ ಬಂದಿದೆ. ಜಾನಪದ ವಿಶ್ವಕೋಶವಾದ Standard Dictionary of Folklore Mythology and Legend ಎಂಬ ಕೃತಿಯಲ್ಲಿ ಜಗತ್ತಿನ ೨೧ ಜಾನಪದ ವಿದ್ವಾಂಸರು ಜಾನಪದವನ್ನು ವಿವಿಧ ಅರ್ಥಗಳಲ್ಲಿ ವ್ಯಾಖ್ಯಾನಿಸಿದ್ದಾರೆ.

೧. ಲಿಥುವೇನಿಯಾದ ಜಾನಪದ ವಿದ್ವಾಂಸ ಜೋನಾಸ್ ಬೇಲಿಸ್ "Folklore is not a science about a folk but the traditional folk science and folk poetry" (ಜಿ. ಶಂ. ಪರಮಶಿವಯ್ಯ, ೧೯೬೮, ಪು–೨೧) ಅವರ ಅಭಿಪ್ರಾಯದಂತೆ 'ಜಾನಪದ ಎನ್ನುವುದು ಜನಪದದ ಕುರಿತಾದ ವಿಜ್ಞಾನವಲ್ಲ. ಅದು ಸಾಂಪ್ರದಾಯಿಕ ವಿಜ್ಞಾನ ಮತ್ತು ಜನಪದ ಕಾವ್ಯ. ಅಂದರೆ ಮಾನವಶಾಸ್ತ್ರದಿಂದ, ಅದರಲ್ಲೂ ಭೌತಿಕ ಮಾನವಶಾಸ್ತ್ರ ಹಾಗೂ ಇತರ ವಿಜ್ಞಾನಗಳಿಂದ ಜಾನಪದ ಹೇಗೆ ಭಿನ್ನವಾದುದೆಂಬುದನ್ನು ಸ್ಪಷ್ಟಪಡಿಸುತ್ತದೆ'.

೨. ಧರ್ಮ ಮತ್ತು ನೀತಿ ವಿಶ್ವಕೋಶದಲ್ಲಿ ಜೇಮ್ಸ್ ಹೇಸ್ಟಿಂಗ್‌ರು 'ರಾಜ್ಯದ ಅಥವಾ ರಾಷ್ಟ್ರೀಯ ಜೀವನದ ದಾಖಲೆ ಇತಿಹಾಸವಾದರೆ, 'ಜನಪದ ಸಾಹಿತ್ಯವು ಪ್ರಾಗೈತಿಹಾಸ ಜೀವನದ ಪರಂಪರಾಗತ ಸಂಗತಿಯಾಗಿದೆ'. (James Hestings, encyclopeadia of Religion and ethics, ಪು–೫೭) ಎಂದು ಜಾನಪದದ ಸಮಸ್ತ ವ್ಯಾಪ್ತಿಯನ್ನು ತಿಳಿಸಿದ್ದಲ್ಲದೇ ಐತಿಹಾಸಿಕ ದಾಖಲೆಗಳು ತಪ್ಪೆನಿಸಿದ ಸಂದರ್ಭಗಳಲ್ಲಿ ಸಾಂಪ್ರದಾಯಿಕ ನಂಬಿಕೆಗಳನ್ನು ಅವಲಂಬಿಸಿಬಹುದಾಗಿದೆ ಎಂದು ವಿಶದವಾಗಿ ಚರ್ಚಿಸಿದ್ದಾರೆ.

೩. 'ಜಾನಪದ ಹಳೆಯ ತಲೆಮಾರಿನಿಂದ ಹೊಸ ತಲೆಮಾರಿಗೆ ತಿಳಿವು, ಅನುಭವ, ಜಾಣ್ಮೆ, ಕೌಶಲ, ಹವ್ಯಾಸ ಹಾಗೂ ಆಚರಣೆಗಳ ಮೂಲಕ ಹರಿದು ಬರುತ್ತದೆ.' ಎಂಬುದು ಕೆನೆಡಾದ ಜಾನಪದ ವಿದ್ವಾಂಸರಾದ ಮೇರಿಯಸ್ ಬಾರ್ಬೆ ಅವರ ಅಭಿಪ್ರಾಯ. ಜಾನಪದವೆಂಬುದು ಗ್ರಂಥಗಳಿಂದ ಅಚ್ಚಾದ ಅಥವಾ ಸಾಧನದ ಮೂಲಕ, ಶಾಲೆಯ ಶಿಕ್ಷಕನ ಮೂಲಕ ಬಂದದ್ದಲ್ಲ. ಇಂತಹ ಕಂಠಸ್ಥ ಸಂಪ್ರದಾಯದ ಹಿನ್ನೆಲೆಯಲ್ಲಿ ಜಾನಪದ ತನ್ನದೇ ಆದ ಚಿರಂತನ ಸಾಮ್ರಾಜ್ಯದಲ್ಲಿ ಸಜೀವವಾಗಿ ಹೊಸ ಹೊಸ ಅಂಶಗಳನ್ನು ಸ್ವೀಕರಿಸುವ ಅರಗಿಸಿಕೊಳ್ಳುವ ಗುಣವನ್ನು ಪಡೆದು ಸಾಗಿಬರುತ್ತದೆ ಎಂದು ವಿವರಿಸಿ ತಮ್ಮ ಚರ್ಚೆ ಕುರಿತು ಸ್ಪಷ್ಟಪಡಿಸುತ್ತಾರೆ.

೪. ತುಲನಾತ್ಮಕ ಧರ್ಮಶಾಸ್ತ್ರದ ಪ್ರಾಧ್ಯಾಪಕನೂ ಧರ್ಮಪ್ರಚಾರಕನೂ ಆಗಿದ್ದ ಚಾರ್ಲಸ್ ಫ್ರಾನ್ಸಿಸ್ ಪಾಟರ್ "Folklore is the lively fossil which refuses to die. It is a precipitate the scientific and cultural lag of centuries and millemia of human experience" ಎಂದಿದ್ದಾರೆ. (ಡಾ. ಚಕ್ಕೆರೆ ಶಿವಶಂಕರ್, ೨೦೧೨, ಪು–೧೮) ಅಂದರೆ ಅವರ ಪ್ರಕಾರ "ಜಾನಪದವು ಸಾಯಲು ಇಚ್ಛೆಸದ ಜೀವಂತ ಪಳಿಯುಳಿಕೆ. ಇದು ಅನೇಕ ಶತಮಾನಗಳ ವೈಜ್ಞಾನಿಕ ಹಾಗೂ ಸಾಂಸ್ಕೃತಿಕ ಸಂಪತ್ತು ಮತ್ತು ಜೀವನಾನುಭವ". ಜಾನಪದ ಚಲನಶೀಲ ಮತ್ತು ಅವಿನಾಶಿಯಾದುದು. ಎಂತಹ ಪ್ರೌಢ ಸಂಸ್ಕೃತಿಯಲ್ಲೂ ಸಹ ತನ್ನದೇ ಆದ ಅಸ್ತಿತ್ವವನ್ನು ಹೊಂದಿರುತ್ತದೆ.

೫. ಆಂಗ್ಲ ವಿದ್ವಾಂಸ ಜುಸ್‌ರ್‍ಯಾಂಡ್‌ನೂ ಇಂಗ್ಲೆಂಡಿನ ಜಾತ್ರೆ, ಮಹೋತ್ಸವಗಳ ಕುರಿತಾಗಿ ಅಧ್ಯಯನ ಕೈಗೊಂಡು "Minstrels however, a singers of songs, propogaters of thoughts tellers of romance were disappear" ಜಾತ್ರೆ, ಮಹೋತ್ಸವ, ಅರಸರ ಆಸ್ಥಾನಗಳಲ್ಲಿ ಹಾಡುವವರನ್ನು ಜಾನಪದವೆಂದು ಹೇಳಿ, ಅವರ ಅಳಿವಿನ ಬಗ್ಗೆ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. (ಬಿ.ಎಸ್. ಗದ್ದಗಿಮಠ, ೧೯೬೨, ಪು-೨) ಕರ್ನಾಟಕದಲ್ಲಿ ಕಂಡುಬರುವ ವಿವಿಧ ವೃತ್ತಿಗಾಯಕರು ಇವರನ್ನು ಹೋಲುತ್ತಾರೆ. ಹಾಡು, ಕುಣಿತದ ಮೂಲಕ ಮನರಂಜನೆ ಮಾಡುವುದೇ ಅವರ ಮೂಲ ಉದ್ದೇಶವಾಗಿತ್ತು.

೬. ಅಮೇರಿಕಾ ಮತ್ತು ಸ್ಪೇನ್‌ನಲ್ಲಿ ಜಾನಪದದ ಕುರಿತು ಸಾಕಷ್ಟು ಕೆಲಸ ಮಾಡಿರುವ ಔರೇಲಿಯೊ ಎಂ. ಎಸ್ಪಿನೋಸ್ ಅವರು "Folklore or popular knowledge, is the accumulated store of what mankind has experienced, learned and practices across the ages as popular and traditional knowledge as distinguished from so called scientific knowledge" (ಡಾ. ಚಕ್ಕೆರೆ ಶಿವಶಂಕರ್, ೨೦೧೨, ಪು-೧೯) ಎಂಬುದು ಜಾನಪದವನ್ನು ಕುರಿತಾದ ಅವರ ಅಭಿಪ್ರಾಯ. ಅಂದರೆ "ಜಾನಪದ ಎನ್ನುವಂಥದ್ದು ದೊಡ್ಡ ಅನುಭವದ ಭಂಡಾರ. ಮನುಕುಲದ ಅನಂತಯಾತ್ರೆಯಲ್ಲಿ ಅನುಭವ ಪಡೆದ, ಕಲಿತ ಹಾಗೂ ಆಚರಿಸಿಕೊಂಡು ಬಂದ ಜನಪ್ರಿಯ ಮತ್ತು ಸಾಂಪ್ರದಾಯಿಕ ಜ್ಞಾನ. ಆಳವಾದ ಬೇರುಗಳನ್ನುಳ್ಳ ಇದರ ಅಂಶಗಳು ಎತ್ತರದ ಸಂಸ್ಕೃತಿಯಲ್ಲಿ ಕಂಡು ಬರುತ್ತವೆ. ಸಾಂಸ್ಕೃತಿಕ ಮಾದರಿಗಳನ್ನು ಶಾಶ್ವತಗೊಳಿಸುವ ಜಾನಪದ ಅಧ್ಯಯನದಿಂದ ಸಂಸ್ಕೃತಿಯ ಆಶಯಗಳು ಮತ್ತು ಅರ್ಥವನ್ನು ಅಧ್ಯಯನ ಮಾಡಬಹುದು" ಎಂಬುದು ಅವರ ಪ್ರತಿಪಾದನೆ. ಅಲ್ಲದೇ ಆದಿಮಾನವನ ಮನಸ್ಸಿನ ನೇರವಾದ ಅಭಿವ್ಯಕ್ತಿಯೇ ಜಾನಪದ ಎಂದಿದ್ದಾರೆ.

ಜಾನಪದ ಕುರಿತಾದ ಪಾಶ್ಚಿಮಾತ್ಯ ಚಿಂತಕರ ಸಮಗ್ರ ಗ್ರಹಿಕೆಯನ್ನು ವಿಶ್ಲೇಷಿಸಿದಾಗ ಪರಂಪರೆ, ಸಾಮೂಹಿಕ, ಸಾಮುದಾಯಿಕ, ಮೌಖಿಕ, ಸಂವಹನೆ ಹಾಗೂ ಉಳಿಕೆ ಎಂಬ ಅಂಶಗಳು ನಮಗೆ ಸೂತ್ರರೂಪಿಯಾಗಿ ಕಂಡುಬರುತ್ತವೆ. ಒಟ್ಟಾರೆಯಾಗಿ ವ್ಯಾಖ್ಯಾನಿಸುವುದಾದರೆ "ಜನಪ್ರಿಯ ಮತ್ತು ಸಾಂಪ್ರದಾಯಿಕ ಜ್ಞಾನವನ್ನು ಜನ ಸಮುದಾಯಗಳಲ್ಲಿ ಮೌಖಿಕವಾಗಿ ತಲೆಮಾರಿನಿಂದ ತಲೆಮಾರಿಗೆ ಸಂವಹನೆಗೊಳಸಪಡಿಸುತ್ತಿರುವುದೇ ಜಾನಪದ" ಇದರಲ್ಲಿ ಸಾಹಿತ್ಯ, ಕಲೆಗಳು, ನಂಬಿಕೆ, ಸಂಪ್ರದಾಯಗಳು, ಜನಪದ ನುಡಿ, ಭಾಷೆ, ಕರಕುಶಲ ಕ್ರಿಯೆ, ಜೀವನ ವಿಧಾನ ಮತ್ತು ಆಚರಣೆಗಳು ಬರುತ್ತವೆ.

### ೨.೧.೨ ದೇಶಿ ಚಿಂತನೆಯಲ್ಲಿ ಜಾನಪದ ವ್ಯಾಖ್ಯಾನ

೧೯೬೬ರಲ್ಲಿ ಕನ್ನಡದಲ್ಲಿ ಪ್ರಥಮ ಬಾರಿಗೆ 'Folklore' ಎಂಬ ಆಂಗ್ಲಪದಕ್ಕೆ ಸಂವಾದಿಯಾಗಿ ಜಾನಪದ ಎಂಬ ಪದವನ್ನು ಬಳಸಿ ಆ ಪದಕ್ಕೆ ಪಾರಿಭಾಷಿಕ ಅರ್ಥವನ್ನು ಒದಗಿಸಿದವರು ಹಾ. ಮಾ. ನಾಯಕ. ಅದುವರೆಗೆ ಜನಪದ, ಜಾನಪದ ಎಂಬ ಪದಕ್ಕೆ ವ್ಯತ್ಯಾಸವಿಲ್ಲದೇ ಬಳಸಲಾಗುತ್ತಿತ್ತು. ಕನ್ನಡದ ಜಾನಪದ ಗ್ರಹಿಕೆಯನ್ನು ಗುರುತಿಸುವಾಗ ಪಶ್ಚಿಮದ ಜಾನಪದ ಗ್ರಹಿಕೆಯಿಂದ ಪ್ರಭಾವ ಪಡೆದಿವೆಯೇ? ಇಲ್ಲವೇ ಸ್ವತಂತ್ರ ಆಲೋಚನೆಗಳಿವೆಯೇ? ಇವೆರೆಡೂ ಒಂದರೊಳಗೊಂದು ಬೆರೆತು ಸಂಕರಗೊಂಡಿವೆಯೇ? ಎಂಬ ಅನುಮಾನಗಳಿಗೆ ಎರಡಕ್ಕೂ ಇರುವ ಲಕ್ಷಣಗಳನ್ನು ಗುರುತಿಸಿದಾಗ ಪರಿಹಾರ ಸಿಗಲು ಸಾಧ್ಯ.

ಜನಪದ ಎಂದರೆ ಹಳ್ಳಿ ಎನ್ನುವ ತಿಳುವಳಿಕೆ ಕನ್ನಡದಲ್ಲಿದೆ. ಜನಪದವೆಂದರೆ ಅದು ಪ್ರಾಚೀನವಾದುದು ಎಂಬರ್ಥವಿದೆ. ಜಾನಪದವೆಂದರೆ ಸಾಮೂಹಿಕ ಸೃಷ್ಟಿ. ಅದನ್ನು ಅನಕ್ಷರಸ್ಥರ ಜ್ಞಾನವೆಂದು ಕೆಲವು ಸಂದರ್ಭಗಳಲ್ಲಿ ಕೆಳವರ್ಗದ ಜನರ ಪ್ರಜ್ಞೆ ಎಂಬ ಅನೇಕ ಅಭಿಪ್ರಾಯಗಳು ಕನ್ನಡದಲ್ಲಿ ಸಿಗುತ್ತವೆ. ಕರ್ನಾಟಕದಲ್ಲಿ ನಡೆದ ಜಾನಪದ ಅಧ್ಯಯನಗಳು ಜಾನಪದವನ್ನು ಅನೇಕ ವಿಷಯ-ಸಂಗತಿಗಳ ಜೊತೆ ಸಮೀಕರಿಸಲಾಗಿದೆ. ಜಾನಪದ ವಿದ್ವಾಂಸರು ತಮ್ಮ ಅಧ್ಯಯನ ವಿಶ್ಲೇಷಣೆಗಳಲ್ಲಿ ಜಾನಪದ ಕುರಿತಂತೆ ವ್ಯಾಖ್ಯಾನಗಳನ್ನು ಮಂಡಿಸಿದ್ದಾರೆ. ಇವುಗಳಲ್ಲಿ ಪಶ್ಚಿಮದ ಜಾನಪದ ವಿದ್ವಾಂಸರ ಪ್ರಭಾವ ಮೂಡಿದೆ.

೧. ಆಂಗ್ಲ ಪ್ರಾಧ್ಯಾಪಕರಾದ ಬಿ. ಎಂ. ಶ್ರೀಕಂಠಯ್ಯನವರು 'ಗರತಿಯ ಹಾಡು' ಜನಪದ ಗೀತೆಗಳ ಸಂಕಲನದ ಪ್ರಸ್ತಾವನೆಯಲ್ಲಿ "ಮೊದಲು ಹುಟ್ಟಿದುದು ಜನವಾಣಿ. ಅದು ಬೆಳೆದು ಪರಿಷ್ಕೃತವಾಗಿ ವೃದ್ಧಿಯಾದುದು ಕವಿವಾಣಿ. ಜನವಾಣಿ ಬೇರು; ಕವಿವಾಣಿ ಹೂವು. ಕಾಡುಜನರೂ, ಒಕ್ಕಲಿಗರೂ, ಹೆಂಗಸರೂ, ಮಕ್ಕಳೂ, ಶಾಸ್ತ್ರಕಾವ್ಯಗಳ ಪರಿಚಯವೇ ಇಲ್ಲದ ಜನಸಾಮಾನ್ಯರೆಲ್ಲರೂ ಹಾಡಿನ ಮಟ್ಟನ್ನು ಅಂದರೆ ಅಷ್ಟುಮಟ್ಟಿಗೆ ಛಂದಸ್ಸನ್ನು ಬಲ್ಲರು" (ಹಲಸಂಗಿ ಗೆಳೆಯರು, ೨೦೦೮, ಪು-೧) ಎಂದು ಜಾನಪದವನ್ನು ಕುರಿತಾಗಿ ವ್ಯಾಖ್ಯಾನಿಸಿದ್ದಾರೆ. ಆದರೆ ಇದನ್ನೇ ಕಿ. ರಂ. ನಾಗರಾಜ ಅವರು ಭಿನ್ನವಾಗಿ ಚರ್ಚಿಸುತ್ತಾರೆ. "ಜನವಾಣಿ ಬೇರು ಅಂತಂದರೆ ಅದು ಜನಪದ ಕಾವ್ಯ ಅಲ್ಲ, ಜನರ ಮಾತುಗಳು. ಆಡುಮಾತುಗಳು, ಹೂವು ಅಂದ ತಕ್ಷಣ ಅದು ಬರೆದದ್ದು ಹೂವಾಗುತ್ತೆ. ಇವರು ಬರೆದಿದ್ದು ಬೇರು ಅಂತಲ್ಲ. ಜನರ ಮಾತುಗಳು ಬೇರು. ಅದು ಒಂದು ಕಾವ್ಯವಾಗಿ ಅರಳುವಂತದ್ದು ಹೂವು. ಜನಪದ ಸಾಹಿತ್ಯ ಅಧ್ಯಯನ ಮಾಡೋರು ಜನವಾಣಿ ಬೇರು ಅಂದ ತಕ್ಷಣ ಜನಪದ ಸಾಹಿತ್ಯ ಬೇರು. ಬೇರೆ ಬರಹ ರೂಪದ ಸಾಹಿತ್ಯ ಹೂವು ಅಂತ ಹೇಳೋದು

ಉಂಟು. ಆದರೆ ಇವು ಶ್ರೀಯವರು ಇಡೀ ಜನಪದರ ಭಾಷೆಯನ್ನು ಕುರಿತು ಆಡಿದ ಮಾತುಗಳೇ ಹೊರತು ಜನಪದ ಸಾಹಿತ್ಯ ಕುರಿತದ್ದಲ್ಲ" ಎನ್ನುತ್ತಾರೆ.

೨. "ಜೀವನವೇ ದೇವತೆಯಾದ ತ್ರಿಪದಿ ಛಂದದಲ್ಲಿ ಹೊರಹೊಮ್ಮಿದ 'ಗರತಿಯ ಹಾಡಿ'ನ ಋಷಿಗಳು ಹೆಣ್ಣುಮಕ್ಕಳು, ನಮ್ಮ ತಾಯಿ-ತಂಗಿಯರು, ಅಮ್ಮ-ಅಕ್ಕಂದಿರು, ಮಡದಿ-ಮಕ್ಕಳು. ಹಾಗೆ ನೋಡಿದರೆ ಅವರದೇ ನಿಜವಾದ ಕಾವ್ಯ. ಈ ಜನಪದ ವೇದವೇ ಎಲ್ಲ ಕನ್ನಡಿಗರಿಗೂ ಸಾಮಾನ್ಯವಾದ ತಾಯ ಮೊಲೆ ಹಾಲು ಎಂಬುದು ಇದನ್ನೋದಿದವರ ಅನುಭವಕ್ಕೆ ಬಾರದೇ ಇರದು." (ಹಲಸಂಗಿ ಗೆಳೆಯರು, ೨೦೦೮, ಪು-೫) ಎಂದು ಜನಪದ ಸಾಹಿತ್ಯದ ಕುರಿತಾಗಿ ದ. ರಾ. ಬೇಂದ್ರೆಯವರು ನುಡಿದಿದ್ದಾರೆ.

೩. ಜಾನಪದ ಕುರಿತಂತೆ ಆರ್. ಸಿ. ಹಿರೇಮಠರು "ಜನಪದ ಸಾಹಿತ್ಯ ನಾಡಿನ ಉಸಿರು; ಜನಜೀವನದ ಪ್ರಾಣ. ಅಜ್ಞಾತರಾದ ಜನಪದ ಕವಿಗಳು ತಮ್ಮ ಅನುಭವವನ್ನು ಜನತೆಯ ನಾಲಿಗೆಯ ಮೇಲೆ ಬಿತ್ತಿ ಬೆಳೆದಿರುವರು. ಅದು ಕೃತ್ರಿಮತೆಯ ಬೆನ್ನಬಿದ್ದು ಅಲಂಕಾರ, ಕವಿ, ಸಮಯಗಳಿಗೆ ಕೈಮುಗಿದು ಹುಟ್ಟಿಬಂದ ಕಾವ್ಯವಲ್ಲ. ಮನದ ಭಾವನಾತರಂಗಗಳು ಜೀವನ ಕುಲುಮೆಯಲ್ಲಿ ನೊಂದಾಗ, ಹಿಗ್ಗಿದಾಗ, ಹರುಷಗೊಂಡಾಗ ಸಹಜವಾಗಿ ಸ್ಫುರಣಗೊಂಡ ಜೀವಂತ ಸಾಹಿತ್ಯ. ಅದರ ಅಂತರಂಗದಲ್ಲಿ ತುಂಬಿ ತುಳುಕುವ ಅನುಭವ ಜೀವನ ಆಳ ಅಗಲಗಳನ್ನು ವ್ಯಾಪಿಸಿದೆ. ಸುಖ-ದುಃಖಗಳನ್ನು ಸವಿದಿದೆ. ಏರು ಇಳಿವುಗಳನ್ನು ಹತ್ತಿ ಇಳಿದಿದೆ. ಅದಕ್ಕೆ ಸಮಗ್ರತೆಯಿದೆ. ಸಹಜತೆಯಿದೆ" (ಜ್ಯೋತಿ ಹೊಸೂರು, ೧೯೭೭, ಮುನ್ನುಡಿ) ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

೪. ಸಂಶೋಧಕರಾದ ಎಂ. ಎಂ. ಕಲಬುರ್ಗಿಯವರು "ನಿಸರ್ಗದ ಮಡಿಲಿನಿಂದ ನಗರದ ನೆರಳಿನತ್ತ ನಡೆದು ಬರುವ ವ್ಯಕ್ತಿಗಳಲ್ಲಿ ನೈಸರ್ಗಿಕ ಅಂಶಗಳು ಕಡಿಮೆಯಾಗುತ್ತ ಹೋಗಿ ನಾಗರಿಕ ಅಂಶಗಳು ಬೆಳೆಯುತ್ತ ಬರುತ್ತವೆ. ವ್ಯಕ್ತಿಗತವಾಗಿ ಆರಂಭಗೊಂಡು ಸಮಾಜಗತವಾಗಿ ಮುನ್ನಡೆವ ಈ ಕ್ರಿಯೆಯಿಂದಾಗಿ ಸಮಾಜ ನೈಸರ್ಗಿಕ-ನಾಗರಿಕ ಸ್ತರಗಳು ನಿರ್ಮಾಣಗೊಳ್ಳುತ್ತವೆ. ಅವುಗಳ ವೈರುಧ್ಯಗಳಲ್ಲಿ ಒಂದು ವಿಧದ ಪ್ರಾಕೃತ ಮತ್ತು ಪರಿಷ್ಕೃತ ಬದುಕುಗಳು ಏರ್ಪಡುತ್ತವೆ. ಇವುಗಳನ್ನೇ ದೇಶಿ ಮಾರ್ಗ ಎಂದು ಕರೆಯುವುದು" ಎಂದು ಮಾರ್ಗಸಾಹಿತ್ಯ, ಜಾನಪದ ಸಾಹಿತ್ಯ ಎಂಬ ಎರಡು ಕವಲುಗಳಲ್ಲಿಯೇ ಜಾನಪದವನ್ನು ತಮ್ಮ ಮಾರ್ಗ-೪ರಲ್ಲಿ ಅರ್ಥೈಸಲು ಪ್ರಯತ್ನಿಸಿದ್ದಾರೆ.

೫. ಜಿ. ಶಂ. ಪರಮಶಿವಯ್ಯನವರ 'ಜಾನಪದ ಸಾಹಿತ್ಯ ಮತ್ತು ಸ್ವರೂಪ' ಎಂಬ ಕೃತಿಯ ಮುನ್ನುಡಿಯಲ್ಲಿ "ಜಾನಪದ ಸಂಪ್ರದಾಯ ಒಂದು ಜನಸಮುದಾಯದ ಸಮಷ್ಟಿ ಸೃಷ್ಟಿ, ಸಾಮಾಜಿಕ ಜೀವನದ ಸಂಕೇತ, ರಾಷ್ಟ್ರೀಯ ಸಂಸ್ಕೃತಿಯ ತಾಯಿಬೇರು; ಅದು

ಜನಸಾಮಾನ್ಯರ ಶ್ರುತಿಯೂ ಅಹುದು; ಸ್ಮೃತಿಯೂ ಅಹುದು" ಎಂದು ದೇ. ಜವರೇಗೌಡ ಅವರ ಜಾನಪದದ ಕುರಿತಂತೆ ಅಭಿಪ್ರಾಯವನ್ನು ಉಲ್ಲೇಖಿಸಿದ್ದಾರೆ.

೬. ದೇವುಡು ನರಸಿಂಹಶಾಸ್ತ್ರಿಗಳು "ಪ್ರಾಚೀನ ಕಾಲದವರ ಮನೋಭಾವನೆಯ ಪ್ರಕಟರೂಪವೇ ಜನತೆಯ ಸಂಸ್ಕೃತಿ, ಅದು ವೈದ್ಯಶಾಸ್ತ್ರ, ಮತ, ಕುಲಕಟ್ಟು ಮೊದಲಾದವುಗಳಲ್ಲಿ ಪ್ರಕಟವಾಗಬಹುದು" ಎಂದು 'ಕರ್ನಾಟಕ ಸಂಸ್ಕೃತಿ' ಎಂಬ ಕೃತಿಯಲ್ಲಿ ವ್ಯಾಖ್ಯಾನಿಸುತ್ತಾ "ಜನತೆಯ ಸಂಸ್ಕೃತಿಯ ಅದೃಷ್ಟ, ಅವನ ಬಾಹ್ಯಾಭ್ಯಂತರದ ವ್ಯವಹಾರ, ಅವನ ಮನಪ್ರಪಂಚದ ಕಲ್ಪನೆಗಳು, ಅವನ ವಿಧಿನಿಷೇಧಗಳು, ಅವನ ಆಟಪಾಠ ವಿನೋದಗಳು ಇವುಗಳಲ್ಲೆಲ್ಲ ಈ ಸಂಸ್ಕೃತಿಯು ಕಂಡುಬರುವುದು" ಎಂದು ನಿರೂಪಿಸಿದ್ದಾರೆ.

ಕನ್ನಡ ಚಿಂತನೆಯಲ್ಲಿ ಜಾನಪದವನ್ನು ವಿಭಿನ್ನ ಧೋರಣೆಗಳಲ್ಲಿ ವ್ಯಾಖ್ಯಾನಿಸಿದ್ದಾರೆ. ಕಾವ್ಯಕೇಂದ್ರಿತ ನೆಲೆ, ಉದಾರವಾದಿ ರಾಷ್ಟ್ರೀಯತೆಯ ನೆಲೆ, ದೇಶೀಯ ನೆಲೆ, ದಲಿತ ಪ್ರಜ್ಞೆಯ ನೆಲೆಯಲ್ಲಿ ಅನೇಕ ವಿದ್ವಾಂಸರು ಜಾನಪದವನ್ನು ನಿರೂಪಿಸಿದ್ದಾರೆ. ವ್ಯಾಪಕವೂ, ಮೌಲೀಕವೂ ಆದ ಜಾನಪದವು ಪರಂಪರಾಗತ ವಿಷಯಗಳ ಮೊತ್ತವಷ್ಟೇ ಅಲ್ಲ. ಅದು ಅವಿನಾಶಿ, ಚಲನಶೀಲವಾದುದು. ಅಕ್ಷರ ಪಾಂಡಿತ್ಯವಿಲ್ಲದೇ ಲೋಕಾನುಭವವನ್ನು ತಮ್ಮ ಪ್ರತಿಭೆಯ ಮೂಲಕ ಪ್ರಕಟಪಡಿಸಿರುವುದೇ ಜಾನಪದ ಎನಿಸುತ್ತದೆ ಎಂಬುದು ಮೇಲ್ಕಂಡ ವ್ಯಾಖ್ಯಾನಗಳ ಸಾರವಾಗಿದೆ.

## ೨.೨ ಜನಪದ ಸಾಹಿತ್ಯ

ಆಂಗ್ಲದ Folk literature ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಜನಪದ ಸಾಹಿತ್ಯ' ಎಂದು ಬಳಸುತ್ತಾರೆ. ಜನಸಾಮಾನ್ಯರಿಂದ ರಚನೆಯಾದ ಸಾಹಿತ್ಯವೇ ಜನಪದ ಸಾಹಿತ್ಯ. ಈ ಸಾಹಿತ್ಯದ ಸೃಷ್ಟಿಕರ್ತರು ಅವರೇ. ಜಾನಪದದಲ್ಲಿ ಜನಪದ ಸಂಸ್ಕೃತಿಯ ಸಮಗ್ರ ವಿವೇಚನೆಯಿದೆ. ಪಶ್ಚಿಮದ ಜಾನಪದ ವಿಜ್ಞಾನವು ಜಾನಪದವಾಗಿ ಜನಪದ ಸಮಾಜ, ಸಾಹಿತ್ಯ ಸಂಸ್ಕೃತಿಯನ್ನು ಒಳಗೊಂಡಿದೆ. ಇದರಲ್ಲಿ ಕಥೆ, ಕಾವ್ಯ, ಕಲೆ, ವೈದ್ಯ, ಗಾದೆ, ನುಡಿಗಟ್ಟು ಮುಂತಾದವುಗಳು ಒಳಗೊಂಡಿದ್ದವು. ಇವುಗಳನ್ನು ವರ್ಗೀಕರಿಸಿ ಅಧ್ಯಯನಕ್ಕೆ ಯೋಗ್ಯವಾಗಲೆಂದು ಜನಪದ ಸಾಹಿತ್ಯವೆಂಬ ಪದ ಬಳಕೆಗೆ ಬಂದಿದೆ.

ಯಾವುದೇ ಭಾಷೆಯ ಸಾಹಿತ್ಯ ಚರಿತ್ರೆಯಲ್ಲಿ ಜನಪದ ಸಾಹಿತ್ಯವೇ ಪ್ರಾಚೀನವಾದುದು. ಏಕೆಂದರೆ ಭಾಷೆಗೆ ಲಿಪಿ ಕಾಣಿಸಿಕೊಳ್ಳದ ಪೂರ್ವಕಾಲದಿಂದಲೇ ಜನಪದ ಸಾಹಿತ್ಯವು ಹುಟ್ಟಿ, ಅದು ಬಾಯಿಂದ ಬಾಯಿಗೆ, ತಲೆಮಾರಿನಿಂದ ತಲೆಮಾರಿಗೆ ಬಳುವಳಿಯಾಗಿ ಬಂದಿದೆ. ಜನಪದರು ತಮ್ಮ ಬದುಕಿನ ನೋವು-ನಲಿವು, ಕಷ್ಟ-ಕಾರ್ಪಣ್ಯ, ಸುಖ-ದುಃಖಗಳನ್ನು ತಾವು ಮಾತನಾಡುವ ಸರಳ ಭಾಷೆಯಲ್ಲಿಯೇ ಅಭಿವ್ಯಕ್ತಿಸಿದ್ದಾರೆ. ವಿದ್ಯೆಯಿಲ್ಲದ ಜನರು ತಮ್ಮ ಜೀವನಾನುಭವಗಳನ್ನು

ಆಡುನುಡಿಯಲ್ಲಿಯೇ ತೋಡಿಕೊಂಡರು, ಹಾಡಿಕೊಂಡರು ಆದರೆ ಅವುಗಳನ್ನು ಬರೆದಿಡಲಿಲ್ಲ. ಈ ಸಾಹಿತ್ಯ ರಚನೆಯಲ್ಲಿ ಮಕ್ಕಳು, ಗಂಡಸರು, ಹೆಂಗಸರೆನ್ನದೇ ಸರ್ವರು ಪಾಲ್ಗೊಳ್ಳುತ್ತಾ ಬಂದಿದ್ದಾರೆ. ತಾವು ಮಾಡುವ ದುಡಿಮೆಯ ಜೊತೆಯಲ್ಲಿ ಜನಪದ ಸಾಹಿತ್ಯವು ಹುಟ್ಟಿಕೊಂಡಿದೆ.

ಗಂಡಸರು ರಾಶಿ ಮಾಡುವಾಗ, ಹಂತಿ ಹೊಡೆಯುವಾಗ, ಹೊಲದ ದುಡಿಮೆ ಮಾಡುವಾಗ, ಹಬ್ಬ-ಹರಿದಿನಗಳಲ್ಲಿ ಹಾಡನ್ನು ಕಟ್ಟಿದ್ದಾರೆ. ಹೆಂಗಸರು ನಾಟಿ ಮಾಡುವಾಗ, ಕಳೆ ತೆಗೆಯುವಾಗ, ಬೀಸುವಾಗ, ಕುಟ್ಟುವಾಗ, ತೊಟ್ಟಿಲು ತೂಗುವಾಗ, ವಿಶೇಷ ಸಂದರ್ಭಗಳಲ್ಲಿ ಜನಪದ ಗೀತೆಗಳು ಹೊರಹೊಮ್ಮಿವೆ. ಸಾಮಾನ್ಯರ ಆಡುನುಡಿಗಳಲ್ಲಿ ನುಡಿಗಟ್ಟುಗಳು, ಅನುಭವದ ನುಡಿಗಳನ್ನು ಗಾದೆ ಮಾತುಗಳ ರೂಪದಲ್ಲಿ ಜೀವನಾನುಭವವನ್ನು ಕಟ್ಟಿಕೊಟ್ಟಿದ್ದಾರೆ. ರಾತ್ರಿ ಮೊಮ್ಮಕ್ಕಳನ್ನು ಮಲಗಿಸುವಾಗ ಅಜ್ಜಿಯ ಕಥೆಗಳು ಸೃಷ್ಟಿಯಾಗಿವೆ. ಮಕ್ಕಳು ಆಡುವಾಗ ಶಿಶುಪ್ರಾಸಗಳು ರೂಪುಗೊಂಡಿವೆ. ಇವುಗಳೆಲ್ಲ ತಲೆಮಾರಿನಿಂದ ತಲೆಮಾರಿಗೆ ಮೌಖಿಕ ಪರಂಪರೆಯಾಗಿ ಹರಿದುಬಂದಿವೆ. ಹಾಗಾಗಿ ಜನಪದ ಸಾಹಿತ್ಯ ನಿರಂತರ ಚಲನೆಶೀಲತೆಯುಳ್ಳ ಸಂವಹನ ಮಾಧ್ಯಮವಾಗಿದೆ.

### ೨.೨.೧ ಜನಪದ ಸಾಹಿತ್ಯದ ಸ್ವರೂಪ

ಜನಪದ ಸಾಹಿತ್ಯ ಎಂಬುದು ವಿಶಾಲವಾದ ಜಾನಪದ ಕ್ಷೇತ್ರದ ಒಂದು ಭಾಗ ಮಾತ್ರವಾಗಿದೆ. ಇದನ್ನು ವಾಚಿಕ ಜಾನಪದ ಎಂದು ಕರೆದಿದ್ದಾರೆ. ಏಕೆಂದರೆ ಇದನ್ನು ಜಾನಪದ ವಾಙ್ಮಯ ರೂಪದಲ್ಲಿ ಗುರುತಿಸಲಾಗಿದೆ. ಜನಪದ ಗೀತೆ, ಕಥೆ, ಒಗಟು ಮತ್ತು ಗಾದೆಗಳಿಂದ ಕೂಡಿರುವ ಜನಪದ ಸಾಹಿತ್ಯವನ್ನು ಚತುರ್ಮುಖಿ ಎನ್ನಬಹುದು. ಮೇಲ್ಕಂಡ ಪ್ರಕಾರಗಳಲ್ಲಿ ಗುರುತಿಸಿದಾಗಲೂ ಅದರ ವಸ್ತು ವೈವಿಧ್ಯ ವಿಶಾಲ ವ್ಯಾಪ್ತಿಯುಳ್ಳದ್ದಾಗಿದೆ. ಗದ್ಯ ಮತ್ತು ಪದ್ಯವೆಂಬ ಎರಡು ಪ್ರಮುಖ ಮಾಧ್ಯಮಗಳಲ್ಲಿ ಜನಪದ ಸಾಹಿತ್ಯ ರಚಿತವಾಗಿದೆ. ಪ್ರಚುರತೆಯ ದೃಷ್ಟಿಯಿಂದ ಜನಪದ ಗೀತೆ ಪ್ರಾಧಾನ್ಯತೆ ಪಡೆದರೂ, ಒಂದೊಂದು ಪ್ರಕಾರದಲ್ಲಿಯೂ ವೈವಿಧ್ಯವಾದ ಜೀವನಾನುಭವ ದಾಖಲುಗೊಂಡಿದೆ.

ವೈಜ್ಞಾನಿಕ ಹಾಗೂ ಕಲಾತ್ಮಕ ಮುಖಗಳಿಂದ ಕೂಡಿದ ಜಾನಪದ ಇಂದು ವ್ಯಾಪಕವಾದ ಅರ್ಥದಲ್ಲಿ ಪರಿಗಣಿತವಾಗುತ್ತಿದ್ದರೂ, ಮೊದಲಿಗೆ ಅದರ ಕಲಾತ್ಮಕ ಭಾಗವೇ ವಿದ್ವಾಂಸರನ್ನು ವಿಶೇಷವಾಗಿ ಆಕರ್ಷಿಸಿತ್ತು. ಜಾನಪದ ಅಧ್ಯಯನ ಜನಪದ ಸಾಹಿತ್ಯದಿಂದ ಆರಂಭವಾಗಿ ಕ್ರಮೇಣ ಇತರ ಪ್ರಕಾರಗಳನ್ನು ತನ್ನಲ್ಲಿ ಅಂತರ್ಗತಗೊಳಿಸಿಕೊಂಡಿತು. ಜನಪದ ಸಾಹಿತ್ಯವನ್ನು ವರ್ಗೀಕರಿಸುವುದು ಸುಲಭವಾದ ಕಾರ್ಯವಲ್ಲ. ಏಕೆಂದರೆ ಅದು ಜೀವನದ ಸಮಗ್ರತೆಯನ್ನು ಒಳಗೊಂಡಿದೆ. ಆದರೂ ಅಧ್ಯಯನದ ಅನುಕೂಲಕ್ಕಾಗಿ ವಿದ್ವಾಂಸರು ಜನಪದ ಸಾಹಿತ್ಯವನ್ನು ವರ್ಗೀಕರಿಸಿದ್ದಾರೆ.

ದೇ. ಜವರೇಗೌಡ ಅವರು ಅನೇಕ ವಿದ್ವಾಂಸರ ಅಭಿಪ್ರಾಯಗಳನ್ನು ಗಮನದಲ್ಲಿರಿಸಿಕೊಂಡು ಜನಪದ ಸಾಹಿತ್ಯ ರೂಪಗಳನ್ನು ಮುಖ್ಯವಾಗಿ ಶ್ರವ್ಯ ಮತ್ತು ದೃಶ್ಯವೆಂದು ಸಹೃದಯರನ್ನು ಗಮನದಲ್ಲಿರಿಸಿಕೊಂಡು ವಿಭಾಗಿಸಿದ್ದಾರೆ. ದೃಶ್ಯದಲ್ಲಿ ಬಯಲಾಟ, ತೊಗಲು ಗೊಂಬೆಯಾಟ, ಸಣ್ಣಾಟ ಮುಂತಾದ ರಂಗ ಕಲೆಗಳು ಸೇರುತ್ತವೆ. ಶ್ರವ್ಯದಲ್ಲಿ ಪದ್ಯ, ಗದ್ಯ, ಗಾದೆ ಮತ್ತು ಒಗಟು ಎಂಬ ನಾಲ್ಕು ಭಾಗಗಳಲ್ಲಿ ವಿಭಾಗಿಸಿದ್ದಾರೆ. ಗೀತೆ, ಕಥನಕಾವ್ಯಗಳು ಪದ್ಯ ಸಾಹಿತ್ಯದಲ್ಲಿ ಕಥೆ, ಇತಿಹಾಸ ಮತ್ತು ಪುರಾಣ ಇವುಗಳನ್ನು ಗದ್ಯ ಸಾಹಿತ್ಯದಲ್ಲಿ ಸೇರಿಸಿದ್ದಾರೆ.

ಜನಪದ ಸಾಹಿತ್ಯವನ್ನು ದೇವುಡು ಅವರು ಹಾಡು, ಕಥೆ, ಒಗಟು ಮತ್ತು ಗಾದೆ ಎಂದು ವಿಭಾಗಿಸಿ ಇಲ್ಲಿ ಹಾಡುಗಳನ್ನು ಗಂಡಸರ ಮತ್ತು ಹೆಂಗಸರ ಹಾಡುಗಳೆಂದು ಪುನಃ ಎರಡು ಭಾಗಗಳಾಗಿ ವಿಂಗಡಿಸಿದ್ದಾರೆ. ಇವುಗಳಲ್ಲಿ ಮತ್ತೆ ಒಳಗುಂಪುಗಳನ್ನು ಅವುಗಳ ಲಕ್ಷಣಗಳ ಮೇಲೆ ವಿಂಗಡಿಸಿದ್ದಾರೆ. ಜನಪದ ಸಾಹಿತ್ಯದ ರೂಪಗಳು ಏನೇ ಇರಲಿ ಅವುಗಳ ಕುರಿತಾಗಿ ಸಾಕಷ್ಟು ಅಧ್ಯಯನಗಳು ಜರುಗಿವೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಜನಪದ ಸಾಹಿತ್ಯದ ರೂಪವಾದ ಜನಪದ ಗೀತೆಗಳ ಕುರಿತು ಚರ್ಚಿಸುವುದು ಅಗತ್ಯ. ಏಕೆಂದರೆ ಜನಪದ ಗೀತೆಗಳು ಪ್ರಸ್ತುತ ಅಧ್ಯಯನಕ್ಕೆ ಮುಖ್ಯ ಆಕರವಾಗಿವೆ.

### ೨.೨.೨ ಜನಪದ ಗೀತೆಗಳು

ಕನ್ನಡ ಜನಪದ ಗೀತೆಗಳಲ್ಲಿ ಜನಪದರ ಸಂಬಂಧಗಳನ್ನು ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶ. ಜನಪದ ಸಾಹಿತ್ಯದಲ್ಲಿ ಗೀತೆ, ಕಥೆ, ಒಗಟು ಹಾಗೂ ಗಾದೆ ಎಂಬ ನಾಲ್ಕು ರೂಪಗಳನ್ನು ಮುಖ್ಯವಾಗಿ ಗುರುತಿಸಲಾಗಿದೆ. ಅವುಗಳಲ್ಲಿ ಗೀತೆಗಳಿಗೆ ಜನಪದ ಸಾಹಿತ್ಯದಲ್ಲಿ ಪ್ರಮುಖ ಸ್ಥಾನವಿದೆ. ಏಕೆಂದರೆ ಬಹುವಾಗಿ ಜನಪದರು ತಮ್ಮ ಬದುಕಿನ ಬವಣೆಗಳನ್ನು ಜೀವನಾದರ್ಶಗಳನ್ನು ಜನಪದ ಗೀತೆಗಳಲ್ಲಿ ಹೇಳಿಕೊಂಡಿರುವುದೇ ಹೆಚ್ಚು. ಗೀತೆಗಳಲ್ಲಿ ಅಭಿವ್ಯಕ್ತಿ ಪಡೆಯದ ಜೀವನಾನುಭವವೇ ಇಲ್ಲವೆನ್ನುವಷ್ಟು ಅವುಗಳ ವಸ್ತು ವೈವಿಧ್ಯಮಯವಾಗಿದೆ.

ಅನಕ್ಷರಸ್ಥ ಸಮುದಾಯದ ನಡುವೆ ಕಂಠಸ್ಥ ಪರಂಪರೆಯ ಮೂಲಕ ಹರಿದು ಬಂದಿರುವ ಒಂದು ಗುಂಪಿನ ಕಾವ್ಯ ಮತ್ತು ಸಂಗೀತಗಳ ಸಮಾವೇಶದಿಂದಾದುದು ಜನಪದ ಗೀತೆ. ಈ ಗುಂಪು ಪ್ರಧಾನವಾಗಿ ಗ್ರಾಮೀಣ ಸಮಾಜವಾಗಿದ್ದು, ಪ್ರಾಚೀನ ಸಂಸ್ಕೃತಿಯೊಂದನ್ನು ಉಳಿಸಿಕೊಂಡು ಬಂದುದಾಗಿರುತ್ತದೆ. ನಾಗರಿಕತೆಯ ಸಂಪರ್ಕದಿಂದ ದೂರವಿರುವ ಹಳ್ಳಿಗಳಲ್ಲಿ ವಾಸಿಸುವ ಸಾಮಾನ್ಯ ಜನರು ಪ್ರಕೃತಿಯೊಂದಿಗೆ ಸಂತೋಷದಿಂದ ಇದ್ದಾಗ, ಪರಸ್ಪರರಲ್ಲಿ ಸುಖ-ದುಃಖಗಳನ್ನು

ಹಂಚಿಕೊಂಡಾಗ, ದೇವರನ್ನು ಶ್ರದ್ಧೆಯಿಂದ ಬೇಡಿಕೊಂಡಾಗ ಹೀಗೆ ಅನೇಕ ಸಂದರ್ಭಗಳಲ್ಲಿ ನಿರಾಯಾಸವಾಗಿ ಹೃದಯದಿಂದ ಹೊರಹೊಮ್ಮಿದ ಭಾವನೆಗಳೆಲ್ಲ ಜನಪದ ಹಾಡುಗಳಲ್ಲಿವೆ.

ಜನಪದ ಸಾಹಿತ್ಯದಲ್ಲಿ ಗೀತೆಗಳದ್ದು ಸಿಂಹಪಾಲು. ಜನಪದ ಸಾಹಿತ್ಯದ ಇತರೆಲ್ಲ ಪ್ರಕಾರಗಳಿಗಿಂತ ಅತ್ಯಂತ ಪ್ರಾಚೀನವಾದುದೂ ಹೌದು. ಅನಕ್ಷರಸ್ಥ ಜನರ ಬಾಯಿಂದ ಬಾಯಿಗೆ ಹರಿದು ಬಂದಿರುವ ಗೀತೆಗಳದ್ದು ವಿಶಿಷ್ಟ ರಚನೆ. ಕಾವ್ಯಾಂಶ ಮತ್ತು ಸಂಗೀತಗಳ ಹದವರಿತ ಬೆರಕೆಯಿಂದ ಹುಟ್ಟಿ ಬಂದವು ಗೀತೆಗಳು. ರಾಗಿ ಬೀಸುವಾಗ, ಕಳೆ ಕೀಳುವಾಗ, ನಾಟಿ ಹಚ್ಚುವಾಗ, ಗಾಡಿ ಹೊಡೆಯುವಾಗ, ನೇಗಿಲು ಹೂಡುವಾಗ ತಮಗರಿವಿಲ್ಲದಂತೆ ಗೀತೆಗಳು ಅವರ ನಾಲಿಗೆಯ ಮೇಲೆ ನಲಿದಾಡುತ್ತವೆ. ಅವುಗಳನ್ನು ಕಟ್ಟಿದವರು ಅನಾಮಧೇಯರು. ಅಜ್ಞಾತಕರ್ತೃತ್ವ, ಸಮೂಹಸೃಷ್ಟಿ, ವಾಕ್‌ಪರಂಪರೆ, ಜನಪ್ರಿಯತೆ, ಪಾಠಾಂತರ, ಗೇಯತೆ ಮತ್ತು ಸರಳತೆ ಜನಪದ ಗೀತೆಗಳ ಮುಖ್ಯ ಲಕ್ಷಣ. ಇವುಗಳ ರಚನೆ ಹೀಗೆಯೇ ಇರಬೇಕೆಂಬ ನಿರ್ದಿಷ್ಟತೆ ಇರುವುದಿಲ್ಲ. ಅವುಗಳಲ್ಲಿ ಖಚಿತವಾದ ತಂತ್ರದ ಬಳಕೆ ಇರುವುದಿಲ್ಲ. ಏಕೆಂದರೆ ಜನಪದ ಗೀತೆಗಳು ಬುದ್ಧಿಪೂರ್ವಕವಾಗಿ ಕಟ್ಟಿದವುಗಳಲ್ಲ. ಜನಪದರ ಪಾಡೇ ಹಾಡಾಗಿ ಅಭಿವ್ಯಕ್ತಗೊಂಡವು. ಆದ್ದರಿಂದ ಶಿಷ್ಟ ಸಾಹಿತ್ಯದಲ್ಲಿರುವಂತೆ ಜನಪದ ಗೀತೆಗಳಲ್ಲಿ ಯಾವ ಕಸರತ್ತುಗಳೂ ಇರುವುದಿಲ್ಲ. ಜನಪದ ಗೀತೆಗಳು ಸೃಷ್ಟಿ, ಪುನರ್‌ಸೃಷ್ಟಿಯೊಂದಿಗೆ ತಲೆಮಾರಿನಿಂದ ತಲೆಮಾರಿಗೆ ಬೆಳೆಯುತ್ತಾ ಸಾಗಿ ಬಂದವು.

ಜನಪದ ಗೀತೆಗಳ ರೂಪ ತುಂಬಾ ಸರಳವಾದುದು. ಶೈಲಿ ಸಹಜ ಮತ್ತು ಅಕೃತಕವಾಗಿರುತ್ತದೆ. ಸ್ವಭಾವೋಕ್ತಿ ಅವುಗಳ ಜೀವಾಳ. ಕನ್ನಡದ ಬಹುತೇಕ ಜನಪದ ಗೀತೆಗಳು ತ್ರಿಪದಿ ಛಂದಸ್ಸಿನಲ್ಲಿವೆ. ಹಾಡುವಾಗ ನಾಲ್ಕು ಸಾಲಾಗಿ ಹಾಡಲಾಗುತ್ತದೆ. ಹಲವು ವೇಳೆ ದ್ವಿಪದಿ, ಚೌಪದಿ, ರಗಳೆ ಛಂದಸ್ಸಿನಲ್ಲಿಯೂ ಜನಪದ ಗೀತೆಗಳಿರುತ್ತವೆ. ಪ್ರಾಸಾನುಪ್ರಾಸ, ಧ್ವನಿಬದ್ಧನುಡಿ, ಅಲಂಕಾರಗಳ ಬಳಕೆ, ಸ್ವಭಾವೋಕ್ತಿಗಳಿಂದ ಈ ಗೀತೆಗಳು ಕೇಳುಗರ ಮೇಲೆ ಹೆಚ್ಚು ಪರಿಣಾಮವನ್ನು ಬೀರುತ್ತವೆ. ಪದ್ಯದ ಕೊನೆಯಲ್ಲಿ ಪಲ್ಲವಿಗಳಿರುವ ಗೀತೆಗಳೂ ಇರುತ್ತವೆ. ಗೀತೆಗಳಲ್ಲಿ ಅದ್ಭುತವಾದ ಲಯದ ಜೋಡಣೆಯಿರುತ್ತದೆ. ಇವೆಲ್ಲ ವೈಶಿಷ್ಟ್ಯಗಳು ಜನಪದ ಗೀತೆಗಳಲ್ಲಿ ಕೃತಕವಲ್ಲದ ರೀತಿಯಲ್ಲಿ ಮೂಡಿ ಬಂದಿರುವುದು ಸೋಜಿಗದ ಸಂಗತಿ.

ಜನಪದ ಗೀತೆ ಒಂದು ಜನ ಸಮುದಾಯದ ಸಾಂಸ್ಕೃತಿಕ ಸ್ವತ್ತು. ಜನಪದ ಗೀತೆ ಆಯಾ ಜಾನಪದರ ಸಂಸ್ಕೃತಿಯನ್ನು ಚೆನ್ನಾಗಿ ತೆರೆದು ತೋರಬಲ್ಲುದು. ಏಕೆಂದರೆ 'Standard dictionary of Folklore'ನ ಪ್ರಕಾರ ಜನಪದ ಗೀತೆ ಜನಪದ ಸಂಸ್ಕೃತಿಯ ಅಂಗವಾಗಿದೆ. ಜನಪದ ಗೀತೆಗಳ ಹುಟ್ಟು ಸಾಮೂಹಿಕವೋ, ವೈಯಕ್ತಿಕವೋ ಎನ್ನುವ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಗೀತೆಗಳು ಇಂತಹದೇ ನಿರ್ದಿಷ್ಟ ಕಾಲದಲ್ಲಿ ಹುಟ್ಟಿವೆ ಎಂಬುದನ್ನು ನಿರ್ಧರಿಸುವುದು ಅಸಾಧ್ಯ. ಜನಪದ ಗೀತೆಗಳನ್ನು ರಚಿಸುವ, ಹಾಡುವ ಮತ್ತು ಬೋಧಿಸುವ ಯಾವ ತಂತ್ರಗಳು ರೂಢಿಯಲ್ಲಿಲ್ಲ. ಜನಪದರು

ಕ್ರಿಯೆಯಲ್ಲಿ ತೊಡಗಿಕೊಂಡಾಗ ಆಡಿದ ಲಯಾತ್ಮಕ ಮಾತುಗಳನ್ನೇ ಭಾವನಾತ್ಮಕವಾಗಿ ಹೇಳಲು ಹೊರಟಾಗ ಜನಪದ ಗೀತೆಗಳ ಉಗಮವಾಯಿತು. ಅವುಗಳನ್ನೇ ಕೇಳುವುದರ ಮೂಲಕ, ನೆನಪಿನಲ್ಲಿ ಇಟ್ಟುಕೊಳ್ಳುವುದರ ಮೂಲಕ, ಇತರರ ಜೊತೆ ದನಿಗೂಡಿಸುವುದರ ಮೂಲಕ ಇವುಗಳನ್ನು ಕಲಿಯಲಾಗುತ್ತದೆ. ಈ ಮಾದರಿಯಲ್ಲಿಯೇ ಜನಪದ ಗೀತೆಗಳು ತಲೆಮಾರಿನಿಂದ ತಲೆಮಾರಿಗೆ ವರ್ಗಾವಣೆಗೊಳ್ಳುತ್ತ ಬಂದಿವೆ. ಜನಪದ ಗೀತೆಗಳ ಸೃಷ್ಟಿ ವಿಧಾನವನ್ನು ಗಮನಿಸಿದಾಗ ಒಬ್ಬ ವ್ಯಕ್ತಿಯಿಂದ ಆರಂಭವಾಗಿ ಒಬ್ಬ ವ್ಯಕ್ತಿಯಿಂದಲೇ ಪರಿಪೂರ್ಣಗೊಳ್ಳುವಂಥದ್ದಲ್ಲ. ಏಕವ್ಯಕ್ತಿಯಿಂದ ಆರಂಭಗೊಂಡು ಹಲವಾರು ವ್ಯಕ್ತಿಗಳು ತಮಗರಿವಿಲ್ಲದಂತೆಯೇ ಚಿಕ್ಕಪುಟ್ಟ ಮಾರ್ಪಾಟುಗಳನ್ನು ತಿದ್ದುಪಡಿಗಳನ್ನು ನಿರಂತರವಾಗಿ ಮಾಡುತ್ತಲೇ ಇರುತ್ತಾರೆ. ಕಾಲಕ್ರಮೇಣ ಇಂತಹ ಮಾರ್ಪಾಟುಗಳೇ ಸ್ಥಳೀಯ ಪಾಠಭೇದಗಳಾಗಿ ಹಾಗೂ ಹೊಸ ಪಾಠಾಂತರಗಳಾಗಿ ರೂಪುಗೊಳ್ಳುತ್ತವೆ. ಅನೇಕ ತಲೆಮಾರುಗಳವರೆಗೆ ವಾಕ್ ಪರಂಪರೆಯು ಮುಕ್ತಾಯಗೊಳ್ಳದೆ ಮುಂದುವರೆಯುತ್ತದೆ. ಆದ್ದರಿಂದ ಜನಪದ ಗೀತೆಗಳ ಕರ್ತೃವಿನ ಬಗ್ಗೆ ನಿಖರವಾಗಿ ಹೇಳುವುದು ಅಸಾಧ್ಯ.

"ಜನಪದ ಗೀತೆಗಳ ಹುಟ್ಟು ಸಾಮೂಹಿಕವೋ, ವೈಯಕ್ತಿಕವೋ ಎನ್ನುವ ವಿಷಯದಲ್ಲಿ ಭಿನ್ನಾಭಿಪ್ರಾಯಗಳನ್ನು ಕಾಣುತ್ತೇವೆ. ಕಲೆಯೆಂಬುದು ವ್ಯಕ್ತಿ ಸೃಷ್ಟಿಯ ವಸ್ತು. ಅದು ಒಬ್ಬನ ಮನಸ್ಸನ್ನು ಹೇಳುತ್ತದೆ. ಅವನ ಮನಸ್ಸಿನಂತೆಯೇ ಮನಸ್ಸಿನ ಸಾವಿರ ಜನರೂ ಇರಬಹುದಾದರೂ ಸೃಷ್ಟಿಕಾರ ಮಾತ್ರ ಒಬ್ಬನೆ. ಅವನ ಸೃಷ್ಟಿಯನ್ನು ಕಂಡಾಗ 'ನಾನು ಇದನ್ನೇ ಹೇಳುತ್ತಿದ್ದೆ, ನಾನು ಹೀಗೆಯೇ ಎಣಿಸಿದ್ದೆ' ಎಂದು ಹಲವರಿಗೆ ಅನಿಸಬಹುದು. ಹಾಗೆ ಅನಿಸುವುದರಿಂದಲೇ ಅದು ಜನಪ್ರಿಯವಾಗುತ್ತದೆ. ಒಬ್ಬ ವ್ಯಕ್ತಿಯ ಮನೋಭಾವ, ಕಲ್ಪನೆ, ಅನುಭವ ಮೊದಲಾದವುಗಳನ್ನು ಅವು ಹೊರಗೆಡುವುತ್ತವೆ. ಒಬ್ಬ ವ್ಯಕ್ತಿಯಲ್ಲಿ ಸುತ್ತಣ ಜೀವನದ ಸಂವೇದನೆಯಿಂದ ಅವು ಉದ್ರೇಕಗೊಳ್ಳುತ್ತವೆ" ಹೀಗೆ ಕಾರಂತರು ಜನಪದ ಗೀತೆಗಳು ಏಕವ್ಯಕ್ತಿಯಿಂದ ಸೃಷ್ಟಿಯಾಗಿವೆ ಎಂದು ಅಭಿಪ್ರಾಯಪಡುತ್ತಾರೆ. ಆದರೆ ಗೀತೆಗಳು ವ್ಯಕ್ತಿಸೃಷ್ಟಿಯೇ ಸಮೂಹಸೃಷ್ಟಿಯೇ ಎಂದು ನಿಖರವಾಗಿ ಹೇಳಲು ಬರುವುದಿಲ್ಲ. "ವ್ಯಕ್ತಿಯಿಂದ ಹುಟ್ಟನ್ನು ಪಡೆದು ಸಮಷ್ಟಿಯಿಂದ ಸಂಸ್ಕಾರಗೊಂಡು ಯಾರೊಬ್ಬರ ಸೊತ್ತು ಆಗದೇ ಎಲ್ಲರ ಮೆಚ್ಚಿನ ವಸ್ತುವಾಗಿ ಉಳಿಯುವ ಈ ಸಾಹಿತ್ಯ ಜನತೆಯ ಹೃದಯ ಸಂಸ್ಕಾರದಲ್ಲಿ ವಿಶಿಷ್ಟ ಪಾತ್ರವನ್ನೇ ವಹಿಸಿದ ಮಹಾಸಂಜೀವಿನಿ" ಎಂಬುದು ಜೀ. ಶಂ. ಪರಮಶಿವಯ್ಯ ಅವರ ಅಭಿಪ್ರಾಯ. ಹೀಗೆ ಜನಪದರ ಭಾವನಾತ್ಮಕ ಅಭಿವ್ಯಕ್ತಿಯು ಶಾಬ್ದಿಕ ರೂಪ ಪಡೆದು ಜನಪದ ಸಾಹಿತ್ಯವೆನಿಸಿದೆ.

ಜನಪದ ಗೀತೆಗಳನ್ನು ರಚಿಸಿದವರು ಅನಕ್ಷರಸ್ಥರು. ಯಾವುದೇ ಒಬ್ಬ ನಿರ್ದಿಷ್ಟ ವ್ಯಕ್ತಿಯಿಂದ ಇವು ರಚನೆಯಾಗದೇ ಸಾಮೂಹಿಕವಾಗಿ ನಿರ್ಮಾಣಗೊಂಡಿವೆ ಎಂಬುದು ಹಲವು ವಿದ್ವಾಂಸರ ವಾದ. ಹಾಗೆಯೇ 'ಜನಪದ ಗೀತೆಗಳು ಎಂದರೇನು?' ಎಂಬ ಪ್ರಶ್ನೆಗೂ ಕೂಡ ಹಲವು ವಿದ್ವಾಂಸರು ವ್ಯಾಖ್ಯಾನಗಳನ್ನು ನೀಡಿದ್ದಾರೆ. ಜನಪದ ಗೀತೆ ಜನಪದ ಸಾಹಿತ್ಯದ ಅತ್ಯಂತ ವ್ಯಾಪಕ ವೈವಿಧ್ಯ ಪ್ರಕಾರ.

ಇವು ಅನಕ್ಷರಸ್ಥ ಸಮಾಜದ ಕಾವ್ಯ ಮತ್ತು ಸಂಗೀತಗಳ ಸಮಾಗಮ. ಜನಪದ ಗೀತೆಗಳು ಸರಳ, ಸುಂದರ, ನೇರ ಅಭಿವ್ಯಕ್ತಿ ಹೃದಯಸ್ಪರ್ಶಿ ಮುಂತಾದ ಲಕ್ಷಣಗಳನ್ನು ಹೊಂದಿವೆ. ಇವುಗಳ ಕುರಿತಾಗಿ ವಿನೀತ ರಾಮಚಂದ್ರರಾಯರು "ಹಳ್ಳಿಯ ಹಾಡು ಎಂದು ಕರೆಯಲ್ಪಡುವ ಜನಪದ ಗೀತೆಗಳು ನಾಗರಿಕತೆ ಬೆಳೆಯುತ್ತಾ ಬಂದು ಭಾಷೆಗೆ ಲಿಪಿ ಪ್ರಾಪ್ತವಾಗಿ ಶಿಷ್ಟಪದ ಸಾಹಿತ್ಯ ರೂಪುಗೊಳ್ಳುತ್ತಾ ಬಂದರೂ ಬೆಟ್ಟದ ತೊರೆಯಂತೆ ಕಾಪಿನ ಹೂವಿನಂತೆ ತಮ್ಮ ಪಾಡಿಗೆ ತಾವು ಹರಿಯುತ್ತಲೇ ಬಂದವು. ಅರಳುತ್ತಲೇ ನಡೆದವು" ಎಂದಿದ್ದಾರೆ.

ಎ. ಎಚ್. ಕ್ರಾಪೆಯವರು "ಭೂತಕಾಲದ ಅಜ್ಞಾತ ನಿರಕ್ಷರಕುಕ್ಷಿ ರಚಿಸಿರುವ, ಬಹುಕಾಲದಿಂದ ಮೌಖಿಕ ಸಂಪ್ರದಾಯದಲ್ಲುಳಿದು ಬಂದಿರುವ, ಮಧುರವೂ, ರಂಗಾತ್ಮಕವೂ ಆದ ಹಾಡೇ ಭಾವಗೀತೆ" ಎಂದು ಗೀತೆಯ ಲಕ್ಷಣಗಳ ಕುರಿತಾಗಿ ಹೇಳಿದ್ದಾರೆ. "ಜನಪದ ಗೀತೆ ಮುಖ್ಯವಾಗಿ ಕ್ರಿಯಾತ್ಮಕ ಸ್ವರೂಪದ್ದು ಎನ್ನುವುದು ಮಹತ್ವದ ಸಂಗತಿ. ಕ್ರಿಯೆಯ ಜೊತೆಯಲ್ಲಿಯೇ ಗೀತೆಗಳು ರೂಪುಗೊಂಡಿವೆ." ಜನಪದರ ಕ್ರಿಯೆಗೂ ಗೀತೆಗೂ ಸಾವಯವ ಸಂಬಂಧ ಗೀತೆಗಳಲ್ಲಿ ಕ್ರಿಯಾರ್ಥಕವಾದವು. ಕ್ರಿಯೆಗೆ ಗೀತೆ ಬೋಧಕವಾದರೆ, ಗೀತೆಗಳ ಸೃಷ್ಟಿಗೆ ಕ್ರಿಯೆಯಿಂದ ಸ್ಫೂರ್ತಿ ದೊರೆಯುವಂತಾಯಿತು" ಹೀಗೆ ಗಂಡಸರು ಮನೆಯ ಹೊರಗೆ, ಹೆಂಗಸರು ಮನೆಯ ಒಳಗೆ ಬಗೆಬಗೆಯ ಕೆಲಸದಲ್ಲಿರುವಾಗ ಗೀತೆಗಳು ಕ್ರಿಯೆಯೊಂದಿಗೆ ನಿರ್ಮಾಣಗೊಂಡವು. ಹಾಗಾಗಿ "ಜನಪದ ಗೀತೆಗಳೆಂದರೆ ಕರ್ಮಗೀತೆಗಳು ಅಂದರೆ ಕೆಲಸ ಮಾಡುತ್ತ ಹೇಳುವ ಗೀತೆಗಳು". ಓದುಬರಹ ಬಾರದ ಹೊಲಗದ್ದೆಗಳಲ್ಲಿ ದುಡಿಯುವ, ಮನೆಯಲ್ಲಿಯೇ ಗೃಹಿಣಿಯಾಗಿರುವ, ನಿಸರ್ಗದೊಡನೆ ತಮ್ಮ ಬದುಕನ್ನು ಬೆಸೆದುಕೊಂಡಿರುವ ಹಳ್ಳಿಯ ಜನರು ಭಾವಜೀವಿಗಳು. ತಮ್ಮ ಬದುಕಿನಲ್ಲಿ ನೋವು-ನಲಿವು, ಸುಖ-ದುಃಖ, ಕೋಪ-ತಾಪ, ಏರು-ಪೇರುಗಳನ್ನು ತಮ್ಮ ಕಾಯಕದೊಂದಿಗೆ ಇತರರೊಡನೆ ಇಲ್ಲವೇ ತಮಗೆ ತಾವೇ ಹೇಳಿಕೊಳ್ಳುತ್ತಾರೆ. ಇವುಗಳು ಲಯ, ಪ್ರಾಸಗಳನ್ನು ಹೊಂದಿ ಮುಂದೆ ಜನಪದ ಗೀತೆಗಳಾಗಿ ರೂಪುಗೊಂಡಿವೆ.

ಬಹುಪಾಲು ಸಂಗ್ರಾಹಕರು ಜನಪದ ಹಾಡುಗಳಿಗೆ 'ಗೀತೆ' ಎಂಬ ಪದ ಬಳಸಿದ್ದಾರೆ. ಭಾರತೀಯ ಸಾಹಿತ್ಯವನ್ನು ಗಮನಿಸಿದಾಗ ಬಹುಪಾಲು ಹಾಡುಗಳಿಗೆ ಗೀತೆ ಎಂಬ ಪದಬಳಕೆ ಹೆಚ್ಚಾಗಿದೆ. ಏಕೆಂದರೆ ನವೋದಯ ಸಾಹಿತ್ಯದ ಪ್ರೇರಣೆಗಳೇ ಕಾರಣವೆಂದು ಹೇಳಬಹುದು. ಆ ಕಾಲಘಟ್ಟದ ಪ್ರಮುಖ ಕವನ ಸಂಕಲನಗಳಲ್ಲಿ ಗೀತೆ ಎಂಬ ಪದ ಪ್ರಯೋಗದ ಬಳಕೆ ಇದೆ. ಗೀತೆಯೆಂದರೆ ಹಾಡಲು ಬರುವ ಲಯಬದ್ಧ ರಚನೆ ಎಂದು ಗುರುತಿಸಬಹುದು. ಜನಪದರಲ್ಲಿ ರಚನೆಗೊಂಡ ಲಯ, ಪ್ರಾಸಗಳನ್ನು ಹೊಂದಿ ಮುಂದೆ ಜನಪದ ಗೀತೆಗಳಾಗಿ ರೂಪುಗೊಂಡಿವೆ.

### ೨.೨.೩ ಜನಪದ ಗೀತೆಯ ಪ್ರಕಾರಗಳು

ಜನಪದ ಗೀತೆಗಳನ್ನು ಅವುಗಳ ವಸ್ತುವಿನ ದೃಷ್ಟಿಯಿಂದ ವೈವಿಧ್ಯತೆ ಇರುವಂತೆ ಹಾಡಿನ ಕ್ರಮ, ಭಾವ ಹಾಗೂ ರೂಪಾತಿಶಯದಿಂದ ಹಲವು ಕಟ್ಟುಕಟ್ಟಳೆ ಮುಂತಾದವುಗಳಿಗೆ ಸೀಮಿತವಾದ ವಿಶೇಷ ಜನಪದ ಗೀತೆಗಳು ಇರುತ್ತವೆ. ಇವುಗಳನ್ನು ಹಾಡುವ ಸಂದರ್ಭಕ್ಕನುಗುಣವಾಗಿ ಕೆಲಸದ ಹಾಡುಗಳು, ಸ್ತುತಿ ಪದಗಳು, ವ್ರತಾಚರಣೆಯ ಗೀತೆಗಳು ಎಂದು ವಿಂಗಡಿಸಬಹುದು. ಕೆಲಸದ ಹಾಡುಗಳಲ್ಲಿ ಹಂತಿ ಪದಗಳು, ನಾಟಿ ಪದಗಳು, ಕುಟ್ಟುವ ಪದಗಳು, ಬೀಸುವ ಪದಗಳು, ಭಾಗವಂತಿಕೆ ಪದಗಳೆಂದು ಗುರುತಿಸಬಹುದು. ಇವಲ್ಲದೇ ಮಕ್ಕಳ ಹಾಡುಗಳು, ಜೋಗುಳ ಪದಗಳು, ವಿವಿಧ ದೇವರಿಗೆ ಸಂಬಂಧಿಸಿದಂತೆ ಹಾಡುಗಳನ್ನು ವಿಂಗಡಿಸಬಹುದಾಗಿದೆ.

ಜನಪದ ಗೀತೆಗಳ ಜೊತೆಯಿಲ್ಲದೆ ಜನಪದರ ಯಾವ ಕೆಲಸವೂ ಸಾಗುವುದಿಲ್ಲ. ಬೀಸುವುದು, ಕುಟ್ಟುವುದು, ಮೊಸರು ಕಡೆಯುವುದು, ಹಚ್ಚೆ ಹೊಯ್ಯುವುದು, ತೊಟ್ಟಿಲು ತೂಗುವುದು ಹೀಗೆ ಸಾಮೂಹಿಕ ಕೆಲಸವೇ ಆಗಲಿ, ವ್ಯಕ್ತಿಗತ ಕೆಲಸವಾಗಲಿ ಗೀತೆಗಳಿರಲೇಬೇಕು. ಹಬ್ಬಹರಿದಿನಗಳು, ಮದುವೆ, ಸೀಮಂತ, ನಾಮಕರಣ ಮೊದಲಾದ ಶುಭಕಾರ್ಯಗಳು ಹಾಡಿನಿಂದಲೇ ಆರಂಭವಾಗುತ್ತವೆ. ಬಹುತೇಕ ಜನಪದ ಗೀತೆಗಳೆಲ್ಲ ಕ್ರಿಯಾತ್ಮಕವಾದವುಗಳು. ಕೆಲಸ ಮತ್ತು ಹಾಡು ಪರಸ್ಪರ ಪೂರಕವಾಗಿರುವುದು ಇವುಗಳ ವೈಶಿಷ್ಟ್ಯ. ಇಂತಹ ಜನಪದ ಗೀತೆಗಳನ್ನು ವಿದ್ವಾಂಸರು ಹಲವು ಬಗೆಯಲ್ಲಿ ವಿಂಗಡಿಸಿದ್ದಾರೆ. ದೇ. ಜವರೇಗೌಡ ಅವರು ಗೀತೆಗಳನ್ನು ಭಕ್ತಿಗೀತೆ, ಕುಣಿತದ ಹಾಡು, ಶಾಸ್ತ್ರದ ಹಾಡು, ಕಾಯಕಗೀತೆ, ಒಗೆತನದ ಹಾಡು, ಯುದ್ಧಗೀತೆ, ಶಿಶುಗೀತೆ, ವರ್ಣಕಗೀತೆ ಮತ್ತು ಸಂಕೀರ್ಣ ಗೀತೆಗಳೆಂದು ವಿಂಗಡಿಸಿದ್ದಾರೆ. ಸಿ. ಪಿ. ಕೆ. ಅವರು ಭಾವಗೀತೆಗಳು, ಧಾರ್ಮಿಕ ಗೀತೆಗಳು, ಮಾಂತ್ರಿಕ ಗೀತೆಗಳು, ಕಾಯಕ ಗೀತೆಗಳು, ಕ್ರೀಡಾ ಗೀತೆಗಳು, ನಾಟ್ಯ ಗೀತೆಗಳು ಮತ್ತು ಶಿಶು ಗೀತೆಗಳೆಂದು ಭೇದ ಕಲ್ಪಿಸಿ ವಿಂಗಡಿಸಿದ್ದಾರೆ. ಡಾ. ಬಿ. ಎಸ್. ಗದ್ದಗಿಮಠ ಅವರು ತಮ್ಮ 'ಕನ್ನಡ ಜಾನಪದ ಗೀತೆಗಳು' ಎಂಬ ಸಂಶೋಧನಾ ಗ್ರಂಥದಲ್ಲಿ ಸ್ತುತಿ ಪದಗಳು, ಸುಗ್ಗಿಯ ಹಾಡುಗಳು, ಹಳ್ಳಿಯ ಕುಣಿತಗಳು ಮಕ್ಕಳ ಆಟದ ಹಾಡುಗಳು, ಹಾಸ್ಯದ ಹಾಡುಗಳು, ರಸನಿಮಿಷದ ಹಾಡುಗಳು, ರಸಾವೇಶದ ಹಾಡುಗಳು, ಬಾಳಿನಲ್ಲಿ ಆಸರಿಕೆ ಬೇಸರಿಕೆ; ಪ್ರಣಯ ಹಾಗೂ ದಾಂಪತ್ಯ, ಸುಗ್ಗಿಯ ಸಂಪ್ರದಾಯ, ಹಳ್ಳಿಗರ ಹಬ್ಬಗಳು, ಹಂತಿಯ ಹಾಡುಗಳು ಎಂದು ವಿಭಾಗಿಸಿದ್ದಾರೆ. ಹೀಗೆ ಹಲವಾರು ಜಾನಪದ ವಿದ್ವಾಂಸರು ಜನಪದ ಗೀತೆಗಳನ್ನು ವಿಂಗಡಿಸಿದ ಬಗೆಯನ್ನು ಈ ಕೆಳಗೆ ನೀಡಲಾಗಿದೆ.

ಡಾ. ಆರ್. ವಿ. ಎಸ್. ಸುಂದರಂ ಅವರು ಜನಪದ ಗೀತೆಗಳನ್ನು ಕೆಲಸದ ಹಾಡುಗಳು, ಪರಮಾರ್ಥ ಗೀತೆಗಳು, ಮಕ್ಕಳ ಹಾಡುಗಳು, ಗೃಹ ಸಂಬಂಧಿ ಹಾಡುಗಳು, ವೈನೋದಿಕ ಮತ್ತು ಹಬ್ಬದ ಹಾಡು, ಪ್ರೇಮ ಗೀತೆಗಳು, ಹಾಸ್ಯದ ಹಾಡುಗಳು ಮತ್ತು ಶೋಕ ಗೀತೆಗಳು ಎಂದು ಈ ರೀತಿ ವಿಭಾಗಿಸಿದ್ದಾರೆ. (ಆರ್. ವಿ. ಎಸ್. ಸುಂದರಂ, ೧೯೭೭, ಪು-೧೭)

ಜನಪದ ಗೀತೆಗಳನ್ನು ಜೋಗುಳದ ಹಾಡುಗಳು, ಋತುಮಾನ ಹಾಡುಗಳು, ಮದುವೆಯ ಹಾಡುಗಳು, ಕ್ರೀಡಾ ಗೀತೆಗಳು, ಪಕೃತಿ ಗೀತೆಗಳು, ಪ್ರಮಾಣ ಗೀತೆಗಳು, ಕಾಯಕದ ಹಾಡುಗಳು ಮತ್ತು ನೃತ್ಯ ಗೀತೆಗಳು ಎಂದು ಗೊ. ರು. ಚನ್ನಬಸಪ್ಪ ಅವರು ಜಾನಪದ ದರ್ಶನ ಕೃತಿಯಲ್ಲಿ ವರ್ಗಿಕರಿಸಿದ್ದಾರೆ. ಹಾ. ಮಾ. ನಾಯಕ ಅವರು ಜನಪದ ಗೀತೆಗಳನ್ನು ಲಾವಣಿ, ಗೀತೆ, ಕೆಲಸದ ಹಾಡುಗಳು, ನಾಟ್ಯ ಗೀತೆಗಳು ಮತ್ತು ಮಕ್ಕಳ ಹಾಡುಗಳು ಈ ರೀತಿ ವಿಭಾಗಿಸಿದ್ದಾರೆ. (ಹಾ. ಮಾ. ನಾಯಕ, ೧೯೭೧, ಪು–೩೬)

ಜನಪದ ಗೀತೆಗಳನ್ನು ಸಿಂಪಿ ಲಿಂಗಣ್ಣ ಅವರು ಕನ್ನಡದ ಲಾವಣಿಗಳು ಕೃತಿಯಲ್ಲಿ ಗಂಡಸರ ಹಾಡುಗಳು, ಹೆಂಗಸರ ಹಾಡುಗಳು ಮತ್ತು ಮಕ್ಕಳ ಹಾಡುಗಳು ಈ ರೀತಿ ವರ್ಗಿಕರಿಸಿದ್ದಾರೆ. ಜನಪದ ಗೀತೆಗಳ ವರ್ಗಿಕರಣ ಕುರಿತಂತೆ ಲೋಕ ಸಾಹಿತ್ಯ ಕೃತಿಯಲ್ಲಿ ಕೃಷ್ಣದೇವ ಶರ್ಮ ಅವರ ವಿಭಜನೆಗಳು ಈ ಕೆಳಗಿನಂತೆ ಇವೆ. ಅವು ಸಂಸ್ಕಾರ ಸಂಬಂಧಿ ಗೀತೆಗಳು, ರಸಾನುಭೂತಿ ಗೀತೆಗಳು, ಋತು ಮತ್ತು ವೃತ ಸಂಬಂಧಿ ಗೀತೆಗಳು, ಕೆಲಸದ ಹಾಡುಗಳು ಮತ್ತು ವಿವಿಧ ಜಾತಿ ಸಂಬಂಧಿ ಗೀತೆಗಳಾಗಿವೆ.

ಜನಪದ ಗೀತೆಗಳನ್ನು ಎಸ್. ಪಿ. ಪದ್ಮಪ್ರಸಾದ್ ಅವರು ವಯಸ್ಕರ ಗೀತೆಗಳು ಮತ್ತು ಮಕ್ಕಳ ಗೀತೆಗಳು ಎಂದು ವರ್ಗೀಕರಿಸಿದ್ದಾರೆ. ವಯಸ್ಕರ ಜನಪದ ಗೀತೆಗಳಲ್ಲಿ ಗಂಡಸರ ಹಾಗೂ ಹೆಂಗಸರ ಜನಪದ ಗೀತೆಗಳೆಂಬ ವಿಂಗಡನೆಗಳಿವೆ. ಗಂಡಸರ ಜನಪದ ಗೀತೆಗಳಲ್ಲಿ ಕೆಲಸದ ಹಾಡುಗಳು ಮುಖ್ಯವಾಗಿದ್ದು ಹೆಂಗಸರ ಜನಪದ ಗೀತೆಗಳಲ್ಲಿ ಆಚರಣೆ ಸಂಸ್ಕಾರ ಸಂಬಂಧಿತ ಗೀತೆಗಳು ಮತ್ತು ಋತು ಹಬ್ಬಗಳಿಗೆ ಸಂಬಂಧಿಸಿದ ಗೀತೆಗಳೆಂಬ ಭೇದಗಳಿವೆ. (ಎಸ್. ಪಿ. ಪದ್ಮಪ್ರಸಾದ್, ೧೯೯೪, ಪು–೧೦)

ಕೆಲವೊಂದು ಹಾಡುಗಳನ್ನು ಅವುಗಳ ಜೊತೆಗೂಡುವ ವಾದ್ಯಗಳ ಹೆಸರಿನಿಂದಲೂ ಗುರುತಿಸಲಾಗುತ್ತದೆ. ಕಂಸಾಳೆ, ಚೌಡಿಕೆ, ತಂಬೂರಿ, ಏಕತಾರಿ, ತಮಟೆ, ದಪ್ಪಿನ ಪದಗಳೆಂದು ಗುರುತಿಸಲಾಗುತ್ತದೆ. ಅಲ್ಲದೇ ಗಂಡಸರು, ಹೆಂಗಸರು ಮತ್ತು ಮಕ್ಕಳ ಹಾಡುಗಳೆಂದು ಹಾಡುಗಳನ್ನು ಹೇಳುವವರ ದೃಷ್ಟಿಯಿಂದಲೂ ವಿಭಾಗಿಸುತ್ತಾರೆ. ಜನಪದರು ತಾವು ಹಾಡುವ ಹಾಡುಗಳನ್ನು ಗುರುತಿಸಿ ವಿಂಗಡಿಸಿಲ್ಲ. ಅಧ್ಯಯನ ದೃಷ್ಟಿಯಿಂದ ಅವುಗಳನ್ನು ವಿದ್ವಾಂಸರೇ ವರ್ಗೀಕರಣ ಮಾಡಿದ್ದಾರೆ. ಯಾವುದೊಂದು ಗೀತ ಪ್ರಕಾರವು ಬಿಟ್ಟುಹೋಗದಂತೆ ವರ್ಗೀಕರಣ ಮಾಡುವುದು ಕಷ್ಟದ ಕೆಲಸ. ಜನಪದ ಕಾವ್ಯವನ್ನು ಅಭ್ಯಾಸ ಮಾಡುವಾಗ ಬಿಡಿಗೀತೆ, ಕಥನಗೀತೆ, ಲಾವಣಿ, ಮಹಾಕಾವ್ಯ ಎಂಬ ವ್ಯತ್ಯಾಸವನ್ನು ಗುರುತಿಸಲಾಗಿದೆ. ಬಿಡಿಗೀತೆಗಳೇ ಜನಪದ ಗೀತೆಯಾಗಿದ್ದು, ಆಯಾ ಸಂದರ್ಭ ಅಥವಾ ಸನ್ನಿವೇಶಗಳ ಮಾಹಿತಿಯನ್ನು ಅನುಸರಿಸಿ ರಚನೆಯಾಗಿವೆ. ಅಂತಹ ಬಿಡಿಗೀತೆಗಳೇ ಪ್ರಸ್ತುತ ಅಧ್ಯಯನಕ್ಕೆ ಆಕರಗಳಾಗಿವೆ.

## ೨.೩. ಕನ್ನಡ ಜಾನಪದ ಅಧ್ಯಯನಗಳ ಸಮೀಕ್ಷೆ

ಬದುಕಿನ ಸೂಕ್ಷ್ಮಾತಿ ಸೂಕ್ಷ್ಮ ಸಂಗತಿಗಳನ್ನು ಜಾನಪದವು ಒಳಗೊಂಡಿದೆ. ಇದಕ್ಕೆ ಆದಿ ಅಂತ್ಯವಿಲ್ಲ. ಈವತ್ತಿನವರೆಗೂ ಜಾನಪದ ವಿದ್ವಾಂಸರಿಗೆ ಅದರ ವ್ಯಾಪಕತೆಯನ್ನು ನಿಖರವಾಗಿ ಗೊತ್ತು ಹಚ್ಚಲು ಸಾಧ್ಯವಾಗಿಲ್ಲ. ಹೀಗಾಗಿ ಇಂದಿನವರೆಗೂ ಜಾನಪದ ಕುರಿತಾದ ಅಧ್ಯಯನಗಳು ನಡೆಯುತ್ತಲಿವೆ. ೧೯ನೆಯ ಶತಮಾನದಲ್ಲಿಯೇ ಭಾರತದಲ್ಲಿ ಜಾನಪದ ಅಧ್ಯಯನ ಆರಂಭಗೊಂಡಿದೆ. ಅದೂ ಭಾರತಕ್ಕೆ ಬಂದಿದ್ದ ಪಾಶ್ಚಾತ್ಯರೇ ಮೊದಲು ಜಾನಪದ ಅಧ್ಯಯನ ಕೆಲಸ ಆರಂಭಿಸಿದರು. ಕರ್ನಾಟಕದಲ್ಲಿ ಜಾನಪದ ಅಧ್ಯಯನಕ್ಕೆ ತಳಹದಿ ಹಾಕಿದವರು ಬ್ರಿಟಿಷ್ ಅಧಿಕಾರಿಗಳು ಹಾಗೂ ಕ್ರೈಸ್ತ ಮಿಷನರಿಗಳು. ಸ್ಥಳೀಯ ಜನರ ಸಂಸ್ಕೃತಿಯನ್ನು ಸಂಗ್ರಹಿಸುವುದರ ಮೂಲಕ ಇಲ್ಲಿನ ಸಂಸ್ಕೃತಿಯನ್ನು ಅರಿತು ಉತ್ತಮ ಆಡಳಿತ ಹಾಗೂ ಮತ ಪ್ರಚಾರ ಮಾಡುವುದೇ ಅವರ ಮುಖ್ಯ ಉದ್ದೇಶವಾಗಿತ್ತು. ಆದ್ದರಿಂದ ಬ್ರಿಟಿಷ್ ಅಧಿಕಾರಿಗಳಲ್ಲಿ ಸಂಗ್ರಹಕಾರರ ಪರಂಪರೆಯೇ ಬೆಳೆದು ಬಂದಿತು. ಸಮೃದ್ಧವಾದ ಜಾನಪದವು ನಶಿಸುವ ಮುನ್ನವೇ ಸಂಗ್ರಹ ಕಾರ್ಯ ಪಾಶ್ಚಾತ್ಯರಿಂದ ಅಪಾರವಾಗಿಯೇ ನಡೆಯಿತು.

ಆರಂಭದಲ್ಲಿ ಕರ್ನಲ್ ಮೆಕೆಂಝಿಯವರ 'ಕೈಫಿಯತ್ತುಗಳು'(೧೭೯೬–೧೮೧೬), ಜಾನ್ ಫ್ಲೀಟ್‌ರ 'ಐದು ಐತಿಹಾಸಿಕ ಲಾವಣಿಗಳು'(೧೮೮೫–೧೮೯೦), ಮೊಗ್ಲಿಂಗ್‌ರ 'ಮೂರು ಸಾವಿರ ಗಾದೆಗಳು'(೧೮೪೭), ಅಲ್ಲದೇ ಚಾರ್ಲ್ಸ ಇಗೋವರ್ ತನ್ನ 'The Folk songs of Southern India(೧೮೭೧)ದಲ್ಲಿ ಗೀತೆ ಸಂಪ್ರದಾಯದ ಬಗ್ಗೆ ಹೇಳಿದ್ದಾನೆ. ಅಬ್ಬೆದುಬಾಯ್ 'Hindu manners customs and cermonics'(೧೮೦೬) ಎಂಬ ಗ್ರಂಥದಲ್ಲಿ ಕನ್ನಡ ಜನಪದ ಸಂಪ್ರದಾಯ, ಕಥೆ, ಗಾದೆ, ನಂಬಿಕೆಗಳನ್ನು ಕುರಿತಾಗಿ ಪ್ರಸ್ತಾಪಿಸಿದ್ದಾನೆ. ಫರ್ಡಿನೆಂಡ್ ಕಿಟಲ್ ತನ್ನ ನಿಘಂಟಿನಲ್ಲಿ ಸಾವಿರಾರು ಗಾದೆಗಳನ್ನು ಬಳಸಿದ್ದಾನೆ. ಹೀಗೆ ಪಾಶ್ಚಾತ್ಯರು ಕನ್ನಡ ಜಾನಪದವನ್ನು ಸಂಗ್ರಹ ರೂಪದಲ್ಲಿ ಮೊದಲಿಗೆ ಅಧ್ಯಯನ ಮಾಡಿದ್ದಾರೆ. ಕರ್ನಾಟಕ ಜಾನಪದ ಅಧ್ಯಯನದ ದೃಷ್ಟಿಯಿಂದ ಇವು ತುಂಬ ಉಪಯುಕ್ತ ದಾಖಲೆಗಳಾಗಿವೆ.

ಕನ್ನಡದ ವಿದ್ವಾಂಸರಿಗೆ ಜಾನಪದದೆಡೆಗೆ ಒಲವು ಮೂಡಿದ್ದು ನವೋದಯ ಚಳುವಳಿಯ ಸಂದರ್ಭದಲ್ಲಿ. ಹಳ್ಳಿಗಳಲ್ಲಿ ಅನಕ್ಷರಸ್ಥರಿಂದ ಒಡಮೂಡಿದ ಸಾಹಿತ್ಯ ಸೊಗಸಾದದ್ದು. ಅದನ್ನು ಸಂಗ್ರಹಿಸದೇ ಹೋದರೆ ಮುಂದಿನ ಪೀಳಿಗೆಗೆ ಕೊಡಲಾಗುವುದಿಲ್ಲ. ಹಾಗಾಗಿ ಅದನ್ನು ಉಳಿಸಿಕೊಳ್ಳಬೇಕೆಂಬ ಉದ್ದೇಶದಿಂದ ಸಂಗ್ರಹ ಕಾರ್ಯ ಆರಂಭವಾದವು. ಈ ನಿಟ್ಟಿನಲ್ಲಿ ನಡಕೇರಿಯಂಡ ಚಿಣ್ಣಪ್ಪ ಸಂಪಾದಿತ 'ಪಟ್ಟೋಳೆ ಪಳಮೆ'(೧೯೨೪), ಹಲಸಂಗಿ ಗೆಳೆಯರ 'ಗರತಿಯ ಹಾಡು' (೧೯೩೧) 'ಜೀವನ ಸಂಗೀತ'(೧೯೩೩), 'ಮಲ್ಲಿಗೆ ದಂಡೆ'(೧೯೩೫), ಅರ್ಚಕ ರಂಗಸ್ವಾಮಿ ಸಂಪಾದಿತ 'ಹುಟ್ಟಿದ ಹಳ್ಳಿಯ ಹಾಡು'(೧೯೩೩), ದೇವುಡು ನರಸಿಂಹಶಾಸ್ತ್ರಿ ಸಂಪಾದಿತ 'ಕರ್ನಾಟಕ ಸಂಸ್ಕೃತಿ'(೧೯೩೫), ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸಂಪಾದಿತ 'ಕರ್ನಾಟಕ ಜನಪದ

ಸಾಹಿತ್ಯ'(೧೯೩೭), ವಿಠೋಬ ತೊರ್ಕೆ ಅವರ 'ಹಳ್ಳಿಯ ಹಾಡುಗಳು'(೧೯೩೩), ಮ. ಗ. ಶೆಟ್ಟಿ ಬಂಕಿಕೋಡ್ಲ ಸಂಪಾದಿತ 'ಒಕ್ಕಲಿಗರ ಹಾಡು'(೧೯೨೮), ಬಿ ಎನ್ ರಂಗಸ್ವಾಮಿ ಕೆಲವು 'ಹಳ್ಳಿಯ ಹಾಡುಗಳು'(೧೯೩೫), ಎಸ್ ವಿ ರಂಗಣ್ಣನವರ 'ಹಳ್ಳಿಯ ಹಾಡುಗಳು'(೧೯೩೫), ಗೊರೂರು ರಾಮಸ್ವಾಮಿ ಅಯ್ಯಂಗಾರ್ 'ಹಳ್ಳಿಯ ಹಾಡುಗಳು'(೧೯೩೮), ಹಳ್ಳಿಯ ಬಾಳು(೧೯೪೩), ಬೆಟಗೇರಿ ಕೃಷ್ಣಶರ್ಮ ಅವರ 'ಕರ್ಣಾಟಕ ಜನಜೀವನ'(೧೯೩೯) ಎನ್. ಅನಂತರಂಗಾಚಾರ್ 'ಮನೌಮಿಯ ಚೌಪದ'(೧೯೪೦), ಬಿ. ಎನ್. ರಂಗಸ್ವಾಮಿ 'ಹಳ್ಳಿಯ ಪದಗಳು'(೧೯೪೦), ಎಂ. ಎಸ್. ಅನಂತಪದ್ಮನಾಭರಾಯರ 'ಸಂಪಾದಿತ ಕೊಡಗಿನ ಜನಪದ ಸಾಹಿತ್ಯ'(೧೯೪೫), ಎಲ್. ಗುಂಡಪ್ಪ ಅವರ 'ನಾಡಪದಗಳು'(೧೯೪೭) ಹೀಗೆ ಸಂಗ್ರಹ ಕಾರ್ಯದಿಂದ ಅನೇಕ ಮಹತ್ವಪೂರ್ಣವಾದ ಸಾಹಿತ್ಯ ಕೃತಿ ರೂಪದಲ್ಲಿ ಬಂದವು. ಜಾನಪದ ಅಧ್ಯಯನಗಳ ಮೊದಲ ಹಂತದಲ್ಲಿ 'ಗೀತೆ' ಪ್ರಕಾರದಲ್ಲಿ ಹೆಚ್ಚು ಸಂಗ್ರಹವಾದವು. ನವೋದಯ ಸಾಹಿತ್ಯದ ಗಾಢ ಪ್ರಭಾವವೇ ಇದಕ್ಕೆ ಕಾರಣವೆನಿಸುತ್ತದೆ. ಕ್ರಮೇಣ ಕಥೆ, ಗಾದೆ, ಒಗಟು ಮುಂತಾದ ಪ್ರಕಾರಗಳಿಗೂ ಈ ಅಧ್ಯಯನ ವಿಸ್ತರಿಸಿತು.

ಎಲ್. ಗುಂಡಪ್ಪ ಅವರ 'ಅರುಂಧತಿ' (೧೯೫೧), 'ನಮ್ಮ ಹಳ್ಳಿಯ ಹಾಡುಗಳು' (೧೯೫೨), ಕೆ. ಆರ್. ಲಿಂಗಪ್ಪ ಸಂಪಾದಿತ 'ಮನೌಮಿ ಪದಗಳು'(೧೯೪೫), 'ಮಲೆನಾಡ ಮಡಿಲಲ್ಲಿ'(೧೯೫೪), ಬಸವರಾಜ ಕಟ್ಟೀಮನಿ ಸಂಪಾದಿತ 'ನವಿಲೂರ ಮನೆಯಿಂದ'(೧೯೫೨), ಬಿ. ಎಸ್. ಗದ್ದಗಿಮಠ ಸಂಪಾದಿತ 'ನಾಲ್ಕು ನಾಡಪದಗಳು'(೧೯೫೨), 'ಕಂಬಿಯ ಹಾಡುಗಳು'(೧೯೫೫), 'ಜನತಾ ಗೀತೆಗಳು'(೧೯೫೬), ದೊಡ್ಡ ಭಾವೆಪ್ಪ ಮೂಗಿ ಸಂಪಾದಿತ 'ದೊರೆ ಮಲ್ಲಸಜ್ಜನ ದುಂದುಮಿ' (೧೯೫೧), 'ಕಿತ್ತೂರ ಕಾಳಗ' (೧೯೫೯), ಗೊ. ರು. ಚನ್ನಬಸಪ್ಪ ಸಂಪಾದಿತ 'ಬಾಗೂರು ನಾಗಮ್ಮ ಮತ್ತು ಇತರ ಹಾಡು'(೧೯೫೩), 'ಮೈದುನ ರಾಮಣ್ಣ'(೧೯೫೬), ಕರಾಕೃ ಸಂಪಾದಿತ 'ಜಾನಪದ ಕಥನ ಗೀತೆಗಳು'(೧೯೫೯), 'ಆಯ್ದ ಮುತ್ತುಗಳು'(೧೯೫೮), 'ಆಯ್ದ ನಾಡ ಹಾಡುಗಳು'(೧೯೬೧), 'ಮಲ್ಲಿಗೆ ನಗುತಾವ'(೧೯೫೮), 'ಆಯ್ದ ಜನಪದ ಗೀತೆಗಳು'(೧೯೬೦), 'ಜೇನ ಹನಿಗಳು, ಜಾನಪದ ಪ್ರೇಮಗೀತೆಗಳು, ಅಂಬಿಗರ ಗಂಗ ಮತ್ತು ಇತರ ಹಾಡುಗಳು'(೧೯೫೭), ಎಂ. ಬಿ. ಮರಕಿಣಿ ಸಂಪಾದಿತ 'ದಕ್ಷಿಣ ಕನ್ನಡದ ಜಾನಪದ ಗೀತೆಗಳು'(೧೯೬೦), ಸ. ಚ. ಮಹದೇವನಾಯಕ ಸಂಪಾದಿತ 'ಹಳ್ಳಿಯ ಹಾಡುಗಳು'(೧೯೫೮), ಜೀ. ಶಂ. ಪರಮಶಿವಯ್ಯ ಸಂಪಾದಿತ 'ಅವರ ನೆನೆದೆವು'(೧೯೬೦), ಹಾರೇಶ ಮೇಟಿ ಸಂಪಾದಿತ 'ಹಂತಿಯ ಪದಗಳು'(೧೯೬೦), ಎ. ಸಿ. ಅಂಚಗಿಮಠ ಸಂಪಾದಿತ 'ಹಂತಿಯ ಪದಗಳು'(೧೯೫೯), ಬಿ. ಜಿ. ಜಾನಕಿ ಸಂಪಾದಿತ 'ಹಂತಿಯ ಪದಗಳು'(೧೯೫೯), ಎಸ್. ಸಾಲಿಮಠ 'ಹಂತಿಯ ಹಾಡುಗಳು'(೧೯೫೭), ವಿನೀತ ರಾಮಚಂದ್ರರಾಯರ 'ಹಳ್ಳಿಯ ಹಾಡುಗಳು'(೧೯೬೦), ಹೆರೂರು ಮೆನನ್ ಸಂಪಾದಿತ 'ತವರೂರ

ಹರಕೆ'(೧೯೫೫), ಎಚ್. ಎಮ್. ಶಂಕರನಾರಾಯಣ್ ಸಂಪಾದಿತ 'ಜನಪದ ಮುಕ್ತಕಗಳು'(೧೯೫೩), ಪದಾರು ಮಹಾಬಲೇಶ್ವರ ಭಟ್ ಸಂಪಾದಿತ 'ಜಾನಪದ ಸಾಹಿತ್ಯ'(೧೯೫೫), 'ಹೆಮ್ಮಕ್ಕಳ ಹಾಡುಗಳು' (೧೯೫೬), ಎಂ. ಜೀವನ್ ಸಂಪಾದಿತ ಜಾನಪದ ಗೀತೆಗಳು (೧೯೫೫), ಈಶ್ವರಚಂದ್ರ ಚಿಂತಾಮಣಿ ಸಂಪಾದಿತ 'ಗರತಿಯ ಮನೆಯಿಂದ'(೧೯೫೫) ಮುಂತಾದ ಜನಪದ ಗೀತೆಗಳ ಸಂಗ್ರಹಗಳು ೧೯೬೦ರ ಪೂರ್ವದಲ್ಲಿ ಹೊರಬಂದವು.

ಸ್ವಾತಂತ್ರ್ಯಾನಂತರದಲ್ಲಿ ಕನ್ನಡ ಜಾನಪದ ಅಧ್ಯಯನಕ್ಕೆ ಹೊಸ ಕಳೆ ಬಂದಿತೆಂದೇ ಹೇಳಬಹುದು. ಬಿ. ಎಸ್. ಗದ್ದಗೀಮಠ, ಜೀ. ಶಂ. ಪರಮಶಿವಯ್ಯ, ಡಿ. ಕೆ. ರಾಜೇಂದ್ರ, ನಂ. ತಪಸ್ವೀಕುಮಾರ್, ಹಾ. ಮಾ. ನಾಯಕ ಮುಂತಾದವರೆಲ್ಲ ಜನಪದ ಸಾಹಿತ್ಯಕ್ಕೆ ಪ್ರೇರಣೆ ನೀಡುವುದರೊಂದಿಗೆ ಸಂಪಾದನೆ, ಅಧ್ಯಯನ ಕೈಗೊಂಡರು. 'ಕನ್ನಡ ಜನಪದ ಗೀತೆಗಳು' ಎಂಬ ವಿಷಯ ಕುರಿತಾಗಿ ಬಿ. ಎಸ್. ಗದ್ದಗೀಮಠ ಅವರು ಪ್ರಥಮ ಸಂಶೋಧನಾ ಪ್ರಬಂಧವನ್ನು ಮಂಡಿಸಿದರು. ಎ. ಕೆ. ರಾಮಾನುಜನ್ ಅವರು 'ಗಾದೆಗಳು' ಸಂಕಲನವನ್ನು ಹೊರತಂದು ಗಾದೆಗಳ ಕುರಿತಾಗಿ ಸಮರ್ಥ ಅಧ್ಯಯನ ಕೈಗೊಂಡರು. ಜೀ. ಶಂ. ಪರಮಶಿವಯ್ಯ ಅವರು 'ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು' ಕುರಿತು ಅಧ್ಯಯನ ನಡೆಸಿದರು. ಇದೇ ಸಂದರ್ಭದಲ್ಲಿ ಹಲವು ಜಾನಪದ ಕೃತಿಗಳು ಬಂದದ್ದರಿಂದ ಕನ್ನಡ ಜಾನಪದಕ್ಕೆ ಹೊಸ ವಿವೇಚನೆ ದೊರಕಿದಂತಾಯಿತು. ಜಾನಪದದ ಬಗೆಗೆ ಇದ್ದ ಸಾಂಪ್ರದಾಯಿಕ ತಿಳುವಳಿಕೆಯನ್ನು ಪರಿಶೀಲಿಸುವಂತಾಯಿತು. ೧೯೬೦ರಿಂದ ಈಚೆಗೆ ಜಾನಪದ ಅಧ್ಯಯನಕ್ಕೆ ವೈಜ್ಞಾನಿಕ ಸ್ವರೂಪ ಬಂತು. ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ವ್ಯವಸ್ಥಿತ ಅಧ್ಯಯನ ಜಾರಿಗೆ ಬಂದು ಜಾನಪದದ ಇತರ ರೂಪಗಳ ಬಗೆಗೆ ಅಧ್ಯಯನ ಆಸಕ್ತಿ ಹೆಚ್ಚಿತು. ಹೀಗೆಯೇ ಕ್ಷೇತ್ರಕಾರ್ಯ, ವಿಂಗಡಣೆ, ವಿಶ್ಲೇಷಣೆ, ಚಾರಿತ್ರಿಕ ಹಾಗೂ ವಿಮರ್ಶಾತ್ಮಕ ಅಧ್ಯಯನಗಳು ಕನ್ನಡ ಜಾನಪದದ ಕುರಿತಂತೆ ನಡೆದವು.

ಕನ್ನಡ ಜನಪದ ಗೀತೆಗಳ ಕುರಿತಾಗಿ ಸಾಕಷ್ಟು ಅಧ್ಯಯನಗಳು ನಡೆದಿವೆ. ಅವುಗಳಲ್ಲಿ ೧೯೭೪ 'ದಕ್ಷಿಣ ಕರ್ನಾಟಕದ ಕಾವ್ಯ ಪ್ರಕಾರಗಳು' ಎಂಬ ವಿಷಯದ ಕುರಿತಾಗಿ ಜೀ.ಶಂ.ಪರಮಶಿವಯ್ಯ, ೧೯೫೫ರಲ್ಲಿ 'ಕನ್ನಡ ಜನಪದ ಗೀತೆಗಳು' ಕುರಿತಾಗಿ ಬಿ. ಎಸ್. ಗದ್ದಗಿಮಠ, ೧೯೭೮ರಲ್ಲಿ ಉತ್ತರ ಕರ್ನಾಟಕದ ಜನಪದ 'ಪದ್ಯ ಸಾಹಿತ್ಯ' ಕುರಿತಾಗಿ ಎಂ. ಎಂ. ಕಲಬುರ್ಗಿ, ೧೯೮೨ರಲ್ಲಿ 'ಕನ್ನಡ ಜಾನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ' ಕುರಿತಾಗಿ ನಂ. ತಪಸ್ವೀಕುಮಾರ್, ೧೯೮೩ರಲ್ಲಿ 'ಕಾರವಾರ ಜಿಲ್ಲೆಯ ಜನಪದ ಗೀತೆಗಳು' ಕುರಿತಾಗಿ ಎಸ್.ಆರ್.ನಾಯಕ, ೧೯೮೭ರಲ್ಲಿ 'ಜನಪದ ಗೀತ ಸಾಹಿತ್ಯದಲ್ಲಿ ಕಲ್ಯಾಣದ ಬಸವಣ್ಣರು ಕುರಿತಾಗಿ ವ್ಹಿ.ವ್ಹಿ. ಸಾಲಿಮಠ, ೧೯೭೪ರಲ್ಲಿ 'ಜನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ' ವಿಷಯವಾಗಿ ದೇವೇಂದ್ರಕುಮಾರ ಹಕಾರಿ. ೨೦೦೫ರಲ್ಲಿ 'ಜನಪದ ಪದ್ಯ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ' ವಿಷಯದ ಕುರಿತಾಗಿ ಅರಗಂಜಿ

ವಸಂತಮಾಲಾ, ೨೦೦೭ರಲ್ಲಿ 'ಉತ್ತರ ಕರ್ನಾಟಕದ ಕಥನಗೀತೆಗಳಲ್ಲಿ ಸ್ತ್ರೀಸಂವೇದನೆ ಪ್ರತಿಮಾ ಆರ್. ಹೀಗೆ ವಿವಿಧ ದೃಷ್ಟಿಕೋನಗಳನ್ನು ಇರಿಸಿಕೊಂಡು ಸಂಗ್ರಹ, ವಿಂಗಡಣೆ, ವಿಶ್ಲೇಷಣೆ, ವಿಮರ್ಶಾತ್ಮಕ ಅಧ್ಯಯನಗಳು ಇದುವರೆಗೆ ನಡೆದಿವೆ. ಜಾನಪದ ಸಂಗ್ರಹದಂತೆಯೇ ಅದರ ಅಧ್ಯಯನವೂ ಮುಖ್ಯವೆಂದು ಪರಿಗಣಿಸಿ ಈಗಾಗಲೇ ಸಂಗ್ರಹಿಸಿ ಪ್ರಕಟವಾಗಿರುವ ಹೇರಳ ಸಂಕಲನಗಳ ಹಿನ್ನೆಲೆಯಲ್ಲಿ ಜಾನಪದ ಅಧ್ಯಯನ ನಡೆಯುತ್ತಿದೆ. ಅಂತಹ ಅಧ್ಯಯನಗಳ ಸಾಲಿಗೆ ಸೇರುವ ತುಡಿತವನ್ನು ಪ್ರಸ್ತುತ ಅಧ್ಯಯನ ಹೊಂದಿದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವು ಪ್ರಬಂಧಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ೨೦೦೪ರಲ್ಲಿ 'ಹಾವೇರಿ ಜಿಲ್ಲೆಯ ಜನಪದ ಕಾವ್ಯ ಪ್ರಕಾರಗಳು' ಎಂಬ ವಿಷಯದ ಮೇಲೆ ಶೇಖಪ್ಪ ಬಂದವ್ವನವರ ಅಧ್ಯಯನ ಕೈಗೊಂಡಿದ್ದಾರೆ. ಇಲ್ಲಿ ಹವ್ಯಾಸಿ ಗಾಯಕರ ಕಾವ್ಯಗಳು, ಗಂಡಸರ ಹಾಡುಗಳು, ಹೆಂಗಸರ ಹಾಡುಗಳು, ಮಕ್ಕಳ ಹಾಡುಗಳನ್ನು ಹಾವೇರಿ ಜಿಲ್ಲೆಯ ಪರಿಮಿತಿಯಲ್ಲಿ ಸಂಗ್ರಹಿಸಿದ್ದಾರೆ. ಇದೊಂದು ಕ್ಷೇತ್ರ ಕಾರ್ಯವನ್ನೊಳಗೊಂಡ ಅಧ್ಯಯನವಾಗಿದ್ದು, ಹಾಡುಗಳಲ್ಲಿ ಕಂಡುಬರುವ ಸಾಂಸ್ಕೃತಿಕ ನೋಟಗಳ ಕುರಿತಾಗಿಯೂ ಸಮಗ್ರ ಚರ್ಚೆ ನಡೆಸಿದ್ದಾರೆ.

ಸಂಸ್ಕೃತಿ, ಸಮಾಜವನ್ನು ಕುರಿತಾಗಿ ಹಲವಾರು ವಿದ್ವಾಂಸರು ಚರ್ಚಿಸಿದ್ದಾರೆ. ಜನಪದರ ಜನಜೀವನವನ್ನು ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಿದ್ದಾರೆ. ಅವರಲ್ಲಿ ಬಿ.ಎಸ್.ಗದ್ದಗೀಮಠ ಒಬ್ಬರು. ಅವರು. ೧೯೫೫ರಲ್ಲಿ 'ಕನ್ನಡ ಜನಪದ ಗೀತೆಗಳು' ಎಂಬ ಪ್ರಬಂಧದಲ್ಲಿ ಗೀತೆಗಳನ್ನು ವಿವಿಧ ದೃಷ್ಟಿಕೋನದಿಂದ ಗಮನಿಸಿ ವಿಂಗಡಿಸಿದ್ದಾರೆ. ಸ್ತುತಿಪದ, ಸುಗ್ಗಿಯ ಹಾಡುಗಳಲ್ಲಿ ಜನಪದರ ಸಂಸ್ಕೃತಿ ಒಡಮೂಡಿದರೆ ಬಾಳಿನಲ್ಲಿ ಆಸರಿಕೆ–ಬೇಸರಿಕೆ, ಪ್ರಣಯ ಮತ್ತು ದಾಂಪತ್ಯಗಳಲ್ಲಿ ಮಾನವೀಯ ಸಂಬಂಧಗಳ ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಮೌಲೀಕವಾದ ಚಿಂತನೆಗಳಿಂದ ಕೂಡಿದ ಪ್ರೌಢ ಪ್ರಬಂಧವಾಗಿದೆ. ಜನಪದ ಸಾಹಿತ್ಯದ ಅಧ್ಯಯನದಲ್ಲಿ ಇದೊಂದು ಮುಖ್ಯ ಹೆಜ್ಜೆಯಾಗಿದ್ದು, ಉಳಿದ ಅಧ್ಯಯನಗಳಿಗೂ ಇದು ಆಕರವಾಗಿದೆ.

೨೦೦೫ರಲ್ಲಿ ಅರಗಂಜಿ ವಸಂತಮಾಲಾ ಅವರ 'ಜನಪದ ಪದ್ಯ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ' ಎಂಬ ಅಧ್ಯಯನದಲ್ಲಿ ಹೆಣ್ಣುಮಕ್ಕಳ ಅಭಿವ್ಯಕ್ತಿಯ ಕುರಿತಾಗಿ ಚರ್ಚಿಸಿದ್ದು, ಕುಟುಂಬದಲ್ಲಿನ ನೋವು–ನಲಿವುಗಳನ್ನು, ಭಾವನೆಗಳನ್ನು ಅನಾವರಣಗೊಳಿಸಿದ್ದಾರೆ. ಈ ನಿಟ್ಟಿನಲ್ಲಿಯೇ ೨೦೦೭ರಲ್ಲಿ ಪ್ರತಿಮಾ ಆರ್. ಅವರ 'ಉತ್ತರ ಕರ್ನಾಟಕದ ಕಥನಗೀತೆಗಳಲ್ಲಿ ಸ್ತ್ರೀ ಸಂವೇದನೆ' ಎಂಬ ಅಧ್ಯಯನವು ನಡೆದಿದೆ. ಇಲ್ಲಿ ಕಥನಗೀತೆಗಳಲ್ಲಿ ಸಂವೇದನೆ ಎಂಬ ಪ್ರತ್ಯೇಕತೆಯನ್ನು ಕೈಗೊಂಡು ಅಭ್ಯಸಿಸಲಾಗಿದೆ. ಇದಲ್ಲದೇ ಕೆ. ಟಿ. ಶ್ರೀನಿವಾಸ್ ಅವರ 'ಜನಪದ ಕಾವ್ಯಗಳಲ್ಲಿ ಸಾಮಾಜಿಕ ಜನಜೀವನ ಒಂದು ಅಧ್ಯಯನ'ದಲ್ಲಿ ಜನಪದರ ಸಾಮಾಜಿಕ ಬದುಕು ಅನಾವರಣಗೊಂಡಿದೆ.

ಬಿ. ಗಂಗಾಧರ ಅವರ 'ಜನಪದ ಸಾಹಿತ್ಯದಲ್ಲಿ ಕುಟುಂಬ ಮತ್ತು ದಾಂಪತ್ಯ ಜೀವನ' ಅಧ್ಯಯನವು ಪ್ರಸ್ತುತ ಅಧ್ಯಯನಕ್ಕೆ ತೀರ ಹತ್ತಿರವೆನಿಸುತ್ತದೆ. ಆದರೆ ಇಲ್ಲಿ ಕುಟುಂಬದ ಜೀವನ ಹಾಗೂ ದಾಂಪತ್ಯ ಜೀವನವನ್ನೇ ಕೇಂದ್ರೀಕರಿಸಿ ಅಭ್ಯಸಿಸಲಾಗಿದೆ. ಕುಟುಂಬ-ದಾಂಪತ್ಯಗಳ ಪರಿಕಲ್ಪನೆಗಳ ವಿಕಾಸ, ಪತಿ-ಪತ್ನಿಯ ಜೀವನ, ಬಹುಪತ್ನಿತ್ವದ ಸ್ವರೂಪ ಹಾಗೂ ಅತ್ತೆ-ಸೊಸೆಯರ ಜೀವನವನ್ನು ಅಧ್ಯಯನದ ಮೂಲಕ ಚರ್ಚಿಸಿದ್ದಾರೆ. ಗ್ರಾಮೀಣ ಪರಂಪರೆಯ ಕುಟುಂಬದ ವಿನ್ಯಾಸಗಳನ್ನು ಆಳವಾಗಿ ಸಾದರಪಡಿಸಿದ್ದಾರೆ.

ಸಂಬಂಧಗಳ ಕುರಿತಾಗಿ ಕೆ. ಪಿ. ನಾರಾಯಣಪ್ಪ ಅವರು 'ಮನುಷ್ಯ ಸಂಬಂಧಗಳು ಮತ್ತು ಜನಪದ ಸಾಹಿತ್ಯ-ಒಂದು ಅಧ್ಯಯನ' ಎಂಬ ಅಧ್ಯಯನ ಕೈಗೊಂಡಿದ್ದಾರೆ. ಪ್ರಸ್ತುತ ಅಧ್ಯಯನಕ್ಕೆ ಈ ಪ್ರಬಂಧವು ನೂತನ ಸಾಧ್ಯತೆಗಳನ್ನು ಒದಗಿಸಿಕೊಟ್ಟಿದೆ. ಆದರೆ ತಮ್ಮ ಅಧ್ಯಯನದಲ್ಲಿ ಇಡಿಯಾದ ಜನಪದ ಸಾಹಿತ್ಯವನ್ನು ಅವಲೋಕಿಸಿ ಮನುಷ್ಯ ಸಂಬಂಧಗಳನ್ನು ಗುರುತಿಸಿದ್ದಾರೆ. ಇಲ್ಲಿ ಸಾಮಾಜಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಅಧ್ಯಯನದ ನೆಲೆಗಳಲ್ಲಿ ಮನುಷ್ಯ ಸಂಬಂಧಗಳನ್ನು ಚರ್ಚಿಸಿದ್ದಾರೆ. ಸಾಹಿತ್ಯಿಕವಾಗಿ ಕಥೆ, ಗೀತೆ, ಮಹಾಕಾವ್ಯ ಮತ್ತು ನಾಟಕಗಳಲ್ಲಿ ಮನುಷ್ಯ ಸಂಬಂಧಗಳನ್ನು, ಸಾಮಾಜಿಕವಾಗಿ ಗಾದೆ ಹಾಗೂ ಒಗಟುಗಳಲ್ಲಿ ಮನುಷ್ಯ ಸಂಬಂಧಗಳನ್ನು, ಸಾಂಸ್ಕೃತಿಕವಾಗಿ ಆಚರಣೆ, ನಂಬಿಕೆ, ಹಬ್ಬಗಳಲ್ಲಿ ಮನುಷ್ಯ ಸಂಬಂಧಗಳನ್ನು ಗುರುತಿಸಿದ್ದಾರೆ. ಪ್ರಸ್ತುತ ಅಧ್ಯಯನವು ಮೇಲ್ಕಂಡ ಅಧ್ಯಯನಕ್ಕಿಂತ ವಿಭಿನ್ನವಾಗಿದೆ. ಕೇವಲ ಜನಪದ ಗೀತೆಗಳನ್ನು ಮಾತ್ರ ಆಕರಗಳನ್ನಾಗಿಟ್ಟುಕೊಂಡು ಅವುಗಳಲ್ಲಿನ ಸಂಬಂಧಗಳನ್ನು ವಿಶ್ಲೇಷಿಸಿರುವುದರಿಂದ ಭಿನ್ನತೆ ಕಾಣುತ್ತದೆ.

೨೦೦೩ರಲ್ಲಿ ಬಿ. ಎಸ್. ಶಿಂಗೆ ಅವರು 'ಹೈದರಾಬಾದ್ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು' ಎಂಬ ವಿಷಯದಡೀ ಅಧ್ಯಯನ ಕೈಗೊಂಡಿದ್ದು, ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕಂಡು ಬರುವ ಗೀಗೀ ಪದಗಳು, ಚೌಡಿಕೆ ಪದಗಳು, ಐತಿಹಾಸಿಕ ಹಾಡುಗಳು, ಧಾರ್ಮಿಕ ಹಾಡುಗಳು, ಲೌಕಿಕ ಗೀತೆಗಳು, ಜೋಗತಿ ಹಾಡುಗಳು, ಪೌರಾಣಿಕ ಹಾಡುಗಳನ್ನು ಸಂಗ್ರಹಿಸಿದ್ದಾರೆ. ಇದು ಕ್ಷೇತ್ರ ಕಾರ್ಯವನ್ನು ಒಳಗೊಂಡ ಅಧ್ಯಯನವಾಗಿದ್ದು, ಅಲ್ಲಿನ ಸಾಂಸ್ಕೃತಿಕ ಹಿನ್ನೆಲೆಯನ್ನು ಕುರಿತು ಚರ್ಚಿಸಿದ್ದಾರೆ.

ವಿಶ್ಲೇಷಣಾ ಮಾದರಿಗೆ ಸೇರಿದ ಪ್ರಸ್ತುತ ಅಧ್ಯಯನದಲ್ಲಿ ಕೌಟುಂಬಿಕ, ವೈವಾಹಿಕ, ಸಾಮಾಜಿಕ ಹಾಗೂ ಮಾನವೇತರ ಸಂಬಂಧಗಳನ್ನು ಗುರುತಿಸಲಾಗಿದೆ. ಅಧ್ಯಯನಕ್ಕೆ ಜನಪದ ಗೀತೆಗಳನ್ನು ಆಕರವಾಗಿ ಇರಿಸಿಕೊಳ್ಳಲಾಗಿದೆ. ಆಧುನಿಕ ಯುಗದಲ್ಲಿ ನಶಿಸಿಹೋಗುತ್ತಿರುವ ಮಾನವೀಯ ಸಂಬಂಧಗಳನ್ನು ಗಮನದಲ್ಲಿರಿಸಿಕೊಂಡಾಗ ಜನಪದರ ಸಂಬಂಧಗಳ ಅಧ್ಯಯನ ಅವಶ್ಯಕವೆನಿಸುತ್ತದೆ. ಕೇವಲ ಬದುಕು ಯಾಂತ್ರಿಕವಾಗಿರಬಾರದು. ಬದುಕಿನಲ್ಲಿ ನೋವು-ನಲಿವು, ಆಸರಿಕೆ-ಬೇಸರಿಕೆ ಎಲ್ಲವೂ ಇರಬೇಕು. ಜನಪದರು ಹೊಂದಿರುವ ಮಾನವೀಯ ಮೌಲ್ಯಗಳು ಕೇವಲ ಮಾನವ ಸಂಬಂಧಗಳನ್ನು

ಮಾತ್ರ ಗಟ್ಟಿಗೊಳಿಸಿಲ್ಲ. ಮಾನವರ ನಡುವಿನ ಸಂಬಂಧಗಳತೆಯೇ ಮಾನವೇತರ ಸಂಬಂಧಗಳಿಗೂ ಅಷ್ಟೇ ಪ್ರಾಮುಖ್ಯತೆಯನ್ನು ಜನಪದರು ನೀಡಿದ್ದಾರೆ. ಆದ್ದರಿಂದ ಕೇವಲ ಮನುಷ್ಯರ ಸಂಬಂಧಗಳನ್ನು ಮಾತ್ರ ಇಲ್ಲಿ ವಿಶ್ಲೇಷಿಸಲಾಗಿಲ್ಲ. ಜನಪದರು ಎತ್ತು, ದೇವರು, ಮಳೆ, ಪ್ರಕೃತಿ, ಪ್ರಾಣಿ–ಪಕ್ಷಿ ಮುಂತಾದವುಗಳೊಡನೆ ಭಾವನಾತ್ಮಕ ಸಂಬಂಧಗಳನ್ನು ಹೊಂದಿದ್ದರು. ಅವುಗಳನ್ನು ಸೂಕ್ತವಾಗಿ ಅಧ್ಯಯನ ಮಾಡುವುದೇ ಪ್ರಸ್ತುತ ಅಧ್ಯಯನದ ವಿಶೇಷತೆಯಾಗಿದೆ.

ಅಧ್ಯಾಯ ೩.

# ಸಂಬಂಧಗಳ ಪರಿಕಲ್ಪನೆ

ಇಡೀ ವಿಶ್ವದಲ್ಲಿಯೇ ಭಾರತೀಯ ಪರಂಪರೆ ವೈಶಿಷ್ಟಪೂರ್ಣವಾದದ್ದು. ಇಲ್ಲಿನ ಸಂಸ್ಕೃತಿ, ಸಮಾಜದ ಲಕ್ಷಣಗಳು ವಿಶ್ವಕ್ಕೆ ಮಾದರಿ. ಭಾಷೆ, ವೇಷ, ಆಚಾರ-ವಿಚಾರಗಳಲ್ಲಿ ಭಿನ್ನತೆ ಕಂಡುಬಂದರೂ ಬದುಕಿನಲ್ಲಿ ಐಕ್ಯತೆಯನ್ನು ಪ್ರದರ್ಶಿಸುತ್ತಾರೆ. ಇಂತಹ ಪರಂಪರೆಯನ್ನು ಅಭ್ಯಸಿಸುವಾಗ ನಮಗೆ ಶಿಷ್ಟಪದ ಮತ್ತು ಜನಪದ ಸಾಹಿತ್ಯ ನೆರವನ್ನು ನೀಡುತ್ತವೆ. ಸಂಸ್ಕೃತಿಗೆ ಸಂಬಂಧಿಸಿದ ಎಲ್ಲ ಚಟುವಟಿಕೆಗಳಿಗೆ ಭಾಷೆ ಬುನಾದಿಯಾಗಿರುತ್ತದೆ. ಏಕೆಂದರೆ ಭಾಷೆ ಸಂಸ್ಕೃತಿಯ ಅಂಗ, ಭಾಷೆ, ಸಮಾಜ ಮತ್ತು ಸಂಸ್ಕೃತಿ ಇವು ಪರಸ್ಪರ ಪೂರಕವಾಗಿವೆ. ಭಾಷಾ ಸಮುದಾಯದಲ್ಲಿಯ ಕತೆ, ಗೀತೆ, ಒಗಟು ಹಾಗೂ ಗಾದೆಗಳ ಮೂಲಕ ಸಮುದಾಯದ ಸಂಸ್ಕೃತಿ ಅಭಿವ್ಯಕ್ತವಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಜನಪದ ಗೀತೆಗಳನ್ನು ಆಕರಗಳನ್ನಾಗಿ ಇಟ್ಟುಕೊಂಡು ಕನ್ನಡ ಪರಿಸರದಲ್ಲಿನ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ. ಈ ತೆರನಾದ ಅಧ್ಯಯನವು ಮಾನವ ಸಂಬಂಧಗಳನ್ನು ಕೌಟುಂಬಿಕ, ವೈವಾಹಿಕ, ಸಾಮಾಜಿಕ ನೆಲೆಗಳಲ್ಲಿ ಹಾಗೂ ಮಾನವೇತರ ಸಂಬಂಧಗಳನ್ನು ವಿಶ್ಲೇಷಿಸುವುದರಿಂದ ಸಂಸ್ಕೃತಿಯನ್ನು ವೈವಿಧ್ಯಮಯವಾಗಿ ಗುರುತಿಸಲು ಸಾಧ್ಯವಾಗುತ್ತದೆ.

ಜನಪದ ಸಾಹಿತ್ಯ ತುಂಬಾ ಪ್ರಾಚೀನವಾದುದು ಇದರ ಉಗಮವನ್ನು ನಿಖರವಾಗಿ ಹೇಳಲು ಸಾಧ್ಯವೇ ಇಲ್ಲ. ಇದು ಪ್ರಪಂಚದಾದ್ಯಂತ ಭಿನ್ನ ಭಿನ್ನ ಸ್ವರೂಪಗಳಲ್ಲಿ ಇದೆ. ಮನುಷ್ಯನ ಅಭಿವ್ಯಕ್ತಿ ಹುಟ್ಟಿದ ಬೆನ್ನಲ್ಲೇ ಜನಪದ ಸಾಹಿತ್ಯದ ಆರಂಭವನ್ನು ಗುರುತಿಸಲಾಗಿದೆ. ಇವುಗಳ ಹುಟ್ಟಿಗೆ ಸ್ತ್ರೀ-ಪುರುಷರಿಬ್ಬರೂ ಕಾರಣರೆನಿಸಿದ್ದಾರೆ. ಹೆಣ್ಣು-ಗಂಡು ಸಮಾಜದ ಕಣ್ಣುಗಳಿದ್ದಂತೆ. ಸಮಾಜದ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಇವರ ಸೌಹಾರ್ದ ಬದುಕಿನಿಂದಲೇ ಸಮಾಜ ರೂಪುಗೊಳ್ಳುತ್ತದೆ. ಹಾಗಾಗಿ ಇದರಲ್ಲಿ ವಿವಿಧ ರೀತಿಯ ಬಾಂಧವ್ಯಗಳನ್ನು ಜನಪದ ಗೀತೆಗಳಲ್ಲಿ ಕಾಣುತ್ತೇವೆ. ಗಂಡು ಮನೆಯ ಹೊರಗಿನ ಕೆಲಸಗಳನ್ನು ತನ್ನ ಆರ್ಥಿಕ ಶಕ್ತಿಯ ಬಲದಿಂದ ನಿರ್ವಹಿಸಿದರೆ, ಹೆಣ್ಣು ತನ್ನ ಕುಟುಂಬ ನಿರ್ವಹಣೆಯನ್ನು ಕೌಶಲ್ಯದಿಂದ ನಿರ್ವಹಿಸುತ್ತಾಳೆ. ಈಕೆ ಮನೆಯೊಳಗೆ ಇದ್ದುಕೊಂಡು ಕೌಟುಂಬಿಕ ಕೆಲಸಗಳ ಮೂಲಕ ತನ್ನ ಮಕ್ಕಳ ಲಾಲನೆ-ಪಾಲನೆ ಮಾಡುತ್ತಾಳೆ. ಈ ಭಿನ್ನ ಪರಿಕಲ್ಪನೆಗಳು ಗಂಡಿಗೆ ಆದಾಯ ನಿರ್ವಹಣೆ ಮಾಡುವ ಮತ್ತು ಹೆಣ್ಣು ಕುಟುಂಬದ ಹೊಣೆ ಹೊರುವ ಜವಾಬ್ದಾರಿಗಳನ್ನು ನೀಡಿವೆ. ಜನಪದ ಪರಂಪರೆಯಲ್ಲಿ ಈ ವ್ಯವಸ್ಥೆಯು ರೂಢಿಯಲ್ಲಿದೆ.

ಹೆಣ್ಣಾಗಲಿ, ಗಂಡಾಗಲಿ ಸಂಸಾರದ ಜವಾಬ್ದಾರಿಗಳೊಂದಿಗೆ ಸಮಾಜದಲ್ಲಿನ ಎಲ್ಲ ಬಾಂಧವ್ಯಗಳನ್ನು ಸರಿದೂಗಿಸಿಕೊಂಡು ಹೋಗುತ್ತಾರೆ. ಕೌಟುಂಬಿಕ ಸಂಬಂಧಗಳನ್ನು ಹೆಣ್ಣುಮಕ್ಕಳು ಬಿಗಿಗೊಳಿಸಿಕೊಂಡರೆ, ಸಾಮಾಜಿಕ ಸಂಬಂಧಗಳನ್ನು ಗಂಡುಮಕ್ಕಳು ರೂಪಿಸಿಕೊಳ್ಳುತ್ತಾರೆ.

ಸಾಂಪ್ರದಾಯಿಕ ಬದುಕಿನಲ್ಲಿ ಗಂಡಿನ ಜೀವನ ಬೆಲೆಯುಳ್ಳದ್ದಾದರೆ, ಹೆಣ್ಣು ನಿರ್ಲಕ್ಷಿತ ಜೀವ. ಕೇವಲ ಕುಟುಂಬಕ್ಕೆ ಸೀಮಿತವಾದ ಅವಳ ಜೀವನದಲ್ಲಿ ತಂದೆ, ಗಂಡ, ಅಣ್ಣ, ಮಗ ಹೀಗೆ ಯಾರಾದರೊಬ್ಬರ ಆಶ್ರಯವನ್ನು ಹೊಂದಿರುತ್ತಾಳೆ. ಗಂಡಸು 'ಹೆಂಗಸಿನ ಬುದ್ಧಿ ಮೊಣಕಾಲು ಕೆಳಗೆ' ಎಂದು ಕೀಳರಿಮೆಯಿಂದ ಹೆಣ್ಣುಮಕ್ಕಳನ್ನು ಅಣಕಿಸಿದಾಗಲೂ ಅವರೊಂದಿಗೆ ವಿಷಮತೆಯನ್ನು ಹೊಂದದೇ ಸೌಹಾರ್ದ ಬದುಕನ್ನು ನಡೆಸುತ್ತಾ ಬಂದಿದ್ದಾಳೆ. ಅಂತೆಯೇ ಪುರುಷನೂ ಸ್ತ್ರೀ ರಕ್ಷಣೆ ತನ್ನ ಕರ್ತವ್ಯವೆಂದು ಕಾಪಾಡುತ್ತಾ ಬಂದಿದ್ದಾನೆ. 'ಎರಡು ಕೈಗಳು ಸೇರಿದಾಗಲೇ ಚಪ್ಪಾಳೆ ನಾದ' ಎಂಬುದನ್ನು ಅರಿತ ಜನಪದರು ಸ್ತ್ರೀ-ಪುರುಷರು ಒಟ್ಟಾಗಿ ಮೌಖಿಕ ಪರಂಪರೆಯಲ್ಲಿ ತಮ್ಮ ಜೀವನದ ಅನುಭವಗಳನ್ನು ಕಟ್ಟಿಕೊಟ್ಟಿದ್ದಾರೆ. ಅವುಗಳಲ್ಲಿ ತಾವು ಹೊಂದಿರುವ ಅನ್ಯೂನ್ಯ ಬಾಂಧವ್ಯಗಳನ್ನು ಹಿಡಿದಿಟ್ಟಿದ್ದಾರೆ. ಸಕಲ ಬಂಧನ, ಬಾಂಧವ್ಯಗಳ ಮೂಲ ಸ್ತ್ರೀಯಳೇ ಎಂಬುದನ್ನು ಅರಿತ ಪುರುಷ ಸಮಾಜ ಅವಳಿಗಾಗಿಯೇ ಸಮಾಜದಲ್ಲಿ ಉತ್ತಮ ಗೌರವವನ್ನು ಕಲ್ಪಿಸಿಕೊಟ್ಟಿದೆ. ಕುಟುಂಬದಲ್ಲಿ ದಾಸಿಯಂತೆ ಅವಳು ದುಡಿದರೂ ಸಮಾಜದಲ್ಲಿ ಅವಳಿಗೆ ದೇವತೆಯ ಸ್ಥಾನವನ್ನು ನೀಡಿದ್ದಾರೆ.

ಮೌಖಿಕ ಪರಂಪರೆಯಾದ ಜಾನಪದದಲ್ಲಿ ಸ್ತ್ರೀ-ಪುರುಷರಿಬ್ಬರ ಪಾಲು ಇದೆ. ಇದರಲ್ಲಿ ಸ್ತ್ರೀಯರ ಪಾತ್ರ ಹೆಚ್ಚಿನದು. ಅದರಲ್ಲೂ ಬಾಂಧವ್ಯಗಳ ವಿಚಾರ ಬಂದಾಗ ಮನಸ್ಸಿನ ಭಾವನೆಗಳನ್ನು ಎಗ್ಗಿಲ್ಲದೇ ಸ್ತ್ರೀಯರು ಕಥೆ, ಗೀತೆ, ಒಗಟುಗಳ ಮೂಲಕ ಹಂಚಿಕೊಂಡಿದ್ದಾರೆ. ಈ ಹಿಂದೆ ಹೇಳಿದಂತೆ ಸ್ತ್ರೀಯರು ಸಂಬಂಧಗಳ ಕೇಂದ್ರಬಿಂದುವಾಗಿದ್ದಾರೆ. ಮನುಷ್ಯರ ನಡುವಿನ ಸಂಬಂಧ ಉತ್ತಮವಾಗಿ ರೂಪುಗೊಳ್ಳಲು ವಿಶಾಲ ಮನೋಭಾವ ಕಾರಣ. ಕುಟ್ಟುವಾಗ, ಬೀಸುವಾಗ, ಅಡುಗೆ ಮಾಡುವಾಗ ಹಾಗೆಯೇ ಅನೇಕ ಶುಭಕಾರ್ಯಗಳಲ್ಲಿ ಹಾಡುವ ಮೂಲಕ ಜನಪದ ಗೀತೆಗಳು ಹೆಣ್ಣುಮಕ್ಕಳಿಂದ ಸೃಷ್ಟಿಯಾಗಿವೆ. ಅಂತೆಯೇ ಹಂತಿ ಹೊಡೆಯುವಾಗ, ಹೋಳಿಯಾಡುವಾಗ, ಭಜನೆ ಮಾಡುವಾಗ ಪುರುಷರಿಂದ ಜನಪದ ಗೀತೆಗಳು ಹುಟ್ಟಿಕೊಂಡಿವೆ. ಆದರೆ ಸ್ತ್ರೀಯರಲ್ಲಿನ ನೀತಿ ಬೋಧನೆ, ಬಾಂಧವ್ಯದ ಅಭಿವ್ಯಕ್ತಿಯು ಪುರುಷರಲ್ಲಿ ಕಾಣಸಿಗದು. ಕೇವಲ ದುಡಿಯುವ, ಹೊಲಗಳಲ್ಲಿ ಉಳುವ, ಮನೆಯ ಜವಾಬ್ದಾರಿಯನ್ನು ನಿಭಾಯಿಸುವ ಪುರುಷನಿಗೆ ನೈತಿಕತೆಯನ್ನು ಇತರರಿಗೆ ಹೇಳಿಕೊಡುವಲ್ಲಿ ಸಮಯದ ಅಲಭ್ಯತೆ ಇರಬೇಕು. ಜನಪದರು ಹಿರಿಯರನ್ನು ನೋಡಿಯೇ ಕಿರಿಯರು ಆದರ್ಶಗಳನ್ನು ಅನುಕರಿಸುತ್ತಾ ಬಂದಿದ್ದಾರೆ.

ಇನ್ನು ಮನೆಯೊಳಗಿನ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತಿರುವ ಹೆಣ್ಣುಮಕ್ಕಳು ಬಿಡುವಿನ ವೇಳೆಯಲ್ಲಿ ಇಲ್ಲವೇ ಕೆಲಸ ಮಾಡುತ್ತಲೇ ಗೀತೆಗಳ ಮೂಲಕ ನೈತಿಕ ಪಾಠವನ್ನು ಕಿರಿಯರಿಗೆ

ವರ್ಗಾಯಿಸಿದ್ದಾರೆ. ಮನೆಯಲ್ಲಿರುವ ಮಗ, ಮಗಳು, ನಾದಿನಿ, ತಂಗಿ, ಸೊಸೆ ಹೀಗೆ ಕಿರಿಯರಾದ ಎಲ್ಲರಿಗೂ ಆದರ್ಶವನ್ನು ತಿಳಿಸಿ, ಉತ್ತಮ ಬಾಂಧವ್ಯವನ್ನು ರೂಪಿಸಿಕೊಳ್ಳಲು ಗೀತೆಗಳ ಮೂಲಕ ಪ್ರಯತ್ನಿಸಿದ್ದಾರೆ.

ಹೊಸ್ತಿಲೊಳಗಿನ ಜೀವನ ಸ್ತ್ರೀಯಳದಾದರೆ, ಹೊಸ್ತಿಲ ಹೊರಗಿನ ಜೀವನ ಪುರುಷನದು. ಹಾಗಾಗಿ ಇರ್ವರು ಸೇರಿಕೊಂಡು ಸಮಾಜ, ಬಂಧು, ಬಳಗದ ಕೊಂಡಿಯನ್ನು ಬಿಗಿಗೊಳಿಸುವ ಕಾರ್ಯದೊಂದಿಗೆ ಜವಾಬ್ದಾರಿಯುತ ಬದುಕನ್ನು ನಡೆಸುತ್ತಾರೆ. ಮಕ್ಕಳಿಗೆ, ಕಿರಿಯರಿಗೆ ವೃತ್ತಿ ಕೌಶಲ್ಯವನ್ನು ವರ್ಗಾಯಿಸುವ ಕಾರ್ಯವನ್ನು ಮಾಡುವುದರೊಂದಿಗೆ ಸಮಾಜದ ರೀತಿರಿವಾಜುಗಳನ್ನು, ಕಟ್ಟುಪಾಡುಗಳನ್ನು ತಿಳಿಸುವ ಹೊಣೆ ಪುರುಷರದ್ದಾಗಿರುತ್ತದೆ. ರಕ್ತಸಂಬಂಧಗಳಿಗಿಂತ ಹೊರಗಿನ ಸಂಬಂಧಗಳಿಗೆ ಒತ್ತನ್ನು ನೀಡಿ ಸಮಾನತೆಯಿಂದ ಬದುಕುವ ಕಲೆ ಅವರದು.

ಬಹುಪಾಲು ರೈತರಾದ ಜನಪದರು ಭೂಮಿ, ಬಸವ (ಎತ್ತು), ಪ್ರಕೃತಿ ಗಿಡಮರಬಳ್ಳಿಗಳೊಂದಿಗೆ ಉತ್ತಮ ಬಾಂಧವ್ಯ ಹೊಂದಿದವರಾಗಿದ್ದಾರೆ. ಏಕೆಂದರೆ ರೈತರು ಬಹುಪಾಲು ಸಮಯವನ್ನು ಪ್ರಕೃತಿಯಲ್ಲೇ ಕಳೆಯುತ್ತಾರೆ. ಪುರುಷರು ಸೃಷ್ಟಿಸಿದ ಜನಪದ ಗೀತೆಗಳಲ್ಲಿ ಭೂಮಿ, ಬಸವ. ಪ್ರಕೃತಿಯ ಕುರಿತಾದ ವಿಚಾರಗಳೇ ಅಡಕಗೊಂಡಿವೆ. ಮಾನವೇತರ ಸಂಬಂಧಗಳಲ್ಲಿ ಅವುಗಳ ಕುರಿತು ವಿವರವಾದ ಅಧ್ಯಯನ ಮಾಡಲಾಗಿದೆ. ಮದುವೆಯ ಮೂಲಕ ಪತಿ–ಪತ್ನಿ ಸಂಬಂಧವೂ ಏರ್ಪಟ್ಟರೆ, ಮದುವೆಯಾದ ಮೇಲೆ ಹೆಣ್ಣು ಮಗನಿಗೊ ಇಲ್ಲವೇ ಮಗಳಿಗೊ ಜನ್ಮ ನೀಡಿ ತಾಯಿಯಾಗುತ್ತಾಳೆ. ಮಾವನಿಗೆ ಸೊಸೆಯಾಗಿ, ಮೈದುನನಿಗೆ ಅತ್ತಿಗೆಯಾಗಿ ಹೀಗೆ ಮದುವೆಯಿಂದ ನಾನಾ ರೀತಿಯ ಸಂಬಂಧಗಳು ಏರ್ಪಡುತ್ತವೆ. ಭಿನ್ನ ಲಿಂಗಿಗಳಲ್ಲಿ ಸಾಮಾಜಿಕ ಸಂಬಂಧಗಳ ಕುರುಹಾಗಿ ನಲ್ಲ–ನಲ್ಲೆ, ಗೆಳೆಯ–ಗೆಳತಿಯರ ನಡುವೆ ಪ್ರೇಮ ಬಾಂಧವ್ಯಗಳನ್ನು ಕಾಣುತ್ತೇವೆ. ಸ್ವಲಿಂಗಿಗಳಲ್ಲಿ ಗೆಳೆಯರು, ಗೆಳತಿಯರು ಮುಂತಾದ ಸಂಬಂಧಗಳನ್ನು ಕಾಣುತ್ತೇವೆ. ಇವುಗಳಲ್ಲದೇ ತಂದೆ–ಮಗಳು, ಅಣ್ಣ–ತಂಗಿ, ಅತ್ತೆ–ಅಳಿಯ, ಸೋದರಮಾವ–ಸೋದರಸೊಸೆ, ಅತ್ತಿಗೆ–ಮೈದುನ, ತಂದೆ–ಮಗ, ಅಣ್ಣ–ತಮ್ಮ, ಮಾವ–ಅಳಿಯ, ಭಾವ–ಮೈದುನ, ಗೆಳೆಯರು ಈ ರೀತಿ ವಿವಿಧ ಸಂಬಂಧಗಳನ್ನು ಗುರುತಿಸಿ ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

### ೩.೧ ಸಂಬಂಧ ಪದದ ಅರ್ಥ

'ಸಂಬಂಧ' ಎಂಬ ಪದವು ಆಂಗ್ಲದ 'Kinship', 'Relation' ಎಂಬ ಪದಗಳಿಂದ ಬಂದಿದೆ. Kinship ಎಂಬುದು Relationship tie of kindred, affinity ಅಂದರೆ ರಕ್ತ ಸಂಬಂಧ, ನೆಂಟಸ್ತಿಕೆ, ಬಂಧುತ್ವವನ್ನು ಸೂಚಿಸುತ್ತದೆ. Relation ಎಂಬುದು narration, connection between presons or things related ಅಂದರೆ ಕಥನ ನಿವೇದನೆ. ವ್ಯಕ್ತಿ ಅಥವಾ ವಸ್ತುಗಳ

ನಡುವಿನ ಬಾಂಧವ್ಯವನ್ನು ತಿಳಿಸುವುದು ಎಂಬರ್ಥ ನೀಡುತ್ತದೆ. "ಎ. ಎಲ್. ಕ್ರೂಬರ್ ಅವರು 'ಒಂದೇ ತಲೆಮಾರಿನ ಜನರ ಸಂಬಂಧಗಳೇ ಬಂಧುತ್ವ" ಎಂದಿದ್ದಾರೆ (ಡಿ. ಕೆ. ಶಿವಣ್ಣ, ೧೯೮೮, ಪು-೧೭೨) ಆರ್. ಇಂದಿರಾ ಅವರು "ವಿವಾಹ ಅಥವಾ ರಕ್ತಸಂಬಂಧಗಳ ಮೂಲಕ ವ್ಯಕ್ತಿಗಳ ನಡುವೆ ಏರ್ಪಾಡಾಗುವ ಸಂಬಂಧ" ಎಂದಿದ್ದಾರೆ. (ಆರ್. ಇಂದಿರಾ, ೧೯೯೫, ಪು-೬೭) ಕನ್ನಡ ಸಂಕ್ಷಿಪ್ತ ನಿಘಂಟಿನಲ್ಲಿಯೂ ಬಂಧುವಿಗೆ ಸಂಬಂಧಿಕ, ನೆಂಟ ಎಂಬರ್ಥವನ್ನು ಸೂಚಿಸಲಾಗಿದೆ. ಸಂಬಂಧಕ್ಕೆ ಸಂಪರ್ಕ, ಸಹವಾಸ, ಹೊಂದಾಣಿಕೆ, ಮದುವೆಯಿಂದ ಉಂಟಾಗುವ ಬಾಂಧವ್ಯ ಎಂಬರ್ಥವನ್ನು ಸೂಚಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ವ್ಯಕ್ತಿ ಅಥವಾ ವಸ್ತುಗಳ ನಡುವಿನ, ಪ್ರಾಣಿ-ಪಕ್ಷಿಗಳ ನಡುವಿನ ಸಂಬಂಧಗಳನ್ನು ಅಭ್ಯಸಿಸಲಾಗಿದೆ. ಆದ್ದರಿಂದ Relation ಎಂಬ ಆಂಗ್ಲಪದದಿಂದ ಬಂದಿರುವ ಸಂಬಂಧ ಎಂಬ ಪದ ಬಳಕೆ ಪ್ರಸ್ತುತ ಅಧ್ಯಯನಕ್ಕೆ ಸೂಕ್ತವೆನಿಸುತ್ತದೆ. ಸಂಬಂಧ ಎನ್ನುವ ಪದ 'ಚೆನ್ನಾಗಿ ಬಂಧಿಸುವುದು' ಎಂಬರ್ಥವನ್ನು ಕೊಡುತ್ತದೆ. ಅಂದರೆ ಒಳ್ಳೆಯ ಬಾಂಧವ್ಯವನ್ನು ಹೊಂದುವುದು. ಕನ್ನಡ ವಿಷಯ ವಿಶ್ವಕೋಶವು ವ್ಯಾಖ್ಯಾನಿಸುವಂತೆ "ಪೂರ್ವಿಕರ ವಂಶದಲ್ಲಿ ಹುಟ್ಟಿ ಬೆಳೆದು ಬಂದಿರುವ ಆ ವಂಶದ ಕೆಲವೊಂದು ಮೂಲಭೂತ ಲಕ್ಷಣಗಳು ಎನಿಸಿಕೊಂಡಿರುವ ವಂಶವಾಹೀ ಗುಣಗಳನ್ನು ಪಡೆದುಕೊಂಡು, ಬೇರೆ ಬೇರೆ ಕುಟುಂಬಗಳಿಗೆ ಸೇರಿರುವ ಸದಸ್ಯರಲ್ಲಿ ಕಂಡು ಬರುವ ಸ್ವಭಾವ, ಗುಣಸಾಮ್ಯ ಇಲ್ಲವೇ ಸಂಬಂಧಕ್ಕೆ ಬಂಧುತ್ವ ಎಂಬ ಹೆಸರು ಇದೆ." (ಕನ್ನಡ ವಿಷಯ ವಿಶ್ವಕೋಶ, ೧೯೮೮, ಪು-೭೩೩) ಪ್ರಪಂಚದ ಎಲ್ಲ ಜನರು ಯಾರು? ಯಾವ ರೀತಿಯ ಸಂಬಂಧವನ್ನು ಹೊಂದಿದ್ದಾರೆ ಎಂಬುದನ್ನು ಆಲೋಚಿಸುತ್ತಾ ಹೋದರೆ ಅಂತ್ಯವೇ ಇಲ್ಲ. ವಿಶಾಲವಾದ ದೃಷ್ಟಿಕೋನದಿಂದ ನೋಡಿದಾಗ 'ವಸುದೈವ ಕುಟುಂಬಕಂ' ಎಂಬ ನುಡಿಯು ನಿಜವೆನಿಸುತ್ತದೆ. ಏಕೆಂದರೆ ವಿಶ್ವದಲ್ಲಿರುವ ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಸಂಬಂಧ ಉಳ್ಳವರಾಗಿ ಭೂಮಿಯ ಮೇಲೆ ಬದುಕು ನಡೆಸುತ್ತಿದ್ದಾರೆ.

ನಾವು ಜನನಿ ಉದರದಿಂದ ಜನಿಸಿ ಬಂದಾಗ ನಮಗೆ ಜನನಿ-ಜನ್ಮಭೂಮಿಯೊಂದಿಗೆ ಸಂಬಂಧ ಉಂಟಾಗುವುದು. ಪ್ರಪಂಚದ ಹಲವಾರು ಕೋಟಿ ಕೋಟಿ ಜೀವಿಗಳಲ್ಲಿ ಸೇರಿ ಹೋಗುವೆವು. ನಮ್ಮಂತೆಯೇ ಪ್ರಾಣಿ, ಪಕ್ಷಿ, ಸಸ್ಯ ಎಲ್ಲವೂ ಸಹ ಭೂಮಿಯೊಂದಿಗೆ ಸಂಬಂಧ ಪಡೆಯುತ್ತವೆ. ಮನುಷ್ಯರ ನಡುವಿನ ಸಂಬಂಧಗಳನ್ನು ಪ್ರಕೃತಿ ಮತ್ತು ಸಸ್ಯಕ್ಕೆ ಹೋಲಿಸಬಹುದು. ಒಂದು ಬೀಜ ಮೊಳಕೆಯೊಡೆದು ಸಸಿಯಾಗಿ, ಹೆಮ್ಮರವಾಗಿ ಬೆಳೆಯಬೇಕೆಂದರೆ ಅದಕ್ಕೆ ತಾನು ಹುಟ್ಟಿದ ಸ್ಥಳ, ಪರಿಸರ ಅತ್ಯಂತ ಮುಖ್ಯ. ಅದು ತಾನು ಹುಟ್ಟಿದ ಸ್ಥಳದಲ್ಲಿಯೇ ಬೆಳೆದರೆ ಉತ್ತಮ. ಒಂದು ವೇಳೆ ಸ್ಥಳವನ್ನು ಬದಲಿಸಿ ನೆಟ್ಟರೆ ಅದು ಬಾಡುತ್ತದೆ. ಅದೇ ರೀತಿ ಮಗು ಜನಿಸಬೇಕಾದರೆ, ನಂತರ ಕಾಲಘಟ್ಟಗಳಲ್ಲಿ ಸಂಬಂಧ ಅವಶ್ಯಕ. ಮಗು ಹುಟ್ಟುತ್ತಲೇ ಸಂಬಂಧಗಳ ಸರಮಾಲೆಯನ್ನೇ ಹೊತ್ತು

ತರುತ್ತದೆ. ಅದು ಹುಟ್ಟಿದ ಪರಿಸರದಲ್ಲಿಯೇ ಬೆಳೆದರೆ ಸಂಬಂಧಗಳಿಂದ ಧನಾತ್ಮಕ ಅಂಶಗಳನ್ನು ಪಡೆದು ಮಾನಸಿಕವಾಗಿ ಸದೃಢವಾಗಿ ಬೆಳೆಯುತ್ತದೆ. ಅದೇ ಮಾರ್ಗವನ್ನು ಯಾವುದೋ ಅನಾಥಾಶ್ರಮದಲ್ಲಿಯೋ ದೂರದ ದೇಶದಲ್ಲಿಟ್ಟು ಬೆಳೆಸಿದರೆ ಮಾನಸಿಕವಾಗಿ ಕುಗ್ಗುತ್ತದೆ. ಆದ್ದರಿಂದ ಮಾನವನ ಜೀವನದಲ್ಲಿ ಸಂಬಂಧಗಳ ಪಾತ್ರ ಅತೀ ಮುಖ್ಯವಾದುದು.

**೩.೨ ಸಂಬಂಧಗಳ ವರ್ಗೀಕರಣ**

ಸಂಬಂಧವು ವಯಸ್ಸು, ಲಿಂಗ, ಜಾತಿ ಹಾಗೂ ಸಾಮಾಜಿಕ ವರ್ಗಗಳನ್ನು ಅವಲಂಬಿಸಿರುತ್ತದೆ. ಇವುಗಳನ್ನು ವರ್ಗೀಕರಿಸಿ ಅಧ್ಯಯನಕ್ಕೊಳಪಡಿಸುವುದು ಕಷ್ಟದ ಕೆಲಸ. ಮಾನವಶಾಸ್ತ್ರದ ಪದ ವಿವರಣಾ ಕೋಶದಲ್ಲಿ ವ್ಯಕ್ತಿಗಳ ನಡುವಿನ ಅನೇಕ ರೀತಿಯ ಸಂಬಂಧಗಳನ್ನು ಗುರುತಿಸಲಾಗಿದೆ. "Affinal relatives ಅಂದರೆ ವಿವಾಹದ ಮೂಲಕ ಉಂಟಾದ ಸಂಬಂಧಿಗಳು, Cross relatives ಅಂದರೆ ಒಡಹುಟ್ಟಿದವರ ಅದರಲ್ಲೂ ವಿರುದ್ಧ ಲಿಂಗಕ್ಕೆ ಸೇರಿರುವ ಮಕ್ಕಳು ಅಥವಾ ಸಂಬಂಧಿಗಳು, Ronsanguineal relatives ಅಂದರೆ ಒಂದೇ ರಕ್ತ ಅಥವಾ ಪೂರ್ವಿಕರೊಂದಿಗೆ ಬೆಸೆದ ಸಂಬಂಧಗಳು, Genetic relatives ಅಂದರೆ ದೈಹಿಕ ಸಂಬಂಧಗಳ ಮೂಲದ ಸಂಬಂಧಿಗಳು, Parallel relatives ಅಂದರೆ ಒಂದೇ ಲಿಂಗಕ್ಕೆ ಸೇರಿದ, ಒಡಹುಟ್ಟಿದವರ ಮಕ್ಕಳು ಮತ್ತು ಸಂಬಂಧಿಗಳು ಹಾಗೂ Primary relatives ಅಂದರೆ ಒಂದೇ ಸಣ್ಣ ಕುಟುಂಬದಲ್ಲಿನ ಸಂಬಂಧಿಗಳು." (ಎಂ. ಅನ್ನಪೂರ್ಣ, ೨೦೦೬, ಪು-೩೪೮) ಹೀಗೆ ಹಲವು ರೀತಿಯಲ್ಲಿ ವಿವಿಧ ಸಂಬಂಧಗಳನ್ನು ಇಲ್ಲಿ ಗುರುತಿಸಲಾಗಿದೆ.

ಸಂಬಂಧಗಳ ಜೈವಿಕ ಹಾಗೂ ರಾಚನಿಕ ಸ್ವರೂಪವನ್ನು ಅನುಲಕ್ಷಿಸಿ ಹಲವು ರೀತಿಯಾಗಿ ವಿಂಗಡಿಸಬಹುದು. ಬಂಧುವಾಚಕಗಳ ವರ್ಗೀಕರಣವನ್ನು "ಜೈವಿಕ ಹಾಗೂ ರಾಚನಿಕ ಸ್ವರೂಪವನ್ನು ಅನುಲಕ್ಷಿಸಿ ಮೂರು ರೀತಿಯಾಗಿ ವರ್ಗೀಕರಿಸಬಹುದು. ಅವುಗಳೆಂದರೆ

೧. ಅ. ರಕ್ತಸಂಬಂಧ
   ಆ. ಇತರ ಸಂಬಂಧ
೨. ಅ. ಪ್ರಾಥಮಿಕ ಸಂಬಂಧ
   ಆ. ಆನುಷಂಗಿಕ ಸಂಬಂಧ
೩. ಅ. ಮೂಲ ರೂಪಗಳು
   ಆ. ಸಾಧಿತ ರೂಪಗಳು." (ಎಸ್. ಎಸ್. ಅಂಗಡಿ, ೨೦೦೨, ಪು-೫)

ಬಂಧುತ್ವವನ್ನು ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ ಇವರ ಮೂಲಕ ವಂಶವನ್ನು ನಿರ್ಧರಿಸಿದರೆ ಅದು ರಕ್ತ ಸಂಬಂಧ. ಉದಾ: ಚಿಕ್ಕಪ್ಪ-ತಂದೆಗಿಂತ ಚಿಕ್ಕವ, ಚಿಕ್ಕಮ್ಮ-ತಾಯಿಗಿಂತ ಚಿಕ್ಕವಳು ಮುಂತಾದವು. ಇವುಗಳಿಗೆ 'ಕಳ್ಳುಬಳ್ಳಿ' ಎಂದು ಕರೆಯುವರು. ಇವುಗಳನ್ನು ಹೊರತುಪಡಿಸಿ ಸ್ನೇಹ ಸಂಬಂಧ, ಗುರು-ಶಿಷ್ಯರ ಸಂಬಂಧ, ನಾಡಿನ ಬಗೆಗಿರುವ ಸಂಬಂಧ, ಅದರಂತೆ ವೃತ್ತಿಯ ಬಗೆಗೆ ಇರುವ ಸಂಬಂಧ, ವಿದ್ಯಾಸಂಸ್ಥೆಯ ಬಗೆಗೆ ಇರುವ ಸಂಬಂಧ ಇವು 'ಇತರ ಸಂಬಂಧ'ಗಳ ವರ್ಗದಲ್ಲಿ ಸಮಾವೇಶಗೊಳ್ಳುತ್ತವೆ. ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ ನೇರವಾಗಿ ರಕ್ತ ಸಂಬಂಧಕ್ಕೆ ಸಂಬಂಧಿಸಿರುವುದರಿಂದ ಇವುಗಳಿಗೆ 'ಪ್ರಾಥಮಿಕ ಸಂಬಂಧ'ಗಳೆಂದು ಕರೆಯುವರು.

"ಮದನ ಮತ್ತು ಮಜುಂದಾರ್ ಅವರು ಬಂಧುತ್ವವನ್ನು 'ನೇರ ಸಂಬಂಧ' ಪರೋಕ್ಷ ಸಂಬಂಧ, ಮಾಧ್ಯಮಿಕ ಸಂಬಂಧ' ಹೀಗೆ ವರ್ಗೀಕರಿಸಿ ಅರ್ಥೈಸಿಕೊಳ್ಳಬೇಕಾಗುತ್ತದೆ." (ಡಿ. ಕೆ. ಶಿವಣ್ಣ, ೧೯೮೪, ಪುಟ-೧೭೨) ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಅತ್ತೆ-ಮಾವ, ಭಾವ-ಮೈದುನ, ಚಿಕ್ಕಪ್ಪ-ಚಿಕ್ಕಮ್ಮ, ನಾದಿನಿ-ನೆಗೆಣ್ಣಿ-ಭಾವ-ಅಳಿಯ, ಇಂತಹ ಸಂಬಂಧಗಳು ವಿವಾಹದಿಂದ ಇಲ್ಲವೇ ಆಪ್ತತೆಯಿಂದ ಸೃಷ್ಟಿಯಾಗುತ್ತವೆ. ಸರಳ ಸಮಾಜದಲ್ಲಿ ವಯಸ್ಸಿಗೆ ಅನುಗುಣವಾಗಿ ವ್ಯಕ್ತಿಗಳನ್ನು, ತಾಯಿ-ತಂದೆ, ಅಕ್ಕ-ತಮ್ಮ, ಅಣ್ಣ-ತಂಗಿ ಇತ್ಯಾದಿ ಸಂಬಂಧಗಳಿಂದ ಗುರುತಿಸುವುದು ವಾಡಿಕೆಯಲ್ಲಿದೆ. ಇದು ಔದ್ಯೋಗಿಕ ಮುಂದುವರೆದ ನಾಗರಿಕರೆನಿಸಿಕೊಂಡ ನಗರ ಸಮಾಜದಲ್ಲಿ ಕಂಡುಬರುವುದಿಲ್ಲ. ಬದಲಾಗಿ ಗ್ರಾಮೀಣ ಪರಂಪರೆಯಲ್ಲಿ ಕಾಣುತ್ತೇವೆ.

"ಮಾನವ ಸಮಾಜದ ಇತಿಹಾಸವನ್ನು ಅಧ್ಯಯನ ಮಾಡಿದ ಸಂಶೋಧಕರು ಸಮುದಾಯದಲ್ಲಿ ವ್ಯಕ್ತಿಗಳನ್ನು ಒಗ್ಗೂಡಿಸಿದ ಪ್ರಾಥಮಿಕ ಬಂಧನ ಬಂಧುತ್ವವೆ ಆಗಿತ್ತು ಎಂಬುದನ್ನು ಕಂಡುಕೊಂಡಿದ್ದಾರೆ. ಕುಟುಂಬವು ಸಾಮಾಜಿಕ ಸಂಘಟನೆಯ ಸೂತ್ರವಾಗಿದೆ. ಅದು ವ್ಯಕ್ತಿಗಳ ಹಕ್ಕು ಮತ್ತು ಕರ್ತವ್ಯಗಳ ವ್ಯವಸ್ಥೆಯಾಗಿದ್ದು, ಕೇವಲ ವಿವಿಧ ವ್ಯಕ್ತಿಗಳ, ಘಟಕಗಳ ನಡುವಿನ ಸಂಬಂಧಗಳನ್ನು ವ್ಯಾಖ್ಯಾನಿಸುತ್ತದೆ. ಇದು ವ್ಯಕ್ತಿ ಮತ್ತು ಕುಟುಂಬಗಳು ಒಟ್ಟಿಗೆ ಬಾಳುವೆ ನಡೆಸಲು ಅನುಕೂಲವಾಗುವಂತಹ ಒಂದು ವ್ಯವಸ್ಥೆಯನ್ನು ಕಲ್ಪಿಸುತ್ತದೆ. ಮಾನವನ ಮುಖ್ಯ ಅಭಿಲಾಷೆಗಳಾದ ಕುಟುಂಬದ ಸ್ಥಾಪನೆ ಮತ್ತು ವಂಶಾವಳಿಯನ್ನು ಮುಂದುವರೆಸಿಕೊಂಡು ಹೋಗಲು ಬಂಧುತ್ವ ಸಹಕಾರಿ" (ಜೋಗನ್‌ಶಂಕರ್, ೧೯೯೫, ಪು-೭೨) ಹುಟ್ಟು ಮತ್ತು ವಿವಾಹದಿಂದ ಸಮಾಜದಲ್ಲಿ ಪರಂಪರಾಗತವಾಗಿರುವ ಸ್ಥಿರ ಸಂಬಂಧಗಳು ಉಂಟಾಗುತ್ತವೆ. ಈ ಸ್ಥಿರ ಸಂಬಂಧಗಳು ಕುಟುಂಬ, ವಿವಾಹ ಮತ್ತು ಸಮಾಜವನ್ನು ನಿರ್ವಹಿಸುತ್ತವೆ. ಇಲ್ಲಿ ಕಂಡುಬರುವ ಎಲ್ಲ ಚಟುವಟಿಕೆಗಳಿಗೂ ಮೂಲವಾಗಿರುತ್ತವೆ.

ಪ್ರತಿಯೊಂದು ಸಮಾಜದಲ್ಲಿಯೂ ಜನರ ಸಮೂಹವು ಹಲವಾರು ಸಂಬಂಧಗಳಿಂದ ರೂಪುಗೊಂಡಿರುತ್ತದೆ. ಇದು ಎಲ್ಲ ಸಮಾಜಗಳಲ್ಲಿಯೂ ಕಂಡುಬರುವ ಸಾರ್ವತ್ರಿಕ ಲಕ್ಷಣ, ಒಂದು

ದೃಷ್ಟಿಯಲ್ಲಿ ಸಂಬಂಧವು ವ್ಯಕ್ತಿ ವ್ಯಕ್ತಿಗಳ ಶಾರೀರಿಕ ಲಕ್ಷಣಗಳಿಂದ ನಿರ್ಧರಿಸಲ್ಪಡುವುದು. ಸಂತಾನೋತ್ಪತ್ತಿಯ ಆಧಾರದ ಮೇಲೆ ಇದು ವ್ಯಕ್ತಿಗಳಲ್ಲಿನ ಸಂಬಂಧಗಳಿಗೆ ಎಡೆ ಮಾಡಿಕೊಡುವುದು. ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಗೆ ನೇರವಾಗಿ ಸಂಬಂಧಿಸಿದರೆ ಅದನ್ನು ಪ್ರಾಥಮಿಕ ಸಂಬಂಧವೆಂದೂ, ಆ ವ್ಯಕ್ತಿಯನ್ನು ಪ್ರಾಥಮಿಕ ಸಂಬಂಧಿಯೆಂದು ಕರೆಯುತ್ತಾರೆ. ತಂದೆ-ಮಗ, ತಾಯಿ-ಮಗಳು ಇವು ಪ್ರಾಥಮಿಕ ಸಂಬಂಧಗಳು. ತಂದೆಯು ಮಗನಿಗೆ ಪ್ರಾಥಮಿಕ ಸಂಬಂಧಿಯಾದರೆ ತಂದೆಯ ಸೋದರನು ದ್ವಿತೀಯ ಸಂಬಂಧಿ. ವೈವಾಹಿಕ ಸಂಬಂಧದಲ್ಲಿ ಪತಿ-ಪತ್ನಿಯು ಪ್ರಾಥಮಿಕ ಸಂಬಂಧಿಯಾದರೆ ಪತ್ನಿಯ ಸೋದರನು ದ್ವಿತೀಯ ಸಂಬಂಧಿ. ಸರಳ ಸಮಾಜಗಳಲ್ಲಿ ವ್ಯಕ್ತಿಗಳ ಸ್ಥಾನಮಾನವನ್ನು ಗಮನಕ್ಕೆ ತಂದು, ಅದರ ಮೂಲಕ ಕೆಲವೊಂದು ಸಂಬಂಧವೂ ನಿರ್ಧರಿಸಲ್ಪಡುತ್ತದೆ. ಕೌಟುಂಬಿಕ, ವೈವಾಹಿಕ ಸಂಬಂಧದ ಮೂಲಕ ಸಾಮಾಜಿಕ ಸಂಬಂಧಗಳು ಹುಟ್ಟುತ್ತವೆ. ಇವು ವ್ಯಕ್ತಿಗಳ ಸಾಮಾಜಿಕ ಅವಶ್ಯಕತೆಗಳಿಗೆ ಅನುಗುಣವಾಗಿ ರೂಪುಗೊಂಡಿವೆ.

ಈ ಮೇಲೆ ವಿವೇಚಿಸಿದ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನದಲ್ಲಿ ಮೂರು ಮುಖ್ಯ ನೆಲೆಗಳಲ್ಲಿ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ. ಅವುಗಳೆಂದರೆ ಜನಪದರ ಮಾನವ ಸಂಬಂಧಗಳು, ಮಾನವೇತರ ಸಂಬಂಧಗಳು ಹಾಗೂ ಅಲಕ್ಷಿತ ಸಂಬಂಧಗಳು. ಜನಪದರ ಮಾನವ ಸಂಬಂಧಗಳಲ್ಲಿ ಕೌಟುಂಬಿಕ ಸಂಬಂಧಗಳು, ವೈವಾಹಿಕ ಸಂಬಂಧಗಳು, ಸಾಮಾಜಿಕ ಸಂಬಂಧಗಳು ಎಂಬ ಮೂರು ನೆಲೆಗಳಲ್ಲಿ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಅನುಕೂಲವಾಗಲೆಂದು ಮೇಲ್ಕಂಡ ಮುಖ್ಯ ನೆಲೆಗಳಲ್ಲಿ ಸಂಬಂಧಗಳನ್ನು ವರ್ಗೀಕರಿಸಲಾಗಿದ್ದು, ಜನಪದ ಗೀತೆಗಳಲ್ಲಿ ಕಂಡುಬರುವ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ.

ಮಾನವ ಸಂಬಂಧಗಳ ನೆಲೆಯಲ್ಲಿ ಕೌಟುಂಬಿಕ ಸಂಬಂಧಗಳು ಕಂಡುಬರುತ್ತವೆ. ಗಂಡು-ಹೆಣ್ಣುಗಳ ಪರಸ್ಪರ ಸಂಬಂಧಗಳ ಆಧಾರದ ಮೇಲೆಯೇ ಕುಟುಂಬವು ನಿಂತಿರುತ್ತದೆ. 'ಕುಟುಂಬ' ಎಂಬ ಪದವು ಆಂಗ್ಲದ 'Family' ಎಂಬ ಪದದಿಂದ ಬಂದಿದೆ. 'Family' ಎಂಬ ಪದ ಹುಟ್ಟಲು ಲ್ಯಾಟೀನ್ ಭಾಷೆಯ 'Famulus' ಎಂಬ ಪದ ಕಾರಣ. "Famulas ಎಂದರೆ ಆಳು, ಸೇವಕ ಎಂದರ್ಥ. ಹಿಂದಿನ ಕಾಲಕ್ಕೆ ಗಂಡ, ಹೆಂಡತಿ, ಮಕ್ಕಳ ಜೊತೆಗೆ ಕುಟುಂಬಕ್ಕೆ ಸೇವೆ ಸಲ್ಲಿಸುತ್ತಿರುವ ಆಳುಗಳನ್ನು ಕೂಡ ಕುಟುಂಬದ ಸದಸ್ಯರೆಂದು ಭಾವಿಸಲಾಗುತ್ತಿತ್ತು." (ಎಚ್. ಬಿ. ಮಾಳಿ, ೧೯೯೨, ಪುಟ-೧೦೩) ಮಾನವನು ಮೂಲಭೂತವಾಗಿ ಸಮಾಜಜೀವಿ. ಆತನು ಯಾವಾಗಲೂ ಸಮಾಜದಲ್ಲಿಯೇ ವಾಸಿಸುತ್ತಾನೆ. ಆ ಸಮಾಜದ ಚಿಕ್ಕ ಅಂಗವೇ ಕುಟುಂಬ." "ತಂದೆ-ತಾಯಿ-ಮಕ್ಕಳನ್ನೊಳಗೊಂಡ ಸಮೂಹವೇ ಕುಟುಂಬ". (ಎಚ್. ಬಿ. ಮಾಳಿ, ೧೯೯೨, ಪು-೧೦೩) ಮಾನವನ ಅವಶ್ಯಕತೆಗಳಾದ ಲೈಂಗಿಕ ಬಯಕೆ, ಸಂತಾನೋತ್ಪತ್ತಿ ಮುಂತಾದವುಗಳನ್ನು ಈಡೇರಿಸಲು ಕುಟುಂಬವು ಅಸ್ತಿತ್ವಕ್ಕೆ ಬಂದಿರುತ್ತದೆ. ಸಾಮಾನ್ಯವಾಗಿ ಗ್ರಾಮಗಳಲ್ಲಿಯ ಕುಟುಂಬಗಳು

ರಕ್ತಸಂಬಂಧಗಳನ್ನು ಹೊಂದಿರುತ್ತವೆ. ಇವು ನೇರ ಹಾಗೂ ಪ್ರತ್ಯಕ್ಷ ಸಂಬಂಧಗಳಾಗಿದ್ದು ಪರಸ್ಪರ ಚೆನ್ನಾಗಿ ಅರಿತುಕೊಂಡವರಾಗಿರುತ್ತಾರೆ. ಅಂತಹ ಪ್ರಾಥಮಿಕ ಸಂಬಂಧಗಳಾದ ತಾಯಿ–ಮಗ, ತಂದೆ–ಮಗಳು, ಅಣ್ಣ–ತಮ್ಮ, ಅಕ್ಕ–ತಂಗಿ ಇವುಗಳನ್ನು ಕೌಟುಂಬಿಕ ಸಂಬಂಧಗಳಲ್ಲಿ ವಿಶ್ಲೇಷಿಸಲಾಗಿದೆ.

ಎರಡನೆಯದಾಗಿ ಮಾನವ ಸಂಬಂಧಗಳ ನೆಲೆಯಲ್ಲಿ ವೈವಾಹಿಕ ಸಂಬಂಧಗಳು ಕಂಡುಬರುತ್ತವೆ. ಇಲ್ಲಿನ ಸಂಬಂಧಗಳು ವಿವಾಹದ ಹಿನ್ನೆಲೆಯಲ್ಲಿ ಗಂಡು–ಹೆಣ್ಣು ವಿವಾಹವಾದ ಬಳಿಕ ರೂಪುಗೊಳ್ಳುತ್ತವೆ. ಆಂಗ್ಲದ 'Marriage' ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಮದುವೆ, ಲಗ್ನ, ವಿವಾಹ ಎಂಬ ಪದಗಳು ಬಳಕೆಯಲ್ಲಿವೆ. ವಿವಾಹ ಮತ್ತು ಕುಟುಂಬ ಇವು ಭಾರತೀಯ ಸಾಮಾಜಿಕ ವ್ಯವಸ್ಥೆಗೆ ಒತ್ತಾಸೆ ನೀಡಿರುವ ಎರಡು ಪ್ರಮುಖ ಸಾಮಾಜಿಕ ಸಂಸ್ಥೆಗಳು. ಮಾನವನ ಜೈವಿಕ, ಸಾಮಾಜಿಕ, ಲೈಂಗಿಕ ಹಾಗೂ ಮಾನಸಿಕ ಅಗತ್ಯಗಳ ಪೂರೈಕೆಗಾಗಿ ವಿವಾಹವೆಂಬ ಪದ್ಧತಿ ಹುಟ್ಟಿಕೊಂಡಿದೆ. ರಾಲ್ಫ್ ಲಿಂಟನ್ ವಿವಾಹವನ್ನು "ಸಮಾಜದಿಂದ ಅಂಗೀಕರಿಸಲ್ಪಟ್ಟ ವಿಭಿನ್ನ ಲಿಂಗಬೇಧವುಳ್ಳ ವ್ಯಕ್ತಿಗಳ ಸಹಜೀವನ" ಎಂದಿದ್ದಾನೆ. ಹೊಬೇಲ್‌ನ ಪ್ರಕಾರ ವಿವಾಹವೆಂದರೆ "ವ್ಯಕ್ತಿಗಳಲ್ಲಿನ ಪರಸ್ಪರ ಸಂಬಂಧಗಳು ಮತ್ತು ಲೈಂಗಿಕ ಸಂಬಂಧಗಳು ಯಾವ ರೂಪವನ್ನು ತಾಳುತ್ತವೆ ಎಂಬುದನ್ನು ನಿರ್ಧರಿಸುವ ಪದ್ಧತಿ". ವಿವಾಹದಲ್ಲಿ ಸಾಕಷ್ಟು ಬಗೆಗಳಿವೆ. ಆದರೆ ಅವುಗಳ ಪ್ರಸ್ತಾಪ ಇಲ್ಲಿ ಅಮುಖ್ಯವೆನಿಸುತ್ತದೆ. ಕುಟುಂಬ, ಸಮಾಜದಲ್ಲಿ ಕಾಣಬರುವ ಎಲ್ಲ ಸಂಬಂಧಗಳನ್ನು ನಿರ್ದೇಶಿಸುವುದು ವಿವಾಹವೇ. ಆದ್ದರಿಂದ ವಿವಾಹದಿಂದ ಏರ್ಪಟ್ಟ ಸಂಬಂಧಗಳಾದ ಪತಿ–ಪತ್ನಿ, ಅತ್ತೆ–ಮಾವ, ಅತ್ತೆ–ಸೊಸೆ, ಭಾವ–ಮೈದುನ, ನೆಗೆಣ್ಣಿ–ನಾದುನಿ ಮುಂತಾದ ಆನುಷಂಗಿಕ ಸಂಬಂಧಗಳನ್ನು ವೈವಾಹಿಕ ಸಂಬಂಧಗಳಲ್ಲಿ ವಿಶ್ಲೇಷಿಸಲಾಗಿದೆ.

ಮೂರನೆಯದಾಗಿ ಮಾನವ ಸಂಬಂಧಗಳ ನೆಲೆಯಲ್ಲಿ ಸಾಮಾಜಿಕ ಸಂಬಂಧಗಳು ಕಂಡುಬರುತ್ತವೆ. ಮಾನವ ಮೂಲತಃ ಸಂಘಜೀವಿ; ಆತ ತನ್ನ ಸಾಮೂಹಿಕ ಜೀವನದಲ್ಲಿ ಅನೇಕ ವ್ಯಕ್ತಿಗಳೊಡನೆ ವಿವಿಧ ರೀತಿಯ ಸಂಬಂಧಗಳಲ್ಲಿ ಬಂಧಿಸಲ್ಪಟ್ಟಿದ್ದಾನೆ. 'ಸಮಾಜ' ಎಂಬ ಪದವು ಆಂಗ್ಲದ 'Society' ಪದದ ಸಂವಾದಿ ರೂಪ. `Society' ಎಂಬ ಆಂಗ್ಲ ಪದವು ಲ್ಯಾಟೀನ್ ಪದವಾದ 'Societies' ನಿಂದ ಉತ್ಪತ್ತಿಯಾಗಿದೆ. "Societies ಎಂದರೆ ಒಡನಾಡಿಗಳಿಂದ ಕೂಡಿರುವ ಸಮೂಹ ಅಂದರೆ ಸಹಚರ. ಸಮಾನ ಸ್ವಭಾವಗಳುಳ್ಳ ಜೀವಿಗಳು ಸಾಂಘಿಕವಾಗಿ ಸಂಬಂಧಗಳನ್ನು ಹೊಂದಿರುವ ವ್ಯವಸ್ಥೆಗೆ 'ಸಮಾಜ' ಎನ್ನುವರು" (ಎಚ್. ಬಿ. ಮಾಳಿ, ೧೯೯೨, ಪು–೪೦) ಸಮಾಜವು ಪರಸ್ಪರ ಸಾಮಾಜಿಕ ಸಂಬಂಧಗಳಿಂದ ಕೂಡಿದ ಒಂದು ಸಂಕೀರ್ಣ ವ್ಯವಸ್ಥೆಯಾಗಿದ್ದು, ಕೇವಲ ಜನರಿಂದ ಒಡಗೂಡಿದ ಸಮೂಹ. "ಮಾನವನ ಜೀವನವು ವೈವಿಧ್ಯಪೂರ್ಣವಾಗಿದೆ. ಆತನು ಇತರರೊಡನೆ ಅನೇಕ ಸಂಬಂಧಗಳನ್ನು ಹೊಂದಿರುತ್ತಾನೆ. ಒಂದು ಭೌತಿಕ ಸಂಬಂಧ ಇನ್ನೊಂದು ಸಾಮಾಜಿಕ ಸಂಬಂಧ. ಮೇಜು ಮತ್ತು ನೆಲ, ಪಾಟಿ ಮತ್ತು ಪೆನ್ಸಿಲ್

ಇತ್ಯಾದಿಗಳ ಸಂಬಂಧ ಭೌತಿಕವಾದದ್ದು. ಏಕೆಂದರೆ ಅವುಗಳಿಗೆ ಪರಸ್ಪರ ಅರಿವು ಇರಲಾರದು. ಗುರು-ಶಿಷ್ಯ, ನಲ್ಲ-ನಲ್ಲೆ ಮುಂತಾದ ವ್ಯಕ್ತಿಗಳ ನಡುವೆ ಏರ್ಪಟ್ಟ ಸಂಬಂಧವು ಸಾಮಾಜಿಕವಾದದ್ದು". (ಎಚ್. ಬಿ. ಮಾಳಿ, ೧೯೯೨, ಪು-೪೧) ಸಂಬಂಧಗಳ ಪರಸ್ಪರ ಅರಿವು ತಿಳುವಳಿಕೆ ಇರುತ್ತದೆ. ಹೀಗೆ ಸಮಾಜದ ಹಿನ್ನೆಲೆಯಲ್ಲಿ ಏರ್ಪಟ್ಟ ಗುರು ಶಿಷ್ಯ ನಲ್ಲ-ನಲ್ಲೆ, ಗೆಳೆಯ-ಗೆಳತಿಯರ ಮುಂತಾದ ಸಂಬಂಧಗಳನ್ನು ಸಾಮಾಜಿಕ ಸಂಬಂಧಗಳಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ಕನೆಯದಾಗಿ ಮಾನವೀಯ ಸಂಬಂಧಗಳ ಹೊರತಾಗಿ ಜನಪದರಲ್ಲಿ ಮಾನವೇತರ ಸಂಬಂಧಗಳು ಕಂಡುಬರುತ್ತವೆ. ಜನಪದರು ಕೇವಲ ಜನರೊಂದಿಗೆ ಬಾಂಧವ್ಯ ಬೆಳೆಸಿಲ್ಲ. ತನ್ನ ದಿನನಿತ್ಯದ ಬದುಕಿಗೆ ಸಹಾಯವಾಗುವ ಭೌತಿಕ ವಸ್ತುಗಳೊಡನೆ ಭಾವನಾತ್ಮಕ ಸಂಬಂಧ ಹೊಂದಿದ್ದಾರೆ. ಇದುವರೆಗಿನ ಅಧ್ಯಯನಗಳು ಕಂಡುಕೊಂಡಿರದ ನೆಲೆಯಲ್ಲಿ ಚಿಂತಿಸುವ ಪ್ರಯತ್ನ ಇದಾಗಿದೆ. ಗ್ರಾಮೀಣ ಪರಂಪರೆಯಲ್ಲಿ ಜನರು ದೇವರು, ಭೂಮಿ, ಮಳೆ, ಎತ್ತುಗಳೊಂದಿಗೆ ಭಾವನಾತ್ಮಕ ಸಂಬಂಧವನ್ನು ಹೊಂದಿದ್ದಾರೆಂಬುದನ್ನು ಪರಿಚಯಿಸುವ ಪ್ರಯತ್ನ ಇಲ್ಲಿ ನಡೆದಿದೆ. ಆದ್ದರಿಂದ ಮಾನವೇತರ ಸಂಬಂಧಗಳಲ್ಲಿ ಭೂಮಿ, ಎತ್ತು, ಮಳೆ, ದೈವ ಹಾಗೂ ಪಶುಪಕ್ಷಿಗಳೊಂದಿಗೆ ಜನಪದರು ಹೊಂದಿರುವ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ.

ಐದನೆಯದಾಗಿ ಜನಪದರಲ್ಲಿ ಕಂಡುಬರುವ ಅಲಕ್ಷಿತ ಸಂಬಂಧಗಳನ್ನು ವಿಶ್ಲೇಷಿಸುವುದಾಗಿದೆ. ಜನಪದರಲ್ಲಿ ವಿಧವೆ, ಬಂಜೆ, ಸವತಿ, ಮಲತಾಯಿ, ಮಲಮಕ್ಕಳು ಮತ್ತಿತರ ಬಾಂಧವ್ಯಗಳು ಅಲಕ್ಷ್ಯಕ್ಕೊಳಪಟ್ಟಿವೆ. ಇಂತಹ ಸಂಬಂಧಗಳಿಗೆ ಜನಪದರು ಯಾವುದೇ ಸ್ಥಾನಮಾನಗಳನ್ನು ನೀಡದಿರುವುದರಿಂದ ಇವು ತಾತ್ಸಾರಕ್ಕೊಳಗಾಗಿವೆ. ಜನಪದ ಕಥೆ, ಕಾವ್ಯಗಳಲ್ಲಿ ಕಂಡುಬರುವ ಸ್ವಗೋತ್ರ ವಿವಾಹ, ತಂದೆ-ಮಗಳ ವಿವಾಹಗಳು ನಿಷೇಧಿತ ಸಂಬಂಧಗಳಿಗೆ ಸಾಕ್ಷಿಯಾಗಿವೆ. ಭಾರತೀಯ ಸಂಸ್ಕೃತಿಯಲ್ಲಿ ಕೆಲವೊಂದು ಆಯ್ದ ಬಾಂಧವ್ಯಗಳಲ್ಲಿ ಮಾತ್ರ ಮದುವೆಯಾಗಬೇಕೆಂಬ ನಿರ್ಬಂಧವಿದೆ. ಇಂತಹ ನಿರ್ಬಂಧದ ನಡುವೆಯೂ ಸಮಾಜವನ್ನು ಕಲುಷಿತಗೊಳಿಸುವ ನಿಷೇಧಿತ ಸಂಬಂಧಗಳು ಏರ್ಪಟ್ಟಿವೆ. ಇಂತಹ ಸಂಬಂಧಗಳಿಗೆ ಕಾರಣ ಯಾರು? ಮೂಲ ಯಾವುದು? ಎಂಬ ಮೂಲ ಶೋಧಿಸಲು ತೊಡಗಿದಾಗ ಪುರಾಣ, ಜನಪದ ಕಥೆ, ಚರಿತ್ರೆಗಳಲ್ಲಿ ಇವುಗಳ ಬಗ್ಗೆ ಉಲ್ಲೇಖ ಇರುವುದು ಕಂಡುಬರುತ್ತದೆ. ಜನಪದರ ಜೀವನವು ಇದಕ್ಕೆ ಹೊರತಾಗಿಲ್ಲ. ಜನಪದ ಗೀತೆಗಳಲ್ಲಿ ಅಭಿವ್ಯಕ್ತಗೊಂಡ ಅಲಕ್ಷಿತ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ.

## ೩.೩ ಸಂಬಂಧವಾಚಕಗಳು

ವಿಶ್ವದ ಬಹುತೇಕ ಎಲ್ಲ ಸಮಾಜಗಳಲ್ಲಿಯೂ ಸಂಬಂಧವಾಚಕಗಳ ಬಳಕೆ ರೂಢಿಯಲ್ಲಿದೆ. ಸಂಬಂಧವಾಚಕಗಳಿಗೆ ಬಂಧುವಾಚಕಗಳು ಎಂತಲೂ ಕರೆಯುತ್ತಾರೆ. ಬಂಧುವಾಚಕಗಳ ಮೂಲಕ ಸಂಬಂಧ, ಬಂಧುತ್ವ ಮತ್ತು ಬಾಂಧವ್ಯಗಳು ಅನಾವರಣಗೊಳ್ಳುತ್ತವೆ. "ಬಂಧುಸೂಚಕಗಳು ಭಾಷಿಕ ರಚನೆಗಳು. ಸಾಮಾಜಿಕ ಭಾಷಾಶಾಸ್ತ್ರಜ್ಞರು ಹೆಸರುಗಳನ್ನು ಸ್ಥಳನಾಮಗಳು ಮತ್ತು ವ್ಯಕ್ತಿನಾಮಗಳೆಂದು ವಿಂಗಡಿಸುತ್ತಾರೆ. ವ್ಯಕ್ತಿನಾಮಗಳನ್ನು ವ್ಯಕ್ತಿನಾಮ, ಕುಲನಾಮ ಮತ್ತು ಸಂಬಂಧವಾಚಕಗಳೆಂದು ವರ್ಗೀಕರಿಸುತ್ತಾರೆ. ವ್ಯಕ್ತಿನಾಮಗಳ ಕಕ್ಷೆಯಲ್ಲಿ ಬರುವ ಸಂಬಂಧವಾಚಕಗಳ ಸಂಖ್ಯೆ ಸೀಮಿತವಾಗಿದ್ದರೂ ಅವುಗಳ ಸಾಮಾಜಿಕ ಅರ್ಥಛಾಯೆ ವೈವಿಧ್ಯಮಯವಾಗಿವೆ. ಬಂಧುವಾಚಕಗಳ ಬಳಕೆಯಲ್ಲಿ ಭಾಷಿಕರ ಬಯಕೆ, ಹಾರೈಕೆಗಳು ಹಾಗೂ ಅವರ ಕೌಟುಂಬಿಕ ಪರಂಪರೆ ಅಡಗಿರುತ್ತದೆ. ಹೀಗಾಗಿ ಬಂಧುವಾಚಕಗಳು ಸಂಸ್ಕೃತಿ ಅಧ್ಯಯನಕ್ಕೆ ಮೌಲಿಕ ಆಕರಗಳಾಗುತ್ತವೆ" (ಎಸ್. ಎಸ್. ಅಂಗಡಿ, ೨೦೦೨, ಪು-೫)

ಸಂಬಂಧವಾಚಕಗಳ ಕುರಿತಾಗಿ ಪಾಶ್ಚಾತ್ಯರು ಶತಮಾನದ ಹಿಂದೆಯೇ ಅಧ್ಯಯನ ನಡೆಸಿದ್ದಾರೆ. ಆದರೆ ನಮ್ಮ ನಾಡಿನಲ್ಲಿ ಈ ಬಗೆಯ ಅಧ್ಯಯನದ ಪರಿಕಲ್ಪನೆ ತೀರ ಇತ್ತೀಚಿನದು. ಸಂಬಂಧವು ಕೌಟುಂಬಿಕವೊ, ಸಾಮಾಜಿಕವೊ ಎಂದು ನಿರ್ಧರಿಸುವಲ್ಲಿ ಸಂಬಂಧವಾಚಕಗಳು ಅತಿ ಮಹತ್ವದ ಪಾತ್ರವಹಿಸುತ್ತವೆ. ಕೌಟುಂಬಿಕ ಸಂಬಂಧ, ವೈವಾಹಿಕ ಸಂಬಂಧ, ಸಾಮಾಜಿಕ ಸಂಬಂಧಗಳಿಗೆ ಅನುಗುಣವಾಗಿ ಸಂಬಂಧವಾಚಕಗಳು ವಾಚ್ಯಗೊಳ್ಳುವಲ್ಲಿಯೇ ವ್ಯಕ್ತಿಯ ಸ್ಥಾನಮಾನಗಳು ಅರಿವಿಗೆ ಬರುತ್ತವೆ.

ವ್ಯಕ್ತಿಯು ಸಮಾಜ ಜೀವಿ. ಬಂಧುಬಳಗವನ್ನು ತೊರೆದು ಏಕಾಂಗಿ ಜೀವನ ನಡೆಸಲು ಸಾಧ್ಯವಿಲ್ಲ. ಬಂಧುತ್ವ ವ್ಯಕ್ತಿಗಳಿಗೆ ಊರುಗೋಲಿದ್ದಂತೆ. ಸಂಬಂಧ ಹುಟ್ಟಿನಿಂದಲೇ ಹುಟ್ಟಿಕೊಳ್ಳುತ್ತದೆ. ಪಾಲಕರ, ಪೋಷಕರ ಸಂಪರ್ಕದಿಂದ ಅದು ವೃದ್ಧಿಯಾಗುತ್ತದೆ. ಕುಟುಂಬದ ಮೂಲ ಉದ್ದೇಶವು ಸಂತಾನೋತ್ಪತ್ತಿ ಕಾರ್ಯ ಮಾತ್ರವಾಗಿರದೆ ಸಂಬಂಧವನ್ನು ನಿಗದಿಪಡಿಸುವುದೂ ಆಗಿದೆ. ಬಂಧುತ್ವವು ವಯಸ್ಸು, ಲಿಂಗ, ಜಾತಿ ಹಾಗೂ ಸಾಮಾಜಿಕ ವರ್ಗಗಳನ್ನು ಅವಲಂಬಿಸಿರುತ್ತದೆ. ವ್ಯಕ್ತಿಯ ವೈವಾಹಿಕ ಸಂಬಂಧವು ಕ್ರಮೇಣ ಸಾಮಾಜಿಕ ಬಂಧುತ್ವದೊಡನೆ ಸಮೀಕರಣಗೊಳ್ಳುತ್ತದೆ.

ದೇಶೀಯ ಸಂಸ್ಕೃತಿಯಲ್ಲಿ ಸಂಬಂಧವಾಚಕಗಳಿಗೆ ಪ್ರತ್ಯೇಕ ಅಸ್ತಿತ್ವವಿದೆ. ಪಾಶ್ಚಾತ್ಯ ಸಮಾಜದಲ್ಲಿ ಹಲವಾರು ಸಂಬಂಧಗಳಿಗೆ ಒಂದೇ ಬಗೆಯ ಸಂಬಂಧವಾಚಕಗಳನ್ನು ಬಳಸುತ್ತಾರೆ. ಉದಾಹರಣೆಗೆ ಬ್ರದರ್, ಅಂಕಲ್, ಸಿಸ್ಟರ್, ಆಂಟಿ ಎಂಬ ಪದಗಳು ಸೂಕ್ಷ್ಮ ಸಂಬಂಧಗಳನ್ನು ಗುರುತಿಸುವಲ್ಲಿ ವಿಫಲವಾಗುತ್ತವೆ. ಆದರೆ ದೇಶಿಯ ಸಂಸ್ಕೃತಿಯಲ್ಲಿ ವಿವಿಧ ಸಂಬಂಧಗಳನ್ನು ಪ್ರತ್ಯೇಕ ಬಂಧುವಾಚಕಗಳ ಮೂಲಕವೇ ಗುರುತಿಸಲಾಗುತ್ತದೆ. ಉದಾಹರಣೆಗೆ ಅಣ್ಣ, ಚಿಕ್ಕಪ್ಪ, ಮಾವ ಎಂಬ

ಬಂಧುವಾಚಕಗಳು ಸಂಬಂಧಗಳನ್ನು ಪ್ರತ್ಯೇಕತೆಯಿಂದಲೇ ಗುರುತಿಸುತ್ತವೆ. ಅಪ್ಪ, ಅಮ್ಮ, ಅಜ್ಜ, ಅಜ್ಜಿ, ಅಣ್ಣ, ತಮ್ಮ, ಅಕ್ಕ, ತಂಗಿ ಹೀಗೆ ಮುಂತಾದ ಬಂಧುವಾಚಕಗಳು ಕೌಟುಂಬಿಕ ಸಂಬಂಧವನ್ನು ಗುರುತಿಸಿದರೆ ಗಂಡ, ಅತ್ತೆ, ಮೈದುನ, ನಾದಿನಿ, ಅಳಿಯ, ಸೊಸೆ ಮುಂತಾದ ಬಂಧುವಾಚಕಗಳು ವೈವಾಹಿಕ ಸಂಬಂಧವನ್ನು ಪ್ರತಿನಿಧಿಸುತ್ತವೆ.

ಅಣ್ಣಾವ್ರ, ಅಪ್ಪಾವ್ರ, ಅಕ್ಕಾವ್ರ, ಅಮ್ಮಾವ್ರ, ತಂಗ್ಯಮ್ಮ, ಅಣ್ಣಯ್ಯ ಹೀಗೆ ಹಲವಾರು ಬಂಧುವಾಚಕಗಳು ವೈವಾಹಿಕ ಹಾಗೂ ಕೌಟುಂಬಿಕ ಸಂಬಂಧವನ್ನು ಮೀರಿ ಸಾರ್ವತ್ರಿಕವಾಗಿ ಬಳಕೆಗೊಳ್ಳುತ್ತವೆ. ಗೆಳೆಯ, ಗೆಳತಿ, ನಲ್ಲ, ನಲ್ಲೆ, ಗುರು, ಶಿಷ್ಯ ಹೀಗೆ ಮುಂತಾದ ಬಂಧುವಾಚಕಗಳು ಸಾಮಾಜಿಕ ಸಂಬಂಧಗಳನ್ನು ಗುರುತಿಸುತ್ತವೆ. ಆತ ನನ್ನ ದೂರದ ಸಂಬಂಧಿ, ಹತ್ತಿರದ ಸಂಬಂಧಿ, ಜಾತಸ್ಥ, ಕುಲಸ್ಥ ಹೀಗೆ ಬಳಕೆಗೊಳ್ಳುವ ಬಂಧುವಾಚಕಗಳ ಮೂಲಕ ಸಂಬಂಧವು ಗೋಚರವಾಗುತ್ತದೆ.

"ಬಂಧುತ್ವವನ್ನು ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ ಇವರ ಮೂಲಕ ನಿರ್ಧರಿಸಿದರೆ ಅದು ರಕ್ತಸಂಬಂಧ. ಉದಾ: ಚಿಕ್ಕಪ್ಪ ತಂದೆಗಿಂತ ಚಿಕ್ಕವ, ಚಿಕ್ಕಮ್ಮ ತಾಯಿಗಿಂತ ಚಿಕ್ಕವಳು ಮುಂತಾದವು. ಇವುಗಳಿಗೆ ಕಳ್ಳುಬಳ್ಳಿ ಎಂದು ಕರೆಯುವರು. ಇವುಗಳನ್ನು ಹೊರತುಪಡಿಸಿ ಸ್ನೇಹಸಂಬಂಧ. ಗುರು-ಶಿಷ್ಯರ ಸಂಬಂಧ, ನಾಡಿನ ಬಗೆಗಿರುವ ಸಂಬಂಧ ಅದರಂತೆ ವೃತ್ತಿಯ ಬಗೆಗೆ, ವಿದ್ಯಾಸಂಸ್ಥೆಯ ಬಗೆಗಿರುವ ಸಂಬಂಧ ಇವು 'ಇತರ ಸಂಬಂಧಗಳ' ವರ್ಗದಲ್ಲಿ ಸಮಾವೇಶಗೊಳ್ಳುತ್ತವೆ. ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ ಇವು ನೇರವಾಗಿ ರಕ್ತಸಂಬಂಧಕ್ಕೆ ಸಂಬಂಧಿಸಿರುವುದರಿಂದ ಇವುಗಳಿಗೆ 'ಪ್ರಾಥಮಿಕ ಸಂಬಂಧವಾಚಕ'ಗಳೆಂದು ಕರೆಯುವರು. ಅತ್ತೆ-ಮಾವ-ಅಳಿಯ, ಭಾವ-ಮೈದುನ, ಚಿಕ್ಕಪ್ಪ-ಚಿಕ್ಕಮ್ಮ ನಾದಿನಿ-ನೆಗೆವೆಣ್ಣೆ ಇಂತಹ ಬಂಧುಸೂಚಕಗಳು ವಿವಾಹದಿಂದ ಇಲ್ಲವೇ ಆಪ್ತತೆಯಿಂದ ಸೃಷ್ಟಿಯಾಗುತ್ತವೆ. ಇವುಗಳಿಗೆ 'ಆನುಷಂಗಿಕ ಸಂಬಂಧವಾಚಕ'ಗಳೆಂದು ಕರೆಯುವರು." (ಎಸ್. ಎಸ್. ಅಂಗಡಿ, ೨೦೦೨, ಪು-೬)

ಹಲವಾರು ಸಂಬಂಧಗಳ ನೆಲೆಯಲ್ಲಿ ರೂಪಿತವಾಗಿರುವ ಸಂಬಂಧವಾಚಕಗಳು ಭಾಷಿಕರು ನಿರ್ವಹಿಸುವ ಸಾಮಾಜಿಕ ಕಾರ್ಯವನ್ನು ನಿರ್ಧರಿಸುತ್ತವೆ. ಸಂಬಂಧಿಗಳ ನಡುವೆ ಉದ್ಭವಿಸುವ ಮನಸ್ತಾಪಗಳನ್ನು ತಪ್ಪಿಸುತ್ತವೆ. ಕುಟುಂಬ ಹಾಗೂ ಸಾಮಾಜಿಕ ವಲಯದ ನೆಮ್ಮದಿಯ ಜೀವನಕ್ಕೆ ಸಹಕರಿಸುತ್ತವೆ. ಸಾಮಾಜಿಕ ಸಂಬಂಧವನ್ನು ಬೆಸೆದು ಸಾಂಸ್ಕೃತಿಕ ಪರಂಪರೆಯನ್ನು ಕಾಪಾಡುವಲ್ಲಿ ಸಂಬಂಧವಾಚಕಗಳು ಮಹತ್ವದ ಪಾತ್ರವಹಿಸುತ್ತವೆ. ಅಂತಹ ಸಂಬಂಧವಾಚಕಗಳನ್ನು ಕೌಟುಂಬಿಕ, ವೈವಾಹಿಕ ಹಾಗೂ ಸಾಮಾಜಿಕ ನೆಲೆಗಳಲ್ಲಿ ವಿಂಗಡಿಸಿ ಈ ಕೆಳಗೆ ನೀಡಲಾಗಿದೆ.

### ೩.೩.೧ ಕೌಟುಂಬಿಕ ನೆಲೆಯಲ್ಲಿ ಸಂಬಂಧವಾಚಕಗಳು

ವ್ಯಕ್ತಿಯ ಹುಟ್ಟು ಕೌಟುಂಬಿಕ ಸಂಬಂಧಗಳನ್ನು ಹೆಣೆಯುತ್ತದೆ. ಹುಟ್ಟಿನೊಂದಿಗೆ ವ್ಯಕ್ತಿಯು ತಮ್ಮ ತಂದೆ–ತಾಯಿಯ ಬಂಧುಗಳೊಂದಿಗೆ ಸಂಬಂಧವನ್ನು ಹೊಂದುತ್ತಾನೆ. ಇಂತಹ ಬಂಧುತ್ವವನ್ನು 'ರಕ್ತಸಂಬಂಧ' ಎಂದು ಕೂಡ ಕರೆಯಲಾಗಿದೆ. ಕೌಟುಂಬಿಕ ಸಂಬಂಧಗಳನ್ನು ಪ್ರತಿನಿಧಿಸುವ ಕೆಲವು ಸಂಬಂಧವಾಚಕಗಳನ್ನು ಇಲ್ಲಿ ಗುರುತಿಸಲಾಗಿದೆ. ಅವುಗಳೆಂದರೆ

| | | |
|---|---|---|
| ತಂದೆ | – | ವ್ಯಕ್ತಿಯ ಜನನಕ್ಕೆ ಕಾರಣಿಕರ್ತೃ, ಅಪ್ಪ |
| ತಾಯಿ | – | ವ್ಯಕ್ತಿಯ ಜನ್ಮದಾತೆ, ಅವ್ವ, ಅಮ್ಮ |
| ಮಗ | – | ತಂದೆ–ತಾಯಿಯಿಂದ ಜನ್ಮ ಪಡೆದವನು |
| ಮಗಳು | – | ತಂದೆ–ತಾಯಿಯಿಂದ ಜನ್ಮ ಪಡೆದವಳು |
| ಅಜ್ಜ | – | ತಂದೆ / ತಾಯಿಯ ತಂದೆ |
| ಅಜ್ಜಿ | – | ತಂದೆ / ತಾಯಿಯ ತಾಯಿ |
| ಮುತ್ತಜ್ಜ | – | ಅಜ್ಜ / ಅಜ್ಜಿಯ ತಂದೆ |
| ಮುತ್ತಜ್ಜಿ | – | ಅಜ್ಜ / ಅಜ್ಜಿಯ ತಾಯಿ |
| ಚಿಕ್ಕಜ್ಜ | – | ಅಜ್ಜ / ಅಜ್ಜಿಯ ಕಿರಿಯ ಸಹೋದರ |
| ಚಿಕ್ಕಜ್ಜಿ | – | ಅಜ್ಜ / ಅಜ್ಜಿಯ ಕಿರಿಯ ಸಹೋದರಿ |
| ದೊಡ್ಡಜ್ಜ | – | ಅಜ್ಜ / ಅಜ್ಜಿಯ ಹಿರಿಯ ಸಹೋದರ |
| ದೊಡ್ಡಜ್ಜಿ | – | ಅಜ್ಜ / ಅಜ್ಜಿಯ ಹಿರಿಯ ಸಹೋದರಿ |
| ದೊಡ್ಡಪ್ಪ | – | ತಂದೆಯ ಹಿರಿಯ ಸಹೋದರ |
| | – | ತಾಯಿಯ ಹಿರಿಯ ಸಹೋದರಿಯ ಗಂಡ |
| ದೊಡ್ಡಮ್ಮ | – | ತಂದೆಯ ಹಿರಿಯ ಸಹೋದರನ ಹೆಂಡತಿ |
| | – | ತಾಯಿಯ ಹಿರಿಯ ಸಹೋದರಿ |
| ಚಿಕ್ಕಪ್ಪ | – | ತಂದೆಯ ಕಿರಿಯ ಸಹೋದರ |
| | – | ತಾಯಿಯ ಕಿರಿಯ ಸಹೋದರಿಯ ಗಂಡ |
| ಚಿಕ್ಕಮ್ಮ | – | ತಂದೆಯ ಕಿರಿಯ ಸಹೋದರನ ಹೆಂಡತಿ |
| | – | ತಾಯಿಯ ಕಿರಿಯ ಸಹೋದರಿ |
| ಅಣ್ಣ | – | ಒಡಹುಟ್ಟಿದ ಹಿರಿಯನು |
| | – | ತಂದೆಯ ಹಿರಿಯ/ಕಿರಿಯ ಸಹೋದರನ ಹಿರಿಯ ಮಗ |
| | – | ತಾಯಿಯ ಹಿರಿಯ / ಕಿರಿಯ ಸಹೋದರಿಯ ಹಿರಿಯ ಮಗ |

| | | |
|---|---|---|
| ತಮ್ಮ | – | ಒಡಹುಟ್ಟಿದ ಕಿರಿಯನು |
| | – | ತಂದೆಯ ಹಿರಿಯ / ಕಿರಿಯ ಸಹೋದರನ ಕಿರಿಯ ಮಗ |
| | – | ತಾಯಿಯ ಹಿರಿಯ/ ಕಿರಿಯ ಸಹೋದರಿಯ ಕಿರಿಯ ಮಗ |
| ಅಕ್ಕ | – | ಒಡಹುಟ್ಟಿದ ಹಿರಿಯಳು, |
| | – | ತಂದೆಯ ಹಿರಿಯ / ಕಿರಿಯ ಸಹೋದರನ ಹಿರಿಯ ಮಗಳು |
| | – | ತಾಯಿಯ ಹಿರಿಯ / ಕಿರಿಯ ಸಹೋದರಿಯ ಹಿರಿಯ ಮಗಳು |
| ತಂಗಿ | – | ಒಡಹುಟ್ಟಿದ ಕಿರಿಯಳು |
| | – | ತಂದೆಯ ಕಿರಿಯ / ಕಿರಿಯ ಸಹೋದರನ ಕಿರಿಯ ಮಗಳು |
| | – | ತಾಯಿಯ ಹಿರಿಯ / ಕಿರಿಯ ಸಹೋದರಿಯ ಕಿರಿಯ ಮಗಳು |
| ಮೊಮ್ಮಕ್ಕಳು | – | ಮಗ / ಮಗಳ ಮಕ್ಕಳು |
| ಮರಿಮೊಮ್ಮಕ್ಕಳು | – | ಮೊಮ್ಮಗ / ಮೊಮ್ಮಗಳ ಮಕ್ಕಳು |
| ಸೋದರತ್ತೆ | – | ತಂದೆಯ ಹಿರಿಯ / ಕಿರಿಯ ಸಹೋದರಿಯರು |
| ಸೋದರಮಾವ | – | ತಾಯಿಯ ಹಿರಿಯ / ಕಿರಿಯ ಸಹೋದರರು |
| ಸೋದರಳಿಯ | – | ತಂದೆಯ ಹಿರಿಯ / ಕಿರಿಯ ಸಹೋದರಿಯರ ಗಂಡುಮಕ್ಕಳು |
| | – | ತಾಯಿಯ ಹಿರಿಯ / ಕಿರಿಯ ಸಹೋದರರ ಗಂಡುಮಕ್ಕಳು |
| ಸೋದರಸೊಸೆ | – | ತಂದೆಯ ಹಿರಿಯ / ಕಿರಿಯ ಸಹೋದರಿಯರ ಹೆಣ್ಣುಮಕ್ಕಳು |
| | – | ತಾಯಿಯ ಹಿರಿಯ / ಕಿರಿಯ ಸಹೋದರರ ಹೆಣ್ಣುಮಕ್ಕಳು |



### ೩.೩.೨ ವೈವಾಹಿಕ ನೆಲೆಯಲ್ಲಿ ಸಂಬಂಧವಾಚಕಗಳು

ವಿವಾಹವು ಗಂಡ-ಹೆಂಡತಿಯ ಸಂಬಂಧವನ್ನು ಗುರುತಿಸಿ ಸಾಮಾಜಿಕ ಸ್ಥಾನಮಾನ ಒದಗಿಸುತ್ತದೆ. ಇದರೊಂದಿಗೆ ಗಂಡು-ಹೆಣ್ಣಿನ ನಡುವೆ ಹಲವಾರು ಸಂಬಂಧಗಳು ರೂಪುಗೊಳ್ಳುವಂತೆ ಮಾಡುತ್ತದೆ. ಗಂಡನ ಬಂಧುಗಳಿಂದ ಹೆಂಡತಿಗೆ, ಹೆಂಡತಿಯ ಬಂಧುಗಳಿಂದ ಗಂಡನಿಗೆ ಸಂಬಂಧಗಳು ಬೆಸೆದುಕೊಳ್ಳುತ್ತವೆ. ವಿವಾಹದಿಂದಲೂ ಸಂಬಂಧಗಳು ಏರ್ಪಡುವುದರಿಂದ ಅನೇಕ ಸಂಬಂಧವಾಚಕಗಳನ್ನು ಇಲ್ಲಿ ಗುರುತಿಸಲಾಗಿದೆ. ಅವುಗಳೆಂದರೆ

| | | |
|---|---|---|
| ಗಂಡ | – | ವಿವಾಹವಾದವನು, ಪತಿ |
| ಹೆಂಡತಿ | – | ವಿವಾಹವಾದವಳು, ಪತ್ನಿ |
| ಮಾವ | – | ಗಂಡ / ಹೆಂಡತಿಯ ತಂದೆ |
| ಅತ್ತೆ | – | ಗಂಡ / ಹೆಂಡತಿಯ ತಾಯಿ |

ದೊಡ್ಡಮಾವ – ಮಾವನ ಹಿರಿಯ ಸಹೋದರ

ದೊಡ್ಡತ್ತೆ – ಅತ್ತೆಯ ಹಿರಿಯ ಸಹೋದರಿ

ಚಿಕ್ಕಮಾವ – ಮಾವನ ಕಿರಿಯ ಸಹೋದರ

ಚಿಕ್ಕತ್ತೆ – ಅತ್ತೆಯ ಕಿರಿಯ ಸಹೋದರಿ

ಭಾವ – ಗಂಡ / ಹೆಂಡತಿಯ ಹಿರಿಯ ಸಹೋದರ

ಮೈದುನ – ಗಂಡ / ಹೆಂಡತಿಯ ಕಿರಿಯ ಸಹೋದರ

ಅತ್ತಿಗೆ – ಗಂಡ / ಹೆಂಡತಿಯ ಹಿರಿಯ ಸಹೋದರ

ನಾದಿನಿ – ಗಂಡ / ಹೆಂಡತಿಯ ಕಿರಿಯ ಸಹೋದರಿ

ಅಳಿಯ – ಮಗಳ ಗಂಡ

ಸೊಸೆ – ಮಗನ ಹೆಂಡತಿ

ಓರಗಿತ್ತಿ – ಗಂಡನ ಹಿರಿಯ / ಕಿರಿಯ ಸಹೋದರರ ಹೆಂಡತಿಯರು

ಶಡ್ಡುಕ – ಹೆಂಡತಿಯ ಹಿರಿಯ / ಕಿರಿಯ ಸಹೋದರಿಯರ ಗಂಡಂದಿರು

ಗಂಡನ ಸಹೋದರರ ಹೆಂಡತಿಯರಿಗಾಗಿ ಹಾಗೂ ಹೆಂಡತಿಯ ಸಹೋದರಿಯರ ಗಂಡಂದಿರರಿಗಾಗಿ ಸಮನಾಂತರ ಸಂಬಂಧವಾಚಕಗಳ ಬಳಕೆ ರೂಢಿಯಲ್ಲಿದೆ. ಅಂದರೆ ಸಹೋದರರಿಬ್ಬರ ಹೆಂಡತಿಯರು ಪರಸ್ಪರ ಅಕ್ಕ-ತಂಗಿಯರೆಂದು, ಸಹೋದರಿಯರಿಬ್ಬರ ಗಂಡಂದಿರು ಪರಸ್ಪರ ಅಣ್ಣ-ತಮ್ಮರೆಂದು ಸೂಚಿಸುತ್ತಾರೆ. ಆದರೆ ಯಾರಾದರೂ ಕೇಳಿದಾಗ ಮಾತ್ರ 'ಓರಗಿತ್ತಿ ಮತ್ತು ಶಡ್ಡುಕ'ರೆಂದು ತಮ್ಮ ಸಂಬಂಧವನ್ನು ಹೇಳುತ್ತಾರೆ. ಅಂತೆಯೇ ಗಂಡನ ಸಹೋದರರ ಮಕ್ಕಳು ತನಗೂ ಮಕ್ಕಳೇ ಹೆಂಡತಿಯ ಸಹೋದರಿಯರ ಮಕ್ಕಳು ತನಗೂ ಮಕ್ಕಳಾಗುತ್ತಾರೆ. ಇವೆಲ್ಲ ವಿವಾಹದ ಮೂಲಕ ಏರ್ಪಡುತ್ತವೆ.

**೩.೩.೩ ಸಾಮಾಜಿಕ ನೆಲೆಯಲ್ಲಿ ಸಂಬಂಧವಾಚಕಗಳು**

ಸಾಮಾಜಿಕವಾಗಿ ಮನುಷ್ಯ ತನ್ನನ್ನು ಕೇವಲ ತನ್ನ ಹೆಸರಿನಿಂದ ಮಾತ್ರ ಗುರುತಿಸಿಕೊಳ್ಳುವುದಿಲ್ಲ. ಹುಟ್ಟು, ವಿವಾಹ, ಹೆಸರು ಕೇವಲ ನೆಪವಷ್ಟೇ ಎಂಬುದನ್ನು ಕೆಲವು ಸಾಮಾಜಿಕ ಸಂಬಂಧಗಳು ನಿರೂಪಿಸಿವೆ. ರಕ್ತಸಂಬಂಧವನ್ನು, ವಿವಾಹ ಸಂಬಂಧಗಳನ್ನು ಮೀರಿಸುವ ಬಾಂಧವ್ಯಗಳನ್ನು ಸಾಮಾಜಿಕವಾಗಿ ಕಾಣುತ್ತೇವೆ. ಭಾವನಾತ್ಮಕವಾಗಿ ಅರ್ಥೈಸಿಕೊಂಡು ವ್ಯವಹರಿಸುವ ಜನಪದರ ನಡುವೆ ಬಾಂಧವ್ಯ ಸಾರ್ವತ್ರಿಕವಾಗಿ ನಿರಂತರವಾಗಿರುತ್ತದೆ. ಒಂದೇ ಊರಿನ ಜನರು ಪರಸ್ಪರ ಒಡನಾಡುವಾಗ ಬಳಸುವ ಪದಗಳು ಜನರ ಬಾಂಧವ್ಯವನ್ನು ಹೆಚ್ಚಿಸುತ್ತದೆ. ಜಗತ್ತಿನೆಲ್ಲೆಡೆ ಪರಿಚಿತರಷ್ಟೇ ಸಂಬಂಧಗಳಾಗುವುದಿಲ್ಲ. ಅಪರಿಚಿತ ವ್ಯಕ್ತಿಯಿಂದಲೂ ಬಾಂಧವ್ಯ ಒಡಮೂಡುತ್ತದೆ.

ಜನರು ದಿನನಿತ್ಯ ಊರು, ಕೇರಿ, ವೃತ್ತಿ, ವ್ಯವಹಾರ, ಶಾಲೆ ಸಂಸ್ಥೆ, ವ್ಯವಸ್ಥೆ, ಕಲೆ, ಕ್ರೀಡೆ, ಬೋಧನೆ ಹೀಗೆ ಮುಂತಾದ ಸನ್ನಿವೇಶಗಳಲ್ಲಿ ಸಂಬಂಧವಾಚಕಗಳನ್ನು ಬಳಸುವುದರ ಮೂಲಕ ತಮಗೆ ಅರಿವಿಲ್ಲದಂತೆಯೇ ಸಂಬಂಧಿಗಳಾಗುತ್ತಿದ್ದಾರೆ. ಅಂತಹ ಕೆಲವು ಸಂಬಂಧಸೂಚಕಗಳನ್ನು ಈ ಕೆಳಗೆ ಪಟ್ಟಿ ಮಾಡಿದೆ.

- ಊರು–ಕೇರಿಯಲ್ಲಿ ಬಳಸುವ ಸಂಬಂಧವಾಚಕಗಳು – ಅಜ್ಜಾರ, ಅಮ್ಮಾರ, ಅಣ್ಣಾರ, ಅಪ್ಪಾರ, ಅವ್ವಾರ, ಅಕ್ಕಾರ, ಅಣ್ಣಾವ್ರೆ, ಅಪ್ಪಾವ್ರೆ, ಅಮ್ಮಾವ್ರೆ, ಅಕ್ಕಾವ್ರೆ, ತಂಗ್ಯವ್ವ, ತಂಗ್ಯಮ್ಮ, ಅಣ್ಣಾರ, ಅಣ್ಣಯ್ಯ ಇತ್ಯಾದಿ
- ವೃತ್ತಿಯಲ್ಲಿ ಬಳಸುವ ಸಂಬಂಧವಾಚಕಗಳು – ಬಣಜಿಗ, ಒಕ್ಕಲಿಗ, ಕುರುಬ, ಕುಂಬಾರ, ಕಮ್ಮಾರ, ಬಡಿಗ, ಕ್ಷೌರಿಕ, ಪೂಜಾರಿ, ಆಚಾರಿ, ಮಡಿವಾಳ, ಸಂಪಾದಕ, ಶಿಕ್ಷಕ, ವಿದ್ಯಾರ್ಥಿ, ಅಭಿಯಂತರು, ನೇಕಾರ, ಚಮ್ಮಾರ, ವೈದ್ಯ, ಚಾಲಕ ಇತ್ಯಾದಿ
- ಗೌರವ ಸಂಬೋಧನೆಗಳಲ್ಲಿ ಬಳಸುವ ಸಂಬಂಧವಾಚಕಗಳು – ಅಜ್ಜಾರ, ಅಣ್ಣಾರ, ಅಪ್ಪಾರ, ಯಜಮಾನ್ರೆ, ಗುರುಗಳೇ, ಅಯ್ನೋರೇ, ಸಾಹುಕಾರ್ರೇ, ಪಟೇಲ್ರೇ, ಶಾನುಭೋಗರೆ ಇತ್ಯಾದಿ
- ಸಂಘ–ಸಂಸ್ಥೆಗಳಲ್ಲಿ ಬಳಸುವ ಸಂಬಂಧವಾಚಕಗಳು – ಅಧ್ಯಕ್ಷರೇ, ಉಪಾಧ್ಯಕ್ಷರೇ, ಕೋಶಾಧ್ಯಕ್ಷರೇ, ಸದಸ್ಯರೇ, ಕಾರ್ಯದರ್ಶಿಗಳೇ, ಸಹಕಾರ್ಯದರ್ಶಿಗಳೇ, ಖಜಾಂಚಿಗಳೇ, ಸಂಯೋಜಕರೆ ಇತ್ಯಾದಿ
- ಸಹಜೀವನದಲ್ಲಿ ಬಳಸುವ ಸಂಬಂಧವಾಚಕಗಳು – ಸಹಪಾಠಿಗಳು, ಸಹೋದ್ಯೋಗಿಗಳು, ಸಹಚರರು, ಸಹೃದಯರು, ಸಹನಟರು, ಸಹಗಾಯಕರು ಇತ್ಯಾದಿ
- ಉದ್ಯೋಗ ಸ್ಥಳದಲ್ಲಿ ಬಳಸುವ ಸಂಬಂಧವಾಚಕಗಳು – ಉದಾಹರಣೆಗೆ ಒಂದು ಗ್ರಾಮ ಪಂಚಾಯತ್‌ನಲ್ಲಿ ಬಳಸುವ ಸಂಬಂಧವಾಚಕಗಳೆಂದರೆ ಅಧ್ಯಕ್ಷ, ಉಪಾಧ್ಯಕ್ಷ, ಸದಸ್ಯರು, ಗ್ರಾಮ ಪಂಚಾಯತ್‌ನ ಅಧಿಕಾರಿ, ಗ್ರಾಮ ಪಂಚಾಯತ್‌ನ ಕಾರ್ಯದರ್ಶಿ, ಗ್ರಾಮ ಪಂಚಾಯತ್‌ನ ಲೆಕ್ಕಿಗ, ಜವಾನರು, ಗ್ರಾಮ ಸೇವಕರು ಇತ್ಯಾದಿ
- ಶಿಕ್ಷಣ ಸಂಸ್ಥೆಯೊಂದರಲ್ಲಿ ಬಳಸುವ ಸಂಬಂಧವಾಚಕಗಳು – ಪ್ರಾಂಶುಪಾಲರು, ಮುಖ್ಯೋಪಾಧ್ಯಾಯ, ಶಿಕ್ಷಕ, ವಿದ್ಯಾರ್ಥಿ, ಜವಾನ, ಗುಮಾಸ್ತ ಇತ್ಯಾದಿ

- ಭಾವುಕ ಬಾಂಧವ್ಯಗಳಲ್ಲಿ ಬಳಸುವ ಸಂಬಂಧವಾಚಕಗಳು – ನಲ್ಲ–ನಲ್ಲೆಯರು, ಗೆಳೆಯ–ಗೆಳತಿಯರು, ಗುರು–ಶಿಷ್ಯರು, ಆತ್ಮೀಯರು, ಗಳಸ್ಯ–ಕಂಠಸ್ಯರು ಇತ್ಯಾದಿ.

### ೩.೩.೪ ಅಲಕ್ಷಿತ ಸಂಬಂಧವಾಚಕಗಳು

ಪ್ರತಿಯೊಂದು ಸಂಬಂಧವಾಚಕದ ಬಳಕೆಯ ಹಿಂದೆಯೂ ವಿಭಿನ್ನ ಬಗೆಯ ಸಂಬಂಧವನ್ನು ಗುರುತಿಸಬಹುದಾಗಿದೆ. ಸಂಬಂಧದ ಹಿಂದಿನ ತುಡಿತ, ಮಿಡಿತ, ಸೆಳೆತಗಳು ಬಂಧುಗಳ ಮೂಲಕ ಬಹಿರಂಗಗೊಳ್ಳುತ್ತವೆ. ಕೌಟುಂಬಿಕ ಸಂಬಂಧಗಳನ್ನು ಸೂಚಿಸುವ ಇತರ ಯಾವುದೇ ಬಂಧುವಾಚಕಗಳನ್ನು ಗಮನಿಸಿದರೂ ಸಹಸಂಬಂಧದ ಆಳಅಗಲವನ್ನು ತಿಳಿಯಪಡಿಸುತ್ತವೆ. ಎರಡನೆಯ ಹೆಂಡತಿಗೆ 'ಸವತಿ' ಎಂದು ಸಂಬೋಧಿಸುವ ಸಮಾಜವು ಎರಡನೆಯ ಗಂಡನಿಗೆ ಪ್ರತ್ಯೇಕ ಬಂಧುವಾಚಕವನ್ನು ಬಳಸಿಲ್ಲ. ಬಹುಶಃ ಪುರುಷಪ್ರಧಾನ ಸಮಾಜವು ಸ್ತ್ರೀಯರ ಬಗೆಗೆ ಹೊಂದಿದ ಕೀಳರಿಮೆ ಕಾರಣವಾಗಿರಬಹುದು. ಜನಪದರಲ್ಲಿ ವಿಧವೆ, ಬಂಜೆ, ಸವತಿ, ಮಲತಾಯಿ, ಮಲಮಕ್ಕಳು ಮತ್ತಿತರ ಸಂಬಂಧಗಳು ಅಲಕ್ಷ್ಯಕ್ಕೊಳಪಟ್ಟಿವೆ. ಕುಟುಂಬ ಮತ್ತು ವಿವಾಹದಲ್ಲಿ ಅಲಕ್ಷಿತ ಸಂಬಂಧಗಳನ್ನು ಇತರೆ ಸಂಬಂಧವಾಚಕಗಳಲ್ಲಿ ಅಧ್ಯಯನಕ್ಕೆ ಪೂರಕವಾಗುವಂತೆ ಗುರುತಿಸಲಾಗಿದೆ.

### ೩.೪ ಜನಪದರಲ್ಲಿ ಸಂಬಂಧಗಳ ಸ್ವರೂಪ

ಮನುಷ್ಯನ ಸಂಬಂಧದ ನೆಲೆಗಳು ವಿಭಿನ್ನವಾಗಿವೆ. ತಂದೆ–ತಾಯಿ, ಅಣ್ಣ–ತಮ್ಮ, ಅಕ್ಕ–ತಂಗಿ, ಚಿಕ್ಕಪ್ಪ–ದೊಡ್ಡಪ್ಪ, ಚಿಕ್ಕಮ್ಮ–ದೊಡ್ಡಮ್ಮ, ಮೊದಲಾದವರ ಬಂಧು–ಬಾಂಧವರ ನಡುವೆ ಜೀವನ ಮಾಡಬೇಕಾಗುತ್ತದೆ. ಎಲ್ಲ ಸಂಬಂಧಗಳು ಅಪಾರ ವೇದನೆಯನ್ನುಂಟು ಮಾಡುತ್ತವೆ. ಹಾಗೆಯೇ ಸಂತೋಷವನ್ನೂ ಉಂಟುಮಾಡುತ್ತವೆ. ಜನಪದರು ಸಂಬಂಧದ ಸುಖ–ದುಃಖಗಳನ್ನು ಚೆನ್ನಾಗಿ ಬಲ್ಲವರು. ಸಂಬಂಧದ ನಡುವೆಯೇ ಬದುಕಿನ ಅರ್ಥವನ್ನು ಹುಡುಕಲು ಪ್ರಯತ್ನಿಸಿದವರು. ಜನಪದರ ಅಭಿವ್ಯಕ್ತಿಯಲ್ಲಿ ಶತ–ಶತಮಾನಗಳ ಅನುಭವವಿದೆ. ನಿಜವಾದ ಬದುಕಿನ ಹುಡುಕಾಟವಿದೆ. ಸಂಬಂಧಗಳ ಸಂಕೀರ್ಣತೆ ಇದೆ. "ಪರಸ್ಪರ ಸಂಬಂಧ, ನಡವಳಿಕೆಯ ದೃಷ್ಟಿಯಿಂದ ಗಮನಿಸಿದಾಗ ವ್ಯಕ್ತಿ–ವ್ಯಕ್ತಿಗಳ ನಡುವೆ ವಯಸ್ಸು, ಲಿಂಗಭೇದ ಮತ್ತು ಸಂಬಂಧದ ಅಂಶಗಳ ಆಧಾರಿತ ಅಧಿಕಾರ–ಅಧೀನತೆಯ ನಡವಳಿಕೆಯನ್ನು ಕಾಣಬಹುದು. ಅಂತೆಯೇ ವಯಸ್ಸಿನ ಅಂಶದ ಮೇಲೆ ಹಿರಿಯ ಕಿರಿಯ, ಲಿಂಗಭೇದದ ಅಂಶದ ಮೇಲೆ ಗಂಡಸು–ಹೆಂಗಸು ಸಹೋದರ–ಸಹೋದರಿ ಮತ್ತು ಪರಸ್ಪರ ಸಂಬಂಧದ ಅಂಶದ ಮೇಲೆ ತಂದೆ–ತಾಯಿ–ಮಕ್ಕಳು, ಗಂಡ–ಹೆಂಡತಿ, ಅಣ್ಣ–ತಮ್ಮ–ತಂಗಿ–ಅಕ್ಕ, ಅತ್ತೆ–ಸೊಸೆ, ಮಾವ–ಸೊಸೆ ಇತ್ಯಾದಿ ಸದಸ್ಯರುಗಳ ನಡವಳಿಕೆಯಲ್ಲಿ ಅಧಿಕಾರ ಮತ್ತು ಅಧೀನತೆಯನ್ನು ಕಾಣಬಹುದು" (ಎಸ್. ರಾಜಶೇಖರ್, ೧೯೯೦, ಪು–೧೨೨)

ಮಾನವ ಸಂಬಂಧಗಳಲ್ಲಿ ಅತಿ ಶ್ರೇಷ್ಠವಾದ ಸಂಬಂಧವೆಂದರೆ ತಂದೆ-ತಾಯಿಗಳದು. ತಂದೆ-ತಾಯಿಯ ಅಂಶದಿಂದ ಜನಿಸಿದ 'ಮಗು' ಅವರ ರೂಪ, ಗುಣ, ಸ್ವಭಾವಗಳನ್ನು ಪಡೆಯುತ್ತದೆ. ಮಗು ಜನಿಸಿದ ನಂತರ ಹೆತ್ತವರೆಂಬ ಬಾಂಧವ್ಯ ಉಂಟಾಗುತ್ತದೆ. ಒಂದು ವೇಳೆ ಈ ಮಗು ಜನಿಸಿದ ನಂತರ ಮಕ್ಕಳು ಜನಿಸಿದರೆ, ತಂಗಿ-ತಮ್ಮರೆಂದು ಮೊದಲೇ ಜನಿಸಿದ್ದರೆ, ಅಣ್ಣ-ಅಕ್ಕಳೆಂದು ಸಂಬೋಧಿಸುವ ಸಂಬಂಧ ಉಂಟಾಗುವುದು. ತಂದೆ-ತಾಯಿಯ ತಂದೆ ಅಜ್ಜನಾದರೆ, ತಂದೆ-ತಾಯಿಯ ತಾಯಿ ಅಜ್ಜಿ ಎನಿಸುವಳು. ತಂದೆ ಸಹೋದರರು ದೊಡ್ಡಪ್ಪ-ಚಿಕ್ಕಪ್ಪಂದಿರಾದರೆ, ಅವರ ಪತ್ನಿಯರು ದೊಡ್ಡಮ್ಮ-ಚಿಕ್ಕಮ್ಮ ಎನಿಸುವರು. ಸಹೋದರರು ಮಾವಂದಿರಾದರೆ, ಮಾವಂದಿರ ಪತ್ನಿಯರು ಅತ್ತೆಯರಾಗುವರು. ಗಂಡನ ತಂಗಿ, ಹೆಂಡತಿಯ ತಂಗಿಯು ನಾದಿನಿ, ಎನಿಸಿದರೆ ಗಂಡನ ಅಣ್ಣನ ಹೆಂಡತಿ ನೆಗೆಣ್ಣಿಯೆನಿಸುವಳು. ಗಂಡನ ಸಹೋದರರು ಭಾವ-ಮೈದುನರಾಗುವರು. ಇವೆಲ್ಲವೂ ಉಂಟಾಗಬೇಕಾದರೆ ಒಂದು ಗಂಡು ಒಂದು ಹೆಣ್ಣು ಗಂಡ-ಹೆಂಡತಿಯಾಗಿ ಬದುಕು ನಡೆಸಿದಾಗ ಮಾತ್ರ. ಮದುವೆಯಿಂದ ಅಪರಿಚಿತರಿಬ್ಬರು ರಕ್ತಸಂಬಂಧಿಗಳಾಗುತ್ತಾರೆ. ಹೀಗೆಯೇ ಜನಪದರಲ್ಲಿಯೂ ಸಂಬಂಧಗಳ ವೈವಿಧ್ಯತೆಯಯನ್ನು ಕಾಣುತ್ತೇವೆ. ಎಲ್ಲ ರೀತಿಯ ಸಂಬಂಧಗಳನ್ನು ಗೌರವಪೂರ್ವಕವಾಗಿ ಬಳಸಿಕೊಳ್ಳಬೇಕಾದರೆ ಪರಸ್ಪರರಲ್ಲಿ ಸಹನೆ, ಶಾಂತಿ, ವಿವೇಕ, ನಂಬಿಕೆ, ಪ್ರಾಮಾಣಿಕತೆ, ಸೇವಾಭಾವನೆ, ಸತ್ಯ, ಪ್ರೇಮ, ಅಹಿಂಸೆ, ವಾತ್ಸಲ್ಯ ಸಹೋದರತೆ, ಸಹಕಾರ, ಸಮಾಧಾನ ಮುಂತಾದ ಗುಣಗಳನ್ನು ಹೊಂದಿ ವಿನಿಮಯ ಮಾಡಿಕೊಳ್ಳಬೇಕಾಗುತ್ತದೆ. ಇತರರ ಕೆಡುಕನ್ನು ಬಯಸುವವ, ಇನ್ನೊಬ್ಬರಿಗೆ ತೊಂದರೆ ಕೊಡುವ ವ್ಯಕ್ತಿಯನ್ನು ಯಾರೂ ಪ್ರೀತಿಯಿಂದ ನೋಡಲಾರರು. ಅವನು ಎಷ್ಟೇ ಹತ್ತಿರದಲ್ಲಿದ್ದರು ಸಂಬಂಧವಿಲ್ಲದಂತಾಗುವುದು. ಸಕಲರ ಒಳಿತನ್ನು ಯಾರು ಬಯಸುತ್ತಾರೋ ಅವರು ಇತರರ ಒಲಮೆಗೂ ಪಾತ್ರರಾಗುತ್ತಾರೆ.

ಪ್ರೀತಿ-ಪ್ರೇಮವೇ ಕುಟುಂಬದ ಜೀವಾಳ. ಗಂಡ-ಹೆಂಡಿರ ಅನ್ಯೂನ್ಯ ಪ್ರೀತಿ ಸದಾಕಾಲ ಅವರನ್ನು ಬಾಳುವಂತೆ ಮಾಡುತ್ತದೆ. ಇದನ್ನೇ ವರಕವಿ ದ.ರಾ.ಬೇಂದ್ರೆ ತಮ್ಮ ಸರಳ ಸುಂದರ ಸಾಲುಗಳಲ್ಲಿ ಹೀಗೆ ಹೇಳುತ್ತಾರೆ. 'ನಾನು ಬಡವಿ, ಆತ ಬಡವ, ಒಲವೆ ನಮ್ಮ ಬದುಕು ಬಳಸಿಕೊಂಡೆವು ಅದನು ಅದಕು ಇದಕು ಎದಕು' ಸಂಸಾರವು ಸಸಾರವಾಗಿ ಸಾಗುವುದು ಈ ಒಲವಿನಿಂದಲೇ. ವರಕವಿ ಹೇಳುವಂತೆ ಒಲವು ಅಂದರೆ ಪ್ರೀತಿ-ಪ್ರೇಮ ಎಲ್ಲದಕ್ಕೂ ಉಪಯೋಗಕ್ಕೆ ಬರುತ್ತದೆ; ಎಲ್ಲ ಸಮಸ್ಯೆಗೂ ಪರಿಹಾರವಾಗುತ್ತದೆ; ಎಂಥ ಕಷ್ಟ ಪರಿಸ್ಥಿತಿಯಲ್ಲೂ ಸಂಸಾರವನ್ನು ಸುಸೂತ್ರವಾಗಿ ನಡೆಸುತ್ತದೆ. ಇದೇ ಸಂಸಾರದ ಸಾರಸತ್ವವಾಗಿದೆ.

ಕುಟುಂಬದ ಸಾಮರಸ್ಯವನ್ನು ಕಾಪಾಡುವಲ್ಲಿ ಮಕ್ಕಳಿಗಿಂತ ಹಿರಿಯರ ಪಾತ್ರವೇ ಅತ್ಯಂತ ಗುರುತರವಾದದ್ದು. ಅವರು ಸಹನಾಮೂರ್ತಿಗಳಾಗಿರಬೇಕು. ಮಕ್ಕಳ ಮೇಲೆ ಅನುಕಂಪವಿರಬೇಕು. ಎಂಥ ಸಂದರ್ಭದಲ್ಲಿಯೂ ಮಾನಸಿಕ ಸ್ಥಿಮಿತತೆಯನ್ನು ಕಳೆದುಕೊಂಡು ಮಕ್ಕಳ ಎದುರಿಗೆ

ಅನುಚಿತವಾಗಿ ವರ್ತಿಸಬಾರದು. ಎಲ್ಲಕ್ಕಿಂತ ಮಿಗಿಲಾಗಿ ವಾತ್ಸಲ್ಯಪೂರ್ಣರಾಗಿ ಇರಬೇಕು. ಹೀಗೆ ಹಲವಾರು ಮೌಲ್ಯಗಳನ್ನು ಜನಪದರು ತಾವೇ ಅಳವಡಿಸಿಕೊಂಡು ಕಿರಿಯರಿಗೆ ಹಿರಿಯರು ಆದರ್ಶರೆನಿಸಿದ್ದಾರೆ. ತಂದೆ-ತಾಯಿಯರು ತೋರುವ ವಾತ್ಸಲ್ಯಕ್ಕೆ ಮಕ್ಕಳು ಅವರಿಗೆ ಗೌರವಾದರಗಳನ್ನು ನೀಡುತ್ತಾರೆಂಬುದು ಜನಪದರ ನಂಬಿಕೆ.

ಜನಪದ ಗೀತೆಗಳಲ್ಲಿ ಕಂಡುಬರುವ ಅಕ್ಕನ ಕಕ್ಕುಲತೆಯು ತಮ್ಮ-ತಂಗಿಯರ ಮೇಲೆ ಬಹಳ. ಬೀಸುವಾಗಲಿ, ಕುಟ್ಟುವಾಗಲಿ ಅವರನ್ನು ನೆನಪಿಸಿ ಹಾಡದೆ ಬೀಸುವ ಕಡೆಯ ಮುಕ್ಕೂ, ಕುಟ್ಟುವ ಕಡೆಯೊಬ್ಬಿಯೂ ಕೊನೆಗೊಳ್ಳುವುದಿಲ್ಲವೆಂದು ತೋರುತ್ತದೆ. ಅಕ್ಕನು ಗಂಡನ ಮನೆಯಲ್ಲಿದ್ದರೆ ತಮ್ಮ-ತಂಗಿಯರೊಡನೆ ಆಡಿ ಬೆಳೆದ ಅವಳ ಜೀವನವು ಅವರನ್ನು ಮೇಲಿಂದ ಮೇಲೆ ನೆನೆಯುವುದು. ಅವಳಿಗೆ ಸಮಯ ಸಿಕ್ಕರೆ ಆನಂದ ತುಂಬಿ ತಮ್ಮನ ಗುಣಗಾನ ಮಾಡಿ ಹಾಡುತ್ತಾಳೆ. ತಂಗಿಯ ರೂಪ ಲಾವಣ್ಯವನ್ನು ಬಣ್ಣಿಸುತ್ತಾಳೆ. ಈ ಬಣ್ಣನೆಯ ಹಾಡುಗಳು ಬಾಂಧವ್ಯದ ಬಲವನ್ನು ತೋರಿಸುವುದಲ್ಲದೇ, ಕೌಟುಂಬಿಕ ಜೀವನದ ಒಗ್ಗಟ್ಟನ್ನು ಸೂಚಿಸುವವು.

ಜನಪದರ ಬದುಕಿನಲ್ಲಿ ದೇವರು ಸಾಕಾರ ರೂಪ. ದೇವರಿಗೆ ಮಾನವ ಗುಣಗಳನ್ನು ಆರೋಪಿಸಿ ಆರಾಧಿಸುವ ಅಪರೂಪದ ಸಂಬಂಧ ಜನಪದರರದು. ತಮ್ಮವರೊಂದಿಗೆ ಸಲುಗೆಯಿಂದ ಇರುವಂತೆ ದೇವರೊಂದಿಗೂ ಸಲುಗೆಯಿಂದ ವರ್ತಿಸುತ್ತಾರೆ. ಹೊಳೆಯಂಚಿನಲ್ಲಿ ನೆಲೆಸಿರುವ ದೇವರಿಗೆ ಕಲ್ಲು ತಗುಲೀತು, ಮರಳು ಒತ್ತಿತ್ತೆಂದು ಕನಿಕರಪಡುವ ಮನಸ್ಸು ಜನಪದರದ್ದು. ತಮ್ಮಂತೆಯೇ ದೇವರಿಗೆ ಸೂರು ಬೇಕೆಂದು ಗುಡಿ ಕಟ್ಟಿದ್ದಾರೆ. ದೇವರಿಗೆ ಮನುಷ್ಯರಂತೆಯೇ ಮದುವೆ ಮಾಡಿದ್ದುಂಟು. ಸಂಸಾರವನ್ನು ಗುರುತಿಸಿದ್ದುಂಟೂ. ಹೀಗೆ ದೇವರು ಮತ್ತು ಜನಪದರ ಬಾಂಧವ್ಯ ಬಿಂಬಿಸುವ ಜನಪದ ಗೀತೆಗಳು ಹೇರಳವಾಗಿ ಅಭಿವ್ಯಕ್ತಗೊಂಡಿವೆ.

ಜನಪದರ ಸಾಮಾಜಿಕ ಬದುಕಿನಲ್ಲಿ ಮೌಲ್ಯಗಳು ಹೆಚ್ಚಿನ ಮಾನ್ಯತೆಯನ್ನು ಪಡೆದಿವೆ. ಪ್ರಾಣಕ್ಕಿಂತ ಮಾನಕ್ಕಾಗಿ ಬದುಕಬೇಕೆಂಬುದು ಜನಪದರ ಭಾವನೆ. ವೈಯಕ್ತಿಕ ಬದುಕಿಗಿಂತ ಸಮಾಜ ಒಪ್ಪುವಂತೆ ಬದುಕಬೇಕೆಂಬುದು ಜನಪದರ ಅಪೇಕ್ಷೆ. ಆ ನಿಟ್ಟಿನಲ್ಲಿ ಸಂಬಂಧಗಳನ್ನು ಗಟ್ಟಿಗೊಳಿಸುವಲ್ಲಿ ಸಾಮೂಹಿಕ ಮೌಲ್ಯಗಳನ್ನು ಒಪ್ಪಿಕೊಂಡು ಅವುಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡಿದ್ದಾರೆ. ಜನಪದರು ಹಿಂದಿನಿಂದಿಲೂ ಪಾಲಿಸಿಕೊಂಡು ಬಂದ ಮೌಲ್ಯಗಳು ಅವರ ಸಾಮಾಜಿಕ ಬದುಕನ್ನು ಸುಗಮಗೊಳಿಸಿ ಶಾಂತಿ, ನೆಮ್ಮದಿಯಿಂದ ಜೀವನ ಮಾಡಲು ಅನುಕೂಲಕಾರಿಯಾಗಿವೆ. ಪ್ರಸ್ತುತ ಆಧುನಿಕ ಯುಗದಲ್ಲಿಯೂ ಅವುಗಳನ್ನು ಅಳವಡಿಸಿಕೊಂಡರೆ ಸಮಾಜದಲ್ಲಿ ಉತ್ತಮ ಬಾಂಧವ್ಯ ರೂಪುಗೊಳ್ಳಲು ಸಾಧ್ಯ. ಉತ್ತಮ ಸಂಬಂಧಗಳು ಯಾವಾಗಲೂ ಸಾಮೂಹಿಕ ಬದುಕನ್ನು ಗಟ್ಟಿಗೊಳಿಸುತ್ತವೆ.

ಜನಪದ ಗೀತೆಗಳು ಅಜ್ಞಾತ ಕವಿಗಳ–ಕವಯತ್ರಿಯರ ರಚನೆಯಾಗಿವೆ. ಓದುಬರಹ ಬಾರದ ಹೊಲಗದ್ದೆಗಳಲ್ಲಿ ದುಡಿಯುವ ಜನಪದರು ನಿಸರ್ಗದೊಡನೆ ಬೆಸೆದುಕೊಂಡವರು. ಶೋಕ, ಕರುಣ, ರೌದ್ರ, ಹಾಸ್ಯ ಯಾವುದೇ ರಸವಾದರೂ ಕೇಳುಗರ ಮನಸ್ಸಿಗೆ ನಾಟುವಂತೆ ಹಾಡಬಲ್ಲರು. ಇದೇ ರಸದಲ್ಲಿ ಅಭಿವ್ಯಕ್ತಿಸಬೇಕೆಂಬ ಕಟ್ಟುಕಟ್ಟಳೆಗಳಿಲ್ಲದೆ, ಅವರ ಬದುಕಿನ ನೋವು–ನಲಿವುಗಳು ಶಬ್ದರೂಪದಲ್ಲಿ ಸಹಜವಾಗಿ ಚಿತ್ರಣಗೊಂಡಿರುತ್ತದೆ. ಜನಪದ ಗೀತೆಗಳು ಜನಪದರ ಬದುಕಿನ ಸಮಸ್ತ ಮುಖಗಳ ಅಭಿವ್ಯಕ್ತಿಯಾಗಿವೆ. ತಂದೆ, ತಾಯಿ, ಮಕ್ಕಳು, ಅತ್ತೆ, ಸೊಸೆ, ಮಗಳು, ಅಣ್ಣ, ತಂಗಿ, ಅತ್ತಿಗೆ, ನಾದಿನಿ, ಮೈದುನ, ಸವತಿ, ಓರಗಿತ್ತಿ, ತಮ್ಮ, ಮಾವ, ಅಳಿಯ ಮುಂತಾದ ಸಂಬಂಧಗಳನ್ನೂ ಬಸಿರು–ಬಯಕೆ, ಬಡತನ–ಸಿರಿತನ, ವಿಧವೆಯ ಗೋಳು, ಸಾವು–ನೋವು, ಬಂಜೆ–ಬಾಣಂತಿ, ಪ್ರಣಯ, ದ್ವೇಷ, ಅಸೂಯೆ ಹೀಗೆ ನೂರಾರು ಸಂಗತಿಗಳು ಗೀತೆಯಲ್ಲಿ ಅವಿರ್ಭಾವಗೊಂಡಿವೆ. ಆದ್ದರಿಂದಲೇ ಜನಪದ ಗೀತೆಗಳು ಅಂದರೆ ಜನಪದ ಸಂಸ್ಕೃತಿ ಎಂದು ಕರೆಯಬಹುದಾಗಿದೆ. ಸಂಸ್ಕೃತಿಯ ಅಧ್ಯಯನಗಳಲ್ಲಿ ಗೀತೆಗಳನ್ನು ಗಮನಿಸದಿದ್ದರೆ ಅಂತಹ ಅಧ್ಯಯನ ಅಪೂರ್ಣವೆನ್ನಬಹುದು. ಅಷ್ಟು ವ್ಯಾಪಕತೆಯನ್ನು ಜನಪದ ಗೀತೆಗಳು ಪಡೆದಿವೆ.

'ಹೆಣ್ಣು ಜಗದ ಕಣ್ಣು' ಎಂಬ ನಾಣ್ಣುಡಿಯಂತೆಯೇ ಬದುಕಿನ ಎಲ್ಲ ಸುಖ–ಸಂತೋಷಗಳಿಗೆ ಅವಳೇ ಕಾರಣ. ಅವಳಿಗೆ ಜನಪದರಲ್ಲಿಯೂ ಗೌರವ ಸ್ಥಾನವಿದೆ. ತಾನು ಬದುಕಿರುವ ಸಮಾಜ ತನ್ನನ್ನು ಸುತ್ತುವರಿದಿರುವ ಮಾನವೀಯ ಸಂಬಂಧಗಳ ಬಗೆಗೆ ಅವಳಿಗಿರುವ ಪ್ರೀತಿ, ಅಂತಃಕರಣಗಳು ಅಪೂರ್ವವಾಗಿವೆ. ಜನಪದ ಹೆಣ್ಣುಮಕ್ಕಳು ತಮ್ಮ ವೈಯಕ್ತಿಕ ಬದುಕಿನ ಸಿಹಿ–ಕಹಿಗಳ ಹೊರೆಯನ್ನು ಹೊರಹಾಕಲೆಂದು ಹಾಡುಗಳನ್ನು ಸೃಷ್ಟಿಸಿದರು. ಧರ್ಮ–ಕುಟುಂಬ ಸಮಾಜಗಳು ಹೇರಿದ ನಿಯಮ–ನಿರ್ಬಂಧಗಳನ್ನು ಮೋಡದ ಮರೆಯ ಹೊಂಗಿರಣಗಳಂತೆ ಗೀತೆಗಳ ಮೂಲಕ ಹೊರಸೂಸಿದರು. ಹೀಗಾಗಿ ತಮ್ಮ ಅಂತರಂಗದ ನೋವು–ನಲಿವು, ಸುಖ–ದುಃಖಗಳನ್ನೊಳಗೊಂಡ ಭಾವನಾತ್ಮಕ ಅಭಿವ್ಯಕ್ತಿ ಗೀತೆಗಳಲ್ಲಿದೆ.

ಮನೆಯೊಳಗೆ ಇರಲಿ, ಮನೆಯ ಹೊರಗೆ ಇರಲಿ ಜನಪದ ಹೆಣ್ಣುಮಗಳು ಸಾಮರಸ್ಯ ಪಾಲನೆಯಲ್ಲಿ ಜೀವನದ ಸಾರ್ಥಕತೆಯನ್ನು ಕಂಡಿದ್ದಾಳೆ. ಸಾಂಪ್ರದಾಯಿಕ ಜೀವನಕ್ಕೆ ಬದ್ಧಳಾಗಿ ಬದುಕನ್ನು ಸುಮಧುರಗೊಳಿಸಿಕೊಳ್ಳುತ್ತಾಳೆ. ಸಾಂಸ್ಕೃತಿಕ ವ್ಯವಸ್ಥೆಯೊಳಗೆ ಸುತ್ತುವ ಆಕೆಯ ಜೀವನದೃಷ್ಟಿ ವ್ಯವಸ್ಥೆಯಿಂದ ನಿಯಂತ್ರಿತವಾದುದು. ಆದರೂ ಅಪವಾದವೆಂಬಂತೆ ಅಲ್ಲಲ್ಲಿ ಪ್ರತಿಭಟನೆಯು ಕಂಡುಬರುತ್ತದೆ. ನಾಟಕೀಯತೆಯ ಗಂಧವಿಲ್ಲದ ಜನಪದ ಹೆಣ್ಣುಮಕ್ಕಳು ಅಂತರಂಗದ ನೋವುಗಳನ್ನು ಯಥಾವತ್ತಾಗಿ ಹೊರಹಾಕಿದ್ದಾರೆ. ಸಮಾಜ ವ್ಯವಸ್ಥೆಯಲ್ಲಿ ನಿಯಂತ್ರಕ ಶಕ್ತಿಯಾಗಿರುವ ಪುರುಷನಷ್ಟೇ ಅಲ್ಲದೇ ಕೆಲವೊಮ್ಮೆ ಹೆಣ್ಣುಮಕ್ಕಳ ನಿಯಂತ್ರಣದಲ್ಲಿಯೂ ಹೆಣ್ಣು ಬದುಬೇಕಾದ

ಅನಿವಾರ್ಯತೆ ಇರುತ್ತದೆ. ಅಂತಹ ಸನ್ನಿವೇಶಗಳನ್ನೆಲ್ಲ ನಿವಾರಿಸಿ ವಿಕಾಸದ ಮಾರ್ಗವನ್ನು ಹಿಡಿಯುತ್ತಾಳೆ.

ಜನಪದ ಸಾಹಿತ್ಯದ ಹೆಣ್ಣು ಭಾರತೀಯ ಸಂಸ್ಕೃತಿಯ ಪರಿಕಲ್ಪನೆಯಲ್ಲಿರುವ ಹೆಣ್ಣಿನ ಪಡಿಯಚ್ಚಾಗಿ ಕಂಡುಬರುತ್ತಾಳೆ. ಭಾರತೀಯ ಸಂಸ್ಕೃತಿಯಲ್ಲಿ ಶೀಲ, ಚಾರಿತ್ರ್ಯ, ತ್ಯಾಗ, ಸಹನೆ, ಪಾತಿವ್ರತ್ಯ ಇವೇ ಮುಂತಾದ ಗುಣಗಳು ಹೆಣ್ಣಿನ ಪರಮೋಚ್ಚ ಆದರ್ಶಗಳೆಂದು ಭಾವಿಸಲಾಗಿದೆ. ಹಾಗಾಗಿ ಜನಪದ ಹೆಣ್ಣುಮಗಳು ಸಂಸ್ಕೃತಿಯ ಎಲ್ಲೆ ಮೀರದೆ ಎಲ್ಲರೊಂದಿಗೆ ಸಮರಸ ಬದುಕನ್ನು ನಡೆಸುತ್ತಾ ಬಂದಿದ್ದಾಳೆ. ಹೆಣ್ಣು ಮನೆಗೆ ಮಲ್ಲಿಗೆಯಾಗಿ ನೆರೆಮನೆಗೆ ಸಿರಿದೇವಿಯಾಗಿ ಹುಟ್ಟಿದ ಮನೆಗೂ ಮೆಟ್ಟಿದ ಮನೆಗೂ ಕೀರ್ತಿಯನ್ನು ತರುತ್ತಾಳೆ. ತಾಯಿ, ಮಗಳು, ಸೊಸೆ, ನಾದಿನಿ, ಅತ್ತಿಗೆ, ಅಕ್ಕ, ತಂಗಿ ಹೀಗೆ ನಾನಾ ರೀತಿಯ ಸಂಬಂಧಗಳನ್ನು ಯಶಸ್ವಿಯಾಗಿ ನಿರ್ವಹಿಸುತ್ತಾಳೆ.

ಜನಪದ ಹೆಣ್ಣುಮಗಳು ಕೇವಲ ಪುರುಷನೊಂದಿಗೆ ಉತ್ತಮ ಬಾಂಧವ್ಯ ಹೊಂದಿ, ಸ್ತ್ರೀಯರೊಂದಿಗೆ ವಿಷಮ ಬಾಂಧವ್ಯ ಹೊಂದಿರುತ್ತಾಳೆ ಎಂಬುದು ಸತ್ಯಕ್ಕೆ ದೂರ. ಪುರುಷನಷ್ಟೇ ಆಪ್ತತೆಯನ್ನು ಸ್ತ್ರೀಯರಲ್ಲೂ ಕಂಡುಕೊಳ್ಳುತ್ತಾಳೆ. ಈ ಹಿನ್ನೆಲೆಯಲ್ಲಿ ತಾಯಿ-ಮಗಳು, ಅಕ್ಕ-ತಂಗಿ, ಅತ್ತೆ-ಸೊಸೆ, ಅತ್ತಿಗೆ-ನಾದಿನಿ, ಓರಗಿತ್ತಿ-ನೇಗೆಣ್ಣಿ, ಗೆಳತಿಯರ ಸಂಬಂಧಗಳನ್ನು ಜನಪದ ಗೀತೆಗಳಲ್ಲಿ ವಿಶ್ಲೇಷಿಸಲಾಗಿದೆ. ಕೇವಲ ಮಾದರಿ, ಆದರ್ಶ ಸಂಬಂಧಗಳನ್ನು ಮಾತ್ರ ವಿಶ್ಲೇಷಿಸದೇ, ಸಂಬಂಧಗಳಲ್ಲಿನ ವಿಷಮತೆಯನ್ನು ಸಂದರ್ಭಕ್ಕೆ ತಕ್ಕಂತೆ ಉಲ್ಲೇಖಿಸಲಾಗಿದೆ. ಏಕೆಂದರೆ 'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬ ಮಾತನ್ನು ಅಲ್ಲಗಳೆಯಲಾಗದು ಮತ್ತು ಅದನ್ನೇ ಸತ್ಯವೆಂದು ಪೂರ್ಣಪ್ರಮಾಣದಲ್ಲಿ ನಂಬಲು ಅಸಾಧ್ಯ.

ಜನಪದ ಗೀತೆಗಳಲ್ಲಿ ಸಂಸಾರ ಗೀತೆಗಳು ಬಹುವ್ಯಾಪಕವಾಗಿವೆ. ಆಕರ್ಷಣೀಯವಾಗಿ ಶೀಘ್ರ ಪರಿಣಾಮಕಾರಿಯಾದವುಗಳಾಗಿರುತ್ತವೆ. ಅಲೆಮಾರಿಯಾಗಿದ್ದ ಮಾನವ ಕೃಷಿ ನಾಗರಿಕತೆ ಪ್ರಾರಂಭವಾದ ಮೇಲೆ ಒಂದು ಕಡೆ ನೆಲೆನಿಂತ. ಅಸ್ಥಿರವಾದ ಕುಟುಂಬಗಳು ಸ್ಥಿರತೆಯನ್ನು ಪಡೆದವು. ಹೆಣ್ಣು-ಗಂಡುಮಕ್ಕಳ ನಡುವಿನ ಸಂಬಂಧಗಳು ಗಟ್ಟಿಯಾದವು. ಗಂಡ ಹೆಂಡತಿಯನ್ನು ಕೇಂದ್ರವಾಗಿರಿಸಿಕೊಂಡು ಅಣ್ಣ, ತಂಗಿ, ಅಜ್ಜ, ಅಜ್ಜಿ, ಮಾವ, ಅಳಿಯ, ಸವತಿ, ವಾರಗಿತ್ತಿ, ನಾದಿನಿ, ಬಂಧುಬಳಗ ಹೀಗೆ ಹಲವಾರು ವೃತ್ತಗಳು ರಚನೆಯಾದವು. ಬದುಕಿನಲ್ಲಿ ಜನನದಿಂದ ಮರಣದವರೆಗೆ ಅನೇಕ ಘಟನೆಗಳು ಸಂಭವಿಸುತ್ತವೆ. ಮದುವೆ, ಒಸಗೆ, ಗರ್ಭಧಾರಣೆ, ಜನನ, ಬಾಲ್ಯ, ಯೌವ್ವನ, ಮುಪ್ಪು, ಸಾವು ಇವು ಮುಖ್ಯವಾದ ಹಂತಗಳು. ಈ ಎಲ್ಲ ಹಂತಗಳನ್ನು ಕುರಿತಂತೆ ಅಸಂಖ್ಯಾತ ಹಾಡುಗಳು ಜನಪದರಲ್ಲಿ ಪ್ರಚಲಿತದಲ್ಲಿವೆ. ನಾಗರಿಕತೆಯ ಗಲಿಬಿಲಿಯಿಲ್ಲದ, ವೇಗವಿಲ್ಲದ, ಗೊಂದಲಗಳಿಲ್ಲದ ತಣ್ಣನೆಯ ಪ್ರಶಾಂತಮಯ ವಾತಾವರಣ ಜನಪದರ ಸಂಸಾರದಲ್ಲಿದೆ. ಹಾಗೆಂದರೆ ನೋವುಗಳಿಲ್ಲದ ಸಂಸಾರವೆಂದೇನೂ ಅಲ್ಲ. ನೋವನ್ನು ನಗುನಗುತ ಸ್ವೀಕರಿಸಿ, ನೋವಿನಲ್ಲಿಯೇ

ನಲಿಯುವ, ಕಷ್ಟದಲ್ಲಿಯೇ ಸಂತೋಷಿಸುವ ಸಂಸಾರ ಜನಪದರದ್ದು. ಅಂತಹ ಜನಪದ ಗೀತೆಗಳು ಓದುಗರ ಮನಸ್ಸಿಗೆ ಮುದ ನೀಡಿ ಹೃದಯವನ್ನು ಆಹ್ಲಾದಗೊಳಿಸುವುದಲ್ಲದೇ ಹಲವರಿಗೆ ಮಾದರಿ ಎನಿಸಿವೆ.

ಹೆಣ್ಣಿಗೆ ತೌವರೂರಿನ ಮೇಲಿನ ಪ್ರೀತಿಗೆ ಸರಿಸಾಟಿ ಯಾವುದು ಇಲ್ಲ. ಆದರೆ ಗಂಡನ ಅದಮ್ಯ ಪ್ರೇಮದ ನೆರಳಿನಲ್ಲಿ ತವರೂರನ್ನು ಮರೆಯಬಲ್ಲಳು. ಗಂಡನ ಮನೆ ಎಂದರೆ ಮೂಗುಮುರಿಯುವ ಹೆಣ್ಣುಗಳೇ ಹೆಚ್ಚು. ಅತ್ತೆ ನಾದಿನಿಯರ ಕಾಟ, ಭಾವಮೈದುನರ ಬೈಗುಳಗಳ ನಡುವೆಯೂ ಅವಳ ಬದುಕಿನ ಆಸರೆ ಗಂಡನ ಪ್ರೀತಿ. ಆ ಪ್ರೀತಿಗೆ ಎಲ್ಲವನ್ನು ಮರೆಸುವ ವಿಶಿಷ್ಟ ಶಕ್ತಿಯಿದೆ. ಅಪಾರ ನೋವು ವೇದನೆಗಳನ್ನು ಸಹಿಸಿ ಹೆಣ್ಣು ಕುಟುಂಬವನ್ನು ಕಟ್ಟುತ್ತಾಳೆ. ಕನ್ನಡ ಜನಪದ ಗೀತೆಗಳಲ್ಲಿ ಹೆಣ್ಣು ಗಂಡುಗಳು ಒಂದಾಗಿ ಬದುಕಿದ ಅಪೂರ್ವ ಲೋಕವನ್ನು ತೆರದಿಡುತ್ತವೆ. ಮಾಗಿದ ಪರಿಪಕ್ವಗೊಂಡ ಜನಪದರ ಪ್ರೇಮದ ಪರಿಚಯ ಈ ಗೀತೆಗಳಲ್ಲಿ ಕೆನೆಗಟ್ಟಿದೆ.

ಗಂಡುಹೆಣ್ಣಿನ ಬದುಕು ಸಾರ್ಥಕತೆ ಪಡುವುದು ಸಂತಾನದಲ್ಲಿ. ಸಂತಾನಾಭಿವೃದ್ಧಿ ಜೀವಿಗಳಿಗೆ ಪ್ರಕೃತಿದತ್ತ ಕೊಡುಗೆ. ಸಂತಾನದ ನಿಮಿತ್ತ ಒಂದಾಗುವ ಗಂಡುಹೆಣ್ಣು ಮಕ್ಕಳನ್ನು ಪಡೆದು ಪಾಲನೆ, ಪೋಷಣೆ ಮಾಡಿ ಮರಣದ ಪರ್ಯಂತ ಒಂದಾಗಿ ಬಾಳಿದಾಗ ಬದುಕು ಸಾರ್ಥಕವೆನಿಸುತ್ತದೆ. ಪ್ರತಿ ಗಂಡುಹೆಣ್ಣು ಬದುಕಿನಲ್ಲಿ ಬಯಸುವುದು ಈ ಸಾರ್ಥಕತೆಯನ್ನೇ. ಸಂತಾನವನ್ನು ರಕ್ಷಿಸಿ ಪೋಷಿಸಲು ದಂಪತಿಗಳು ಏನೆಲ್ಲಾ ಕಷ್ಟವನ್ನು ಸಹಿಸಲು ಸಿದ್ಧರಿರುತ್ತಾರೆ? ಮಕ್ಕಳಿಲ್ಲದ ದಂಪತಿಗಳನ್ನು ಸಮಾಜ ತಿರಸ್ಕಾರದಿಂದ ನೋಡುತ್ತದೆ. ಮಕ್ಕಳಾಗದಿರುವುದಕ್ಕೆ ಹೆಣ್ಣಿನಲ್ಲಿರುವ ಲೋಪದೋಷಗಳೇ ಕಾರಣವೆಂದು ನಮ್ಮ ಸಮಾಜದಲ್ಲಿ ತಪ್ಪುತಪ್ಪಾಗಿ ಭಾವಿಸಲಾಗುತ್ತದೆ. ಅಂತಹ ಹೆಣ್ಣನ್ನು ಗೊಡ್ಡೆಂದು ಕರೆಯುತ್ತಾರೆ. ಗೊಡ್ಡು ಆಕಳಿನಿಂದ, ಬಂಜೆ ಮರದಿಂದ ಏನು ಪ್ರಯೋಜನ ? ಹಾಗೆಯೇ ಮಕ್ಕಳಿಲ್ಲದ ಹೆಣ್ಣೆಂದು ಜನಪದರ ಭಾವಿಸುತ್ತಾರೆ. ಮಕ್ಕಳಾಗದ ಹೆಣ್ಣನ್ನು ತೊರೆದು ಗಂಡ ಎರಡನೆಯ ಮದುವೆ ಆಗುತ್ತಾನೆ. ಸವತಿ ಬಂದರೆ ಅವಳ ಬಾಳು ನರಕ ಸದೃಶ್ಯವಾಗುತ್ತದೆ. ಅವಳಿಗೆ ಒಂದೆರಡು ಮಕ್ಕಳಾದರಂತೂ ಮಕ್ಕಳಿಲ್ಲದವಳ ಬಾಳು ಜೀತದಾಳಿಗೂ ಕಡೆಯಾಗುತ್ತದೆ. ಈ ಎಲ್ಲ ಕಾರಣಗಳಿಂದಾಗಿ ಮದುವೆಯಾದ ಹೆಣ್ಣು ಮಕ್ಕಳಿಗಾಗಿ ಹಪಹಪಿಸುತ್ತಾಳೆ. ಮಕ್ಕಳಿಲ್ಲದ ಹೆಣ್ಣಿನ ಹಪಾಹಪಿ, ಯಾತನೆ, ಮಾನಸಿಕ ತುಮುಲಗಳನ್ನು ಜನಪದ ಗೀತೆಗಳು ತೆರೆದಿಟ್ಟಿವೆ. ಹೀಗೆ ಜನಪದ ಗೀತೆಗಳಲ್ಲಿ ಅಭಿವ್ಯಕ್ತವಾದ ಸಂಬಂಧಗಳ ಪ್ರತಿಯೊಂದು ನೆಲೆಗಳನ್ನು ಗುರುತಿಸಿ ವಿಶ್ಲೇಷಿಸುವ ಕಾರ್ಯವನ್ನು ಮುಂದಿನ ಅಧ್ಯಾಯಗಳಲ್ಲಿ ಮಾಡಲಾಗಿದೆ.

ಅಧ್ಯಾಯ – ೪

# ಜನಪದರ ಮಾನವ ಸಂಬಂಧಗಳು

ಪ್ರಾಚೀನ ಕಾಲದಿಂದ ಮಾನವನ ಬದುಕು ಹಂತಹಂತವಾಗಿ ನಾಗರಿಕತೆಯೆಡೆಗೆ ಸಾಗುತ್ತ ಬಂದಿತು. ಹಿಂದಿನ ಕಾಲದಲ್ಲಿ ಸಣ್ಣ ಸಣ್ಣ ಗುಂಪುಗಳಲ್ಲಿ ವಾಸವಾಗಿದ್ದ ಮಾನವರು ತಮ್ಮ ಆಹಾರಕ್ಕಾಗಿ ಸ್ಥಳದಿಂದ ಸ್ಥಳಕ್ಕೆ ವಲಸೆ ಹೋಗುತ್ತಿದ್ದರು. ಆದರೆ ಒಂದು ಕಡೆ ನೆಲೆ ನಿಂತು ಆಹಾರ ಧಾನ್ಯಗಳ್ನು ಬಿತ್ತಿ ಬೆಳೆಯುವ ವ್ಯವಸಾಯ ಮಾಡತೊಡಗಿದಾಗ ನಾಗರಿಕತೆ ಅಂಕುರವಾಯಿತು. ಹೀಗೆ ಒಂದೆಡೆ ನೆಲೆನಿಂತಾಗ ಅವನ ಸಾಮಾಜಿಕ ಜೀವನದಲ್ಲಿ ಅನೇಕ ಬದಲಾವಣೆಗಳು ಬಂದವು. ಮಾನವರ ಸಂಖ್ಯೆಯಲ್ಲೂ ಹೆಚ್ಚಳವಾಗಿ ಅವನ ಸಹಾಯ ಸಹಕಾರಕ್ಕೆ ಅನೇಕರು ಸಿಗುವಂತಾಯಿತು. ನೆರೆಹೊರೆಯವರ ಸಹಾಯದಿಂದ ತನ್ನ ಬೇಕು ಬೇಡಗಳನ್ನು ಈಡೇರಿಸಿಕೊಳ್ಳತೊಡಗಿದನು. ಮಾನವ ಒಂದೆಡೆ ನೆಲೆ ನಿಂತ ಪರಿಣಾಮವಾಗಿ ಕುಟುಂಬ ವ್ಯವಸ್ಥೆಯು ಜಾರಿಗೆ ಬಂದಿತು. ಕುಟುಂಬದಲ್ಲಿ ಗಂಡ–ಹೆಂಡತಿ, ಅವರ ಮಕ್ಕಳು ಅಣ್ಣ–ತಂಗಿ, ಅಕ್ಕ–ತಮ್ಮ, ಅಜ್ಜ–ಅಜ್ಜಿ ಹೀಗೆ ಅನೇಕ ಸಂಬಂಧಗಳು ಹುಟ್ಟಿಕೊಂಡವು. ಸಮಾಜದಲ್ಲಿ ಅನಾಥರು, ನಿರ್ಗತಿಕರು, ಸ್ನೇಹಿತರಲ್ಲಿ ಸಹಾಯ ಮಾಡುವ ಪ್ರವೃತ್ತಿ ರೂಢಿಯಲ್ಲಿ ಬಂದಿತು.

ತಮ್ಮ ವಾಸಕ್ಕೆ ಅನುಕೂಲತೆಯನ್ನು ಮಾಡಿಕೊಂಡ ಮಾನವರು ಮನೆಗಳನ್ನು ಕಟ್ಟಿಕೊಂಡರು. ಮನೆ, ಕೇರಿ, ಊರುಗಳು ಬೆಳೆಯಲು ಕಾರಣವಾಯಿತು. ಹೀಗೆ ಸಾಮಾಜಿಕ ವಿಚಾರಗಳಲ್ಲಿ ಕ್ರಾಂತಿ ಮಾಡಿಕೊಂಡ ಮಾನವರು ಮನೆ ಮಾರು ಮಾಡಿಕೊಂಡು ಸಮುದಾಯ ಜೀವನದ ಸುಖಸಂತೋಷಗಳನ್ನು ಅನುಭವಿಸತೊಡಗಿದರು. ಪರಂಪರೆಯ ಪ್ರತೀಕವೆಂಬಂತೆ ವಿವಾಹಗಳು ಸಮಾಜದಲ್ಲಿ ಅಸ್ತಿತ್ವಕ್ಕೆ ಬಂದವು. ವಿವಾಹದಿಂದ ಮಾನವರಲ್ಲಿನ ಬಾಂಧವ್ಯವು ಹರವನ್ನು ಪಡೆಯಿತು. ಹೀಗೆ ರೂಪುಗೊಂಡ ಮಾನವ ಸಂಬಂಧಗಳಲ್ಲಿ ಕೌಟುಂಬಿಕ, ವೈವಾಹಿಕ ಹಾಗೂ ಸಾಮಾಜಿಕ ನೆಲೆಯಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

## ೪.೧ ಜನಪದರ ಕೌಟುಂಬಿಕ ಸಂಬಂಧಗಳು

ವಿವಾಹ ಮತ್ತು ಕುಟುಂಬ ಇವು ಭಾರತೀಯ ಸಾಮಾಜಿಕ ವ್ಯವಸ್ಥೆಗೆ ಒತ್ತಾಸೆ ನೀಡಿರುವ ಎರಡು ಪ್ರಮುಖ ಸಾಮಾಜಿಕ ಸಂಸ್ಥೆಗಳು. ಪರಿವರ್ತನೆಯ ದಾಳಿಯನ್ನು ಎದುರಿಸಿಯೂ ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡಿರುವ ಸಂಸ್ಥೆಗಳಿವು. ಇವು ಎಷ್ಟು ಸಾರ್ವತ್ರಿಕವಾಗಿವೆಯೋ ಇಂದಿಗೂ

ಅಷ್ಟೇ ಸದೃಡವಾಗಿ ಮುಂದುವರಿದಿವೆ. ಕುಟುಂಬ ಮತ್ತು ವಿವಾಹದಿಂದ ಅವರ ನಡುವೆ ಹಲವು ಬಗೆಯ ಸಂಬಂಧಗಳು ಏರ್ಪಡುತ್ತವೆ. ಪ್ರಸ್ತುತ ಅಧ್ಯಾಯವನ್ನು ಕೌಟುಂಬಿಕ, ವೈವಾಹಿಕ ಹಾಗೂ ಸಾಮಾಜಿಕ ಸಂಬಂಧಗಳಿಗೆ ಮೀಸಲಾಗಿರಿಸಿದೆ. ಈ ಮೂರು ನೆಲೆಗಳಲ್ಲಿ ಏರ್ಪಟ್ಟ ಸಂಬಂಧಗಳ ಕುರಿತಾಗಿ ಸಾಕಷ್ಟು ವಿಶ್ಲೇಷಣೆ ಮಾಡಲಾಗಿದೆ. ಜಗತ್ತಿನ ಹಲವಾರು ದೇಶಗಳಲ್ಲಿ ವಿವಾಹ ಮತ್ತು ಕುಟುಂಬ ವ್ಯವಸ್ಥೆಗಳು ಆಧುನಿಕತೆಯ ಬಿರುಗಾಳಿಗೆ ಸಿಲುಕಿ ಬಹಳಷ್ಟು ತತ್ತರಿಸಿ ಹೋಗಿದ್ದರೂ ಭಾರತೀಯ ಸಾಮಾಜಿಕ ಚೌಕಟ್ಟಿಯನಲ್ಲಿ ಅವು ಇಂದಿಗೂ ಸಾಕಷ್ಟು ಭದ್ರವಾಗಿವೆ.

ಕುಟುಂಬವು ಜನಪದರ ಜೀವನದ ಅವಿಭಾಜ್ಯ ಅಂಗ. ಪರಂಪರೆ ಹಾಗೂ ಮೌಲ್ಯಗಳಡಿಯಲ್ಲಿ ಭಾರತೀಯ ಕುಟುಂಬ ವ್ಯವಸ್ಥೆ ಇಂದಿಗೂ ತನ್ನ ಅಸ್ತಿತ್ವವನ್ನು ಕಾಯ್ದಕೊಳ್ಳಲು ಶಕ್ಯವಾಗಿದೆ. ಭಾರತೀಯ ಕುಟುಂಬವನ್ನು ಅವಿಭಕ್ತ ಕುಟುಂಬವೆಂದು ಚಿತ್ರಿಸಿರುವುದೇ ಹೆಚ್ಚು. ಅವಿಭಕ್ತ ಕುಟುಂಬಗಳು ಇಲ್ಲಿ ಇಂದಿಗೂ ಬಹುದೊಡ್ಡ ಸಂಖ್ಯೆಯಲ್ಲಿ ಜೀವಂತವಾಗಿವೆ. ಕುಟುಂಬವೇ ಭಾರತೀಯರ ಸಮಸ್ತ ಚಟುವಟಿಕೆಗಳ ಕೇಂದ್ರಸ್ಥಾನ. ಹಿಂದೂ ಜೀವನ ದೃಷ್ಟಿಯನ್ನು ಪ್ರತಿಬಿಂಬಿಸುವ ಪುರುಷಾರ್ಥಗಳ ಸಿದ್ಧಾಂತದಲ್ಲಿಯೇ ವ್ಯಕ್ತಿಯ ಕೌಟುಂಬಿಕ ಜೀವನದ ಪ್ರಾಮುಖ್ಯತೆಯನ್ನು ಒತ್ತಿ ಹೇಳಲಾಗಿದೆ.

ಕುಟುಂಬವು ಸಮಾಜದ ಒಂದು ಚಿಕ್ಕ ಅಂಗ. "ತಂದೆ-ತಾಯಿ ಮಕ್ಕಳನ್ನೊಳಗೊಂಡ ಸಮೂಹವೇ ಕುಟುಂಬ". (ಎಚ್. ಬಿ. ಮಾಳಿ, ೧೯೯೨, ಪು-೧೦೨) ಗಂಡು-ಹೆಣ್ಣುಗಳ ಪರಸ್ಪರ ಸಂಬಂಧಗಳ ಆಧಾರದ ಮೇಲೆ ಕುಟುಂಬ ನಿಂತಿದೆ. ಕುಟುಂಬದಲ್ಲಿ ವಾಸಿಸುವವರಲ್ಲಿ ರಕ್ತಸಂಬಂಧಿಗಳೇ ಹೆಚ್ಚು. ಕೌಟುಂಬಿಕ ಸಂಬಂಧಗಳನ್ನು ರಕ್ತಸಂಬಂಧಗಳೆಂದು ಕರೆಯಬಹುದು. ಏಕೆಂದರೆ ಸಾಮಾನ್ಯವಾಗಿ ಒಂದೇ ಗೃಹದಲ್ಲಿ ವಾಸಿಸುವ, ಒಂದೇ ಅಡುಗೆಯನ್ನು ಸೇವಿಸುವ, ಆಸ್ತಿಯನ್ನು ಸಾಮೂಹಿಕವಾಗಿ ಹೊಂದಿರುವ, ಕುಟುಂಬದ ಪೂಜಾ ಕಾರ್ಯಗಳಲ್ಲಿ ಪಾಲ್ಗೊಳ್ಳುವ ಮತ್ತು ಒಂದಲ್ಲ ಒಂದು ರೀತಿ ಪರಸ್ಪರ ರಕ್ತಸಂಬಂಧವನ್ನು ಹೊಂದಿರುವ ಜನಸಮೂಹವನ್ನು ಅವಿಭಕ್ತ ಕುಟುಂಬ ಎಂದು ಕರೆಯಲಾಗಿದೆ. ಅವರೆಲ್ಲ ಒಂದೇ ಕುಟುಂಬದಲ್ಲಿ ನೆಲೆಸಿದ ರಕ್ತಸಂಬಂಧಿಗಳು ಆಗಿರುತ್ತಾರೆ. ಬಹುಕಾಲದಿಂದಲೂ ಜೊತೆಯಲ್ಲಿಯೇ ನೆಲೆಸಿರುವುದರಿಂದ ಅವರ ನಡುವೆ ಅನ್ಯೋನ್ಯ ಹಾಗೂ ಮಧುರ ಬಾಂಧವ್ಯಗಳು ಏರ್ಪಟ್ಟಿರುತ್ತವೆ. ಇಂತಹ ಪ್ರಾಥಮಿಕ ಸಂಬಂಧಗಳನ್ನು ಇಲ್ಲಿ ಕೌಟುಂಜಿಕ ಸಂಬಂಧಗಳ ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಕುಟುಂಬದಲ್ಲಿ ನೇರ ಹಾಗೂ ಪ್ರತ್ಯಕ್ಷ ಸಂಬಂಧಗಳಿರುತ್ತವೆ. ಅವುಗಳನ್ನು ವ್ಯಕ್ತಿಗಳು ಪರಸ್ಪರ ಚೆನ್ನಾಗಿ ಅರಿತುಕೊಂಡವರಾಗಿರುತ್ತಾರೆ. ಅಂತಹ ಪ್ರಾಥಮಿಕ ಸಂಬಂಧಗಳಾದ ತಾಯಿ-ಮಗ, ತಂದೆ-ಮಗ, ತಾಯಿ-ಮಗಳು, ತಂದೆ-ಮಗಳು, ಅಣ್ಣ-ತಮ್ಮ, ಅಕ್ಕ-ತಂಗಿ, ಅಣ್ಣ-ತಂಗಿ, ಅಕ್ಕ-ತಮ್ಮ

ಇವುಗಳನ್ನು ಜನಪದರ ಬದುಕಿನ ಕುರುಹಾದ ಜನಪದ ಗೀತೆಗಳ ಉದಾಹರಣೆಯೊಂದಿಗೆ ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಕುಟುಂಬದ ಉದ್ದೇಶ ಭದ್ರತೆಯನ್ನು ಕಲ್ಪಿಸುವುದು. ಭೌತಿಕ, ಮಾನಸಿಕ, ಭಾವನಾತ್ಮಕ ಹೀಗೆ ಎಲ್ಲ ಆಯಾಮಗಳಲ್ಲಿಯೂ ಕುಟುಂಬದ ಸರ್ವ ಸದಸ್ಯರಿಗೂ ಸುರಕ್ಷತೆಯ ಭಾವನೆಯನ್ನು ಮೂಡಿಸುವುದೇ ಆದರ್ಶ ಕುಟುಂಬ ಎನಿಸುತ್ತದೆ. ಇಲ್ಲಿ ಪ್ರೀತಿಯೇ ಭದ್ರತೆಯ ಸತ್ವ. ತಂದೆ-ತಾಯಿಗಳ ಪ್ರೀತಿಯಿಂದ ಮಕ್ಕಳು ಭದ್ರತೆಯ ಮನೋಭಾವವನ್ನು ಬೆಳೆಸಿಕೊಳ್ಳುತ್ತಾರೆ. ಮಕ್ಕಳ ಪ್ರೀತಿಯೂ ತಂದೆ-ತಾಯಿಯರಿಗೆ ಅದೆಷ್ಟೋ ಸುರಕ್ಷತೆಯ, ಸಮಾಧಾನದ ಭಾವನೆಯನ್ನು ಉಂಟು ಮಾಡುತ್ತದೆ. ಹೀಗೆ ಪರಸ್ಪರ ಭದ್ರತೆಯ ಭಾವವನ್ನು ಕುಟುಂಬದ ಸದಸ್ಯರು ಕಲ್ಪಿಸಿಕೊಳ್ಳುತ್ತಾರೆ. ಇದರಿಂದಾಗಿ ಮಕ್ಕಳು ಸಂತೋಷ ಮತ್ತು ಆತ್ಮವಿಶ್ವಾಸದಿಂದ ಬೆಳೆಯುತ್ತಾರೆ. ತಂದೆತಾಯಿಗಳೂ ಮಕ್ಕಳ ಅಭ್ಯುದಯದಿಂದ ನೆಮ್ಮದಿ, ಸಂತೃಪ್ತಿಗಳನ್ನು ಹೊಂದುತ್ತಾರೆ. ಹೀಗೆ ಜನಪದರು ಮಕ್ಕಳ ಲಾಲನೆ-ಪಾಲನೆ, ಕುಟುಂಬದ ನಿರ್ವಹಣೆಯಲ್ಲಿ ಪ್ರೀತಿಯ ಮೂಲಕ ತಮ್ಮ ಕುಟುಂಬದ ಸದಸ್ಯರಿಗೆ ಸುಸ್ಥಿರ ಅವಕಾಶವನ್ನು ಕಲ್ಪಿಸಿದ್ದಾರೆ.

ಮಾನವ ಸಮಾಜದ ಅತೀ ಪ್ರಾಚೀನ ಸಂಸ್ಥೆಗಳಲ್ಲಿ ಕುಟುಂಬವು ಪ್ರಧಾನವಾದುದು. ಗಂಡುಹೆಣ್ಣು ಕಲೆತು ಸಂತಾನಾಭಿವೃದ್ಧಿ ಮತ್ತು ಮಕ್ಕಳ ಪಾಲನೆ ಪೋಷಣೆಗಾಗಿ ಒಂದೆಡೆ ಸಂಸಾರ ಹೂಡಿದಂದು ಕುಟುಂಬ ಜನ್ಮ ತಳೆಯಿತು. ಕುಟುಂಬದ ಉಗಮ ಮಾನವನ ವಿಕಾಸದಲ್ಲಿ ಬಹುಮುಖ್ಯವಾದ ತಿರುವು ಎನ್ನಬಹುದು. ಮಾನವನ ಸಮಾಜ ರಚನೆಯಾಗಿ ಬೆಳವಣಿಗೆಯಾಗಲು ಕುಟುಂಬವು ತಳಹದಿಯಾಯಿತು. ಕುಟುಂಬ ಮಾನವನ ಬದುಕಿನಲ್ಲಿಯೂ ಅಷ್ಟೇ ಮಹತ್ವದ ಪಾತ್ರವನ್ನು ನಿಭಾಯಿಸಿದೆ. ಹೆಣ್ಣುಗಂಡು ಮರಣದ ಪರ್ಯಂತ ಸಂಸಾರದಲ್ಲಿ ಬರುವ ಕಷ್ಟಸುಖಗಳನ್ನು ಸಹಿಸಿಕೊಂಡು ಬದುಕು ರೂಪಿಸಿಕೊಳ್ಳುತ್ತಾರೆ. ತಮ್ಮ ಸಂತಾನದ ಭವಿಷ್ಯವನ್ನು ರೂಪಿಸುವ ಜವಾಬ್ದಾರಿಯು ತಂದೆ ತಾಯಿಯರದ್ದಾಗಿರುತ್ತದೆ. ಆದ್ದರಿಂದ ಕುಟುಂಬವು ಹೆಣ್ಣುಗಂಡಿನ ಜೀವನದಲ್ಲಿ ಮಹತ್ವದ ಭೂಮಿಕೆಯನ್ನು ನಿಭಾಯಿಸುತ್ತದೆ.

### ೪.೧.೧ ತಂದೆ – ಮಗ

ಹಳ್ಳಿಗರ ಬದುಕಿನ ಬಹುಮುಖವನ್ನು ಜನಪದ ಗೀತೆಗಳು ನಿಚ್ಚಳವಾಗಿ ಬಿಂಬಿಸುತ್ತವೆ. ಜನಪದರ ಜೀವನದೊಂದಿಗೆ ಬಾಂಧವ್ಯವು ಕೂಡ ಅಭಿವ್ಯಕ್ತವಾಗಿದೆ. ಜನಪದ ಗೀತೆಗಳನ್ನು ಕಟ್ಟಿ ಹಾಡಿದವರಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಿದೆ. ಅದರಲ್ಲೂ ಸಂಬಂಧಗಳನ್ನು ಕಾಪಾಡಿಕೊಂಡು ಬದುಕಿನ ಓರೆಕೋರೆಗಳನ್ನು ತಿದ್ದಿತೀಡಿ ರೂಪವನ್ನು ನೀಡುವ ಜವಾಬ್ದಾರಿ ಹೆಣ್ಣುಮಕ್ಕಳ ಮೇಲಿದೆ. ಸಂಬಂಧಗಳ ಬೆಲೆಯನ್ನು ಅವರು ಸ್ಪಷ್ಟವಾಗಿ ಅರಿತುಕೊಂಡಿದ್ದಾರೆ. ಗಂಡಸರಲ್ಲಿ ಸಂಬಂಧಗಳ

ಕಕ್ಕುಲಾತಿ ಕಡಿಮೆ ಆದರೂ ಅಲ್ಲಲ್ಲಿ ಹಂತಿ ಹೊಡೆಯುವಾಗ, ಕಣದಲ್ಲಿ ಕೆಲಸ ಮಾಡುವಾಗ, ಹೋಳಿಯಾಡುವಾಗ, ಭಜನೆ ಮಾಡುವಾಗ ಗಂಡಸರ ಹಾಡುಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ ಅಭಿವ್ಯಕ್ತವಾದ ಸಂಬಂಧಗಳ ನೆಲೆಯನ್ನು ಗುರುತಿಸಲಾಗಿದೆ.

ತಂದೆಗೆ ಮಗಳ ಮೇಲೆ ಅತಿಯಾದ ಪ್ರೀತಿಯಿದ್ದರೂ, ಮಗನ ಮೇಲೆ ವಿಶೇಷ ಕಾಳಜಿ. "ಗಂಡು ಕೊನೆಯತನಕ ಮನೆಯಲ್ಲಿದ್ದು, ತಂದೆ ತಾಯಿಗಳ ಪೋಷಣೆ ಮಾಡುವುದಲ್ಲದೆ, ವಂಶೋದ್ಧಾರಕನೂ ಆಗುತ್ತಾನೆ. ತಾವು ತೀರಿಕೊಂಡ ಮೇಲೆ ತಮ್ಮ ಶವಸಂಸ್ಕಾರವನ್ನು ಮಾಡುವ ಹಕ್ಕು ಗಂಡಿಗೆ ಮಾತ್ರ ಸೀಮಿತ". (ಅನಿತಾ ಬಂಡಾರೆ, ೨೦೦೧, ಪು-೩೪) ಎಂಬ ನಂಬಿಕೆಯಿಂದಲೇ ತಂದೆಗೆ ಮಗನ ಮೇಲೆ ಅತಿಯಾದ ಕಾಳಜಿ ಇರುವುದು, ಜನಪದರಲ್ಲಿಯೂ ಕಂಡುಬರುತ್ತದೆ.

ಮಕ್ಕಳ ಭವಿಷ್ಯವನ್ನು ನಿರ್ಮಿಸುವಲ್ಲಿ ತಂದೆ-ತಾಯಿಯ ಪಾತ್ರ ಮಹತ್ವದ್ದಾಗಿದೆ. ಮಕ್ಕಳು ಮನೆಯೊಳಗಿನ ಸಂಪ್ರದಾಯಗಳನ್ನು ತಾಯಿಯಿಂದ, ಮನೆಹೊರಗಿನ ಸಂಪ್ರದಾಯಗಳನ್ನು ತಂದೆಯಿಂದಲೂ ಕಲಿತುಕೊಳ್ಳುತ್ತಾರೆ. ಸಮಾಜದಲ್ಲಿ ಉತ್ತಮ ಸ್ಥಾನ ಹೊಂದಬೇಕಾದರೆ ತಂದೆ-ತಾಯಿಯ ಮಾರ್ಗದರ್ಶನ ಅತ್ಯಗತ್ಯ. ಏಕೆಂದರೆ ಹೆತ್ತವರಿಲ್ಲದೇ ಬೆಳೆಯುವ ಮಕ್ಕಳು ಮಾನಸಿಕವಾಗಿ ಸದೃಢರಾಗಿರದೇ ತೊಂದರೆಯಿಂದ ಬಳಲುತ್ತಾರೆ. ಇಲ್ಲವೇ ಸರಿಯಾದ ಮಾರ್ಗದರ್ಶನವಿಲ್ಲದೆ ಸಮಾಜಕ್ಕೆ ಕಂಟಕರಾಗುತ್ತಾರೆ. ಮಕ್ಕಳಲ್ಲಿ ಉತ್ತಮ ವ್ಯಕ್ತಿತ್ವ ಬೆಳೆಸುವಲ್ಲಿ ತಂದೆ-ತಾಯಿಯ ಪಾತ್ರ ಅತಿಮುಖ್ಯವೆನಿಸಿದೆ.

ತಂದೆ-ಮಗನದು ರಕ್ತಸಂಬಂಧ. ಮಗು ಜನಿಸುತ್ತಲೇ ತಂದೆ-ಮಗನೆಂಬ ಬಾಂಧವ್ಯವನ್ನು ಹೊತ್ತು ತರುತ್ತದೆ. ಬಾಲ್ಯದಲ್ಲಿ ಮಗನ ಕೈಹಿಡಿದು ನಡೆಸುವ ಜೊತೆಗಾರನಾಗಿ, ಅಪ್ಪ ಕಂಡುಬರುತ್ತಾನೆ. ಮಗ ಬೆಳೆದು ದೊಡ್ಡವನಾದ ಮೇಲೆ ಗೆಳೆಯನಂತೆ ವರ್ತಿಸುವ ಅಪ್ಪನು ಮಗನ ಯಶಸ್ಸಿಗೆ ಸದಾ ಶ್ರಮಿಸುತ್ತಲೇ ಇರುತ್ತಾನೆ. ಮುಂದೆ ಮಗ ಬೆಳೆದು ದೊಡ್ಡವನಾದ ಮೇಲೆ ಇಡೀ ಕುಟುಂಬದ ಜವಾಬ್ದಾರಿಯನ್ನು ಹೊತ್ತುಕೊಳ್ಳುತ್ತಾನೆ. ಕುಟುಂಬದ ಗೌರವವನ್ನು ಉತ್ತುಂಗಕ್ಕೆ ಒಯ್ಯುತ್ತಾನೆಂಬ ನಂಬಿಕೆ ಅಪ್ಪನದು. ಅಪ್ಪನ ನಂಬಿಕೆ ಉಳಿಸುವ ಕಾರ್ಯವನ್ನು ಮಗನಾದವನು ಮಾಡುತ್ತಾನೆ. ತಂದೆ-ತಾಯಿ ಮಕ್ಕಳ ಏಳಿಗೆಗಾಗಿ ಸರ್ವಸ್ವವನ್ನೇ ಮುಡಿಪಾಗಿಡುವರು. ಹಾಗಾಗಿಯೇ ಹೆತ್ತವರನ್ನು ಯಾರೂ ಹೋಲಲಾರರು. ಹೆತ್ತವರಿಗೆ ಸರಿಸಾಟಿಯಾಗಿದ್ದು ಜಗತ್ತಿನಲ್ಲಿ ಯಾವುದೂ ಇಲ್ಲ. ಆದ್ದರಿಂದಲೇ ಜನಪದರು ಹೆತ್ತವರಿಗೆ ಸದಾ ಗೌರವದ ಸ್ಥಾನ ನೀಡುತ್ತಾ ಬಂದಿದ್ದಾರೆ.

ಉಂಗುರ ಉಡುದಾರ ಹರಿದರೆ ಮಾಡಿಸಬಹುದು
ಮಡದಿ ಸತ್ತರೆ ತರಬಹುದು । ಹಡೆದಂಥ
ತಂದೆ ತಾಯಲ್ಲಿ ದೊರೆತಾರೆ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೬೯)

ಜೀವನದಲ್ಲಿ ಯಾವುದೇ ವಸ್ತುವನ್ನು ಕಳೆದುಕೊಂಡರೂ ಮರಳಿ ಪಡೆಯಬಹುದು. ಉಂಗುರ ಕೊಳ್ಳಬಹುದು. ಉಡುದಾರ ಕೊಳ್ಳಬಹುದು. ಆದರೆ ತಂದೆ-ತಾಯಿಯನ್ನು ಕೊಳ್ಳಲಾದೀತೇ? ಮಡದಿ ಸತ್ತರೂ ಮತ್ತೊಬ್ಬಳ ತರಬಹುದು. ಆದರೆ ಹೆತ್ತವರನ್ನು ತರಲಾದೀತೇ? ಎಂಬುದನ್ನು ಅರಿತ ಜನಪದರಿಗೆ ಹೆತ್ತವರ ಬಗೆಗಿನ ಕಾಳಜಿ ದೊಡ್ಡದು. ಅಪ್ಪ-ಮಗನ ನಡುವೆ ಎಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ಒಂದಲ್ಲ ಒಂದು ದಿನ ಅವುಗಳಿಗೆ ಕೊನೆಯಿದೆ. ಇಬ್ಬರು ಒಟ್ಟಿಗೆ ಸೇರಿ ಕುಟುಂಬದೊಳಿತಿಗಾಗಿ ಶ್ರಮಿಸುವ ಮನೋಭಾವ ಅವರದ್ದು. ತಂದೆಯಂತೆಯೇ ಮಗನು ತಂದೆಯ ಗುಣಗಳನ್ನು ಪಡೆದು ಬೆಳೆಯುತ್ತಾನೆ. ಅದಕ್ಕಾಗಿಯೇ ಜನಪದರು ತಮ್ಮ ಅನುಭವದಿಂದ 'ತಂದೆಯಂತೆ ಮಗ, ಮರದಂತೆ ನೊಗ' ಎಂಬ ಗಾದೆಯನ್ನು ಕಟ್ಟಿಕೊಟ್ಟಿದ್ದಾರೆ. ಭಾರತೀಯ ಸಮಾಜದಲ್ಲಿ ಬಹುಪಾಲು ಪುರುಷರೇ ಕುಟುಂಬದ ಜವಾಬ್ದಾರಿ ಹೊಂದಿದ್ದಾರೆ. ಹೆಚ್ಚಾಗಿ ತಂದೆ-ಮಗ ಇಬ್ಬರೂ ಪುರುಷರೇ ಆದ್ದರಿಂದ ಇಡೀ ಕುಟುಂಬದ ಜವಾಬ್ದಾರಿ ಇರುತ್ತದೆ.

ತಾಯಿದ್ದರ ಭೋಗ ತಂದೆಯಿದ್ದರ ಭೋಗ
ಒಂದಿಗ್ಹುಟ್ಟಿದರು ಬರಿ ಭೋಗ । ತಾಯಿತಂದೆ
ನೀವಿದ್ದರೆ ನಮಗೆ ಐಭೋಗ । (ಮತಿಘಟ್ಟ ಕೃಷ್ಣಮೂರ್ತಿ, ೧೯೫೨, ಪು-೬೯)

ಜನಪದರಿಗೆ ತಾಯಿ, ತಂದೆ, ಒಡಹುಟ್ಟಿದವರಿಂದ ಕೂಡಿದ ಕುಟುಂಬವೇ ಅಚ್ಚುಮೆಚ್ಚು. ಅವರಿದ್ದರೆ ಬದುಕಿನ ವೈಭವವು ದುಪ್ಪಟ್ಟಾಗುವುದೆಂದು ಭಾವಿಸುತ್ತಾರೆ. ತಾಯಿ, ತಂದೆ, ಒಡಹುಟ್ಟಿದವರಿಂದಲೇ ಸುಖ ಸಿಗುವುದು. ಪೂರ್ವಜನ್ಮದ ಪುಣ್ಯದಿಂದ ತಾಯಿ, ತಂದೆ, ಒಡಹುಟ್ಟಿದವರು ಜೊತೆಯಲ್ಲಿದ್ದಾರೆಂದು ಸಂಭ್ರಮಿಸುವ ಜನಪದರ ಭಾವವು ಅನುಕರಣೀಯವಾದುದು. ಎಲ್ಲರೂ ಒಂದಾಗಿ ಮಾಡುವ ಕಾರ್ಯವು ಶ್ರೇಷ್ಠಮಟ್ಟದ್ದಾಗಿರುತ್ತದೆಂಬ ನಂಬಿಕೆಯಿಂದ ಬದುಕಿನ ಸವಿ ಹೆಚ್ಚಿಸಿಕೊಂಡಿದ್ದಾರೆ.

ಅಪ್ಪ ಮಕ್ಕಳು ತುಪ್ಪಬಾನವನುಂಡು
ಅ(ಹ)ದಲದುಳಿಬಾಚಿ ಎಗಲೇರಿ । ಮಾಡ್ಯಾರಲ್ಲೆ
ಚನ್ನಣ್ಣನೆಂಬೊ ಒನಕೇಯ । (ಎಸ್. ಜಿ. ಸಿದ್ಧರಾಮಯ್ಯ, ೨೦೦೬, ಪು-೧೫೧)

ಅಪ್ಪ-ಮಕ್ಕಳು ಸೇರಿಕೊಂಡು ತುಪ್ಪ-ಅನ್ನವನ್ನು ಊಟ ಮಾಡಿ, ಚನ್ನಣ್ಣನೆಂಬ ಸುಂದರವಾದ ಒನಕೆಯನ್ನು ತಯಾರಿಸುತ್ತಾರೆ. ಯಾವುದೇ ಕೆಲಸವಿರಲಿ ಅದು ಯಶಸ್ವಿಯಾಗಬೇಕೆಂದರೆ ಅದಕ್ಕೆ ಕೆಲಸ ಮಾಡುವವರಲ್ಲಿ ಉತ್ತಮ ಸೌಹಾರ್ದ ಬಾಂಧವ್ಯ ಗುಣಗಳಿರಬೇಕು. ಒನಕೆಯು ಸುಂದರಗೊಳ್ಳಲು ಅಪ್ಪ-ಮಕ್ಕಳಲ್ಲಿ ಕಂಡುಬರುವ ಹೊಂದಾಣಿಕೆ ಸ್ವಭಾವವೇ ಕಾರಣವಾಗಿದೆ. ಬಂಧುತ್ವದ ನೆಲೆಯಲ್ಲಿ ಜನಪದ ಗೀತೆಗಳನ್ನು ಸೃಜಿಸಿದವರಲ್ಲಿ ಹೆಚ್ಚಾಗಿ ಸ್ತ್ರೀಯರು. ಆ ಕಾರಣಕ್ಕಾಗಿ ಪುರುಷರ ನಡುವೆ ಉತ್ತಮ ಸಂಬಂಧಗಳಿದ್ದರೂ ಅವು ಪುರುಷರ ಹಾಡುಗಳಲ್ಲಿ ಹೆಚ್ಚಾಗಿ

ಉಲ್ಲೇಖವಾಗಿಲ್ಲ. ಸ್ತ್ರೀಯರು ಪುರುಷರ ನಡುವಿನ ಸಂಬಂಧಗಳನ್ನು ತಮ್ಮ ಹಾಡುಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಅಲ್ಲದೇ ಜನಪದ ಕಥೆಗಳಲ್ಲಿ ಅಪ್ಪ ಮಗನ ನಡುವಿನ ಬಾಂಧವ್ಯಗಳನ್ನು ಪ್ರತಿನಿಧಿಸುವ ಉದಾಹರಣೆ ಕಂಡುಬರುತ್ತವೆ. ಸ್ತ್ರೀಯರು ಹೆಚ್ಚು ಭಾವಜೀವಿಗಳು ಆಗಿರುವುದರಿಂದ ಜನಪದ ಗೀತೆಗಳಲ್ಲಿ ಬಂಧುತ್ವ, ಬಾಂಧವ್ಯದ ಭಾವನೆಗಳನ್ನು ಒಡಮೂಡಿಸಿದ್ದಾರೆ.

### ೪.೧.೨ ತಾಯಿ – ಮಗ

'ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ' ಎಂಬ ಜನಪದರ ಗಾದೆಯೇ ತಾಯಿಯ ಬಂಧುತ್ವ ಎಂತಹದು ಎಂಬುದನ್ನು ತಿಳಿಸಿಕೊಡುತ್ತದೆ. ಜಗತ್ತಿನ ಎಲ್ಲ ಸಂಬಂಧಗಳಿಗೂ ಮಿಗಿಲಾದದ್ದು ತಾಯಿಯ ಕರುಳುಬಳ್ಳಿಯ ಸಂಬಂಧ. ತಾಯಿ, ಅವ್ವ, ಜನನಿ, ಅಮ್ಮ – ಹೀಗೆ ಹೆಸರು ನೂರಿರಬಹುದು ಉಸಿರಿನಲ್ಲಿರುವುದು ಅದೇ ಮಮತೆ. ತಾನು ಹಸಿದರೂ ತನ್ನ ಕರುಳುಬಳ್ಳಿಗೆ ತುತ್ತಿಡುವ ಕರುಣಾಮಯಿ. ಭಾರತೀಯ ಪರಂಪರೆಯಲ್ಲಿ ಪ್ರಾಚೀನ ಕಾಲದಿಂದಲೂ ತಾಯಿಗೆ ಗೌರವಾರ್ಹ ಸ್ಥಾನವಿದೆ.

'ತಾಯಿಯೆ ನಿನ್ನ ಮಡಿಲಲಿ, ಕಣ್ಣ ತೆರೆವ ಕ್ಷಣದಲಿ, ಸೂತ್ರವೊಂದು ಬಿಗಿಯಿತೆಮ್ಮ ಸಂಬಂಧದ ನೆಪದಲಿ' ಕವಿ ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ ಹೇಳುವಂತೆಯೇ ತಾಯಿಯ ಮಡಿಲಲ್ಲಿ ಮಗು ಜನಿಸಿದಾಕ್ಷಣ ಕರುಳುಬಳ್ಳಿಯೆಂಬ ಕಕ್ಕುಲಾತಿ ಅವಳಿಗೆ. ಮಮತೆಯ ಋಣಭಾರ ಮಕ್ಕಳಿಗೆ ಸಂಬಂಧ ಎನ್ನುವ ನೆಪದಲಿ ಬಾಳಸೂತ್ರವು ಬೆಸೆಯಿತು. ಜನಪದರ ಜೀವನದಲ್ಲೂ ತಾಯಿ ಶ್ರೇಷ್ಠಳೇ. ಬದುಕಿನುದ್ದಕ್ಕೂ ಮಕ್ಕಳ ಒಳಿತಿಗಾಗಿ ಜೀವ ತೇಯ್ದು ಕಷ್ಟಪಡುತ್ತಾಳೆ. ಎಂತಹ ಕಷ್ಟಗಳೇ ಬರಲಿ ಗಟ್ಟಿ ಸಂಕಲ್ಪ ತೊಡುತ್ತಾಳೆ. ಕನ್ನಡ ಜನಪದ ಗೀತೆಗಳಲ್ಲಿ ತಾಯಿ ಮಕ್ಕಳ ಮಮತೆ, ವಾತ್ಸಲ್ಯ, ಪ್ರೀತಿ, ಕೋಪ, ತಿರಸ್ಕಾರ ಮುಂತಾದ ಭಾವನೆಗಳು ಅತ್ಯಂತ ಹೃದಯಸ್ಪರ್ಶಿಯಾಗಿ ಒಡಮೂಡಿವೆ.

> ಆಡಿಬಾರೋ ಕಂದ ಅಂಗಾಲ ತೊಳದೇನು
> ಬೆಳ್ಳಿ ಬಟ್ಟಲಲ್ಲಿ ತಿಳಿನೀರ । ತಕ್ಕೊಂಡು
> ಬಂಗಾರದ ಮುಖವ ತೊಳೆದೇನು। (ಎಸ್. ಕೆ. ಕರೀಂಖಾನ್, ೧೯೫೫, ಪು–೭೮)

ಗರತಿಯೊಬ್ಬಳು ತನ್ನ ಮಗುವಿನ ಮೇಲಿರುವ ಕಕ್ಕುಲಾತಿಯನ್ನು ಮೇಲ್ಕಂಡ ತ್ರಿಪದಿಯಲ್ಲಿ ಅಭಿವ್ಯಕ್ತಿಸಿದ್ದಾಳೆ. ಮಗನ ಆಟವನ್ನು ನೋಡಿ ಆನಂದಗೊಂಡ ತಾಯಿಯು ತನ್ನ ಮಗನ ಗುಣಗಾನ ಮಾಡಿದ ಪ್ರಸಂಗ ಇಲ್ಲಿದೆ. ಅಂಗಳ ಹುಡಿಯಲ್ಲಿ ಆಡಿಬರುವ ಮಗನ ಕಾಲುಗಳನ್ನು ಬೆಳ್ಳಿಬಟ್ಟಲಲ್ಲಿ ಇರಿಸಿ, ತಿಳಿಯಾದ ನೀರನ್ನು ತೆಗೆದುಕೊಂಡು ತನ್ನ ಕಂದನ ಬಂಗಾರದಂತಹ ಮುಖ ತೊಳೆಯುತ್ತೇನೆ ಎನ್ನುವಲ್ಲಿ ತಾಯಿಯ ವಾತ್ಸಲ್ಯ ಒಡಮೂಡಿದೆ. ತಿಳಿನೀರು ಇಲ್ಲಿ ತೆಂಗಿನ ಎಳೆನೀರು

ಆಗಿರಲೂಬಹುದು. ಮಗುವಿನ ಮುಖವನ್ನು ಬಂಗಾರದ್ದು ಎಂದು ಹೋಲಿಸುವ ತಾಯಿಯ ಕಲ್ಪನೆ ಮೆಚ್ಚುತಕ್ಕದ್ದು.

ಹಳ್ಳಿಯ ಜನ ತಾವು ನಿತ್ಯ ಬದುಕುವ ಬದುಕನ್ನೇ ಹಾಡಾಗಿಸಿದ್ದಾರೆ. ಆಡುಮಾತಿನಲ್ಲಿಯೇ ಹಾಡುಕಟ್ಟಿದ್ದಾರೆ. ಸುಖವಿರಲಿ, ದುಃಖವಿರಲಿ ಬಿಡದೆ ಹಾಡಾಗಿಸಿದ್ದಾರೆ. ನಿತ್ಯದ ಕೆಲಸದಲ್ಲಿ ಮಗ ಎಷ್ಟೇ ಹಠಮಾಡಿದರೂ ತಾಯಿ ಅದನ್ನು ಪ್ರೀತಿಯಿಂದ ನಿವಾರಿಸುವಳು. ಆ ಹಠವನ್ನೇ ಹೊಗಳಿಕೆಯಾಗಿ ಬಳಸಿಕೊಳ್ಳುವಳು. ಅದನ್ನೇ ಇತರರ ಮುಂದೆ ಹೇಳಿಕೊಂಡ ಬಗೆ ಇಂತಿದೆ.

ಕಂದನ ಕಿರಿಕಿರಿ ಇಂದೇನು ಹೇಳಲಿ
ಬಿಂದಿಗೇ ಹಾಲ ಸುರಿಯೆಂದ । ಸಂಜಿಯ
ಚಂದ್ರಮನ ತಂದು ನಿಲಿಸಂದ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೫೨)

ಮಗು ಹಠದ ಸ್ವಭಾವದ್ದು. ಅದರ ಬೇಡಿಕೆ ಈಡೇರಿಸಲಾರದ್ದು. ತುಂಬಿದ ಬಿಂದಿಗೆಯ ಹಾಲನ್ನು ನೆಲಕ್ಕೆ ಚೆಲ್ಲು ಎನ್ನುವ ಹಠ. ಸಂಜೆ ಸಮಯದಲ್ಲಿ ಕಾಣುವ ಚಂದ್ರನನ್ನು ಹಗಲಲ್ಲೇ ತೋರಿಸು ಎನ್ನುವ ಹಠ. ಚಂದ್ರನ ತಂದು ನಿಲ್ಲಿಸಲಾಗದು. ಬಿಂದಿಗೆ ಹಾಲು ನೆಲಕ್ಕೆ ಚೆಲ್ಲಲಾಗದು. ಆದರೂ ಆ ಮಗುವನ್ನು ತಾಯಿ ರಮಿಸುತ್ತಾಳೆ. ಮಗುವಿನ ಕಿರಿಕಿರಿಯನ್ನು ಸಹಿಸಿಕೊಳ್ಳುತ್ತಾಳೆ. ತಾಯಿಗೆ ಮಕ್ಕಳು ಅತ್ತರೂ ಚೆನ್ನ. ನಕ್ಕರೂ ಚೆನ್ನ. ಕಾಡುವ ಮಗನನ್ನೇ ಕೊಡು ಎಂದು ದೇವರಲ್ಲಿ ಬೇಡುತ್ತಾಳೆ.

ಅತ್ತರೆ ಅಳಲೆವ್ವ ಈ ಕೂಸು ನನಗಿರಲಿ
ಕೆಟ್ಟರೆ ಕೆಡಲಿ ಮನಿಗೆಲಸ । ಕಂದನಂಥ
ಮಕ್ಕಳಿರಲೆವ್ವ ಮನೆತುಂಬ । (ವಿನೀತ ರಾಮಚಂದ್ರರಾಯ, ೧೯೬೦, ಪು-೫೪)

ಮೇಲ್ಕಂಡ ಪದ್ಯದಲ್ಲಿ ಅಭಿವ್ಯಕ್ತಿಸಿದಂತೆ ಮನೆಗೆಲಸ ನಿಂತರೂ ಪರವಾಗಿಲ್ಲ. ಮನೆತುಂಬ ಮಕ್ಕಳಿರಬೇಕೆಂದ ಆಶಯ ಜನಪದರಲ್ಲಿದೆ. ತಾಯಿಗೆ ಮಗಳಿಗಿಂತ ಮಗನೇ ಮೇಲೆಯೇ ತುಸು ಪ್ರೀತಿ ಜಾಸ್ತಿ. ಇಂತಹ ಒಲವನ್ನು ಕೆಲವು ಜನಪದ ಗೀತೆಗಳು ಸ್ಪಷ್ಟಪಡಿಸುತ್ತವೆ. 'ಅತ್ತರೆ ಅಳಲಿ ನನ್ನ ಕಂದ. ಕೆಟ್ಟರೆ ಕೆಡಲಿ ಮನೆಯ ಕೆಲಸ' ಎನ್ನುವ ತಾಯಿಯು ಅಳುವಂತಹ ಮಗನೇ ಇರಲಿ ಮತ್ತು ಒಬ್ಬ ಮಗನೊಟ್ಟಿಗೆ ಆಡಲು, ಕಾಡಲು ಮನೆತುಂಬ ಮಕ್ಕಳು ಇರಲಿ ಎಂದು ಬೇಡಿಕೊಳ್ಳುತ್ತಾಳೆ.

ಮಗಳು ಕೊಟ್ಟ ಮನೆಯ ಬೆಳಗುವಳು. ಮಗ ತಮ್ಮ ಪೋಷಣೆಯೊಂದಿಗೆ, ತಮಗೆ ಮೋಕ್ಷ ಕೊಡುತ್ತಾನೆಂಬ ನಂಬಿಕೆ "ತಮ್ಮ ಮನೆತನದ ಗೌರವವನ್ನು ಧರ್ಮವನ್ನು ಚಾಚೂ ತಪ್ಪದೇ ನಡೆಸುವವನು ಮಗ ಮಾತ್ರ ಎಂಬ ನಂಬಿಕೆ" (ಅನಿತಾ ಬಂಡಾರೆ, ೨೦೦೧, ಪು-೩೪) ಈ

ನಂಬಿಕೆಯಿಂದಲೇ ಬಹುಪಾಲು ಜನಪದರಲ್ಲಿ ಗಂಡು ಸಂತಾನದ ಬಯಕೆ ಹೆಚ್ಚಿ ಸ್ವತಃ ಹೆಣ್ಣಾಗಿರುವ ತಾಯಿಯಲ್ಲಿ ಅದರ ತೀವ್ರತೆ, ತುಡಿತ ಇನ್ನೂ ಹೆಚ್ಚಾಗಿ ಕಂಡುಬರುತ್ತದೆ.

ಬಾಂಧವ್ಯಗಳ ಭಾವುಕ ಜಗತ್ತು ವಿಸ್ತಾರವಾದುದು. ಇಲ್ಲಿ ತಂದೆ, ಅಣ್ಣ, ತಮ್ಮ, ತಂಗಿ, ಗೆಳೆಯ, ಗೆಳತಿ, ಗಂಡ, ಹೆಂಡತಿ, ಬಂಧು, ಬಳಗ ಎಲ್ಲರೂ ಇರುತ್ತಾರೆ. ಆದರೆ ಇವರಾರು ಹೆತ್ತ ತಾಯಿಯಂತೆ ಆಗಲಾರರು. ಹೆತ್ತ ತಾಯಿಯ ಸಾಮಿಪ್ಯ ನೀಡುವ ಸುಖ ಅದು ಬೇರೆಯೇ ಆದುದು. ಇದನ್ನು ಬಲ್ಲ ಜನಪದ ಮಹಿಳೆ ತಾಯಿಯನ್ನು ಕುರಿತು ಹೀಗೆ ಹೇಳಿದ್ದಾಳೆ.

ತಾಯಿ ಮನೆ ತಣ್ಣಗೆ ತಂದೆ ಮನೆ ಬೆಚ್ಚಗೆ
ಒಡಹುಟ್ಟಿದರಮನೆ ದಳಸಿರಿಯೋ । ತಾಯಮ್ಮ
ನೀನೀದ್ದರೆ ನಮಗೆ ಸುಖವುಂಟೊ। (ಮತಿಘಟ್ಟ ಕೃಷ್ಣಮೂರ್ತಿ, ೧೯೫೨, ಪು-೬೯)

ಜನಪದ ಹೆಣ್ಣು ತಾಯಿ ಮತ್ತು ಸಮಾಜದ ಇತರ ಜನರಿಗೂ ಇರುವ ವ್ಯತ್ಯಾಸವನ್ನು ತುಂಬಾ ಸೂಕ್ಷ್ಮವಾಗಿ ಗುರುತಿಸಿದ್ದಾಳೆ. ಯಾರಿದ್ದರು ಸುಖವೇ ಆದರೆ ತಾಯಿದ್ದರ ಸುಖವು ದ್ವಿಗುಣವಾಗುತ್ತದೆಂಬ ಅಭಿಪ್ರಾಯ ಜನಪದರದ್ದು. ಸಾವಿರ ಸೌದೆ ಒಲೆಯಲ್ಲಿ ಉರಿಯುತ್ತಿದ್ದರೂ ದೀಪದಂತೆ ಬೆಳಕು ನೀಡಲು ಸಾಧ್ಯವಿಲ್ಲ. ಸೌದೆಯೂ ಬೆಳಕು ನೀಡುತ್ತದೆ. ಆದರೆ ಆ ಬೆಳಕು ದೀಪದ ಬೆಳಕಿನಂತಲ್ಲ. ಸೌದೆಯ ಉರಿ ಬೇರೊಂದು ರೀತಿಯಲ್ಲಿ ಪ್ರಯೋಜನಕಾರಿ. ಕತ್ತಲನ್ನು ನಿವಾರಿಸಿ ಬೆಳಕು ಕೊಡಲು ದೀಪವೇ ಆಗಬೇಕು. ನೂರಾರು ಜನರು ಸಂಬಂಧಿಕರು ತಮ್ಮ ಸುತ್ತಮುತ್ತ ಇರಬಹುದು. ಅವರೆಲ್ಲ ಒಲೆಯಲ್ಲಿನ ಸೌದೆಗಳಂತೆ. ಸೌದೆಯ ಉರಿಯಿಂದ ಶಾಖ, ಕಣ್ಣಿಗೆ ಹೊಗೆ, ಉಸಿರುಗಟ್ಟಿಸುವ ವಾತಾವರಣವೇ ಹೊರತು, ತಣ್ಣನೆಯ ಬೆಳಕಿಲ್ಲ. ತಾಯಿಯ ಪ್ರೀತಿ ನಂದಾದೀಪವಂತೆ. ಮನೆಯನ್ನು ಬೆಳಗುವ ಪ್ರೀತಿ. ದೀಪ ಮನೆಯ ಕತ್ತಲನ್ನು ಹೋಗಲಾಡಿಸಿ ಬೆಳಕನ್ನು ಕೊಡುವಂತೆ ತಾಯಿ ಮನದ ಕತ್ತಲೆಯನ್ನು ಅಂದರೆ ನೋವನ್ನು ಕಳೆದು ಆನಂದವನ್ನು ನೀಡುತ್ತಾಳೆ. ಸೌದೆಯನ್ನು ಬೇರೆಯ ಸಂದರ್ಭದಲ್ಲಿ ಹೆಣ ಸುಡಲು ಬಳಸುತ್ತಾರೆ. ಆದರೆ, ದೀಪ ಸದಾ ಶುಭದ ಸಂಕೇತ. ತಾಯಿಯನ್ನು ಜ್ಯೋತಿಗೆ ಹೋಲಿಸಿರುವ ಜನಪದ ಕವಯಿತ್ರಿ ಇಷ್ಟೆಲ್ಲ ಅರ್ಥವನ್ನು ತುಂಬಿರುವುದು ಅವರ ಪ್ರತಿಭೆಗೆ ಹಿಡಿದ ಕನ್ನಡಿಯಾಗಿದೆ.

'ಗರತಿಯ ಹಾಡು' ಕೃತಿಯ ಅರಿಕೆಯಲ್ಲಿ ಸಿಂಪಿ ಲಿಂಗಣ್ಣ ಅವರು ತಾಯಿ ಕುರಿತು ಹೀಗೆ ಪ್ರಸ್ತಾಪಿಸಿದ್ದಾರೆ. "ತಾಯಿಯ ರಕ್ತ ಮಾಂಸಗಳಿಂದಲೇ ನಮ್ಮ ಮೈಸಿದ್ದವಾಗಿರುತ್ತದೆ; ಆಕೆಯ ಮೊಲೆಹಾಲು ಕುಡಿದು ಬೆಳೆದಿರುತ್ತವೆ; ಆಕೆಯ ಮುದ್ದನುಂಡು ಚೆಲುವಾಗಿರುತ್ತವೆ; ಆಕೆ ಮೈದಡವಿ ನಮ್ಮ ಬೆನ್ನಿಗೆ ಭೀಮರಕ್ಷೆ ಇರಿಸಿದ್ದಾಳೆ. ಆಕೆ ಹಸಿವೆ, ನೀರಡಿಕೆ, ಹೇಸಿಕೆ ಮೊದಲಾದವುಗಳನ್ನು ನಮಗಾಗಿ ತ್ಯಾಗ ಮಾಡಿದ್ದರಿಂದಲೇ ನಾವು ಒಬ್ಬ ವ್ಯಕ್ತಿಯಾಗಿ ನಿಲ್ಲುತ್ತೇವೆ" (ಹಲಸಂಗಿ ಗೆಳೆಯರು, ೧೯೩೧, ಪು-೨೧) ಮಗ ಮುಂದೆ ಬೆಳೆದು ಎಷ್ಟೇ ದೊಡ್ಡವನಾದರೂ ಯಾವುದೇ ಸ್ಥಾನ ಪಡೆದರೂ

ಅವನ ಮೇಲಿನ ಪ್ರೀತಿ ಕಡಿಮೆಯಾಗದು. ಬದುಕಿನಲ್ಲಿ ಮುಂದೆ ಕೆಲವೊಮ್ಮೆ ವಿರಸ, ಮನಸ್ತಾಪಗಳು ಬರುವುದು ಸಹಜ. ಅಂತಹ ಸನ್ನಿವೇಶದಲ್ಲಿ ತಾಯಿಗೆ ಮಗನಾಡುವ ಮಾತು ಇಲ್ಲಿದೆ.

ತಾಯಿ ಮಕ್ಕಳ ಜಗಳ ನ್ಯಾಯ ಮಾಡುವರ್‍ಯಾರ
ವಾಲೀಗಿ ಮುತ್ತ ವಜನೇನ । ಹಡದಮ್ಮ
ನಾ ಆಡಿದ ಮಾತು ನಿಜವೇನ । (ಹಲಸಂಗಿ ಗೆಳೆಯರು, ೨೦೦೮, ಪು-೩೫)

ಜೀವನದಲ್ಲಿ ಸಣ್ಣಪುಟ್ಟ ಮಾತುಗಳಿಗೆ ಕೋಪ, ತಿರಸ್ಕಾರ ಸಹಜ. ಅಂತಹ ಸಂದರ್ಭದಲ್ಲಿ ತಾಯಿ-ಮಕ್ಕಳ ನಡುವಿನ ಹುಸಿ ಜಗಳವನ್ನು ನ್ಯಾಯ ಮಾಡುವರು ಯಾರು ? ಏಕೆಂದರೆ ತಾಯಿಯ ಕೋಪ ತಾತ್ಕಾಲಿಕ. ತಾಯಿಯು ಮಗನು ಅಡ್ಡದಾರಿ ಹಿಡಿದಾಗ, ಕೆಟ್ಟವರ ಸಹವಾಸ ಮಾಡಿದಾಗ ಅವನನ್ನು ತಿದ್ದುವ ಕಾರ್ಯ ಮಾಡುತ್ತಾಳೆ. 'ಜನನಿ ತಾಯಿಯೇ ಮೊದಲ ಗುರು' ಎಂಬ ಗಾದೆಯಂತೆಯೇ ಮಗುವಿನ ಅಭಿವೃದ್ಧಿಗೆ ಮೊದಲು ಶ್ರಮಿಸುವವಳು ತಾಯಿ. ಹೀಗಾಗಿ ತಾಯಿ-ಮಕ್ಕಳ ನಡುವಿನ ಹುಸಿಜಗಳಕ್ಕೆ ನ್ಯಾಯ ಮಾಡುವುದು ಬೇಕಿಲ್ಲ. ಸಮಯ ಕಳೆದ ಮೇಲೆ ತಪ್ಪುಗಳ ಅರಿವಾಗಿ ಹೊಂದಾಣಿಕೆ ತಾನಾಗಿಯೇ ಏರ್ಪಡುತ್ತದೆ. ಕಿವಿಯೋಲೆಗೆ ಅದರಲ್ಲಿನ ಮುತ್ತು ಭಾರವೇ? ಅಂದರೆ ತಾಯಿಗೆ ಮಕ್ಕಳು ಭಾರವೇ? ಮಕ್ಕಳಾಡಿದ ಮಾತುಗಳು ದಿಟವೇನು? ಎಂದು ಮುನಿಸಿಕೊಂಡು ಕುಳಿತಿರುವ ತಾಯಿಗೆ ಮಕ್ಕಳಾಡುವ ಸಮಾಧಾನದ ಮಾತುಗಳು ತಾಯಿ-ಮಗನ ನಡುವಿನ ಸಂಬಂಧಕ್ಕೆ ಸಾಕ್ಷಿಯಾಗಿವೆ.

ತಾಯಿದ್ರೆ, ತವರ್ಹೆಚ್ಚು ತಂದಿದ್ರ ಬಳಗ್ಹೆಚ್ಚು
ಸಾವಿರಕೆ ಹೆಚ್ಚು ಪತಿಪುರುಷ । ಹೊಟ್ಟೀಯ
ಮಾಣಿಕದ ಹರಳು ಮಗಹೆಚ್ಚು । (ಹಲಸಂಗಿ ಗೆಳೆಯರು, ೨೦೦೮, ಪು-೬೫)

ಮೇಲ್ಕಂಡ ಗೀತೆಯಲ್ಲಿ ತಾಯಿಗೆ ತನ್ನ ಮಗನೇ ಸರ್ವಸ್ವ, ತಾಯಿ ಮಗನ ಸಂಬಂಧ ಎಲ್ಲದಕ್ಕೂ ಮಿಗಿಲಾದದ್ದು ಎಂಬುದನ್ನು ಗರತಿಯೊಬ್ಬಳು ಸಾಬೀತುಪಡಿಸಿದ್ದಾಳೆ. ತಾಯಿ ಇದ್ದರೆ ತವರಿನ ಮೋಹ ಹೆಚ್ಚು. ತಂದೆ ಇದ್ದರೆ ಬಂಧು-ಬಳಗದವರ ಸಂಖ್ಯೆ ಹೆಚ್ಚುವುದು. ತವರ ಬಳಗಕ್ಕಿಂತ ಸಾವಿರ ಪಟ್ಟು ಹೆಚ್ಚು ತಾಳಿ ಕಟ್ಟಿದ ಗಂಡ. ಇವರೆಲ್ಲರಗಿಂತಲೂ ಕರುಳು ಕುಡಿಯಾದ ಮಗನಿಗೆ ಹೆಚ್ಚಿನ ಪ್ರಾಶಸ್ತ್ಯ ಎಂದು ಹಾಡಿದ್ದಾಳೆ. ಮಗನನ್ನು ಮಾಣಿಕ್ಯದ ಹರಳಿಗೆ ಇಲ್ಲಿ ಹೋಲಿಸಲಾಗಿದೆ. ತಾಯಿ ತನ್ನ ಮಕ್ಕಳಿಗೆ ಸರ್ವಸ್ವವನ್ನೇ ಧಾರೆಯೆರೆಯುತ್ತಾಳೆ. ತಾಯಿಗೆ ಮಗನ ಮೇಲಿನ ಮೋಹ ಅಂತಹದ್ದು.

"ತಾಯಿ ವಾತ್ಸಲ್ಯದ ಮಡು, ಪ್ರೀತಿಯ ಕೊಡ, ಕಕ್ಕುಲತೆಯ ಬಳ್ಳಿ, ಹೃದಯ ಅಮೃತದ ಕಂಬ ಅದರ ತುಂಬ ಸಂಸ್ಕೃತಿಯ ತುಂಬಿಕೊಂಡು ಜಗದ ಮಕ್ಕಳಿಗೆ ಉಣಬಡಿಸುವ ಈ ದಾನ ಚಿಂತಾಮಣಿಯನ್ನು ಅಕ್ಷರಗಳಲ್ಲಿ ಹಿಡಿದಿಡುವುದು ಅಸಾಧ್ಯವೆಂದೇ ಹೇಳಬೇಕು. ಯಾರು ಎಷ್ಟೇ ಬರೆದರೂ, ಯಾರು ಎಷ್ಟೇ ಚಿತ್ರಿಸಿದರೂ, ಯಾರು ಎಷ್ಟೇ ಶಿಲ್ಪಿಸಿದರೂ, ಯಾರು ಎಷ್ಟೇ ಹಾಡಿದರೂ

ಅದು ಪೂರ್ಣವಾಗಲಾರದು. ಅಂತಹ ವ್ಯಕ್ತಿತ್ವ ತಾಯಿಯದು. ಅವಳು ಉಣ್ಣದೆಯೂ ಹೊಟ್ಟೆ ತುಂಬಿದಂತೆ ಇರುವಾಕೆ; ಉಡದೆಯೂ ಮಾನ ಮುಚ್ಚಿಕೊಂಡು ಇರುವಾಕೆ. ಅವಳು ಕಲಿತುದು ಸರ್ವಜ್ಞನಂತೆ ವಿಶಾಲ ವಿಶ್ವದ ಗರಡಿಯಲ್ಲಿ. ಅಂತೆಯೇ ಅವಳು ಜ್ಞಾನಸಾಗರ ಎನಿಸಿದ್ದಾಳೆ. ಬೆಳ್ಳಿಚುಕ್ಕಿ ಮೂಡುತ್ತಲೇ ಹಾಸಿಗೆಯಿಂದ ಎದ್ದು ಸಂಸಾರದ ನೊಗಹೊತ್ತು ರಾತ್ರಿಯವರೆಗೂ ಗಾಣದೆತ್ತಿನಂತೆ ದುಡಿದರೂ ಅವಳಿಗೆ ದಣಿವೆಂಬುದಿಲ್ಲ." (ಎಂ. ಎಸ್. ವಾಲಿ (ಲೇ.) ೨೦೧೩, ಪು-೩೯)

ತಾಯ್ತನದ ಬಯಕೆ ಪ್ರತಿಯೊಬ್ಬ ಸ್ತ್ರೀಯರಲ್ಲೂ ಸಹಜವಾದುದು. ಜನಪದ ಗರತಿಗೆ ಮಕ್ಕಳ ಪಡೆದಾಗಲೇ ಜನ್ಮ ಸಾರ್ಥಕವೆಂಬ ಭಾವನೆಯಿದೆ. 'ಬಾಲಕರಿಲ್ಲದ ಬಾಲೀದ್ಯಾತರ ಜನ್ಮ' ಎಂದು ತಮ್ಮೊಳಗಿನ ತಾಯ್ತನದ ಬಯಕೆಯನ್ನು ಹೊರಹಾಕುತ್ತಾರೆ. ಜನಪದರಲ್ಲಿ ಹೆಣ್ಣು-ಗಂಡು ಮಕ್ಕಳೆಂಬ ಭೇದವಿಲ್ಲ. ಆದರೂ ಕೆಲವೊಂದು ಸಂದರ್ಭದಲ್ಲಿ ಹೆಣ್ಣನ್ನು ಹೆತ್ತು ಗಂಡನ ಮನೆಗೆ ಕಳುಹಬೇಕೆಂದು ಸ್ತ್ರೀ ಸಂತಾನವನ್ನು 'ಹೆಣ್ಣು ಹೆರಲು ಬ್ಯಾಡ ಹೆರವರಿಗೆ ಕೊಡಬ್ಯಾಡ' ಎನ್ನುವುದರ ಮೂಲಕ ನಿರಾಕರಿಸುತ್ತಾ ಬಂದಿದ್ದಾರೆ. ಮಗನಾದರೆ ಬದುಕಿನ ಕೊನೆವರೆಗೂ ತಮ್ಮ ಜೊತೆಯಲ್ಲಿದ್ದು ಆರೈಕೆ ಮಾಡುತ್ತಾನೆಂಬ ಸ್ವಾರ್ಥವು ಅಡಗಿದೆ. ಅಲ್ಲದೇ ಸತ್ತ ನಂತರ ಅಂತ್ಯಸಂಸ್ಕಾರಕ್ಕೆ ಮಗನಾಗಬೇಕೆಂಬ ಸಂಪ್ರದಾಯಕ್ಕೆ ಮಣಿದು ಗಂಡುಮಗನನ್ನು ಬಯಸುತ್ತಾರೆ.

ತಾಯಿ ಮಮತೆಯ ಸೆಲೆ. ಅಮೃತದಂತಹ ಹಾಲನ್ನು ಉಣಿಸಿ ಬೆಳೆಸುತ್ತಾಳೆ. ತನ್ನ ಹೊಟ್ಟೆ ಬಟ್ಟೆಯನ್ನು ಕಟ್ಟಿ ಮಕ್ಕಳಿಗೆ ಸಿಹಿಯನ್ನು ತಿನಿಸುತ್ತಾಳೆ. ಈ ಗೀತೆಯ ಧ್ವನಿ ಇರುವುದು ಬೆಳದಿಂಗಳೀಗು ಮರಿಯ ಹಿಡಿದಿದ್ದಿ ನಿನಸೆರಗ ಎಂಬ ಸಾಲಿನ ಮೇಲೆ ಬೆಳದಿಂಗಳ ಬೆಳಕಿನ ಶಾಖವಿಲ್ಲ. ಬೆಳದಿಂಗಳ ಶಾಖಕ್ಕೆ ಮಕ್ಕಳು ನೊಂದಾವೆಂದು ಭಾವಿಸಿ ಸೆರಗು ಅಡ್ಡ ಹಿಡಿಯುವ ಅದಮ್ಯವಾದ ಪ್ರೀತಿ ತಾಯಿಯದು. ಮಕ್ಕಳಿಗೆ ಯಾವುದೇ ಕಷ್ಟ ತಟ್ಟಬಾರದೆಂಬ ಅಪೇಕ್ಷೆ ಅವಳದ್ದು. ಮಕ್ಕಳಿಗೆ ತಾಯಿಯ ಸೆರಗು ರಕ್ಷಣಾ ಕವಚವಿದ್ದಂತೆ. ಮಕ್ಕಳ ನೋವು ನಲಿವುಗಳಿಗೆ ಮಿಡಿಯುವ ಜೀವ ತಾಯಿಯದು.

ತಾಯಿ ಮಗುವಿನ ಮಮತೆ ಸಾರ್ವತ್ರಿಕವಾದುದು. ಜಗತ್ತಿನ ಜೀವಜಾಲದ ತುಂಬೆಲ್ಲ ವ್ಯಾಪಿಸಿರುವಂತಹದ್ದು. ಪ್ರಕೃತಿಯಲ್ಲಿ ಪ್ರಕೃತಿಯ ನಿತ್ಯದ ವ್ಯಾಪಾರವು ತಾಯಿಯ ಸ್ಮರಣೆಯನ್ನು ಹಸಿರಾಗಿ ಉಳಿಯುವಂತೆ ಮಾಡುತ್ತದೆ.

ಹೆಣ್ಣಿಗೆ ಬಯಕೆಯು ಅತ್ಯಂತ ವೈಯಕ್ತಿಕವಾಗಿ ಹುಟ್ಟುವಂಥದು. ತಾಯಿಯಾಗುವ ಹಂಬಲ ತೀರ ವೈಯಕ್ತಿಕವಾದರೂ ಕುಟುಂಬ ಹಾಗೂ ಸಮಾಜದ ಪ್ರಭಾವ ಸಾಕಷ್ಟಿದೆ. ಮಕ್ಕಳನ್ನು ಪಡೆದಿದ್ದಾಗ ವೈಯಕ್ತಿಕವಾಗಿ ಅನಾಥ ಪ್ರಜ್ಞೆಯನ್ನು ಅನುಭವಿಸುವ ಸ್ಥಿತಿ ನಿರ್ಮಾಣವಾಗುತ್ತದೆ. ಮಕ್ಕಳ ಬಯಕೆಯಲ್ಲಿ ಸಾಮಾಜಿಕ ಅಪೇಕ್ಷೆಯ ಪರಿಣಾಮವಾಗಿರುವುದನ್ನು ಕಾಣುತ್ತೇವೆ. ಹೆಣ್ಣಿನ ವೈಯಕ್ತಿಕ ಆಸೆಗಳು ಭಾರತೀಯ ಸಮಾಜದಲ್ಲಿ ಸಾಮಾಜಿಕ ಮಾನದಂಡಗಳಿಂದ ನಿಯಂತ್ರಣಕ್ಕೊಳಗಾಗುವುದು ಈ ಸಮಾಜದ ಬಹುದೊಡ್ಡ ದುರಂತವೆನ್ನಬಹುದು.

ಮಕ್ಕಳಿಲ್ಲದ ಹೆಣ್ಣಿನ ಬದುಕು ಹೀನಾಯವಾದುದು. ಅದೊಂದು ನಿರರ್ಥಕ ಬದುಕು. ಅವಳು ಮುಟ್ಟಿದ ವಸ್ತುಗಳೆಲ್ಲ ಬರಡಾಗುತ್ತವೆಂಬ ನಂಬಿಕೆ ಜನಪದ ಸಮಾಜದಲ್ಲಿದೆ.

ಬಾಲಕರಿಲ್ಲದ ಬಾಲೀದ್ಯಾತರ ಜನ್ಮ
ಬಾಡೀಗಿ ಎತ್ತು ದುಡಿದ್ಹಂಗ । ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದಂಗ । (ಹಲಸಂಗಿ ಗೆಳೆಯರು, ೧೯೩೧, ಪು-೮೧)

ಕುಟುಂಬದಲ್ಲಿನ ಮಕ್ಕಳಿಲ್ಲದ ಹೆಣ್ಣಿನ ಸ್ಥಿತಿಯನ್ನು ಮೇಲ್ಕಂಡ ಗೀತೆ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ. ಅವಳು ಬಾಡಿಗೆಗೆ ತಂದ ಎತ್ತಿನಂತೆ. ಬಾಡಿಗೆಗೆ ತಂದ ಎತ್ತಿನ ಆಯಾಸವನ್ನು ಯಾರೂ ಗಮನಿಸುವುದಿಲ್ಲ. ಅದರಿಂದ ಹೆಚ್ಚಿನ ಕೆಲಸವನ್ನು ತೆಗೆಯುವುದು ಹೇಗೆ ಎಂಬುದರ ಕಡೆಗೆ ಎಲ್ಲರ ಗಮನವಿರುತ್ತದೆ. ಕೃಷಿ ಪ್ರಧಾನ ಕುಟುಂಬಗಳಲ್ಲಿ ವರ್ಷಪೂರ್ತಿ ಒಂದಲ್ಲ ಒಂದು ಕೆಲಸ ಇದ್ದೇ ಇರುತ್ತದೆ. ಹೆರಿಗೆಯಾಧ ಹೆಣ್ಣಿಗೆ ಮಗುವಿಗೆ ಹಾಲುಣಿಸುವ ಕಾಲದಲ್ಲಿ ಒಂದು ವರ್ಷವಾದರೂ ವಿಶ್ರಾಂತಿ ಸಿಗುತ್ತದೆ. ಆದರೆ ಮಕ್ಕಳಿಲ್ಲದ ಹೆಣ್ಣು ಸಾಯುವವರೆಗೆ ಬಾಡಿಗೆ ಎತ್ತು ದುಡಿದಂತೆ ವಿಶ್ರಾಂತಿ ಇಲ್ಲದೆ ದುಡಿಯುತ್ತಲೇ ಇರಬೇಕಾಗುತ್ತದೆ. ಅವಳ ಹಸಿವು ಬಾಯಾರಿಕೆಯನ್ನು ಯಾರೂ ವಿಚಾರಿಸುವುದಿಲ್ಲ. ಅವಳ ಸ್ಥಿತಿ ಹಾಸಿ ಉಂಡ ಬಾಳೆ ಎಲೆಗೆ ಹೋಲಿಸಲಾಗಿದೆ. ಊಟಕ್ಕೆ ಮೊದಲು ಬಾಳೆ ಎಲೆ ನೋಡಲು ತುಂಬಾ ಚೆಂದ. ಆದರೆ ಅದನ್ನು ಹಾಸಿ ಉಂಡಾದ ಬಳಿಕ ತಿಪ್ಪೆಗುಂಡಿಗೆ ಎಸೆಯುತ್ತಾರೆ. ಹಾಗೆಯೇ ಮಕ್ಕಳಿಲ್ಲದ ಹೆಣ್ಣನ್ನು ಮನೆಯ ನಾನಾ ಕೆಲಸ ಕಾರ್ಯಗಳಿಗೆ ಬಳಿಸಿ ದೂರವೇ ಇಡುತ್ತಾರೆ. ಜನಪದರಲ್ಲಿರುವ ಮಕ್ಕಳಿಲ್ಲದ ಹೆಣ್ಣಿನ ಶೋಷಣೆಯ ಅನಂತ ಮುಖಗಳನ್ನು ಪ್ರಸ್ತುತ ಗೀತೆ ಬಿಚ್ಚಿಡುತ್ತದೆ.

ಒಂದೆಡೆ ಮಕ್ಕಳಿಲ್ಲದ ಬಾಳಿನ ಗೋಳು ಜನಪದ ಗೀತೆಗಳಲ್ಲಿ ವಿಸ್ತೃತವಾಗಿ ಚಿತ್ರಿತವಾಗಿರುವಂತೆ ಇನ್ನೊಂದೆಡೆ ಮಕ್ಕಳಿದ್ದ ಮನೆಯ ಸುಖಸಂತೋಷವನ್ನು ವರ್ಣಿಸಲಾಗಿದೆ.

ಕೂಸು ಇದ್ದ ಮನಿಗಿ ಬೀಸಣಿಗೆ ಯಾತಕ
ಕೂಸು ಕಂದಯ್ಯ ಒಳಹೊರಗ । ಆಡಿದರ
ಬೀಸಣಿಗೆ ಗಾಳಿ ಸುಳಿದಾವು । (ಹಲಸಂಗಿ ಗೆಳೆಯರು, ೧೯೩೧, ಪುಟ-೬೧)

ಶೈಶವಾವಸ್ಥೆಯಲ್ಲಿನ ಮಗುವಿಗೆ ಕಾಲು ಬಂದ ಮೇಲೆ ಮನೆಯ ತುಂಬ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಸುಳಿದಾಡುತ್ತಿದ್ದರೆ ಬೀಸಣಿಕೆಯಿಂದ ಗಾಳಿ ಹಾಕಿದಂತೆ ಮನೆಯೊಳಗೆಲ್ಲ ಗಾಳಿ ಹರಿದಾಡುತ್ತದೆ. ಜನಪದ ಕವಿಯ ಪ್ರತಿಭೆ ಮಗುವಿನ ಚಹರೆಯನ್ನು ಚೆನ್ನಾಗಿ ರೂಪಿಸುವಲ್ಲಿ ಬಳಕೆಗೊಂಡಿದೆ. ಕಾವ್ಯದಲ್ಲಿ ವಸ್ತುಸ್ಥಿತಿಯನ್ನು ರೂಪಾಂತರಗೊಳಿಸಿ ಕವಿ ಕಟ್ಟಿಕೊಡುವ ಧ್ವನಿ ಪರಂಪರೆ ಅಪರೂಪದ್ದಾಗಿರುತ್ತದೆ. ಜನಪದ ಕವಿಯ ಪ್ರತಿಭೆಯಿಂದ ಧ್ವನಿಬದ್ಧವಾದ ಮಾತು ಪ್ರಸ್ತುತ ಗೀತೆಯಲ್ಲಿ ಮೂಡಿನಿಂತಿವೆ.

ತನ್ನ ತುಂಟಾಟಗಳ ಮೂಲಕ ಮನಗೆಲ್ಲುವ ಮಗು ಮನೆಯಲ್ಲಿ ಆಡಿದರೆ ಸಿಗುವ ಮಾನಸಿಕ ತೃಪ್ತಿಯನ್ನು ಈ ಗೀತೆಯಲ್ಲಿ ಸೊಗಸಾಗಿ ವರ್ಣಿಸಲಾಗಿದೆ. ಒಂದೆಡೆ ಮಕ್ಕಳಿಲ್ಲದವರು ಪಡುವ ಯಾತನೆ, ಹೆಣ್ಣಿನ ಮಾನಸಿಕ ಸ್ಥಿತಿಯನ್ನು ಜನಪದ ಗೀತೆಗಳು ಸೂಕ್ಷ್ಮವಾಗಿ ಎಳೆಎಳೆಯಾಗಿ ಬಿಚ್ಚಿಟ್ಟರೆ, ಇನ್ನೊಂದೆಡೆ ಮನೆ ತುಂಬ ಮಕ್ಕಳಿರುವವರ ಸುಖ–ಸಂತೋಷ–ನೆಮ್ಮದಿಗಳನ್ನು ಬಿಚ್ಚಿಡುತ್ತವೆ. ಜನಪದ ಗೀತೆಗಳಲ್ಲಿ ಜನಪದರ ನೋವು ನಲಿವುಗಳನ್ನು ತುಂಬಿಕೊಂಡಿವೆ.

ವೈಜ್ಞಾನಿಕ ಯುಗದಲ್ಲಿಯೂ ಜನಪದ ಗೀತೆಗಳಲ್ಲಿನ ಮೌಲ್ಯಗಳು ತೀರ ಪ್ರಸ್ತುತವೆನಿಸುತ್ತವೆ. ಶತಶತಮಾನಗಳಿಂದ ಮಾನವನ ಸಂಬಂಧಗಳ ನೆಲೆಯನ್ನು ಬಲ್ಲ ಜನಪದರು ಅತ್ಯಂತ ಶಕ್ತಿಯುತವಾಗಿ ಬಂಧುತ್ವವನ್ನು ಗೀತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಆದ್ದರಿಂದಲೇ ಜನಪದ ಗೀತೆಗಳು ಸರಳತೆಯಲ್ಲಿಯೂ ಸತ್ವಯುತವಾಗಿವೆ. ಬಾಂಧವ್ಯಗಳ ಬೆಸುಗೆಯನ್ನು ಹೊಂದಿ ಅರ್ಥಗರ್ಭಿತವಾಗಿವೆ.

### ೪.೧.೩ ತಂದೆ – ಮಗಳು

ಹಡೆದವ್ವನಷ್ಟೇ ಸಮಾನ ಗೌರವಾರ್ಹ ಸ್ಥಾನ ತಂದೆಯದು. ಒಂಬತ್ತು ತಿಂಗಳು ಗರ್ಭಧರಿಸಿ ಹೆರದಿದ್ದರೂ ತಂದೆಯ ಪ್ರೀತಿ ವಿಶೇಷವಾದದ್ದು. ತಾಯಿಗೆ ತನ್ನ ಮಗನ ಮೇಲೆ ಅಕ್ಕರೆ ಸ್ವಲ್ಪ ಜಾಸ್ತಿಯಿದ್ದಂತೆ. ತಂದೆಗೂ ತನ್ನ ಮಗಳ ಮೇಲೆ ಅಕ್ಕರೆ ಜಾಸ್ತಿ. ಪುರುಷ ಪ್ರಧಾನವಾಗಿರುವ ಕುಟುಂಬಗಳಲ್ಲಿ ತಂದೆಯದೇ ಪ್ರಧಾನ ಪಾತ್ರ. ಇಡೀ ಕುಟುಂಬದ ಜಬಾಬ್ದಾರಿಯೊಂದಿಗೆ ತನ್ನ ಕರ್ತವ್ಯಗಳನ್ನು ಆತ ಸರಿಯಾಗಿ ನಿರ್ವಹಿಸಿಕೊಂಡು ಬದುಕಿನ ಓರೆಕೋರೆಗಳನ್ನು ಅನುಭವಿಸುತ್ತಾನೆ. ತಂದೆಗೆ ತನ್ನ ಮಗಳಲ್ಲಿ ಸತ್ತಿರುವ ತನ್ನವ್ವನನ್ನು ಕಂಡಷ್ಟೇ ತೃಪ್ತಿ. ಹೀಗಾಗಿ ಮಗಳನ್ನು 'ಅವ್ವ' ಎಂದು ಸಂಭೋಧಿಸುತ್ತಾನೆ. ಇದು ತಂದೆ–ಮಗಳ ನಡುವಿನ ಬಾಂಧವ್ಯಕ್ಕೆ ಉದಾಹರಣೆಯಾಗಿದೆ. ತಂದೆಯಾದವನು ಮಗಳ ಬಗ್ಗೆ ಹಾಡಿದ್ದು ಬಹಳ ಕಡಿಮೆ. ಆದರೆ ಮಗಳಾದ ಗರತಿಯು ತನ್ನ ಹಡೆದಪ್ಪನ ಕುರಿತು ಸಾಕಷ್ಟು ಹಾಡು ಕಟ್ಟಿದ್ದಾಳೆ.

ತಂದೆ ನನ ಹಡೆದಪ್ಪ ಉಂಡು ಹೊರೆಯಕ ಹೊಂಟ
ಜಂಬ ಹಾಸೀದ ಜಮಖಾನ । ನನ ಮನಿಯ
ಗೊಂಬಿ ಬೀಸ್ಯಾವ ಸುಳಿಗಾಳಿ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು–೭೧)

ಊಟವನ್ನು ಮಾಡಿ, ವೀಳ್ಯವನ್ನು ಮೆಲ್ಲುತ್ತಾ ಮನೆಯ ಹೊರಗಿನ ಕಟ್ಟೆಯ ಕಡೆಗೆ ಹೊರಟಿದ್ದಾನೆ. ಆತನಿಗಾಗಿಯೇ ಅಲ್ಲಿ ಹಾಸೀದ ಜಮಖಾನವಿದೆ. ಆತ ಮನೆಯ ಹೊರಗಡೆ ಮಾತನಾಡುತ್ತ ಕುಳಿತರೆ ಸಾಕು ಮನೆಯೊಳಗಿನ ಕಂಬದ ಬೊಂಬೆಗಳು ಬೀಸಣಿಕೆ ಹಿಡಿದು ಬೀಸುತ್ತವೆ. ಅದರಿಂದ ತಂಪಾದ ಗಾಳಿ ಮನೆಯ ಒಳಹೊರಗೂ ಬೀಸುತ್ತವೆ ಎಂಬುದು ಗರತಿಯ

ಆಶಯವಾಗಿದೆ. ತಂದೆಯು ಕುಟುಂಬದ ಆಧಾರ. ಅವನಿದ್ದರೇ ಬಂಧುಬಳಗ ಹೆಚ್ಚುತ್ತದೆ. ಅವನಿಂದಲೇ ಕುಟುಂಬದ ಶ್ರೇಯಸ್ಸು ಎಂಬ ನಂಬಿಕೆ ಗರತಿಯರದು. ಹಡೆದಪ್ಪನು ಇಳಿವಯಸ್ಸಿನಲ್ಲಿ ಯಾವುದೇ ಕೆಲಸ-ಕಾರ್ಯಗಳಲ್ಲಿ ತೊಡಗುವುದು. ಬಹುಪಾಲು ಹೆತ್ತವರ ದುಡಿಮೆಯಿಂದಲೇ ಬದುಕಿದ ನಾವು ಹೆತ್ತವರ ಋಣ ತೀರಿಸಬೇಕಾದರೆ ವೃದ್ಧಾಪ್ಯದ ಕಾಲದಲ್ಲಿ ಮನೆಯ ಭೂಷಣವಾಗಿದ್ದರೆ ಸಾಕು ಎಂಬ ಒಳಾರ್ಥವು ಇಲ್ಲಿ ಅಡಕಗೊಂಡಿದೆ. ಪ್ರಸ್ತುತ ಸಂದರ್ಭದಲ್ಲಿ ಇಂತಹ ದೃಷ್ಟಾಂತಗಳು ಅನುಕರಣೀಯವೆನಿಸಿವೆ.

ಮಗಳು ಬೆಳೆದು ದೊಡ್ಡವಳಾದ ಮೇಲೆ ಮದುವೆ ಮಾಡಿಕೊಂಡು ಗಂಡನ ಮನೆ ಸೇರುತ್ತಾಳೆ. ಆಗ ಹೆತ್ತವರ ದುಃಖ ಅಷ್ಟಿಷ್ಟಲ್ಲ. ಹೆಣ್ಣು ಮಕ್ಕಳನ್ನೇ ಹೆತ್ತು, ದುಃಖವನ್ನು ಅನುಭವಿಸುವ ಸನ್ನಿವೇಶವನ್ನು ಗರತಿಯೊಬ್ಬಳು ಹಾಡಿದ್ದಾಳೆ.

ಹೆಣ್ಣು ಮಕ್ಕಳ ಕಳುವಿ ಕಣ್ಣಿಗೆ ನೀರು ತಂದು
ಸಣ್ಣ ಸೆಲ್ಲೆದಲಿ ಮುಸುಕ್ಹಾಕಿ । ಹಡೆದಪ್ಪ
ಹೆಣ್ಣು ಸಾಕೆಂದ ಜನುಮಾಕ । (ತೀ. ನಂ. ಶ್ರೀಕಂಠಯ್ಯ, ೧೯೫೩, ಪು-೧೧)

ಮೇಲಿನ ಪದ್ಯದಲ್ಲಿ ಹೆಣ್ಣುಮಕ್ಕಳನ್ನು ಪಡೆದ ಹಡೆದಪ್ಪನ ಅಳಲು ಅಭಿವ್ಯಕ್ತಗೊಂಡಿದೆ. ಗಂಡುಮಕ್ಕಳಿಲ್ಲ. ಎಲ್ಲ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಟ್ಟು ಗಂಡನ ಮನೆಗೆ ಕಳುಹಿಸುವ ಸಂದರ್ಭ. ಹೆಣ್ಣು ಮಕ್ಕಳ ಮುಂದೆ ತನ್ನ ದುಃಖ ತೋರಿಸಿಕೊಳ್ಳದೇ ಅವರನ್ನು ಗಂಡನ ಮನೆಗೆ ಕಳುಹುತ್ತಾನೆ. ಅವರ ಅಗಲುವಿಕೆಯಿಂದ ಕಣ್ಣಲ್ಲಿ ನೀರು ತಂದು ದುಃಖಿಸುತ್ತಾನೆ. ಇದುವರೆಗೆ ಪ್ರೀತಿಯಿಂದ ಸಾಕಿ ಸಲುಹಿದ ಮಕ್ಕಳು ಗಂಡನ ಮನೆಯಲ್ಲಿ ಯಾವ ರೀತಿ ಇದ್ದಾರು? ಅತ್ತೆ, ಪತಿ, ಮಾವ, ನಾದಿನಿ ಮೈದುನರ ನಡುವೆ ಹೇಗೆ ಜೀವನ ಸವೆಸುವರು? ಎಂಬುದನ್ನು ಕಲ್ಪಿಸಿಕೊಂಡ ಹಡೆದಪ್ಪ ಈ ಜನ್ಮಕ್ಕೆ ಹೆಣ್ಣು ಸಾಕು ಎಂದು ದುಃಖಿಸುತ್ತಾನೆ. ಇನ್ನೊಂದೆಡೆಯಲ್ಲಿ ಗರತಿಯೊಬ್ಬಳು. 'ಹೆಣ್ಣು ಹೆರಲುಬ್ಯಾಡ, ಹೆರವರಿಗೆ ಕೊಡಬ್ಯಾಡ' ಎಂದು ಅತ್ತೆಮನೆಯ ಕಷ್ಟವನ್ನು ವ್ಯಕ್ತಪಡಿಸಿದ್ದಾಳೆ. ಹೆಣ್ಣುಮಕ್ಕಳೆಂದರೆ ಪ್ರೀತಿ ತೋರುವ ಅಪ್ಪನಿಗೆ ಪ್ರತಿಯಾಗಿ ಅಷ್ಟೇ ಪ್ರೀತಿ ದೊರಕುತ್ತದೆ.

ಮುತ್ತಿನ ಮೂಗುತಿ ನಮ್ಮಪ್ಪ ಮಾಡಿಸಿಕೊಟ್ಟ
ಮುತ್ತೈದೆತನ ಶಿವ ಕೊಟ್ಟ । ಮೇಲೆ ಬಹು
ಭಾಗ್ಯವನು ಕೊಟ್ಟ ಶ್ರೀಹರಿಯು । (ಹಲಸಂಗಿ ಗೆಳೆಯರು, ೧೯೩೧, ಪು-೩೯)

ಉಡುಗೊರೆ ಕೊಟ್ಟ ಅಪ್ಪನನ್ನು, ಮುತ್ತೈದೆತನ ಕೊಟ್ಟ ಶಿವನನ್ನು ಸದಾಕಾಲ ಸ್ಮರಿಸುತ್ತಾರೆ. ಯಾವಾಗಲೂ ತವರ ಬಗ್ಗೆ ಚಿಂತಿಸುವ ಹೆಣ್ಣುಮಕ್ಕಳಿಗೆ ತವರಿನ ಉಡುಗೊರೆಯೆಂದರೆ ಬಲುಪ್ರೀತಿ. ಮದುವೆ, ಸೀಮಂತ, ಹಬ್ಬಗಳಲ್ಲಿ ತವರವರು ಸೀರೆ-ಕುಪ್ಪಸ, ಒಡವೆ-ವಸ್ತ್ರ, ಬೆಳ್ಳಿ-ಬಂಗಾರ, ಇವಲ್ಲದೇ ಹೊಲ-ಮನೆ, ಹಸು-ಕರು, ಹಿಂಡುವ ಎಮ್ಮೆಗಳನ್ನು ಮಗಳಿಗಾಗಿ ನೀಡುತ್ತಾರೆ. ತವರು ಮನೆ

ಉಡುಗೊರೆ ಪಡೆದು, ಗಂಡನ ಮನೆಗೆ ಹೋಗುವ ಹೆಣ್ಣುಮಗಳು ತನ್ನ ತವರಿನ ಮೇಲಿನ ಮೋಹವನ್ನು ಜನಪದ ಗೀತೆಗಳಲ್ಲಿ ಸಾಕಷ್ಟು ಅಭಿವ್ಯಕ್ತಿಸಿದ್ದಾಳೆ.

ಚೊಚ್ಚಲ ಬಸುರಿಯನ್ನು ಹೆರಿಗೆಗಾಗಿ ತವರುಮನೆಗೆ ಕರೆಸಿಕೊಳ್ಳುವುದು ಸಂಪ್ರದಾಯ. ಎಷ್ಟೇ ಕಡುಬಡವರಾದರೂ ತವರಿನವರು ಈ ಸಂಪ್ರದಾಯವನ್ನು ತಪ್ಪದೇ ಪಾಲಿಸುತ್ತಾರೆ. ಏಕೆಂದರೆ ಬಸುರಿಯು ಯಾರ ಅಂಜಿಕೆಯಿಲ್ಲದೆ ತಂದೆತಾಯಿಯಲ್ಲಿ ತನ್ನ ಬಯಕೆಯನ್ನು ಈಡೇರಿಸಿಕೊಂಡು ತಿಂದುಂಡು ಸುಖವಾಗಿರಬೇಕು. ಮುಂದೆ ಹುಟ್ಟುವ ಕೂಸು ದಷ್ಟಪುಷ್ಟವಾಗಿ ಮಾನಸಿಕವಾಗಿ ಸದೃಢವಾಗಿರಬೇಕು. ಇವೇ ಮೊದಲಾದ ಆಶಯಗಳು ಈ ಸಂಪ್ರದಾಯದ ಹಿಂದಿರುವಂತೆ ತೋರುತ್ತದೆ. ತಂದೆತಾಯಿಯ ಪ್ರೀತಿ, ಅಕ್ಕರೆಯ ಅಣ್ಣತಂಗಿಯರ ನಡುವೆ ಅವಳಿಗೆ ಪ್ರಸವವೇದನೆ ಮರೆಯಾಗುತ್ತದೆ. ಕೂಸು ಹುಟ್ಟಿದಾಗ ಅವಳು ಅಪಾರ ಆನಂದವನ್ನು ಹೊಂದುತ್ತಾಳೆ. ಹೆರಿಗೆಯ ನಂತರ ನಾಲ್ಕಾರು ತಿಂಗಳು ತವರುಮನೆಯಲ್ಲಿದ್ದು ಗಂಡನ ಮನೆಗೆ ಹೊರಡುತ್ತಾಳೆ. ತಂದೆತಾಯಿಯರು ಎಷ್ಟೇ ಪ್ರೀತಿಸಿದರೂ ತವರು ಸ್ಥಿರವಲ್ಲ. ಮುಂದೆ ಒಂದು ದಿನ ಗಂಡನ ಮನೆಗೆ ಹೊರಡಲೇಬೇಕು. ಹಾಗೆ ಹೊರಟು ನಿಂತಿರುವ ಹೆಣ್ಣುಮಗಳ ಹೃದಯದ ವೇದನೆಯನ್ನು ಕೆಳಗಿನ ಪದ್ಯದಲ್ಲಿ ಕಾಣುತ್ತೇವೆ.

ತೊಟ್ಟೀಲ ಹೊತ್ಕೊಂಡು ತೌರ್ಬಣ್ಣ ಉಟ್ಕೊಂಡು
ಅಪ್ಪ ಕೊಟ್ಟೆಮ್ಮೆ ಹೊಡಕೊಂಡು । ತೌರೂರ
ತಿಟ್ಹತ್ತಿ ತಿರುಗಿ ನೋಡ್ಯಾಳೋ । (ಹಲಸಂಗಿ ಗೆಳೆಯರು, ೧೯೩೧, ಪು-೪೮)

ಮೊದಲ ಹೆರಿಗೆಗಾಗಿ ತವರುಮನೆಗೆ ಬಂದ ಹೆಣ್ಣುಮಗಳೊಬ್ಬಳ ತವರೂರಿನ ಪ್ರೀತಿಯು ಮೇಲಿನ ಸಾಲುಗಳಲ್ಲಿ ಕಂಡುಬರುತ್ತದೆ. ಜನಪದರು ಸಾಮಾನ್ಯವಾಗಿ ಮೊದಲ ಹೆರಿಗೆಗೆ ಹೆಣ್ಣುಮಗಳನ್ನು ತವರು ಮನೆಗೆ ಕರೆತರುತ್ತಾರೆ. ಹೆರಿಗೆಯಾದ ಆರು ತಿಂಗಳಿಗೊ ಇಲ್ಲವೇ ಎಂಟು ತಿಂಗಳಿಗೊ ಗಂಡನ ಮನೆಯವರು ಕರೆಯಲು ಬರುತ್ತಾರೆ. ಹೀಗೆ ತವರು ತೊರೆದು ಹೋಗುವಾಗ ತವರಿನಿಂದ ಮಗುವಿಗಾಗಿ ಮರದ ತೊಟ್ಟಿಲು, ಹೆಣ್ಣುಮಗಳಿಗೆ ತವರಿನ ಸೀರೆ ಜೊತೆಗೆ ಮಗುವು ಸದಾ ಆರೋಗ್ಯದಿಂದ ಇರಲೆಂದು ತಮ್ಮ ಮನೆಯಲ್ಲಿ ಹೈನುವ ಅಂದರೆ ಹಾಲು ಹಿಂಡುವ ಎಮ್ಮೆಯನ್ನು ಮಗಳಿಗೆ ಹಡೆದಪ್ಪ ಪ್ರೀತಿಯಿಂದ ನೀಡುತ್ತಾನೆ. ಹೀಗೆಯೇ ತೊಟ್ಟಿಲನ್ನು ಹೊತ್ತುಕೊಂಡು, ತವರಿನ ಸೀರೆಯನ್ನು ಉಟ್ಟುಕೊಂಡು ಮತ್ತು ಅಪ್ಪ ಕೊಟ್ಟಿರುವ ಎಮ್ಮೆಯನ್ನು ಹೊಡೆದುಕೊಂಡು ಗಂಡನ ಮನೆಗೆ ಹೋಗುವಾಗ ಬೆಟ್ಟವನ್ನು ಹತ್ತಿದ ಹೆಣ್ಣುಮಗಳು ತವರನ್ನು ಪ್ರೀತಿಯಿಂದ ಮತ್ತೆ ಮತ್ತೆ ನೋಡುತ್ತಾಳೆ. ಏಕೆಂದರೆ ತವರಿನ ಪ್ರೀತಿ-ಅಂತಹದು. ಕೆಲವೊಮ್ಮೆ ತಂದೆಯೊಡನೆ ಕಾಡಿಬೇಡಿಯಾದರೂ ತಮ್ಮ ಆಸೆಗಳನ್ನು ಹೆಣ್ಣುಮಕ್ಕಳು ಪೂರೈಸಿಕೊಳ್ಳುತ್ತಾರೆ. ಅಂತಹ ಪ್ರೀತಿಯ ಬಂಧುತ್ವ ತಂದೆ-ಮಗಳ ನಡುವೆ ಕಂಡುಬರುತ್ತದೆ.

ಹೆಣ್ಣುಮಗಳು ಬೆಟ್ಟ ಹತ್ತಿ ತಿರುಗಿ ತವರೂರು ನೋಡುವ ಆ ನೋಟದಲ್ಲಿ ಜನಪದರು ಏನೆಲ್ಲ ಅರ್ಥ ತುಂಬಿದ್ದಾರೆ. ಒಂದು ಹೆಜ್ಜೆ ಮುಂದಿಟ್ಟರೆ ಕಣ್ಮರೆಯಾಗುವ ಆ ತವರೂರಿನ ದರ್ಶನದಲ್ಲಿ ಅವಳ ಸ್ಮರಣೆಗೆ ಏನೆಲ್ಲ ಬಂದಿರಬೇಕು. ತಂದೆತಾಯಿಯ ಹೆಗಲೇರಿ ಆಡಿದ್ದು, ಅಣ್ಣತಮ್ಮಂದಿರ ಜೊತೆ ಆಡಿದ್ದು, ಗೆಳತಿಯರ ಜೊತೆಗೆ ಕುಂಟಾಬಿಲ್ಲೆ ಆಡಿದ್ದು, ಜಗಳವಾಡಿದ್ದು ಹೀಗೆ ಒಂದೆ ಎರಡೆ ನೆನಪುಗಳ ಸರಮಾಲೆಯನ್ನೇ ಆ ಒಂದು ನೋಟ ಆ ಕ್ಷಣದಲ್ಲಿ ಕೆದಕಿರಬೇಕು. ಅರ್ಥ ಪರಂಪರೆಯನ್ನು ಬೆಳೆಸುವ ಪದಗಳ ಬಳಕೆಯಿಂದ ಪ್ರಸ್ತುತ ಗೀತೆಯು ಶ್ರೀಮಂತವಾಗಿದೆ. ತವರಿನ ಮೋಹವು ಆಕೆಯ ಮೌನ ನೋಟದಲ್ಲಿ ಅಡಗಿದೆ. ಮಾತಿಲ್ಲದ ಮೌನ ನೋಟ ಬೀರುವ ಪರಿಣಾಮ ಅದ್ಭುತವಾದುದು. ಪ್ರಸ್ತುತ ಗೀತೆ ಸಹೃದಯರ ಹೃದಯದಂತರಾಳವನ್ನು ಬಗೆದು ಆರ್ದ್ರಗೊಳಿಸುತ್ತದೆ. ಹೆಣ್ಣುಮಕ್ಕಳ ತವರಿನ ವ್ಯಾಮೋಹವನ್ನು ಎತ್ತಿಹಿಡಿಯುತ್ತದೆ.

ಮಕ್ಕಳು ಚಿಕ್ಕವರಿರುವಾಗ ಆಟದ ವಸ್ತುಗಳಿಗಾಗಿ ಜಗಳ ಮಾಡುವುದು ಹಠ ಹಿಡಿಯುವುದು ಸಹಜ. ಕೆಲವೊಮ್ಮೆ ಕೋಪಗೊಂಡ ಅಕ್ಕತಂಗಿಯರು ಮಾತನಾಡದೆ ಇರುವುದು ಊಟ ನಿರಾಕರಿಸುವುದು ಮಾಡುತ್ತಿರುತ್ತಾರೆ. ಈ ಸನ್ನಿವೇಶದಲ್ಲಿ ಹಡೆದಪ್ಪ ಇಬ್ಬರಿಗೂ ಸಮಾಧಾನಪಡಿಸುವುದನ್ನು ಜನಪದ ಗರತಿಯೊಬ್ಬಳು ಈ ರೀತಿ ಕಂಡಿದ್ದಾಳೆ.

ಹೆಣ್ಣು ಮಕ್ಕಳ ನ್ಯಾಯ ಉಣ್ಣೊಲ್ದೆ ಮಾಡ್ಯಾನ
ಪುನ್ನುಳ್ಳ ದೊರೆಯು ಹಡೆದಪ್ಪ । ನಿದರೀಗಿ
ಹೊನ್ನಿನ ಮಳೆಯ ಸುರಿಯೊಲೆ । (ಹಲಸಂಗಿ ಗೆಳೆಯರು, ೧೯೩೧, ಪು–೩೫)

ಹೆಣ್ಣುಮಕ್ಕಳ ನ್ಯಾಯವನ್ನು ಊಟ ಮಾಡದೇ ಪುಣ್ಯವುಳ್ಳ ದೊರೆಯಾದ ಹಡೆದಪ್ಪ ಮಾಡುತ್ತಿದ್ದಾನೆ. ತನ್ನ ಮಕ್ಕಳಲ್ಲಿ ಇಬ್ಬರಿಗೂ ಯಾವುದೇ ನೋವಾಗಬಾರದು. ಬದಲಾಗಿ ನ್ಯಾಯಯುತ ಪರಿಹಾರ ದೊರಕಬೇಕು. ಅದಕ್ಕಾಗಿ ಆತ ಇಬ್ಬರನ್ನು ಸಮಾಧಾನಪಡಿಸುತ್ತಾನೆ. ಅಂತಹ ಹಡೆದಪ್ಪನನ್ನು ಪಡೆದ ನಾವೇ ಧನ್ಯರೆಂದು ಮತ್ತೆ ಆತನ ಎದುರಿಗೆ ಹೊನ್ನಿನ ಮಳೆಯು ಸುರಿಯಬೇಕು ಎಂದು ಹಾರೈಸುತ್ತಾರೆ. ಪ್ರತಿಯೊಂದು ಹಂತದಲ್ಲಿಯೂ ತಂದೆಯ ಒಳಿತನ್ನು ಹೆಣ್ಣುಮಕ್ಕಳು ಬಯಸುತ್ತಾರೆ. ಇನ್ನೊಂದೆಡೆ 'ತಂದೀಯ ನೆನೆದರೆ ತಂಗಳು ಬಿಸಿಯಾಯ್ತು' ಎನ್ನುವಲ್ಲಿ ತಂದೆಯ ಮೇಲಿನ ಅಗಾಧವಾದ ಪ್ರೀತಿಯನ್ನು ಜನಪದರು ತಿಳಿಸಿದ್ದಾರೆ. ತಂದೆಯನ್ನು ನೆನೆಪಿಸಿಕೊಂಡರೆ ತಣ್ಣನೆಯ ಅನ್ನವೂ ಕೂಡ ಬಿಸಿಯಂತೆ ತೋರುತ್ತದೆ ಎನ್ನುವಲ್ಲಿ ತಂದೆಯ ಬೆಚ್ಚನೆಯ ಪ್ರೀತಿ ಅಡಗಿದೆ.

ಹೆಣ್ಣಿಗೆ ತಾನು ಹುಟ್ಟಿ ಬೆಳೆದ ತವರೂರಿನ ಹಂಬಲ ಅಪಾರ. ತವರೂರಿನ ಪರಿಸರದ ಮೇಲೆ ಆಕೆಗೆ ಎಲ್ಲಿಲ್ಲದ ಆದರ, ಅಭಿಮಾನ. ತವರೂರಿನ ಹಂಬಲ ಹೆಣ್ಣಿನ ಸಂಸ್ಕೃತಿಯ ತಿಳಿಯಾದ ಜಲ. ಅಲ್ಲಿ ಎಲ್ಲವೂ ಸ್ವಚ್ಛ, ಕಲ್ಮಶಕ್ಕೆ ಲವಲೇಶವೂ ಅವಕಾಶವಿಲ್ಲ. ಗಂಡನ ಮನೆಯಲ್ಲಿ ಒಂದು ಸಣ್ಣ ನೋವಾದರೂ ಅವಳ ಮನಸ್ಸು ಥಟ್ಟನೆ ಹಾರುವುದು ತವರೂರಿಗೆ. ತಂದೆತಾಯಿಯ ಅಮೃತದಂತಹ

ಪ್ರೀತಿಯ ಕಡೆಗೆ. ಕನ್ನಡ ಜನಪದ ಗೀತೆಗಳಲ್ಲಿ ತವರೂರಿನ ಹಂಬಲ ಪ್ರತ್ಯೇಕವಾಗಿ ಅಧ್ಯಯನ ಮಾಡುವಷ್ಟು ವಿಪುಲವಾಗಿವೆ. ಪಿತೃಪ್ರಧಾನ ಸಮಾಜದಲ್ಲಿ ಹೆಣ್ಣು ತಾನು ಹುಟ್ಟಿ ಬೆಳೆದ ಮನೆಯನ್ನು ತೊರೆದು ಅಪರಿಚಿತ ಪರಿಸರ, ಜನರ ಮಧ್ಯದಲ್ಲಿ ಬದುಕನ್ನು ರೂಪಿಸಿಕೊಳ್ಳಬೇಕು. ಹೊಸದೊಂದು ಕುಟುಂಬವನ್ನು ಕಟ್ಟಬೇಕು. ಅವಳ ಬದುಕಿಗೆ ಚೇತೋಹಾರಿಯಾಗಿ ಮಾರ್ಗದರ್ಶನವನ್ನು ನೀಡುತ್ತವೆ. ತವರೂರಿನ ಅವಳು ಹುಟ್ಟಿ ಬೆಳೆದ ಪರಿಸರದ ಗಾಢವಾದ ಪ್ರಭಾವಕ್ಕೊಳಗಾದ ಹೆಣ್ಣು ತನ್ನ ಮರಣದ ಪರ್ಯಂತ ಅವುಗಳನ್ನು ನೆನಪು ಮಾಡಿಕೊಳ್ಳುತ್ತಾಳೆ. ತವರೂರಿನ ನೆನಪು, ಹಾರೈಕೆಗಳು ಜನಪದ ಗೀತೆಗಳಲ್ಲಿ ಮನಕರಗುವಂತೆ ಮೂಡಿಬಂದಿವೆ.

ತವರೂರನ್ನು ಬಿಟ್ಟು ಗಂಡನ ಮನೆಗೆ ಬಂದ ಹೆಣ್ಣು ಸದಾಕಾಲ ತವರೂರಿನ ಹಿತವನ್ನು ಧ್ಯಾನಿಸುತ್ತಾಳೆ. ತನ್ನನ್ನು ಹೆತ್ತು, ಹೊತ್ತು, ಸಾಕಿ ಸಲುಹಿದ ತಾಯಿತಂದೆಯ ಋಣ ಅವಳ ಮೇಲಿದೆ. ಅದರ ಅರಿವು ಅವಳಿಗಿದೆ. ಅದಕ್ಕಾಗಿ ಅವಳು ಮನದುಂಬಿ ತನ್ನ ತವರೂರನ್ನು ಹರಸುತ್ತಾಳೆ.

ಹಾಲುಂಡ ತವರೀಗೆ ಏನೆಂದು ಹಾಡಲೆ
ಹೊಳೆ ದಂಡಿಲಿರುವ ಕರಕೀಯ । ಕುಡಿಯಂಗ
ಹಬ್ಬಲೆ ಅವರ ರಸಬಳ್ಳಿ । (ವಿನೀತ ರಾಮಚಂದ್ರರಾಯ, ೧೯೬೦, ಪು-೪೨)

ತನ್ನ ತವರೂರು ಎಂದಿಗೂ ಚಿರಾಯುವಾಗಿರಬೇಕೆಂಬುದು ಹೆಣ್ಣಿನ ಆಸೆ. ತಾಯಿಯ ಎದೆ ಹಾಲನುಂಡು, ಹಾಲಿನಂತಹ ತಿಳಿಯಾದ ಪ್ರೀತಿಯ ಸವಿಯನುಂಡು ಬೆಳೆದ ತವರೂರು ಎಂದೆಂದೂ ಹಸಿರಾಗಿರಬೇಕು. ಆ ಹಸಿರು ಸಾಮಾನ್ಯ ಹಸಿರಲ್ಲ. ಹೊಳೆಯ ದಂಡೆಯ ಮೇಲಿನ ಕರಕಿಯ ಹಸಿರು. ಕರಿಕಿಯ ಹುಲ್ಲಿಗೆ ಅನೇಕ ವಿಶಿಷ್ಟ ಗುಣಗಳಿವೆ. ಬಿಸಿಲು, ಚಳಿ, ಮಳೆಯಲ್ಲಿ ಸದಾಕಾಲ ಹಸಿರಾಗಿರುವ ಜಾತಿಯದು. ಕಲ್ಲು ಬಂಡೆಯ ಸಣ್ಣ ಪೊದರಿನಲ್ಲಿ ಒಂದು ಬೇರು ಬಿಡಲು ಅವಕಾಶ ಸಿಕ್ಕರೆ, ಅಲ್ಲಿಯೇ ಸೊಂಪಾಗಿ ಬೆಳೆಯಬಲ್ಲದು. ಇದನ್ನು ಹಲವು ಶುಭ ಸಮಾರಂಭಗಳಲ್ಲಿ ಬಳಸುತ್ತಾರೆ. ಇಂತಹ ವಿಶಿಷ್ಟ ಗುಣಗಳಿರುವ ಕರಕಿಯ ಹಾಗೆ ತವರುಮನೆಯ ವಂಶ ಹಬ್ಬಲೆಂಬ ಹಾರೈಕೆ ಅವಳದು. ತಂದೆ ಮಗಳ ಕುರಿತು ನಿರ್ದಿಷ್ಟವಾದ ದೃಷ್ಟಾಂತಗಳು ಜನಪದ ಗೀತೆಗಳಲ್ಲಿ ವಿರಳವಾಗಿದ್ದರೂ ತಾಯಿಯ ಜೊತೆಗೆ ತಂದೆಯ ಪ್ರಸ್ತಾಪವನ್ನು ಮಾಡಿದ ಜನಪದರಲ್ಲಿ ತಾಯಿಯಷ್ಟೇ ಗೌರವ, ಪ್ರೀತಿ, ಆದರಗಳನ್ನು ತಂದೆಗೂ ತೋರಿದ್ದಾರೆ. ಜನಪದರ ಪ್ರಮುಖ ಸಂಬಂಧಗಳಲ್ಲಿ ತಂದೆ-ಮಗಳ ಬಾಂಧವ್ಯವು ಒಂದಾಗಿದ್ದು, ಮಮತೆ ಹಾಗೂ ವಾತ್ಸಲ್ಯಗಳಿಂದ ಕೂಡಿದೆ.

### ೪.೧.೪ ತಾಯಿ – ಮಗಳು

ಗಂಡಿರಲಿ, ಹೆಣ್ಣಿರಲಿ ಒಡಲ ಕುಡಿಗಳೆಲ್ಲ ಒಂದೇ ಎನ್ನುವ ಭಾವ ತಾಯಿಯದು. ಅವಳಿಗೆ ಹೆಣ್ಣು ಮಗಳ ಬಗೆಗೆ ತಾತ್ಸಾರವಾಗಲಿ, ಗಂಡಿನ ಬಗೆಗೆ ಅತೀ ಕಾಳಜಿಯಾಗಲಿ ಇಲ್ಲ. ಕೇವಲ ಕೆಲವೇ

ಸಂದರ್ಭಗಳಲ್ಲಿ ಗಂಡು ಸಂತಾನ ಬೇಕೆಂಬ ಮೋಹಕ್ಕೆ ಒಳಗಾಗುವಳು. ಆದರೆ ಹುಟ್ಟಿದ ಮಕ್ಕಳನ್ನು ಪ್ರೀತಿ, ವಾತ್ಸಲ್ಯದಿಂದ ಬೆಳೆಸುತ್ತಾಳೆ. ಜನಪದರು ಗಂಡು ಮಗನನ್ನು ವಂಶೋದ್ಧಾರಕನೆಂದು ಹೆಣ್ಣುಮಗಳನ್ನು ಮನೆ ಬೆಳಗುವ ದೀಪವೆಂದು ಕರೆದಿದ್ದಾರೆ. ಹಾಗಾಗಿ ಹೆಣ್ಣು ಹುಟ್ಟಿದಾಗಲೇ ಜೀವನ ಪರಿಪೂರ್ಣವೆಂದು ಜನಪದರು ನಂಬಿದ್ದಾರೆ. ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿತೆಂದು ಕಳವಳಪಡುವ ಜನರೂ ಇದ್ದಾರೆ. ಹೆಣ್ಣು ಸಂತಾನದ ಬಗ್ಗೆ ಕೆಲವರಲ್ಲಿ ಇದ್ದ ತಾತ್ಸಾರವನ್ನೂ ಇಲ್ಲಿ ಅಲ್ಲಗಳೆಯಲಾಗದು. ಇದರ ಹೊರತಾಗಿ ಕುಟುಂಬದಲ್ಲಿ ಸಮಾಜದಲ್ಲಿ ಸ್ತ್ರೀಯರಿಗೆ ಅಪಾರ ಗೌರವವಿದೆ. ಹುಟ್ಟಿದ ಮನೆಯನ್ನು, ಮೆಟ್ಟಿದ ಮನೆಯನ್ನು ಬೆಳಗುವ ಸಾಮರ್ಥ್ಯವುಳ್ಳವಳು ಹೆಣ್ಣು. ಹಾಗಾಗಿ ತಾಯಿಗೆ ಲಿಂಗ ಭೇದವಿಲ್ಲ. ಬದಲಾಗಿ ಇಬ್ಬರಿಗೂ ಪ್ರೀತಿ, ಮಮತೆ, ವಾತ್ಸಲ್ಯ ಇವೆಲ್ಲವುಗಳನ್ನು ಧಾರೆಯೆರೆಯುತ್ತಾಳೆ.

ಜನಪದ ಹೆಣ್ಣು ಮಗಳು ತಾಯಿಯನ್ನು ಅಪಾರವಾಗಿ ಪ್ರೀತಿಸುತ್ತಾಳೆ. ಹೊತ್ತು, ಹೆತ್ತು, ಪಾಲನೆ ಮಾಡಿ, ಹಾಲುಣಿಸಿ ಪೋಷಿಸಿದ ತಾಯಿ ಅವಳಿಗೆ ಸರ್ವಸ್ವ, ಅವಳು ಕಾಶಿ ವಿಶ್ವನಾಥನಷ್ಟೇ ದೈವಸಮಾನಳು. ಅನ್ಯದೈವಕ್ಕಿಂತ ಕಣ್ಣೆದುರಿನ ತಾಯಿಯೇ ಕಾಶಿ ವಿಶ್ವನಾಥನೆಂದು ಗೌರವಿಸುವ ಶ್ರೇಷ್ಠ ಮನೋಭಾವ ಈ ಕೆಳಗಿನ ಗೀತೆಯಲ್ಲಿ ಅಭಿವ್ಯಕ್ತಗೊಂಡಿದೆ.

ಕಾಶಿಗೆ ಹೋಗುದಕ ಏಸು ದಿನ ಬೇಕವ್ವ
ತಾಸ್ಹೊತ್ತಿನ ಹಾದಿ ತವರಿಗೆ । ಹೋದರ
ಕಾಶಿ ಅದಾಳ ಹಡೆದವ್ವ । (ಬಿ. ಎಸ್. ಗದ್ದಗಿಮಠ, ೧೯೫೬, ಪು-೫೫)

ಹಿಂದೂಗಳಿಗೆ ಕಾಶಿಯು ಅತ್ಯಂತ ಪವಿತ್ರವಾದ ಪುಣ್ಯ ಕ್ಷೇತ್ರ. ಈ ಕ್ಷೇತ್ರದ ದರ್ಶನದಿಂದ ಜನ್ಮಾಂತರದ ಪಾಪ ದೂರವಾಗುತ್ತದೆ ಎಂಬುದು ಬಹುಜನರ ನಂಬಿಕೆ. ಆದರೆ ಕಾಶಿ ವಿಶ್ವನಾಥನಷ್ಟೇ ದೈವ ಸಮಾನಳು ತಾಯಿ ಎಂಬುದು ಜನಪದ ಮಹಿಳೆಯ ನಂಬಿಕೆ. ಬಹುದೂರದ ಕಾಶಿಯ ದರ್ಶನಕ್ಕೆ ದಿನಧನಗಳನ್ನು ವ್ಯಯಿಸಿಕೊಂಡು ಹೋಗಬೇಕು. ಆದರೆ ಒಂದು ತಾಸಿನ ಹಾದಿಯಾದ ತವರೂರಿನಲ್ಲಿ ಕಾಶಿಯ ವಿಶ್ವನಾಥನಷ್ಟೇ ಭಾಗ್ಯವನ್ನು ಕೊಡುವ ದೈವಸ್ವರೂಪಿಯಾದ ತಾಯಿ ಇದ್ದಾಳೆ. ಅವಳ ದರ್ಶನ ಪಡೆಯುವುದು ಉಚಿತ. ಏಕೆಂದರೆ ತಾಯಿ ಕಣ್ಣಿಗೆ ಕಾಣುವ ದೇವರು. ಮಗಳ ಸುಖ-ದುಃಖಗಳಿಗೆ ಸ್ಪಂದಿಸುವವಳು ತಾಯಿ. ಕಲ್ಲುದೇವರ ಬಳಿಗೆ ಹೋಗುವ ಬದಲು ತಾಯಿ ದೇವರ ಬಳಿ ಹೋಗುವುದು ಹೆಚ್ಚು ಆರೋಗ್ಯಪೂರ್ಣವೆಂಬುದು ಜನಪದ ಮಹಿಳೆಯ ಭಾವನೆ. ತಂದೆ-ತಾಯಿಗಿಂತ ಮಿಗಿಲಾದ ದೇವರಿಲ್ಲ ಎಂಬುದು ಜನಪದ ನಂಬಿಕೆ.

ತಾಯಿ ಮತ್ತು ಮಗಳ ಸಂಬಂಧವು ಅನುರೂಪವಾದದ್ದು. ಹೆಣ್ಣಿನೊಡಲ ಹೆಣ್ಣೇ ಬಲ್ಲಳೆಂಬಂತೆ ತಾಯಿಯ ಕಷ್ಟವನ್ನು ಕೇಳುವ ಮಗಳು. ಮಗಳ ತೊಂದರೆಯನ್ನು ನಿವಾರಿಸುವ ತಾಯಿ. ಹೀಗೆಯೇ ಅಪೂರ್ವ ಅನ್ಯೋನ್ಯತೆ ಇವರಲ್ಲಿದೆ. ಮಗಳು ಬೆಳೆದು ದೊಡ್ಡವಳಾದ ಮೇಲೆ

ಒಡಲಕುಡಿಯೆಂದು ಭಾವಿಸದೆ ಗೆಳತಿಯಂತೆ ಪರಿಭಾವಿಸುವುದು ರೂಢಿಯಲ್ಲಿದೆ. ಇವರೀರ್ವರಲ್ಲಿ ಗುಟ್ಟೆಂಬುದು ಇಲ್ಲ. ಜನಪದರಿಗೆ ಹೆಣ್ಣಿನ ಬಗ್ಗೆ ಇದ್ದ ಕಾಳಜಿ, ಪ್ರೀತಿಯನ್ನು ಅವರ ನುಡಿಯಿಂದಲೇ ಗಮನಿಸಲಾಗಿದೆ.

ಹೆಣ್ಣಿದ್ದ ಮನೆಗೆ ಕನ್ನಡಿ ಯಾತಕ್ಕ
ಹೆಣ್ಣು ಸಣ್ಣವಳು ಒಳಗಿರಲು । ನನ ಮಗಳು
ಕನ್ನಡಿಯಂಗ ಹೊಳೆಯುವಳು। (ವಿನೀತ ರಾಮಚಂದ್ರರಾಯ, ೧೯೬೦, ಪು-೫೫)

'ಹೆಣ್ಣು ಸಂಸಾರದ ಕಣ್ಣು' ಎಂಬ ಗಾದೆಯಿದೆ. ಹೆಣ್ಣಿರುವ ಮನೆಯು ಸದಾ ಸಂತೋಷದಿಂದ ಕೂಡಿರುತ್ತದೆ. ಅಲ್ಲದೇ ಯಾವಾಗಲೂ ಸಂಭ್ರಮದ ವಾತಾವರಣ ನೆಲೆಸಿರುತ್ತದೆ. ಹೆಣ್ಣಿಲ್ಲದ ಮನೆಗೆ ಆ ಕಳೆಯೇ ಬರದು. ಹೆಣ್ಣಿರುವ ಮನೆಗೆ ಕನ್ನಡಿ ಬೇಡವೇ ಬೇಡ. ಹೆಣ್ಣು ಮನೆ ಒಳಗೂ–ಹೊರಗೂ ತಿರುಗಾಡುತ್ತಿದ್ದರೆ ಸಾಕು. ಅವಳ ಕೈಬಳೆ ನಾದ, ಕಾಲ್ಗೆಜ್ಜೆ ಸದ್ದು, ನಗುಮೊಗದ ಸ್ವಾಗತ ಎಂತಹ ಆಯಾಸವನ್ನು ಕಳೆಯಬಲ್ಲ ಸಾಮರ್ಥ್ಯವನ್ನು ಪಡೆದಿವೆ. ಹೆಣ್ಣು ಮನೆಯಲ್ಲಿದ್ದರೆ ಮನೆಯ ಅಂದ–ಚಂದವನ್ನು ಸಿದ್ಧಪಡಿಸುತ್ತಾಳೆ. ಮನೆ ಗುಡಿಸಿ, ಸಾರಿಸಿ ಅಂಗಳಕ್ಕೆ ರಂಗೋಲಿಯನ್ನು ಹಾಕುತ್ತಾಳೆ. ದಣಿದು ಬಂದಾಗ ತಂಬಿಗೆ ನೀರನ್ನು ಕೊಡುತ್ತಾಳೆ. ಹಸಿದಾಗ ಊಟ ಬಡಿಸುತ್ತಾಳೆ. ಅಂತಹ ಹೆಣ್ಣು ಸದಾ ಕನ್ನಡಿಯ ಹಾಗೆ ಹೊಳೆಯುತ್ತಾಳೆ. ಹಾಗಾಗಿ ಅವಳಲ್ಲಿಯೇ ನಮ್ಮ ಮುಖ ದರ್ಶನ ಮಾಡಿಕೊಳ್ಳಬಹುದೆಂಬುದು ಜನಪದರ ನಂಬಿಕೆ.

ಹೆಣ್ಣಿಗೆ ತವರೆಂದರೆ ಗುಡಿಸಲು ವಾಸವಾದರೂ ಸ್ವರ್ಗಕ್ಕೆ ಸಮಾನ. ಗಂಜಿಯ ಕುಡಿದರೂ ಅಮೃತಕ್ಕೆ ಸಮಾನ. ಬಡತನವಿದ್ದರೂ ಅಷ್ಟೈಶ್ವರ್ಯಗಳಿಗೆ ಸಮಾನ. ಅಣ್ಣ ತಮ್ಮ, ಬಂಧುಬಳಗವನ್ನೆಲ್ಲ ತೊರೆದು ಬೇರೆ ಕುಟುಂಬದಲ್ಲಿ ಬಂದು ಸೇರಿದ ಹೆಣ್ಣಿಗೆ ಸದಾ ಕಾಲ ತನ್ನ ಬಾಲ್ಯದ ನೆನಪುಗಳು ಕಾಡುತ್ತವೆ. ಆ ನೆನಪುಗಳ ತೀವ್ರತೆಯನ್ನು ಜನಪದ ಕವಯಿತ್ರಿ ಹಾಡಿದ ರೀತಿ ಅಪರೂಪದ್ದಾಗಿದೆ.

ಬ್ಯಾಸಗಿ ದಿವಸಕ ಬೇವಿನ ಮರತಂಪ
ಭೀಮರತಿಯೆಂಬ ಹೊಳಿ ತಂಪ । ಹಡದಮ್ಮ
ನೀ ತಂಪ ನನ್ನ ತವರೀಗಿ । (ವಿನೀತ ರಾಮಚಂದ್ರರಾಯ, ೧೯೬೦, ಪು-೪೧)

ತಾಯಿ ಮತ್ತು ಮಗಳ ಭಾವನಾತ್ಮಕ ಸಂಬಂಧವನ್ನು ಈ ಗೀತೆ ಕಟ್ಟಿಕೊಡುತ್ತದೆ. ಬೇಸಿಗೆಯ ದಿನಕ್ಕೆ ಬೇವಿನ ಮರ ನೀಡುವ ತಂಪಿನ ವಾತಾವರಣವು ಮತ್ತೆ ಯಾವ ಮರದಿಂದಲೂ ಸಿಗದು. ಸದಾ ನೀರಿರುವ ಕೆರೆ, ಬಾವಿ, ಹಳ್ಳ, ಹೊಳೆಗಳ ಆ ಕಾಲದಲ್ಲಿ ತಂಪನ್ನು ಒದಗಿಸುವ ಮೂಲಕ ಎಲ್ಲ ಜೀವಿಗಳ ಜೀವದಾಯಕವಾಗಿರುತ್ತವೆ. ಅಂತೆಯೇ  ತವರೂರಲ್ಲಿ ತಾಯಿ ಇದ್ದರೆ ಶೋಭೆ. ಅಂತಹ ತಾಯಿಯ ನೆನಪನ್ನು ಹೆಣ್ಣುಮಗಳು ಸದಾಕಾಲ ತನ್ನಲ್ಲಿ ಜೀವಂತವಾಗಿರಿಸಿಕೊಂಡಿರುತ್ತಾಳೆ ಎಂಬುದು ಇಲ್ಲಿಯ ಭಾವ.

ಹೆಣ್ಣಿಗೆ ತವರೂರೆಂದರೆ ತಾಯಿ. ತಾಯಿ ಇಲ್ಲದ ತವರೂರು ಅದು ಪರರ ಮನೆ. ಅಲ್ಲಿರುವ ಸಹೋದರ ತನ್ನವನಾದರೂ ಅತ್ತಿಗೆ ಬೇರೆ ಕುಟುಂಬದಿಂದ ಬಂದವಳು. ಅವಳು ತನ್ನ ನೋವಿಗೆ ಸರಿಯಾಗಿ ಸ್ಪಂದಿಸುವುದಿಲ್ಲ. ಸಹೋದರನಾದರೂ ಪರ ಕುಟುಂಬದ ಹೆಣ್ಣಿನ ಕೈಗೊಂಬೆಯಾದಾಗ ಅವಳ ನೋವು ಅಪಾರ. ಹುಟ್ಟಿ ಬೆಳೆದ ಮನೆ ಪರರ ಸ್ವತ್ತಂತೆ ಆದಾಗ ಅವಳು ಪಡುವ ಯಾತನೆ ಅಷ್ಟಿಷ್ಟಲ್ಲ. ಆ ಯಾತನೆಯ ತೀವ್ರತೆಯನ್ನು ಜನಪದ ಕವಯಿತ್ರಿ ಹಾಡಿದ ರೀತಿ ವಿನೂತನವಾಗಿದೆ.

ತಾಯಿಲ್ದ ತವರೀಗಿ ಹೋಗದಿರು ನನ ಮನವ
ನೀರಿಲ್ದ ಕೆರಿಗಿ ಕರುಬಂದು । ತಿರುಗಾಗ
ಆಗ ನೋಡವರ ದುಃಖಗಳ । (ಹಲಸಂಗಿ ಗೆಳೆಯರು, ೨೦೦೮, ಪು-೩೮)

ಹೆಣ್ಣಿನ ಪಾಲಿಗೆ ತಾಯಿ ಇಲ್ಲದ ತವರೂರಿನ ಸ್ಥಿತಿಯ ಸುಂದರ ರೂಪಕ ಇಲ್ಲಿದೆ. ತೀವ್ರ ಬಾಯಾರಿಕೆಯಿಂದ ಬಳಲಿದ ಕರು ನೀರಿಗಾಗಿ ಕೆರೆಗೆ ಓಡೋಡಿ ಬಂದಾಗ ಕೆರೆ ಬತ್ತಿ ಬರಿದಾದರೆ ಆಗ ಅದಕ್ಕಾಗುವ ಸಂಕಟ ವರ್ಣನಾತೀತ. ಅಂತೆಯೇ ತಾಯಿಗಾಗಿ ಹಂಬಲಿಸಿ ತವರೂರಿಗೆ ಬಂದ ಹೆಣ್ಣು ತಾಯಿ ಇಲ್ಲದಿರುವುದು ಅನುಭವಕ್ಕೆ ಬಂದಾಗ ಪಡುವ ಯಾತನೆ ಅಪಾರ. ತಾಯಿ ಇಲ್ಲದ ತವರೂರು ಹೆಣ್ಣಿನ ಪಾಲಿಗೆ ಬತ್ತಿದ ಕೆರೆ. ಇಲ್ಲಿ ಬಳಕೆಯಾಗಿರುವ ನೀರಿಲ್ಲದ ಕೆರೆ, ಕರು ಪದಗಳು ಧ್ವನಿಬದ್ಧವಾಗಿವೆ. ಕರು ಎಂಬ ಪದವು ಎಳೆಯ, ಮೃದುತ್ವವನ್ನು ಸೂಚಿಸುವಂತೆ, ಹೆಣ್ಣಿನ ಸೂಕ್ಷ್ಮ ಮನಸ್ಸು ದೈಹಿಕ ಕೋಮಲತೆಯನ್ನು ಧ್ವನಿಸುತ್ತದೆ. ಔಚಿತ್ಯಪೂರ್ಣವಾಗಿ ಈ ಪದಗಳ ಬಳಕೆಯಾಗಿದೆ. ತಾಯಿ ಇಲ್ಲದ ತವರೂರನ್ನು ನೀರಿಲ್ಲದ ಕೆರೆಗೆ ಹೋಲಿಸಿರುವ ರೀತಿ ಸೊಗಸಾಗಿದ್ದು ತಾಯಿಯ ಮಹತ್ವವನ್ನ ಸಾರುತ್ತದೆ. ಸುಂದರ ರೂಪಕದ ಮೂಲಕ ತಾಯಿಯಿಲ್ಲದ ತವರೂರಿನ ಸ್ಥಿತಿಯನ್ನು ಕಟ್ಟಿಕೊಟ್ಟಿರುವ ಜನಪದ ಕವಯಿತ್ರಿಯ ಪ್ರತಿಭೆ ಇಲ್ಲಿ ಅನಾವರಣಗೊಂಡಿದೆ.

ಹೆಣ್ಣಿಗೆ ತವರು ಎಂದರೆ ತಾಯಿ ಎಂದೇ ಅರ್ಥ. ತಾಯಿಯ ಸ್ಥಾನವನ್ನು ಯಾರೂ ತುಂಬಲಾರರು. ಆ ಪ್ರೀತಿಗೆ ಕಾರಣಗಳು ಹಲವಾರು ಇರಬಹುದು. ಅವಳ ಮಮತೆಗೆ ಸರಿಸಾಟಿಯಾದದ್ದು ಯಾವುದು ಇಲ್ಲ.

ಜನಪದರಲ್ಲಿ ಹೆಣ್ಣು ಹುಟ್ಟಿತೆಂದರೆ ಹುಣ್ಣು ಹುಟ್ಟಿತೆನ್ನುವ ಮನೋಭಾವದವರೂ ಸಾಕಷ್ಟಿದ್ದಾರೆ. ಹೆಣ್ಣು ಹುಟ್ಟಿದಾಗ ಅವರಲ್ಲಿ ಉಂಟಾಗುವ ಭಯ, ತಾತ್ಸಾರ ಮನೋಭಾವ ಕಾರಣವಿದೆ. ಹೆಣ್ಣು ಎಷ್ಟೇ ಆದರೂ ಮುಂದೊಂದು ದಿನ ಹುಟ್ಟಿದ ಮನೆಯನ್ನು ತೊರೆದು ಗಂಡನ ಮನೆಯನ್ನು ಮೆಟ್ಟುವವಳು. ಆದ್ದರಿಂದ ಹುಟ್ಟಿದ ಮನೆಯಲ್ಲಿ ಸುಖದಿಂದ ಬದುಕಿ, ನಂತರ ಮದುವೆ ಮಾಡಿಕೊಟ್ಟಾಗ 'ಎಲ್ಲಿ ನೋವುಂಡಾಳೋ?' ಎಂಬ ಭಯ ಜನಪದರಲ್ಲಿದೆ. ಆದಕಾರಣ ಬಹುಪಾಲು ಜನಪದರಲ್ಲಿ ಹೆಣ್ಣು ಸಂತಾನದ ಬಗ್ಗೆ ಭಯವಿತ್ತು. ನಂತರ ಸಾಮಾಜಿಕ ಸ್ಥಿತಿ ಬದಲಾದಂತೆ ಆಲೋಚನಾ ಕ್ರಮದಲ್ಲಿ ಭಿನ್ನತೆ ತೋರಿದಂತೆ ಹೆಣ್ಣು ಸಂತಾನ ಬೇಕೆನ್ನುವವರ ಸಂಖ್ಯೆ ಹೆಚ್ಚಿತು.

ಹೆಣ್ಣು ಹುಟ್ಟ್ಯಾದೆಂದು ಹೇಳಿ ಕಳುವಲಿಬೇಡ ।
ಹೆಣ್ಣೆಂದರವರು ಹೆದರ‍್ಯಾರು । ಕಂದವ್ವ
ಹೆಣ್ಣಲ್ಲ ನಮಗ ರವಿಚಿನ್ನ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು–೫೧)

ತವರಿಗೆಂದು ಹೆರಿಗೆಗೆ ಬಂದ ಹೆಣ್ಣೊಬ್ಬಳಿಗೆ ಹೆಣ್ಣುಮಗು ಹುಟ್ಟುತ್ತದೆ. ಆಗ 'ಹೆಣ್ಣು ಹುಟ್ಟಿತು' ಎಂದು ಹೇಳಿ ಕಳುಹಬೇಡಿ ಬದಲಾಗಿ ಹುಟ್ಟಿದ್ದು ಹೆಣ್ಣಲ್ಲ ರವಿಚಿನ್ನವೆಂದು ಹೇಳಿ ಕಳುಹಿ ಏಕೆಂದರೆ ಹೆಣ್ಣೆಂದರೆ ಗಂಡನ ಮನೆಯವರು ಭಯಗೊಂಡಾರು? ಎಂದು ಆಕೆ ಕಳವಳ ವ್ಯಕ್ತಪಡಿಸುತ್ತಾಳೆ. ಆರಂಭದಲ್ಲಿ ಮಗು ಹುಟ್ಟಿತೆಂಬ ಸಂತೋಷಕ್ಕೆ ತನ್ನ ಮೇಲಿನ ಪ್ರೀತಿ, ಮಗುವಿನ ಮೇಲಿನ ನಿರೀಕ್ಷೆಗೆ ಹೆಣ್ಣಾದರೂ ಗಂಡನ ಮನೆಯವರು ಒಪ್ಪಿಕೊಳ್ಳುತ್ತಾರೆಂಬ ನಂಬಿಕೆ ತಾಯಿಯಾದ ಹೆಣ್ಣಿಗಿದೆ. ಗಂಡಿಗೆ ಯಾವ ರೀತಿಯ ಲಾಲನೆ–ಪಾಲನೆ ಸಿಗುತ್ತದೆಯೋ ಅದೇ ರೀತಿ ಹೆಣ್ಣಿಗೂ ಎಲ್ಲ ಬಗೆಯ ಸಂಭ್ರಮಾಚರಣೆಗಳು ಜನಪದರಲ್ಲಿ ಸಿಗುತ್ತವೆ.

ಕಂದವ್ವ ಕಾಡಿದರ ರಿಂದವ್ವ ಮನೆಗೆಲಸ
ರಂಗರಂಗದ ಹಲಗೀಯ । ತೊಟ್ಲಾಗ
ಕಂದವ್ವ ಕಾಡಿ ಮಲಗ್ಯಾಳ । (ಹಲಸಂಗಿ ಗೆಳೆಯರು, ೧೯೩೧, ಪು–೭೦)

ಕಂದಮ್ಮ ಕಾಡಿದರೂ ಸಹಿತ ಮನೆಗೆಲಸ ತಾನಾಗಿಯೇ ಮುಗಿಯುತ್ತದೆ. ಕೆಲವೊಮ್ಮೆ ಮನೆಯವರ ತಾತ್ಸಾರದ ನಡುವೆಯೂ ತಾಯಿ ತನ್ನ ಮಗಳನ್ನು ಸಾಕುತ್ತಾಳೆ. ತವರವರ ಕಾಡಿಯಾದರೂ ಮಗುವಿಗೆ ಬಣ್ಣಬಣ್ಣದ ತೊಟ್ಟಿಲನ್ನು ಎದೆಹಾಲು ಕಡಿಮೆಯಾದಾಗ ಮಗುವಿಗೆ ಹಾಲುಣಿಸಲು ಎಮ್ಮೆಯನ್ನು ಜೊತೆಯಲ್ಲಿ ಕರೆತರುತ್ತಾಳೆ. ಒಟ್ಟಾರೆ ತನ್ನ ಮಗಳನ್ನು ಬಹುಜತನದಿಂದ ಕಾಪಾಡುತ್ತಾಳೆ. ಕಾಲಕಳೆದಂತೆ ಬೆಳೆದು ದೊಡ್ಡವಳಾದ ಮೇಲೆ, ಅವಳಿಗೆ 'ಮನೆಯೇ ಮೊದಲ ಪಾಠಶಾಲೆ ಜನನಿ ತಾನೆ ಮೊದಲ ಗುರು' ಎಂಬ ಗಾದೆಯಂತೆ ರೀತಿರಿವಾಜು, ಸಂಪ್ರದಾಯಗಳನ್ನು ಕಲಿಸಿಕೊಡುತ್ತಾಳೆ. ಕೆಲವೊಮ್ಮೆ ನೇರವಾಗಿ ಹೇಳಿದರೆ ನೊಂದಾಳೆಂಬ ಕಾರಣಕ್ಕೆ ಕುಟ್ಟುವಾಗ, ಬೀಸುವಾಗ ನೀತಿಗೀತೆಗಳನ್ನು ಹಾಡಿ ಮಗಳನ್ನು ಸಂಸ್ಕಾರವಂತಳನ್ನಾಗಿ ಮಾಡುತ್ತಾಳೆ. ಮಗಳು ತಾಯಿಗೆ ಮನೆಯ ಕೆಲಸದಲ್ಲಿ ನೇರವಾಗಿ, ಕಷ್ಟದಲ್ಲಿ ಒಂದಾಗಿ ಕಣ್ಣೀರು ಒರೆಸುತ್ತಾಳೆ.

ಪ್ರಾಯಕ್ಕೆ ಬಂದ ಮೇಲೆ ಮಗಳಿಗೆ ಮದುವೆಯಾಗಬೇಕು. ಅವಳೊಂದು ಉತ್ತಮರ ಮನೆ ಸೇರಬೇಕೆಂಬುದು ತಂದೆ–ತಾಯಿಯ ಹೆಬ್ಬಯಕೆ. ಸೂಕ್ತ ವರನಿಗೆ ಹುಡುಕಾಟ ನಡೆಸಿ, ಊರ ಹಿರಿಯರ ಸಮ್ಮುಖದಲ್ಲಿ ಮದುವೆ ಮಾಡಿಕೊಡುತ್ತಾರೆ. ನಂತರ ತವರು ತೊರೆದ ಗಂಡನ ಮನೆ ಸೇರುವ ಸಂದರ್ಭದಲ್ಲಿ ತಾಯಿ–ಮಗಳ ದುಃಖ ಹೇಳತೀರದು. ಇಷ್ಟು ವರ್ಷಗಳವರೆಗೆ ಕಣ್ಣರೆಪ್ಪೆಯಂತೆ ಕಾಪಾಡಿದ ತಾಯಿಯನ್ನು ಬಿಟ್ಟು ಹೋಗಬೇಕೆಂಬ ದುಃಖ ಮಗಳಿಗೆ, ತನ್ನ ಕಣ್ಣಿನಂತೆ

ಕಾಪಾಡಿಕೊಂಡು ಬಂದ ಮಗಳನ್ನು ಅಗಲಬೇಕೆಂಬ ದುಃಖ ತಾಯಿಗೆ. ಮಗಳು ಆಗ ತಾಯಿಯ ಸಮ್ಮುಖದಲ್ಲಿ ಈ ರೀತಿ ಹಾಡಿದ್ದಾಳೆ.

ಅತ್ತು ಹಾಡಿದರವ್ವ ಈ ದುಃಖ ಮಾಸದವ್ವ
ನಿನ್ನ ಬಿಟ್ಟೆಂಗೆ ನಡಿಲವ್ವ । ಹೆತ್ತವ್ವ
ನಿನ್ನ ಬಿಟ್ಟರಘಳಿಗೆ ನಾನು ಇರಲಾರೆ । (ಕರಾಕ್ಕ, ೧೯೫೯, ಪು–೫೯)

ಅತ್ತರೂ ಕರಗದ ದುಃಖ, ಹಾಡಿ ಹೊಗಳಿದರೂ ಮಾಸದ ದುಃಖ. ಅದು ಅಗಲಿಕೆಯ ದುಃಖ, ಮದುವೆಯಾದ ಸಂದರ್ಭದಲ್ಲಿ ತಾಯಿ–ಮಗಳ ಅಗಲಿಕೆಯ ದುಃಖವದು. ತಾಯಿಗೆ ಮಗಳು 'ನಿನ್ನ ಬಿಟ್ಟು ನಾನು ಹೇಗೆ ಗಂಡನ ಮನೆಗೆ ನಡೆಯಲಿ? ಏಕೆಂದರೆ ನಿನ್ನನ್ನು ಬಿಟ್ಟು ನಾನು ಈವರೆಗೂ ಒಂದರಗಳಿಗೆಯೂ ಇಲ್ಲ' ಎಂದು ಹೇಳಿ ದುಃಖಿಸುತ್ತಾಳೆ. ಆಗ ತಾಯಿಯು ದುಃಖವನ್ನು ವ್ಯಕ್ತಪಡಿಸಿದೆ ಹತ್ತಿಕ್ಕಿಕೊಳ್ಳುತ್ತಾಳೆ. ಗಂಡನ ಮನೆಗೆ ಪ್ರವೇಶಿಸುವ ಮಗಳಿಗೆ ನೀತಿ ಬೋಧನೆ ಮಾಡುತ್ತಾಳೆ. ಗಂಡನ ಮನೆಯಲ್ಲಿ ಮುತ್ತಾಗಿ ಇರಬೇಕು. ಹೊತ್ತಾಗಿ ನೀಡಿದರೂ ಉಣಬೇಕು. ತವರಿನ ಹೆಸರು ತರಬೇಕು ಎಂದು ಬುದ್ಧಿವಾದ ಹೇಳುತ್ತಾಳೆ. ತವರಲ್ಲಿ ಹಕ್ಕಿಯಂತೆಯೇ ಎಲ್ಲರ ಅಂಗೈ ಅರಗಿಣಿಯಾಗಿದ್ದವಳಿಗೆ ಗಂಡನ ಮನೆ ಪಂಜರವಾಗಿ ಪರಿಣಮಿಸಬಹುದು. ಎಲ್ಲರ ಪ್ರೀತಿಯನ್ನು ಗಳಿಸುವ ಮೂಲಕ ಮುದ್ದಿನ ಸೊಸೆಯಾಗಬೇಕೆಂದು ತಾಯಿಯು ಮಗಳಿಗೆ ಈ ಕೆಳಗಿನಂತೆ ಕಿವಿಮಾತು ಹೇಳುತ್ತಾಳೆ.

ಅತ್ತೆ ಮಾವಗಂಜಿ ಸುತ್ತೇಳು ನೆರೆಗಂಜಿ
ಮತ್ತೆ ಆಳುವ ದೊರೆಗಂಜಿ । ಮಗಳೇ
ಅತ್ತೆ ಮನೆಯಾಗೆ ಬಾಳಮ್ಮ । (ಎಸ್. ಕೆ. ಕರೀಂಖಾನ್, ೧೯೫೫, ಪು–೮೭)

ಅತ್ತೆ ಮಾವನಿಗೆ ಗೌರವ ಕೊಡಬೇಕು. ಪತಿಯ ಮಾತನ್ನು ಗೌರವಿಸಬೇಕು. ಹಿರಿಯರಾದ ಅವರಿಗೆ ಎಂದಿಗೂ ಪ್ರತಿ ಮಾತನಾಡಬಾರದು. ಅಕ್ಕಪಕ್ಕದವರ ಕೂಡ ಅತಿಸಲುಗೆ ಸಲ್ಲದು. ಮಗಳಿಗೆ ನಾನಾಬಗೆಯ ಕಿವಿಮಾತನ್ನು ತಾಯಿ ಹೇಳುತ್ತಾಳೆ. ಎಷ್ಟೇ ಕಷ್ಟಗಳೂ ಬರಲಿ ಗಂಡನ ಮನೆಯೇ ನಿನಗೆ ಶಾಶ್ವತ. ಇನ್ನೂ ಮುಂದೆ ಅತ್ತೆ ಮನೆಯೇ ನಿನಗೆ ಸ್ಥಿರವಾದದ್ದು. ಮುತ್ತೈದೆಯಾಗಿ ಬಾಳು ಎಂದು ಹರಸುವ ಮೂಲಕ ತಾಯಿಯು ತವರು ಯಾವಾಗಲೂ ಹೆಣ್ಣಿಗೆ ಸ್ಥಿರವಲ್ಲ. ಮುಂದೊಂದು ದಿನ ತವರಿನ ಬಾಗಿಲು ನಿನಗೆ ಎರವಾಗಬಹುದು. ಆದರೆ ಗಂಡ–ಗಂಡನ ಮನೆಯೇ ಹೆಣ್ಣಿಗೆ ಶೋಭೆ ತರವಂತದ್ದು ಎಂದು ಹೇಳುವಲ್ಲಿ ತಾಯಿ ಮಗಳ ಬದುಕಿನ ಬಗ್ಗೆ ಹೊಂದಿರುವ ಕಾಳಜಿಯನ್ನು ತೋರಿಸುತ್ತದೆ. ಗಂಡನ ಮನೆಗೆ ಹೋಗುವಾಗಲೇ ಮಗಳು ತಾಯಿಯ ಆಯಸ್ಸಿಗಾಗಿ ದೇವರಲ್ಲಿ ಮೊರೆ ಹೋಗುತ್ತಾಳೆ. ಏಕೆಂದರೆ ತಂದೆ–ತಾಯಿ ಇರುವವರೆಗೆ ಮಾತ್ರ ತವರುಮನೆ. ಅವರು ಇಲ್ಲವಾದರೆ ತವರು ತನ್ನ ಪಾಲಿಗೆ ಮುಚ್ಚಿದ ಬಾಗಿಲು ಎಂಬುದು ಆಕೆಗೆ ಚೆನ್ನಾಗಿ ಗೊತ್ತು. ತಂದೆತಾಯಿ ತವರಲ್ಲಿ ತನಗೆ ಗೌರವಾದರಗಳು ಸಿಗಲಾರವೆಂಬ ವೇದನೆ ಹೆಣ್ಣುಮಕ್ಕಳಲ್ಲಿ ಹೇರಳವಾಗಿ ಅಭಿವ್ಯಕ್ತಗೊಂಡಿವೆ.

ತಾಯಿಲ್ದ ತೌರನ್ನು ಬಯಸದಿರು ಮನವೇ

ಮೇವಿಲ್ದ ಹೊಲಕೆ ಕರುಹೋಗಿ । ಅಳುವಂತೆ

ತಾಯಿಲ್ದ ತೌರಲ್ಲಿ ಹೆಣ್ಣ ಗೋಳು । (ಎಸ್. ಕೆ. ಕರೀಂಖಾನ್, ೧೯೫೫, ಪು–೫೫)

ತಾಯಿಯಿಲ್ಲದ ತವರನ್ನು ಕಲ್ಪಿಸಿಕೊಳ್ಳಲು ಆಗದು. ತಾಯಿಗೆ ಮಗಳ ನೋವನ್ನು ಅರಿಯುವ ಶಕ್ತಿಯಿದೆ. ತಾಯಿಯಿಲ್ಲದ ತವರು ಅದು ಮೇವಿಲ್ಲದ ಹೊಲವಿದ್ದಂತೆ. ಮೇವಿಲ್ಲದ ಹೊಲಕ್ಕೆ ಕರುಹೋಗಿ ಅಳುವಂತೆ ಮಗಳ ಸ್ಥಿತಿಯು ಹಾಗೆ. ತಾಯಿಯಿಲ್ಲದ ತವರಿಗೆ ಹೋಗಿ ಅತ್ತರೂ ಗೋಗರೆದರೂ ಮಗಳ ಗೋಳನ್ನು ಕೇಳುವವರಿಲ್ಲ. ಆದ್ದರಿಂದ ತಾಯಿಗೆ ಮಗಳು ಬೇಕು. ಮಗಳಿಗೆ ಹಡೆದವ್ವನಿರಬೇಕು. ಇವರೀರ್ವರ ನಡುವೆ ಇರುವ ಬಿಡಿಸಲಾಗದ ಬಾಂಧವ್ಯವನ್ನು ಅನುಭವಗಳ ಮೂಲಕ ಗೀತೆಗಳಲ್ಲಿ ಕಟ್ಟಿಕೊಟ್ಟಿದ್ದಾರೆ.

ಪುರುಷ ಪ್ರಧಾನ ಭಾರತೀಯ ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನಗಳು ಗೌಣ. ಹತ್ತಾರು ವರ್ಷ ತಂದೆತಾಯಿಯ ಮಮತೆಯ ಮಡಿಲಲ್ಲಿ ಬೆಳೆದ ಹೆಣ್ಣು ಹಠಾತ್ತನೆ ವಿವಾಹದ ಮೂಲಕ ಅಪರಿಚಿತ ವಾತಾವರಣವನ್ನು ಪ್ರವೇಶಿಸುವ ಸಂದರ್ಭ ಒದಗುತ್ತದೆ. ಆಗ ಅವಳ ಮನದಲ್ಲಿ ಏಳುವ ಭಾವತರಂಗಗಳಿಗೆ ಎಣಿಕೆಯಿಲ್ಲ. ಆದರೂ ಪ್ರೇಮ, ತ್ಯಾಗದಿಂದ ತಾನು ಪ್ರವೇಶಿಸಿದ ಕುಟುಂಬವನ್ನು ನಿಭಾಯಿಸಬೇಕಾಗುತ್ತದೆ. ಅಲ್ಲಿ ಬಂದೊದಗುವ ಕಷ್ಟ ಕಾರ್ಪಣ್ಯಗಳನ್ನು ಸಹಿಸಲೇಬೇಕಾಗುತ್ತದೆ. ಗಂಡನ ಮನೆಯ ಕಷ್ಟ ಕೋಟಲೆಯ ನಡುವೆ ತವರು ಮನೆಯ ನೆನಪು ಅವಳಿಗೆ ಸದಾ ಹಸಿರಾಗಿರುತ್ತದೆ. ಆ ನೆನಪೇ ಅವಳಿಗೆ ಆಧಾರವಾಗಿ ಬಾಳಿಗೆ ದಾರಿದೀವಿಗೆಯಾಗುತ್ತದೆ.

ತಂದೀಯ ನೆನೆದರೆ ತಂಗುಳು ಬಿಸಿಯಾಯ್ತು

ಗಂಗಾದೇವಿ ನನ್ನ ಹಡೆದವ್ನ । ನೆನೆದರೆ

ಮಾಸಿದ ತಲೆಯು ಮಡಿಯಾಯ್ತು । (ಹಲಸಂಗಿ ಗೆಳೆಯರು, ೧೯೩೧, ಪು–೩೭)

ಗಂಡನ ಮನೆಯಲ್ಲಿ ಹಿಂದಿನ ರಾತ್ರಿ ಮಾಡಿದ ತಂಗುಳನ್ನದ ತಟ್ಟೆಯ ಮುಂದೆ ಕುಳಿತವಳಿಗೆ ತಂದೆಯ ನೆನಪು ಉತ್ಸಾಹ ಮೂಡಿಸುತ್ತದೆ. ತಂದೆಯ ಮನೆಯಲ್ಲಿ ಕಷ್ಟದಲ್ಲಿಯೂ ಕೊರತೆಯಾಗದಂತೆ ನೋಡಿಕೊಳ್ಳುತ್ತಿದ್ದ ಆ ನೆನಪು ಗಂಡನ ಮನೆಯ ನೋವುಗಳನ್ನೆಲ್ಲ ಮರೆಸುತ್ತದೆ. ತಾಯಿಯನ್ನು ಗಂಗಾದೇವಿ ಎಂದು ಕರೆದಿರುವುದು. ಅವಳ ನೆನಪಿನಿಂದ ಮಾಸಿದ ತಲೆಯು ಮಡಿಯಾಯ್ತು ಎಂದಿರುವುದು ಅರ್ಥಪೂರ್ಣವಾಗಿದೆ. ಭಾರತೀಯರಲ್ಲಿ ಗಂಗಾ ನದಿಗೆ ಅತ್ಯಂತ ಪವಿತ್ರವಾದ ಸ್ಥಾನವಿದೆ. ಸರ್ವರ ಪಾಪವನ್ನು ತೊಳೆದು ಪವಿತ್ರಗೊಳಿಸುವಳೆಂಬ ಭಾವನೆ ಇದೆ. ತಾಯಿ ಗಂಗಾದೇವಿಗೆ ಸಮಾನಳು. ಅವಳ ನೆನಪಿನಿಂದ ಮಗಳು ಮಾನಸಿಕ ಕ್ಲೇಷವನ್ನು ಕಳೆದುಕೊಂಡು ಪುನೀತಳಾಗುತ್ತಾಳೆ. ಬದುಕಿನ ಸಂಕಷ್ಟಗಳನ್ನು ತೊಡೆದು ಹಾಕಿ ಹೊಸ ಉತ್ಸಾಹದಿಂದ ಬದುಕನ್ನು

ನಿರ್ವಹಿಸಲು ಸಜ್ಜಾಗುತ್ತಾಳೆ. ತಾಯಿ ಮಗಳ ನಡುವಿನ ಬಂಧುತ್ವ ಅಂತಹದು. ಬದುಕಿನ ಕಷ್ಟಗಳನ್ನು ನಿವಾರಿಸಿ ಎಲ್ಲರನ್ನು ಸಂತೋಷದಿಂದ ಇರಿಸುವ ಕಲೆಯು ತಾಯಿ–ಮಗಳಿಗೆ ಕರಗತವಾಗಿದೆ.

### ೪.೧.೫ ಅಣ್ಣ–ತಂಗಿ

ಒಡಹುಟ್ಟಿನೊಂದಿಗೆ ಬೆಸೆದುಕೊಳ್ಳುವ ಸಂಬಂಧದಲ್ಲೊಂದು ಅಣ್ಣ–ತಂಗಿಯ ಸಂಬಂಧ. ಹುಟ್ಟಿನೊಂದಿಗೆ ಆರಂಭಗೊಂಡು ಬದುಕಿನ ಅಂತ್ಯದವರೆಗೂ ಇರುವ ಬಾಂಧವ್ಯ. ಸಹೋದರತ್ವದ ಸಂಕೇತ. ಹೆಣ್ಣುಮಕ್ಕಳಿಗೆ ತವರೆಂದರೆ ಪ್ರೀತಿ. ತವರಿನವರೆಂದರೆ ಬಲು ಮೋಹ. ಹೆಣ್ಣಿಗೆ ತಂದೆ–ತಾಯಿಯ ನಂತರ ಅತೀ ಹತ್ತಿರದ ರಕ್ತಸಂಬಂಧವೆಂದರೆ ಸಹೋದರನದು. ಬಾಲ್ಯದಲ್ಲಿ ಇಬ್ಬರೊಡಗೂಡಿ ಆಟಪಾಠದಲ್ಲಿ ಕಲೆತು ಬೆಳೆಯುತ್ತಾರೆ. ವಿವಾಹದ ಹೊಸಬಂಧಗಳಲ್ಲಿ ಸಿಕ್ಕು ಹಳೆಯ ಸಂಬಂಧಗಳನ್ನು ಕೆಲವೊಮ್ಮೆ ಕಡಿದುಕೊಳ್ಳುತ್ತಾರೆ. ಅವೆಲ್ಲವನ್ನು ಮೀರಿ ನಿಂತಿದ್ದು ಅಣ್ಣ–ತಂಗಿಯ ಸಂಬಂಧ. ತಂಗಿಗೆ ಒಬ್ಬ ಉತ್ತಮ ಸಹಪಾಠಿಯಾಗಿ, ಗೆಳೆಯನಾಗಿ ಮತ್ತು ರಕ್ಷಕನಾಗಿ ಅಣ್ಣ ಇರುತ್ತಾನೆ. ಕಾಲಾಂತರದಲ್ಲಿ ವಿವಾಹದಿಂದ ಬೇರೆ ಬೇರೆಯಾದರೂ ಇವರೀರ್ವರ ಹಾರೈಕೆ ಬಾಂಧವ್ಯಕ್ಕೆ ಕೊರತೆಯಿಲ್ಲ. ದೂರದಲ್ಲಿದ್ದುಕೊಂಡೇ 'ಅಣ್ಣನಿಗೆ ಶ್ರೇಯಸ್ಸಾಗಲಿ' ಎಂದು ಆಶಿಸುವ ತಂಗಿ ಗುಣವು ಮೆಚ್ಚುವಂತದ್ದು. ತಂಗಿಯ ಬದುಕಿಗಾಗಿ ಸರ್ವಸ್ವವನ್ನೇ ತ್ಯಾಗ ಮಾಡುವ ಅಣ್ಣನ ಗುಣ ಅನುಕರಣೀಯ. ಅಣ್ಣನು ತಂಗಿಯ ಅಗಲಿಕೆಯನ್ನು ತಾಳಲಾರದೇ ಸಾವಿನಲ್ಲೂ ಒಂದಾದ ನಲ್ಲತಂಗಾ ಎಂಬ ಒಡಹುಟ್ಟಿದವರ ಜನಪದರ ಕಥೆಯೇ ಅವರ ಬಾಂಧವ್ಯಕ್ಕೆ ಸಾಕ್ಷಿಯಾಗಿದೆ.

ಅಣ್ಣತಂಗಿಯರ ಸಂಬಂಧ ಗಾಢವಾದುದು. ತಂಗಿಗಾಗುವ ಸಣ್ಣ ನೋವನ್ನೂ ಅಣ್ಣ ಸಹಿಸಲಾರ. ಅಣ್ಣನು ಸದಾ ಕಾಲ ತಂಗಿಯ ಸುಖವನ್ನೇ ಬಯಸುತ್ತಾನೆ. ರಾಗಿ ಬೀಸುವಾಗ ಒಮ್ಮೆ ತಂಗಿಯ ಕೈಮೇಲಾದ ಗುಳ್ಳೆಯನ್ನು ಕಾಣುತ್ತಾನೆ. ಸಂಕಟದಿಂದ ಅಣ್ಣ ತಂಗಿಯನ್ನು ಉಪಚರಿಸುವ ರೀತಿಯು ಅಣ್ಣನ ಪ್ರೀತಿಗೆ ಕನ್ನಡಿ ಹಿಡಿಯುವಂತಿದೆ.

ದಿನದ ಜೀವನಕ್ಕೆ ತಂಗಿ ರಾಗಿ ಬೀಸಲೇಬೇಕು. ಮೊದಮೊದಲು ರಾಗಿ ಬೀಸಿದಾಗ ಕೈಮೇಲೆ ಗುಳ್ಳೆ ಏಳುವುದು ಸಹಜ. ತಂಗಿಯು ಗುಳ್ಳೆಯೆದ್ದ ಕೈಯನ್ನು ಅಣ್ಣನಿಗೆ ತೋರಿಸುತ್ತಾಳೆ. ಅಣ್ಣ ತಂಗಿಯ ನೋವನ್ನು ಉಪಶಮನ ಮಾಡಲು ಕೈಗೆ ಪನ್ನೀರು ಸವರುತ್ತಾನೆ. ಮಂಚದ ಮೇಲೆ ವಿಶ್ರಾಂತಿ ಪಡೆದುಕೊಂಡು ಹೂವು ಮುಡಿದುಕೊ ಎಂದು ಸಂತೈಸುತ್ತಾನೆ. ಅಣ್ಣ ತಂಗಿಯನ್ನು ಸಂತೈಸುವುದನ್ನು ನೋಡಿದಾಗ ಈ ಅಣ್ಣನಿಗೆ ತಂಗಿಯ ಮೇಲೆ ಎಂತಹ ಅಕ್ಕರೆ ಎನ್ನಿಸದಿರದು. ಸರಳವಾದ ಪದಗಳಲ್ಲಿ ಅಣ್ಣನ ಮಮತೆಯನ್ನು ಜನಪದ ಗೀತೆಗಳು ಸೊಗಸಾಗಿ ಚಿತ್ರಿಸುತ್ತವೆ. ಅವಳ ಮನಸ್ಸಿಗೆ ಮುದ ನೀಡಿ ದೈಹಿಕ ಶ್ರಮವನ್ನು ಕಳೆಯಲು ಅಣ್ಣ ಮಾಡುವ ಪ್ರಯತ್ನ ಅಕ್ಕರೆಯಿಂದ ಕೂಡಿದ್ದಾಗಿದೆ.

ಹೆಣ್ಣಿಗೆ ಅಣ್ಣತಮ್ಮಂದಿರೆಂದರೆ ಅಪಾರ ಪ್ರೀತಿ. ನಮ್ಮ ಸಮಾಜದಲ್ಲಿ ಅನೇಕ ಸಂಪ್ರದಾಯಗಳ ಪೂರೈಕೆಗೆ ಅಣ್ಣತಮ್ಮಂದಿರಿರಬೇಕು. ಅಣ್ಣತಮ್ಮಂದಿರಿಲ್ಲದ ಸಹೋದರಿಯರಿಗೆ ಸಮಾಜದಲ್ಲಿ ಅಭದ್ರತೆ ಕಾಡುತ್ತದೆ. ಸಮಾಜ ದುರ್ಬಲರನ್ನು ತುಳಿದು ಸಬಲರನ್ನು ಮೇಲೆತ್ತುವುದು ಹೆಚ್ಚು. ಇಂತಹ ಸಮಾಜದಲ್ಲಿ ದೈಹಿಕವಾಗಿ ದುರ್ಬಲಳಾದ ಹೆಣ್ಣಿನ ಬದುಕು ಕಠಿಣವಾಗಿ ಪರಿಣಮಿಸಬಹುದು. ಅಂತಹ ಸಂದರ್ಭಗಳು ಬಂದಲ್ಲಿ ಕಾಪಾಡುವ ಅಣ್ಣ-ತಮ್ಮಂದಿರಿದ್ದಾರೆ. ಆಕೆ ಅಣ್ಣತಮ್ಮಂದಿರಿಗಾಗಿ ಸದಾ ಹಾರೈಸುತ್ತಾಳೆ.

ಹೆಣ್ಣಿನ ಜನುಮಾಕ ಅಣ್ಣ ತಮ್ಮರುಬೇಕು
ಬೆನ್ನು ತಟ್ಟುವರು ಸಭೆಯೊಳಗ । ಸಾವೀರ
ಹೊನ್ನ ಕಟ್ಟುವರು ಉಡಿಯೊಳಗ । (ಹಲಸಂಗಿ ಗೆಳೆಯರು, ೧೯೩೧, ಪು-೪೧)

ಹೆಣ್ಣಿಗೆ ಬೆಂಬಲವಾಗಿ ನಿಲ್ಲುವ ಅಣ್ಣತಮ್ಮಂದಿರು ಇರಬೇಕೆಂಬುದು ಆಕೆಯ ಅಪೇಕ್ಷೆ. ಪಕ್ಷಪಾತದಿಂದ ಕೂಡಿರುವ ಸಭೆಯಲ್ಲಿ ತಂಗಿಯ ಪರವಹಿಸಿ ಮಾತನಾಡಿ ತಂಗಿಗೆ ನ್ಯಾಯ ದೊರಕಿಸಿಕೊಡಲು ಅವರು ಬೇಕು. ನಮ್ಮದು ಸಂಪ್ರದಾಯನಿಷ್ಠ ಸಮಾಜ. ಅನೇಕ ಸಂಪ್ರದಾಯಗಳಲ್ಲಿ ಅಣ್ಣತಮ್ಮಂದಿರು ತಂಗಿಗೆ ಉಡಿ ತುಂಬಿಸುವರು ಇಲ್ಲದಿದ್ದರೆ ಅದು ಹೆಣ್ಣಿಗೆ ದೊಡ್ಡ ಅವಮಾನವೆಂದು ಭಾವಿಸುತ್ತಾರೆ. ಈ ಕಾರಣಗಳಿಂದ ಹೆಣ್ಣು ಅಣ್ಣ ತಮ್ಮಂದಿರನ್ನು ಬಯಸುತ್ತಾಳೆ.

ಒಡಹುಟ್ಟಿದ ಅಣ್ಣ-ತಂಗಿ ಜೀವನ ಪರ್ಯಂತ ಒಂದೇ ಕುಟುಂಬದಲ್ಲಿ ವಾಸಿಸಲು ಸಾಧ್ಯವಿಲ್ಲ. ಹೆಣ್ಣು ಹುಟ್ಟಿದ ಮೇಲೆ ಮದುವೆಯಾಗಿ ಇನ್ನೊಂದು ಕುಟುಂಬಕ್ಕೆ ಹೋಗಲೇಬೇಕು. ಜೊತೆಯಲ್ಲಿ ಬೆಳೆದ ತಂಗಿಯನ್ನು ಪರ ಊರಿಗೆ ಕಳುಹಿಸುವಾಗ ಅಣ್ಣ ತೀವ್ರವಾದ ಯಾತನೆ ಪಡುತ್ತಾನೆ. ಆ ಯಾತನೆ ಕರಳು ಕತ್ತರಿಸುವಂತಿರುತ್ತದೆ.

ತಂಗೀನ ಕಳುವ್ಯಾನು ತೆವರೇರಿ ನಿಂತಾನು
ಅಂಗೀಲಿ ನೀರು ಒರಸ್ಯಾನು । ನನ್ನಣ್ಣ
ಇಂದಿಗೆ ತಂಗಿ ಎರವೆಂದ । (ತೀ. ನಂ. ಶ್ರೀಕಂಠಯ್ಯ, ೧೯೫೩, ಪು-೧೧)

ಮದುವೆಯಾದ ಮೇಲೆ ಗಂಡನೊಂದಿಗೆ ಹೊರಟು ನಿಂತ ತಂಗಿಯನ್ನು ಬೀಳ್ಕೊಡಲು ಅಣ್ಣ ಬಹುದೂರದವರೆಗೆ ಹೋಗಿದ್ದಾನೆ. ತಂಗಿ ಹೋಗುವುದು ಬಹುದೂರದವರೆಗೆ ಕಾಣಲೆಂದು ಎತ್ತರದ ದಿಣ್ಣೆಯನ್ನು ಹತ್ತಿ ನಿಂತು ನೋಡುತ್ತಾನೆ. ಇಷ್ಟು ದಿನ ತನ್ನೊಂದಿಗೆ ಕೂಡಿ ಬೆಳೆದ ತಂಗಿ ಬೇರೆಯಾಗಿ ಹೋಗುತ್ತಿರುವುದನ್ನು ಕಂಡು ಕಣ್ಣೀರು ಸುರಿಸುತ್ತಾನೆ. ಮೇಲ್ಕಂಡ ಗೀತೆಯು ಕಟ್ಟಿಕೊಡುವ ಸೋದರ ವಾತ್ಸಲ್ಯದ ದೃಶ್ಯ ಮನಕರಗುವಂತಿದೆ. ಗೀತೆಗಳಲ್ಲಿನ ಭಾವನೆಗಳು ಕೇವಲ ಯಾಂತ್ರಿಕವಾಗಿರದೇ ಬದುಕಿನ ನೈಜತೆಯನ್ನು ದರ್ಶನ ಮಾಡಿಸುತ್ತದೆ. ಒಡಹುಟ್ಟಿದ ಅಣ್ಣ-ತಂಗಿಯರ ಬಾಂಧವ್ಯವು ಉಳಿದೆಲ್ಲ ಸಂಬಂಧಗಳಿಗಿಂತ ಶ್ರೇಷ್ಠವಾಗಿ ತೋರುತ್ತವೆ.

ಜನಪದ ಗೀತೆಗಳಲ್ಲಿ ಅಣ್ಣ-ತಂಗಿಯ ಸಂಬಂಧಕ್ಕೆ ಪೂರಕವಾಗಿ ಅನೇಕ ಉದಾಹರಣೆಗಳು ಸಿಗುತ್ತವೆ. ಏಕೆಂದರೆ ಜನಪದ ಪರಂಪರೆಯಲ್ಲಿರುವ ಅಣ್ಣ-ತಂಗಿಯರ ಬಾಂಧವ್ಯ ಅಂತಹದು. ಅಣ್ಣನನ್ನು ಕಾಡಿಬೇಡಿ ಬೇಕಾದ್ದನ್ನು ಪಡೆಯುವ ತಂಗಿಯ ಹಂಬಲವನ್ನು ಈ ಕೆಳಗಿನ ಪದ್ಯದಲ್ಲಿ ಕಾಣುತ್ತೇವೆ.

ಹಟ್ಟೀಲಿ ಹತ್ತೆಮ್ಮೆ ಕೊಟಿಗೇಲಿ ನಾಕೆಮ್ಮೆ
ಕೊಟ್ಟೇನೊ ಅಣ್ಣಯ್ಯ ನನಗೊಂದ । ಎಮ್ಮೆಯ
ನಿನ್ನ ಹೆಸರ್ಹೇಳಿ ಮೊಸರ ಕಡದೇನು । (ಎಲ್. ಗುಂಡಪ್ಪ, ೧೯೪೭, ಪು-೬೯)

ಅಣ್ಣನು ದನಕರು, ಎಮ್ಮೆ, ಎತ್ತುಗಳನ್ನು ಕಟ್ಟಿಕೊಂಡು, ಹೊಲವನೂಳುವ ರೈತ. ಈತನ ಮನೆಯಲ್ಲಿ ಹೈನಕ್ಕೆ ಕೊರತೆಯಿಲ್ಲ. ಹಟ್ಟಿಯಲ್ಲಿ ಹತ್ತು ಎಮ್ಮೆ, ಕೊಟ್ಟಿಗೆಯಲ್ಲಿ ನಾಲ್ಕು ಎಮ್ಮೆಗಳಿವೆ. ಎಲ್ಲವೂ ಹೈನುವಂತವೆ. ಹೀಗಾಗಿ ಪ್ರೀತಿಯಿಂದ ತನ್ನ ಅಣ್ಣನಲ್ಲಿ ಒಂದು ಎಮ್ಮೆಯನ್ನು ಕೊಡು ಎಂದು ತಂಗಿಯು ಕೇಳುತ್ತಿದ್ದಾಳೆ. ನೀನು ಎಮ್ಮೆಯನ್ನು ಕೊಟ್ಟರೆ ನಿನ್ನ ಹೆಸರು ಹೇಳಿಕೊಂಡು ಮೊಸರು ಕಡೆಯುತ್ತೇನೆ ಎಂದು ಭಿನ್ನವಿಸಿಕೊಳ್ಳುತ್ತಿದ್ದಾಳೆ. ತನ್ನ ಬಳಿಯಿದ್ದರೆ ಕೊಡುವಂತದ್ದು ಇಲ್ಲದಿದ್ದರೆ ಕೇಳುವಂತಹ ಸ್ವಭಾವ ಅಣ್ಣ-ತಂಗಿಯರದ್ದಾಗಿರುತ್ತದೆ. ಎಷ್ಟೇ ಸಿರಿವಂತರಾದರೂ ಒಡಹುಟ್ಟಿದವರು ಬಳಿಯಿರಬೇಕು. ತವರವರು ಕೊಡುವ ಉಡುಗೊರೆಗಳು ಅವರಿಗೆ ಬೆಲೆಬಾಳುವ ವಸ್ತುಗಳಾಗಿರಲಿ ಇಲ್ಲವೇ ಸಾಮಾನ್ಯ ವಸ್ತುವೇ ಆಗಿರಲಿ ಆದರೆ ಯಾರು ಕೊಟ್ಟಿದ್ದು? ಎಂಬ ಅಂಶ ಇಲ್ಲಿ ಪ್ರಾಮುಖ್ಯತೆ ಪಡೆಯುತ್ತದೆ. ತಂಗಿಯೊಬ್ಬಳು ಅಣ್ಣನಿಗೆ ಗಂಧದಿಂದ ಮಾಡಿದ ಬೀಸಣಿಕೆಯನ್ನು ಉಡುಗೊರೆಯಾಗಿ ನೀಡುತ್ತಾಳೆ. ಕಾರಣ ಅಣ್ಣ ಬಡವನಂತಲ್ಲ. ಬದಲಾಗಿ ನ್ಯಾಯದ ಕಟ್ಟೆ ಮೇಲೆ ಕುಳಿತು ನ್ಯಾಯ ಹೇಳುವಾಗ ಆತನಿಗೆ ಬೆವರು ಬಾರದಿರಲಿ ಎಂಬ ಉದ್ದೇಶದಿಂದ. ಅಣ್ಣನಿಗೆ ಬೆವರೂ ಸಹ ಬರದಿರಲಿ ಎಂಬ ತಂಗಿಯ ಕಾಳಜಿ ಇಲ್ಲಿ ಅಭಿವ್ಯಕ್ತಗೊಂಡಿದೆ.

ಅಂಗಿ ಮೇಲಂಗಿ ಬಂಗಾರದ ತೋಡೇವು
ಮಂದ್ಯಾಗ ಅಣ್ಣಯ್ಯ ಬೆವೆತಾನ । ಅದಕೇಳಿ
ಗಂಧದ ಬೀಸಣಿಕೆ ಕಳಿಸೇನ । (ದೇ. ಜವರೇಗೌಡ, ೧೯೭೮, ಪು-೫೭)

ಅಣ್ಣಯ್ಯನು ಅಂಗಿಯ ಮೇಲೆ ಅಂಗಿ ಹಾಕಿದ್ದಾನೆ. ಚಿನ್ನದ ಕಡಗವನ್ನು ಧರಿಸಿದ್ದಾನೆ ಎಂಬುದರಲ್ಲಿ ಆತನ ಸಿರಿವಂತಿಕೆ ಅಡಗಿದೆ. ಸಮಾಜದೊಳಗೆ ಬೆರೆತು ಊರಿನ ಮುಖಂಡತ್ವ ವಹಿಸಿಕೊಂಡವನು. ಮಂದಿಯೊಳಗೆ ಇರುವಾಗ ಸಾಕಷ್ಟು ಬೆವೆತಿದ್ದನ್ನು ಕೇಳಿದ ತಂಗಿಯೊಬ್ಬಳು ಅಣ್ಣನಿಗಾಗಿ ಪ್ರೀತಿಯಿಂದ ಗಂಧದ ಕಟ್ಟಿಗೆಯಿಂದ ಮಾಡಿರುವ ಬೀಸಣಿಕೆಯನ್ನು ಕಳುಹಿಸಿಕೊಡುತ್ತಾನೆ. ಜನಪದರಲ್ಲಿ ಕೇವಲ ಸುಖದಲ್ಲಷ್ಟೇ ಇದ್ದು ಕಷ್ಟಕ್ಕೆ ಬಾರದಿರುವಂತಹ ಬಾಂಧವ್ಯಗಳಿಲ್ಲ. ಬದುಕಿನ ಕಷ್ಟಸುಖದ ಪ್ರತಿ ತಿರುವಿನಲ್ಲಿಯೂ ಜೊತೆಗೂಡಿಯೇ ಹೋಗುವಂತಹ ಸಂಬಂಧಗಳಿರಬೇಕು.

ತಂಗಿಗೆ ಏನಾದರೂ ಕಷ್ಟವುಂಟಾದರೆ ಅಣ್ಣನು ತಕ್ಷಣವೇ ನೆರವಿಗೆ ಧಾವಿಸುತ್ತಾನೆ. ಮದುವೆಯ ಮಾಡಿ ಗಂಡನ ಮನೆಗೆ ಕಳುಹಿ, ಅಲ್ಲಿಯ ಕಿರುಕುಳವನ್ನು ಕೇಳಿ ತಂಗಿಯ ಸ್ಥಿತಿಗೆ ಮರುಗುತ್ತಾನೆ. ವಿಕೋಪಕ್ಕೆ ಹೋದಾಗ ತಂಗಿಯ ಪರವಾಗಿ ನಿಲ್ಲುತ್ತಾನೆ. ತನ್ನ ತಂಗಿಯ ಮೇಲಿನ ಪ್ರೀತಿಯಿಂದ ಗಂಡನ ಮನೆಯವರಿಗೆ ತೊಂದರೆಯಾಗಬಹುದೆಂದು ದುಃಖವನ್ನು ಒಡಲೊಳಗೆ ನುಂಗಿಕೊಳ್ಳುವ ಪ್ರಸಂಗಗಳು ಜನಪದ ಗೀತೆಗಳಲ್ಲಿ ಅಭಿವ್ಯಕ್ತಗೊಂಡಿವೆ.

ಅತ್ತೀಯ ಮನಿ ಸುದ್ದಿ ಹತ್ತ್ಯಾವ ತವರೀಗಿ
ಸಿಟ್ಟಿನವ ಭಾಳ ನನ್ನಣ್ಣ। ಕೇಳೂತ
ಬಿಟ್ಟಾನೊ ತನ್ನ ಮರಿಗುದರಿ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೮೩)

ತಂಗಿಯು ತನಗೊದಗಿದ ಸಂಕಟವನ್ನು ಅಣ್ಣನಿಗೆ ಹೇಳುವುದಿಲ್ಲ. ಏಕೆಂದರೆ ತವರವರು ನೊಂದುಕೊಳ್ಳಬಹುದು ಇಲ್ಲವೇ ಅಣ್ಣನಿಗೆ ತಿಳಿದರೆ ಕೋಪಗೊಂಡು ಗಂಡನ ಮನೆಯವರಿಗೆ ತೊಂದರೆ ಮಾಡಿಯಾನು? ಎಂಬ ಕಳವಳದಿಂದ ಆಕೆ ವಿಷಯ ತಿಳಿಸುವುದಿಲ್ಲ. ಆದರೆ ಬೇರೆಯವರಾಡುವ ಮಾತುಗಳಿಂದ ತಂಗಿಯ ಕಷ್ಟವನ್ನು ತಿಳಿದ ಸಿಟ್ಟುಳ್ಳ ಅಣ್ಣನು ತನ್ನ ಕುದುರೆಯನ್ನು ಹತ್ತಿ ತಂಗಿಯ ನೆರವಿಗೆ ಧಾವಿಸುತ್ತಾನೆ. ಅಲ್ಲದೇ ಅತ್ತೆಯ ಮನೆಯವರಿಗೆ ಕಷ್ಟ ಕೊಡದಂತೆ ತಾಕೀತು ಮಾಡುತ್ತಾನೆ. ತಂಗಿಗೆ ಕಷ್ಟವಾಗದಿರಲಿ ಎಂದು ಅತ್ತೆಮನೆಯವರ ಬೇಡಿಕೆಗಳನ್ನು ಪೂರೈಸುತ್ತಾನೆ. ಹೀಗೆಯೇ ತಂಗಿಯ ನಗುವಿನಲ್ಲಿ ಖುಷಿ ಕಾಣುವ ಅಣ್ಣನು ತನ್ನ ಮದುವೆಯಾದ ಮೇಲೆ ಬದಲಾಗುತ್ತಾನೆ. ಆತನ ಪ್ರೀತಿಗೆ ಮಂಕು ಕವಿಯುತ್ತದೆ. ಅಣ್ಣನ ಹೆಂಡತಿ ಅತ್ತಿಗೆ ಬಂದು ತವರೂರನ್ನು ತಂಗಿಗೆ ದೂರವಾಗಿಸುತ್ತಾಳೆ. ಅಣ್ಣನು ಹೆಂಡತಿಯ ಮಾತಿಗೆ ಮರಳಾಗುತ್ತಾನೆ. ತಂಗಿಯನ್ನು ದೂರಮಾಡುತ್ತಾನೆ. ಪಂಚಮಿ ಹಬ್ಬಕ್ಕೆ ಅಣ್ಣನು ತವರಿಗೆ ಕರೆಯಲು ಬರುತ್ತಾನೆಂದು ತಂಗಿ ಕಾದು ಬಡವಾಗುತ್ತಾಳೆ. ಪಕ್ಕದೂರಿನಲ್ಲಿರುವ ತಂಗಿಯನ್ನು ಹಬ್ಬಕ್ಕೆ ಕರೆತರದ ಅಣ್ಣಯ್ಯನ ಕುರಿತು ತಂಗಿ ನೊಂದುಕೊಳ್ಳುತ್ತಾಳೆ. ಅಪರೂಪಕ್ಕೆ ತವರಿಗೆ ಬಂದಾಗ ಅತ್ತಿಗೆಯ ವರ್ತನೆಗೆ ಬೇಸತ್ತು ದುಃಖಿಸುತ್ತಾಳೆ. ಹೊರತು ಅಣ್ಣನ ಮುಂದೆ ಚಾಡಿ ಹೇಳುವುದಿಲ್ಲ. ಅತ್ತಿಗೆಯ ದುರುಳ ವರ್ತನೆಯ ದೃಷ್ಟಾಂತವೊಂದು ಈ ಕೆಳಗಿನಂತಿದೆ.

ಅಣ್ಣನ ಹೆಂಡತಿ ಕಣ್ಣಿಗೆ ಚೆಲುವೆಯು
ಸುಣ್ಣದ ನೀರ ಒಲೆ ಮುಂದ। ಇಟಕೊಂಡು
ಹಾಲನ್ನವೆಂದು ಬಡಿಸುವಳು।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೮೩)

ಅಣ್ಣನ ಹೆಂಡತಿ ಅತ್ತಿಗೆ ನೋಡಲು ಚಲುವೆ. ಅವಳ ಮಾತು ಮಾತ್ರ ಚಂದ. ಆದರೆ ಅವಳ ವರ್ತನೆ ಅಮಾನವೀಯವಾದುದು. ಸುಣ್ಣದ ನೀರನ್ನು ಹಾಲೆಂದು ಬಡಿಸುವ ಕ್ರೂರಿ. ಕೇವಲ ಕಣ್ಣಿಗೆ ಚಂದ ಇದ್ದರೆ ಸಾಲದು. ಕರುಳಿನಿಂದ ಕರುಣಿಯಾಗಿರಬೇಕು. ಆದರೆ ಮನದೊಳಗೆ ದುರ್ಗುಣಗಳನ್ನು ಹೊಂದಿದವಳು. ಅಣ್ಣನಿರದ ವೇಳೆ ಸುಣ್ಣದ ನೀರನ್ನು ಒಲೆಮುಂದೆ ಇಟ್ಟುಕೊಂಡು ಅದನ್ನೇ ಎಮ್ಮೆಯ ಹಾಲು ಎಂದು ಬಡಿಸುತ್ತಾಳೆ. ಅಂತರಂಗದಲ್ಲಿ ಅಸೂಯೆಯುಳ್ಳ ಹೆಣ್ಣನ್ನು ಅತ್ತಿಗೆಯನ್ನಾಗಿ ತಂದು ತಂಗಿಯರಿಗೆಲ್ಲ ದೂರವಾಗುವ ಅಣ್ಣ ಹೆಂಡತಿಯ ಮಾತನ್ನು ನಂಬುತ್ತಾನೆ. ಆದರೆ ವಾಸ್ತವ ತಿಳಿದಾಗ ತಂಗಿಯ ಪ್ರೀತಿಗಾಗಿ ಹಂಬಲಿಸುತ್ತಾನೆ. ಹೆಣ್ಣು ಗಂಡನ ಮನೆ ಸೇರಿದ ಮೇಲೆ ಅಣ್ಣ ಅತ್ತಿಗೆಯೊಂದಿಗೆ ಸಂಬಂಧಗಳು ಎಲ್ಲ ಕಾಲಗಳಲ್ಲಿಯೂ ಚೆನ್ನಾಗಿರುತ್ತವೆಂದು ಹೇಳಲಾಗುವುದಿಲ್ಲ. ತನ್ನ ಗಂಡ ಮಕ್ಕಳು ತನ್ನ ಕುಟುಂಬವನ್ನಷ್ಟೇ ಇಷ್ಟಪಡುವ ಅತ್ತಿಗೆ ಪರಮನೆಯ ಸೇರಿದ ಗಂಡನ ಸಹೋದರಿಯನ್ನು ತಿರಸ್ಕಾರದಿಂದ ನೋಡುತ್ತಾಳೆ. ಗಂಡನ ಸಹೋದರಿಯರು ತನ್ನ ಮನೆಯಲ್ಲಿರುವುದನ್ನು ಎಂದೂ ಇಷ್ಟಪಡುವುದಿಲ್ಲ. ಅವರು ತಮ್ಮ ಕುಟುಂಬವನ್ನು ಸೇರಿಕೊಂಡರೇ ತನ್ನ ಕುಟುಂಬಕ್ಕೆ ಹಿನ್ನಡೆಯಾಗುವುದೆಂದು ಭಾವಿಸುತ್ತಾಳೆ. ಆದಷ್ಟು ಬೇಗ ಅವಳನ್ನು ಸಾಗಹಾಕಲು ಪ್ರಯತ್ನಿಸುತ್ತಾಳೆ. ಈ ಬಗೆಯ ಅಣ್ಣ–ತಂಗಿಯರ ಬಾಂಧವ್ಯಕ್ಕೆ ಹುಳಿಹಿಂಡುವ ಅತ್ತಿಗೆಯ ಸ್ವಭಾವವನ್ನು ಹೇಳುವ ಅನೇಕ ಗೀತೆಗಳು ಕನ್ನಡ ಜನಪದ ಸಾಹಿತ್ಯದಲ್ಲಿವೆ.

ಅಣ್ಣನು ಹಬ್ಬ ಹರಿದಿನಗಳಲ್ಲಿ ಮರೆಯದೇ ತಂಗಿಗಾಗಿ ಸೀರೆ, ಒಡವೆ, ಬಳೆ ಹಾಗೂ ಹೂವನ್ನು ಮರೆಯದೇ ತರುತ್ತಾನೆ. ಅವುಗಳನ್ನು ಉಡುಗೊರೆಯಾಗಿ ನೀಡುತ್ತಾನೆ. ಜನಪದರಲ್ಲಿ ಅಣ್ಣ–ತಂಗಿಯರಿಗಾಗಿಯೇ ನೂಲ ಹುಣ್ಣಿಮೆ ಆಚರಣೆಯಲ್ಲಿದೆ. ಅಂದು ತಂಗಿಯು ತನ್ನ ಅಣ್ಣನಿಗೆ ರಕ್ಷೆಯ ಬೇಡಿ ನೂಲನ್ನು ಕಟ್ಟುತ್ತಾಳೆ. ಪ್ರತಿಯಾಗಿ ಅಣ್ಣನು ರಕ್ಷಣೆಯ ನೀಡುವ ಅಭಯದೊಂದಿಗೆ ಉಡುಗೊರೆಯನ್ನು ಕೊಡುತ್ತಾನೆ. ಇದು ಸಹೋದರೆಯ ಪ್ರತೀಕವಾಗಿ ಆಚರಿಸಲ್ಪಡುತ್ತದೆ. ತನ್ನ ತಂಗಿಗಾಗಿ ಹೂವು ಕೊಳ್ಳುವ ಬಗೆಯನ್ನು ಜನಪದರು ಈ ರೀತಿ ವರ್ಣಿಸಿದ್ದಾರೆ.

ಅಚ್ಚಮಲ್ಲಿಗಿ ಹೂವು ಮುಚ್ಚಿ ಮಾರುವ ಜಾಣಾ
ನಾ ಕೊಳುವೆನಿದರ ಬೆಲೆ ಹೇಳೋ । ತಂಗೀಗಿ
ಸುರುಳಿಗೂದಲದ ಸುಗುಣೀಗಿ । (ವಿನೀತ ರಾಮಚಂದ್ರರಾಯ, ೧೯೬೦, ಪು–೪೪)

ಅಚ್ಚುಮಲ್ಲಿಗೆಯ ಹೂವುಗಳನ್ನು ಮುಚ್ಚಿ ಮಾರುವವನು ಜಾಣ. ಮುಚ್ಚದೇ ಇದ್ದರೆ ಹೂವು ಬಾಡುತ್ತವೆ. ಅದಕ್ಕಾಗಿ ಆತ ಜಾಣ. ಹೂವಿನ ಬೆಲೆಯೇನು? ಎಂದು ಅಣ್ಣನೊಬ್ಬ ವ್ಯವಹಾರಕ್ಕೆ ಇಳಿಯುತ್ತಾನೆ. ಬೆಲೆ ಎಷ್ಟು ಆದರೂ ಪರವಾಗಿಲ್ಲ ಹೂವನ್ನು ತಂಗಿಗಾಗಿ ಕೊಳ್ಳುತ್ತಾನೆ. ಸುರುಳಿಗೂದಲನ್ನು ಹೊಂದಿದ, ಒಳ್ಳೆಯ ನಡತೆಯನ್ನು ಹೊಂದಿದ ಚೆಲುವೆಯಾದ ತನ್ನ ತಂಗಿಗೆ

ಹೂವು ಕೊಡು ಎಂದು ಕೊಂಡುಕೊಳ್ಳುತ್ತಾನೆ. ಅಣ್ಣ–ತಂಗಿಯ ಪ್ರೀತಿಗೆ ಪ್ರತೀಕವಾಗಿ ಸಾಲುಗಳು ಒಡಮೂಡಿವೆ.

ಅಣ್ಣತಮ್ಮಂದಿರೊಂದಿಗೆ ಅಕ್ಕತಂಗಿಯರು ಒಟ್ಟಿಗೆ ಬೆಳೆದಿದ್ದರೂ, ಅತ್ತಿಗೆ ಬಂದೊಡನೆ ತವರು ಮನೆಗೆ ಅವರು ಪರಕೀಯರಾಗುತ್ತಾರೆ. ಅಣ್ಣನ ಮೇಲಿನ ಮಮತೆಯಿಂದ ತಂಗಿ ಮನೆಗೆ ಧಾವಿಸಿ ಬಂದರೆ ಅವಳನ್ನು ಹೆಂಡತಿಯ ಮೇಲಿನ ಮೋಹದಿಂದ ತಡೆಯುತ್ತಾನೆ. ಹೆಂಡತಿಯ ಅಪ್ಪಣೆಯಾದರೆ ಅವಳನ್ನು ಮನೆಗೆ ಕರೆದೊಯ್ಯುತ್ತಾನೆ. ಇಲ್ಲದಿದ್ದರೇ ಇಲ್ಲ. ಅಣ್ಣ ಹೆಂಡತಿಯ ಕೈಗೊಂಬೆಯಾಗಿರುವನು ಎಂಬುದು ಆಕೆಯ ಕೊರಗು. ಅಣ್ಣನಿಗೆ ತಂಗಿಯ ಮೇಲೆ ಮಮತೆ ಇಲ್ಲವೆಂದಲ್ಲ. ಹೆಂಡತಿಯಾದವಳು ತಂಗಿಯೊಡನೆ ವರ್ತಿಸುವ ರೀತಿಗೆ ಅವನಿಗೆ ನೋವಿದೆ. ತವರೂರಿನ ಮಮತೆಯಿಂದ ಬಂದ ತಂಗಿಗೆ ಸರಿಯಾದ ಸತ್ಕಾರವಿಲ್ಲ ಎಂಬುದು ಅಣ್ಣನಿಗೆ ಬೇಸರ ತರುವ ಸಂಗತಿ. ಅವನು ತಂಗಿಗೆ ಹೇಳಿದ ಮಾತುಗಳಲ್ಲಿ ವಾಸ್ತವದ ಚಿತ್ರಣವಿದೆ.

ತಾಯಿಲ್ದ ಮನೆಗೆ ಯಾಕ ತಂಗಮ್ಮ ಬಂದೆ
ರಾಕಸಿ ಅವಳೆ ಮನೆಯಲ್ಲಿ । ನಿನಕಂಡು
ಮೈನೋವೆಂದು ಮಲಗುವಳು । (ದೇ. ಜವರೇಗೌಡ, ೧೯೭೮, ಪು–೬೪)

ತಂಗಿ ಬಂದಳೆಂದರೆ ಮೈನೋವೆಂದು ಮಲಗುವ ಹೆಂಡತಿಯ ಸ್ವಭಾವವನ್ನು ಈ ಗೀತೆ ಸ್ವಾರಸ್ಯಕರವಾಗಿ ತೆರೆದಿಡುತ್ತದೆ. ತಂಗಿಯನ್ನು ಸರಿಯಾಗಿ ಉಪಚರಿಸದ ಹೆಂಡತಿ ಅವನ ಪಾಲಿಗೆ ರಾಕ್ಷಸಿ. ಇಂತಹ ರಾಕ್ಷಸಿಯ ಮನೆಗೆ ಏಕೆ ಬಂದೆ ಎಂದು ಅಣ್ಣ ದುಃಖಪಡುತ್ತಾನೆ. ಪ್ರೀತಿಯ ತಂಗಿಗೆ ನೋವಾಗದಿರಲೆಂದು ಹೇಳುತ್ತಾನೆ. ಪ್ರತಿಯಾಗಿ ತಂಗಿಯಾಡುವ ನುಡಿ ಈ ಕೆಳಗೆ ಅಭಿವ್ಯಕ್ತಗೊಂಡಿದೆ.

ಬಡತನ ಬಂದರ ಬಾಗಿಕೊಂಡಿರುವೇನೊ
ಬಾರೆನಣ್ಣಯ್ಯ ನಿನ ಮನಿಗೆ । ನಿನ ಮಡದಿ
ಏಳಲ ಮಾಡಿ ನುಡಿದಾಳ । (ವಿನೀತ ರಾಮಚಂದ್ರರಾಯ, ೧೯೬೦, ಪು–೪೫)

ಅಣ್ಣನು ಶ್ರೀಮಂತನೇ ಆಗಿರಲಿ, ಬಡವನೇ ಆಗಿರಲಿ ತಂಗಿಗೆ ಅವನನ್ನು ಆದರ ಗೌರವದಿಂದಲೇ ಕಾಣುತ್ತಾಳೆ. ಅತ್ತಿಗೆ ತೋರುವ ಅನಾದರದ ಬಗ್ಗೆ ಅವಳಿಗೆ ನೋವಿರುವುದು ನಿಜ. ಅಣ್ಣನಿಗೆ ತವರಿಗೆ ಬರುವುದಿಲ್ಲ ಎಂದು ದೂರದಿಂದಲೇ ನೋಡಿ ಸಂತಸಪಡುತ್ತಾಳೆ. ಹಾಗೆಂದು ಅವಳು ತನ್ನ ತವರೂರಿನ ಕುಡಿಗಳನ್ನು ಎಂದೂ ದ್ವೇಷಿಸುವುದಿಲ್ಲ. ಸದಾ ಕಾಲ ತವರಿನ ಹಿತವನ್ನೇ ಹಾರೈಸುತ್ತಾಳೆ.

ತನಗೆ ಎಷ್ಟೇ ಕಷ್ಟವಿರಲಿ ತನ್ನಣ್ಣ ಸುಖವಾಗಿರಲೆಂದು ಹಾರೈಸುವಷ್ಟು ಔದಾರ್ಯವನ್ನು ಹೆಣ್ಣು ಮೆರೆದಿದ್ದಾಳೆ. ಅತ್ತಿಗೆಯು ಎಷ್ಟೇ ವಿರೋಧ ವ್ಯಕ್ತಪಡಿಸಲಿ ಅದು ಅವಳಿಗೆ ಮುಖ್ಯವೆನಿಸುವುದಿಲ್ಲ. ಅಣ್ಣಅತ್ತಿಗೆಯು ಸುಖವಾಗಿರಬೇಕೆಂಬುದು ಅವಳ ಬಯಕೆ. ಜನಪದ ಹೆಣ್ಣಿನ ಈ ಬಗೆಯ ಜೀವಪರ

ನಿಲುವು ಔದಾರ್ಯಗಳು ಸಮಾಜ ಮತ್ತು ಕುಟುಂಬ ಜೀವನವನ್ನು ಸಹ್ಯಗೊಳಿಸಿವೆ. ದ್ವೇಷ ಅಸೂಯೆಗಳನ್ನು ದೂರಮಾಡಿವೆ. ಭಾರತೀಯ ಸಂಸ್ಕೃತಿಯ ಸಾರ ಇದೇ ಎಂಬ ಮಹತ್ವದ ಸಂಗತಿಯು ಇಂದು ಅರಿವಿಗೆ ಬರಬೇಕಿದೆ.

ಅಣ್ಣ-ತಂಗಿಯರ ಸಂಬಂಧ ಮದುವೆಗೆ ಕೊನೆಗೊಳ್ಳುವುದಿಲ್ಲ. ಇವರೀರ್ವರು ಮುಂದೆ ಬೀಗರಾಗಿಯೂ ಹೊಸ ಬಾಂಧವ್ಯ ಬೆಸೆಯುತ್ತಾರೆ. ಅಣ್ಣನ ಮಗನಿಗೆ ತನ್ನ ಮಗಳನ್ನು ಇಲ್ಲವೇ ತಂಗಿಯ ಮಗನಿಗೆ ಅಣ್ಣನ ಮಗಳನ್ನೊ ತಂದುಕೊಂಡು ಸಂಬಂಧಕ್ಕೆ ಹೊಸ ಅರ್ಥ ಕಲ್ಪಿಸುತ್ತಾರೆ. ತನ್ನಣ್ಣನ ಮನೆಯ ಸೊಸೆಯಾಗು ಎಂದು ತನ್ನ ಮಗಳಿಗೆ ಗರತಿಯೊಬ್ಬಳು ಹೇಳುವಲ್ಲಿ ಅವಳ ತವರುಮನೆಯ ಮೋಹ ಅಡಗಿದೆ.

ಸೋದರಮಾವನ ಸೊಸಿಯಾಗ ನನ ಮಗಳ
ಬೀಸಲಾಗ ನೀರ ತರಗೊಡನ । ನಿಮ್ಮಾವಾ ।
ನೀರ್ಹೋಳಿಗೆ ನಿಂಬಿಬನ ನಿಲುವಿ । (ಹಲಸಂಗಿ ಗೆಳೆಯರು, ೧೯೩೧, ಪು-೭೭)

ಅಣ್ಣನ ತಂಗಿಯೊಬ್ಬಳು ತನ್ನ ಮಗಳಿಗೆ ತನ್ನಣ್ಣನ ಮಗನ ಮಡದಿಯಾಗಿ ತನ್ನಣ್ಣನ ಸೊಸೆಯಾಗಿ ನೀನು ತವರಿಗೆ ಹೋದರೆ ನಿನ್ನನ್ನು ಅವರು ಬಿಸಿಲು ಬೀಳದ ಹಾಗೆ ನೋಡಿಕೊಳ್ಳುವರೆಂಬ ಕಿವಿಮಾತು ತಾಯಿಯದು. ಅಣ್ಣನು ಸಿರಿವಂತ. ಸಾಕಷ್ಟು ತೋಟದ ಹೊಲವಿದೆ. ನೂರಾರೂ ದನಕರುಗಳಿವೆ. ಅಲ್ಲದೇ ಸಾಕಷ್ಟು ಆಳುಗಳಿವೆ. ನನ್ನಣ್ಣನು ನಿನ್ನಿಂದ ಬಿಸಿಲಲ್ಲಿ ನೀರನ್ನು ತರಿಸಲಾರ ಎಂದು ಮಗಳಿಗೆ ಹೇಳುತ್ತಾಳೆ. ತನ್ನ ಮಗಳನ್ನು ಅಣ್ಣನ ಮಗನಿಗೆ ನೀಡಬೇಕೆಂಬ ಹಂಬಲ ಆಕೆಯದು. ತವರಿನ ರಸಬಳ್ಳಿ ಬೆಳೆಯಬೇಕೆಂಬ ಹಾರೈಕೆಯೊಂದಿಗೆ ಒಡಹುಟ್ಟನ್ನು ಮರೆಯದೇ ಅಣ್ಣ-ತಂಗಿಯರು ತಮ್ಮ ಬಾಂಧವ್ಯ ಬೆಸೆದುಕೊಳ್ಳುತ್ತಾರೆ.

### ೪.೧.೬ ಅಣ್ಣ – ತಮ್ಮ

ಒಡಹುಟ್ಟಿದವನನ್ನು ಸಹೋದರ ಎಂದು ಕರೆಯುವರು. ವಯಸ್ಸಿನಲ್ಲಿ ದೊಡ್ಡವನಾದರೆ ಅಣ್ಣ, ಕಿರಿಯವನಾದರೆ ತಮ್ಮನೆಂದು ಕರೆಯುತ್ತಾರೆ. ಇವರಿಬ್ಬರ ನಡುವಿನ ಸಂಬಂಧವು ಅನ್ಯೂನ್ಯತೆಯಿಂದ ಕೂಡಿರುತ್ತದೆ. ಜೊತೆಗೆ ಕೆಲವು ವೈರುಧ್ಯ ಸಂಬಂಧಗಳು ಕಂಡುಬರುತ್ತವೆ. 'ಹುಟ್ಟುಹುಟ್ಟುತ್ತಾ ಅಣ್ಣತಮ್ಮಂದಿರು ಬೆಳೆಬೆಳೆಯುತ್ತಾ ದಾಯಾದಿಗಳು' ಎಂದು ಜನಪದರೇ ಗಾದೆಗಳ ಮೂಲಕ ಅಣ್ಣತಮ್ಮರ ಸಂಬಂಧಗಳ ಬಗ್ಗೆ ತಿಳಿಸಿದ್ದಾರೆ. ಗಾದೆಗೆ ಹೊರತಾಗಿಯೂ ರಾಮ-ಲಕ್ಷ್ಮಣನಂತೆ ಬದುಕಿದ ಅಣ್ಣತಮ್ಮಂದಿರ ಬಾಂಧವ್ಯವು ಜನಪದರಲ್ಲಿ ಕಂಡುಬರುತ್ತದೆ. ಜನಪದರು ಹೇಳುವಂತೆ ಬೆನ್ನು ತಟ್ಟುವುದಕ್ಕಾಗಿಯಾದರೂ ಅಣ್ಣ ಇಲ್ಲವೇ ತಮ್ಮನಾದರೂ ಇರಲೇಬೇಕು. ಹಾಗಾಗಿ ಅವರು ಸಂತಾನಗಳ ಬಗ್ಗೆ ನಿರ್ಬಂಧವನ್ನು ಹಾಕಿಕೊಂಡಿರಲಿಲ್ಲ. ಜನಪದರು ಒಂಟಿ ಸಂತಾನವನ್ನು

ಹೊಂದಿದ್ದು ಅತಿವಿರಳ. ಒಬ್ಬರಿಗೊಬ್ಬರು ಸಹಕಾರದಿಂದ ಬದುಕಿದಾಗ ಮಾತ್ರ ಬದುಕಿನ ಸುಖ ಹೆಚ್ಚುತ್ತದೆಯೆಂದು ತಿಳಿದು ಸಂಬಂಧಗಳಿಂದ ಜನಪದರು ಬೆಸೆಯುತ್ತಾರೆ. ಒಟ್ಟಾಗಿದ್ದರೆ ಮಾಡುವ ಕೆಲಸಕ್ಕೆ ಹೆಚ್ಚಿನ ಬಲ ಬರುತ್ತದೆಂಬ ನಂಬಿಕೆ ಅವರದು. ಅಣ್ಣತಮ್ಮಂದಿರು ಒಂದಾಗಿದ್ದರೆ ಏನಾಗಬಹುದೆಂಬುದನ್ನು ಕೆಳಗಿನ ಗೀತೆಯಲ್ಲಿ ಜನಪದರು ಸಾಬೀತುಪಡಿಸಿದ್ದಾರೆ.

ಅಣ್ಣತಮ್ಮರು ಕೂಡಿ, ನಿನ್ನೆ ಗುಡ್ಡವನೇರಿ
ಚೆನ್ನಂಗಿ ಬಿದರ ಕಡಿದಾರ । ಕಟ್ಟಿಸಲು
ಹೊನ್ನಮಾಗಡದ ಹೊದೇರ । (ಬಿ.ಎಸ್. ಗದ್ದಗಿಮಠ, ೧೯೫೫, ಪು-೨೫)

ಅಣ್ಣತಮ್ಮಂದಿರು ಕೂಡಿಕೊಂಡು ಬೆಟ್ಟದ ತುದಿಗೆ ಹೋಗಿ ಅಲ್ಲಿರುವ ಬಿದಿರನ್ನು ಕಡೆಯುತ್ತಾರೆ. ಅದರಿಂದ ಹೂವಿನ ತೇರನ್ನು ಕಟ್ಟುತ್ತಾರೆ. ಈ ಗೀತೆಯ ತಾತ್ಪರ್ಯವೇನೆಂದರೆ 'ಒಗ್ಗಟ್ಟಿನಲ್ಲಿ ಬಲವಿದೆ' ಎಂಬುದಾಗಿದೆ. ಅಣ್ಣ ತಮ್ಮಂದಿರು ಕೂಡಿಕೊಂಡು ಮಾಡುವ ಕೆಲಸವೇ ಅವರಿಬ್ಬರ ನಡುವಿನ ಬಾಂಧವ್ಯವನ್ನು ತೋರಿಸುತ್ತದೆ. 'ಅಣ್ಣ ತಮ್ಮ' ಎಂಬ ಜನಪದ ಕತೆಯಲ್ಲಿ ತಮ್ಮನು ಆಸೆಪಟ್ಟ ಹುಡುಗಿಯನ್ನು ಆತನಿಗೆ ದಕ್ಕಿಸಿಕೊಡಲು ಅಣ್ಣನು ನಾನಾ ವಿಧದ ಪ್ರಯತ್ನಗಳನ್ನು ಮಾಡಿ, ಎಲ್ಲ ತೊಂದರೆಗಳನ್ನು ನಿವಾರಿಸಿ ಆಸೆ ಈಡೇರಿಕೆಗಾಗಿ ಅಣ್ಣನು ಪಟ್ಟ ಕಷ್ಟಗಳನ್ನು ಗಮನಿಸಬಹುದು ಅವರೀರ್ವರ ನಡುವಿನ ಸಂಬಂಧಕ್ಕೆ ಹಿಡಿದ ಕನ್ನಡಿಯಂತೆ ಜನಪದ ಕತೆಯಿದೆ. ಜನಪದರು ಮಾನವೀಯ ಸಂಬಂಧಗಳಿಗೆ ಒತ್ತನ್ನು ನೀಡಿ ಅವುಗಳು ವಿಚ್ಛಿನ್ನವಾಗದಂತೆ ನೋಡಿಕೊಳ್ಳುತ್ತಾರೆ. ಅಣ್ಣ ಅಥವಾ ತಮ್ಮನ ಬಾಂಧವ್ಯವನ್ನು ಮತ್ತೊಂದು ಗೀತೆಯ ಮೂಲಕ ಜನಪದರೇ ಸಹೋದರತ್ವದ ಸಂಕೇತವಾಗಿ ಹಾಡಿದ್ದಾರೆ.

ಅಣ್ಣತಮ್ಮನ ಬಿಲ್ಲು ನಿಂತವಂಗಳದಲ್ಲಿ
ಅಣ್ಣನಿಲ್ದ ತಮ್ಮ ಕಡುಪಾಪಿ । ಬಿಲ್ಹೋಗಿ
ನಿಂತವು ಬೇಸಗೆ ಬಿಸಲಲ್ಲಿ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೮೧)

ಅಣ್ಣ-ತಮ್ಮಂದಿರು ಕೂಡಿಕೊಂಡು ಮಾಡುವ ಕೆಲಸ ಶ್ರೇಷ್ಠವಾದದ್ದು. ಆದರೆ ಅಣ್ಣನೂ ಅಥವಾ ತಮ್ಮನೂ ಬೇರೆಯಾಗಿ ಕೆಲಸವನ್ನು ಮಾಡಿದರೆ ಅದು ಶ್ರೇಷ್ಠತೆಯನ್ನು ತರಲಾರದು ಎಂಬುದನ್ನು ಮೇಲಿನ ಗೀತೆಯು ಸ್ಪಷ್ಟಪಡಿಸುತ್ತದೆ. ಅಣ್ಣತಮ್ಮಂದಿರು ಬಿಲ್ಲು ಅಂಗಳದಲ್ಲಿ ನಿಂತರೆ ತಮ್ಮನ ಬಿಲ್ಲು ಬಿಸಿಲಲ್ಲಿ ನಿಂತಿತು. ಅಣ್ಣನಿಲ್ಲದೇ ಇರುವ ತಮ್ಮನು ಕಡುಪಾಪಿ ಎಂದು ಜನಪದರು ಹೇಳಿದ್ದಾರೆ. ಬೆನ್ನಿಗೆ ಬಿದ್ದವರು ಇಲ್ಲವೇ ಒಡಹುಟ್ಟಿದವರ ಅವಶ್ಯಕತೆಯನ್ನು ಪ್ರತಿನಿಧಿಸುತ್ತದೆ. ಅಣ್ಣ ತಮ್ಮಂದಿರು ಕೂಡಿ ಬಾಳಿದಾಗಲೇ ಬದುಕಿನ ರಸನಿಮಿಷಗಳನ್ನು ಅನುಭವಿಸಲು ಸಾಧ್ಯ. ಬಾಲ್ಯದಲ್ಲಿ ತಂದೆಯ ಮಾರ್ಗದರ್ಶನದಲ್ಲಿ ತಂದೆಯಿಲ್ಲದಿದ್ದಾಗ ಅಣ್ಣನೇ ತಂದೆಯಂತೆಯೇ ಬದುಕಿನುದ್ದಕ್ಕೂ

ಮಾರ್ಗದರ್ಶನ ನೀಡಬಲ್ಲ ಸಾಮರ್ಥ್ಯವನ್ನು ಹೊಂದಿರುತ್ತಾನೆ. ತಂದೆಯ ಸ್ಥಾನವನ್ನು ಅಣ್ಣನು ತುಂಬುತ್ತಾನೆಂಬ ನಂಬಿಕೆ ಜನಪದರಲ್ಲಿದೆ.

ಬಾಲ್ಯದಲ್ಲಿ ಪ್ರೀತಿ, ವಿಶ್ವಾಸ, ಅಕ್ಕರೆಯಿಂದ ಬೆಳೆದ ಅಣ್ಣತಮ್ಮಂದಿರು ಒಂದೇ ಗಿಡದ ಹೂಗಳಂತೆ ಇರುತ್ತಾರೆ. ಪ್ರಾಯಕ್ಕೆ ಬಂದ ಮೇಲೆ ಸ್ವಾಭಿಮಾನ ಮತ್ತು ಪ್ರತಿಷ್ಠೆಗೆ ಇಳಿಯುತ್ತಾರೆ. ಇದರಿಂದ ವೈಮನಸ್ಸು ಉಂಟಾಗಿ ಅಣ್ಣತಮ್ಮಂದಿರಲ್ಲಿ ಕಲಹಗಳು ಉಂಟಾಗುತ್ತವೆ. ಅಣ್ಣತಮ್ಮಂದಿರ ನಡುವಿನ ಕಲಹ ಹೊಸದೇನಲ್ಲ. ರಾಮಾಯಣ, ಮಹಾಭಾರತದ ಕಾಲದಲ್ಲಿಯೂ ವೈಯಕ್ತಿಕ ಪ್ರತಿಷ್ಠೆಗಾಗಿ ಅಣ್ಣತಮ್ಮಂದಿರ ನಡುವೆ ಮಹಾ ಕದನಗಳೇ ಜರುಗಿವೆ. ಹಾಗೆಂದು ಅವುಗಳಲ್ಲಿನ ಆದರ್ಶ ಜೀವನವನ್ನು ಮರೆಯುವ ಹಾಗಿಲ್ಲ. ಆಸ್ತಿ, ಅಂತಸ್ತು, ಹಣ, ಒಡವೆ, ಹೆಣ್ಣು, ಹೊಲ – ಹೀಗೆ ಅಣ್ಣತಮ್ಮಂದಿರ ನಡುವಿನ ಕಲಹಕ್ಕೆ ಅನೇಕ ಕಾರಣಗಳಿರಬಹುದು. ಜನಪದರು ಆದಷ್ಟು ಮಟ್ಟಿಗೆ ಅಂತಹ ಕಲಹಗಳನ್ನು ನಿವಾರಿಸಿ ಆದರ್ಶ ಜೀವನಕ್ಕೆ ಎಡೆಮಾಡಿಕೊಟ್ಟಿದ್ದಾರೆ. ಇಬ್ಬರಲ್ಲೂ ತಿಳುವಳಿಕೆ ಹೇಳಿ ಒಗ್ಗಟ್ಟಿನ ಜೀವನ ನಡೆಸಲು ಅನುವು ಮಾಡಿಕೊಟ್ಟಿದ್ದಾರೆ.

ಅಣ್ಣತಮ್ಮರ ಜಗಳ ನಿನ್ನೆ ಮೊನ್ನ್ಯಾಗ್ಯಾವ
ಬಣ್ಣದ ಬಾಗೀಲ ಎರಡಾಗಿ । ಕಡೆಮಗನ
ಸಣ್ಣವನಾಗಿ ಸರಕೋರೊ । (ಬಿ.ಎಸ್. ಗದ್ದಗಿಮಠ, ೧೯೫೬, ಪು- ೬೪)

ಅಣ್ಣ-ತಮ್ಮಂದಿರ ಕಲಹ ಮೊನ್ನೆ, ನಿನ್ನೆ, ಇಂದು ಯಾವಾಗಲೂ ನಡೆಯುತ್ತಲೇ ಇರುತ್ತವೆ. ಜೀವನದಲ್ಲಿ ಭಿನ್ನಾಭಿಪ್ರಾಯಗಳು ಬರುವುದು ಸಹಜ. ಆದರೆ ಸಣ್ಣಪುಟ್ಟ ಕಾರಣವನ್ನಿಂಟುಕೊಂಡು ತುಂಬಿದ ಮನೆಯನ್ನು ಒಡೆಯುವುದು ಸರಿಯಲ್ಲ. ಸುಖಸಂತೋಷದಿಂದ ಕೂಡಿರುವ ಒಂದೇ ಬಾಗಿಲನ್ನು ಹೊಂದಿರುವ ಕೂಡಿರುವ ಮನೆಯನ್ನು ಎರಡಾಗಿ ಮಾಡುವುದು ಸರಿಯಲ್ಲವೆಂದು ಹಿರಿಯರು, ಹೆತ್ತವರು ಕೂಡಿಕೊಂಡು ಸಣ್ಣವನಾಗಿರುವ ತಮ್ಮನಿಗೆ ಕಲಹ ಬೇಡವೆಂದು ಬುದ್ಧಿಮಾತನ್ನು ಹೇಳುತ್ತಾರೆ. ಏಕೆಂದರೆ ಅಣ್ಣನಾದವನು ತಂದೆಗೆ ಸಮಾನವೆಂಬ ಭಾವನೆ ಜನಪದರದು. ಅಣ್ಣನೆಂಬ ಕಾರಣಕ್ಕಾದರೂ ಆತನ ಮಾತಿಗೆ ಬೆಲೆಕೊಟ್ಟು ಬದುಕುವ ಮಾರ್ಗವನ್ನು ಕಲಿ ಎಂಬ ಬುದ್ಧಿವಾದ ಹಿರಿಯರದು. ಹಿರಿಯರ ಅಣತಿಯಂತೆ ಬಾಳುವ ಬದುಕು ಜನಪದರದು.

ಹಿರಿಯಣ್ಣ ತಂದೆಗೆ ಸಮ. ಕುಟುಂಬದ ಆದರ್ಶಗಳನ್ನು ಪಾಲಿಸಿಕೊಂಡು ಬರುವ ಹೊಣೆ ಅಣ್ಣನದ್ದು. ಸಮಾಜದಲ್ಲಿ ಉತ್ತಮ ಸ್ಥಾನ ಹೊಂದಬೇಕಾದರೆ ಆತನ ಕೌಟುಂಬಿಕ ಜೀವನವೂ ಕಾರಣವಾಗುತ್ತದೆ. ಕುಟುಂಬ ಗೌರವ, ಹಿರಿತನದ ಪ್ರತಿಷ್ಠೆ ಇವುಗಳಿಗೆ ಬದ್ಧನಾಗಿ ಸಮಾಜದ ಜನರು ಒಪ್ಪುವಂತೆ ಕುಟುಂಬದ ಸದಸ್ಯರೆಲ್ಲರಿಗೂ ಸಮನಾದ ಬದುಕನ್ನು ಕಲ್ಪಿಸಿಕೊಡಲು ಅಣ್ಣನಾದವನು ಪ್ರಯತ್ನಿಸುತ್ತಾನೆ. ಆದರೆ ಯಾವುದೇ ಕೆಟ್ಟ ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ಆತ ಭಯಗೊಳ್ಳುತ್ತಾನೆ. ಇದಕ್ಕೆ ಕಾರಣ ಸಮಾಜ, ಕುಟುಂಬಗಳು ಹಿರಿಯಣ್ಣನ ಮೇಲೆ ಇಟ್ಟಿರುವ ನಂಬಿಕೆಯೇ ಕಾರಣವಾಗಿವೆ.

ನಂಬಿಕೆಯಿಲ್ಲದೇ ಜನಪದರ ಬದುಕಿಲ್ಲ. ಆದ್ದರಿಂದಲೇ ಅವರು ಬಹುಪಾಲು ಜೀವನವನ್ನು ನಂಬಿಕೆ ವಿಶ್ವಾಸದಿಂದಲೇ ಬದುಕುತ್ತಾರೆ. ಹಾಗಾಗಿ ಜನಪದರ ಜೀವನ ನಮಗೆ ಮಾದರಿಯೆನಿಸುತ್ತದೆ.

### ೪.೧.೭ ಅಕ್ಕ – ತಂಗಿ

ಒಡಹುಟ್ಟಿನಿಂದ ಉಂಟಾಗುವ ಸಂಬಂಧವೇ ಅಕ್ಕ–ತಂಗಿಯ ಸಂಬಂಧ. ಒಡಹುಟ್ಟಿದ ಹಿರಿಯಳನ್ನು 'ಅಕ್ಕ' ಎಂದು ಕರೆದರೆ, ಚಿಕ್ಕವಳನ್ನು 'ತಂಗಿ' ಎಂದು ಸಂಬೋಧಿಸಲಾಗುತ್ತದೆ. ಅಕ್ಕ–ತಂಗಿ ಒಂದೇ ಬಳ್ಳಿಯ ಹೂಗಳಂತೆ ಒಂದೇ ತಾಯಿಯ ಗರ್ಭದಲ್ಲಿ ಜನಿಸಿದವರು. ದೊಡ್ಡಪ್ಪ, ಚಿಕ್ಕಪ್ಪ, ದೊಡ್ಡಮ್ಮ ಹಾಗೂ ಚಿಕ್ಕಮ್ಮಂದಿರ ಮಕ್ಕಳಲ್ಲಿಯೂ ಅಕ್ಕ–ತಂಗಿಯ ಸೋದರ ಸಂಬಂಧ ಏರ್ಪಡುತ್ತದೆ. ಹುಟ್ಟಿನಿಂದ ಸಾವಿನವರೆಗೂ ಅಕ್ಕ–ತಂಗಿಯ ಬಾಂಧವ್ಯ ಕಂಡುಬರುತ್ತದೆ. ಸಹಪಾಠಿಗಳಂತೆ, ಗೆಳತಿಯರಂತೆ ಒಂದೊಮ್ಮೆ ದಾಯಾದಿಗಳಂತೆಯೂ ಇವರಲ್ಲಿ ವರ್ತನೆಗಳು ಕಂಡುಬರುತ್ತವೆ. ಬಾಲ್ಯದಿಂದ ಜೊತೆಯಾಗಿ ಬೆಳೆದ ಅಕ್ಕತಂಗಿಯರು ಮದುವೆಯ ಸಂಪ್ರದಾಯದಲ್ಲಿ ಅಗಲುತ್ತಾರೆ. ಕೆಲವೊಮ್ಮೆ ಅದೃಷ್ಟವಿದ್ದರೆ ಒಂದೇ ಮನೆಯನ್ನು ಸೇರುತ್ತಾರೆ. ಮನೆಯಲ್ಲಿ ಬಡತನವಿರಲಿ, ಸಿರಿತನವಿರಲಿ ಎರಡನ್ನೂ ಸಮನಾಗಿ ಹಂಚಿಕೊಂಡು ಬದುಕನ್ನು ಅರ್ಥೈಸಿಕೊಂಡು ಜನಪದರು ಬದುಕು ನಡೆಸಿದ್ದಾರೆ. ಅಂತೆಯೇ ಅಕ್ಕ–ತಂಗಿಯರ ಬಾಂಧವ್ಯಗಳು ಇದಕ್ಕೆ ಹೊರತಾಗಿಲ್ಲ. ಬದುಕಿನ ಸಿಹಿಕಹಿಗಳನ್ನು ಸಮನಾಗಿ ಅನುಭವಿಸುತ್ತಾರೆ. ಕೆಲವೊಮ್ಮೆ ಅಕ್ಕನೇ ತಂಗಿಗೆ ತಾಯಿಯಾಗಿ ಬಾಳಿನ ಬೆಳಕನ್ನು ತೋರುವ ಕಾರ್ಯವನ್ನು ಮಾಡುತ್ತಾಳೆ.

ಅಕ್ಕನಿಗೆ ತಂಗಿಗಿಂತ, ತಂಗಿಗೆ ಅಕ್ಕನಿಗಿಂತ ಒಳ್ಳೆಯ ಗೆಳತಿಯಿಲ್ಲ. ಹಾಗಾಗಿ ಒಡಹುಟ್ಟಿದ ಗೆಳೆತನ ಮುರಿಯುವುದು ಬೇಡ ಎಂಬ ಅಭಿಪ್ರಾಯ ಅವರದು. ಎಷ್ಟೇ ಕೋಪ, ತಾಪ, ವಿರಸಗಳಿದ್ದರೂ ಮರೆತು ಮತ್ತೆ ಕೂಡುವ ಮನಸ್ಸು ಅವರಲ್ಲಿದೆ. ಕೂಡಿ ಬೆಳೆದ ನಾವು ಬದುಕಿನಲ್ಲಿ ಅಗಲುವುದೇ ಬೇಡವೆಂಬ ನಿರ್ಧಾರವನ್ನು ಜನಪದರು ಈ ರೀತಿ ಹಾಡಿದ್ದಾರೆ.

ಆಡೀನ ಮಲಿ ಹಂಗ ಜೋಡ ನಾವಿಬ್ಬರ
ಆಡಬ್ಯಾಡ ತಂಗಿ ಕದನವ । ಜಗಳಕ
ಜೋಡಿನ ಹಕ್ಕಿ ಅಗಲ್ಯಾವ । (ಹಲಸಂಗಿ ಗೆಳೆಯರು, ೧೯೩೧, ಪು–೪೩)

ಜೊತೆಯಾಗಿ ಬೆಳೆದ ಅಕ್ಕ–ತಂಗಿಯರ ನಡುವೆ ಯಾವುದೋ ಕಾರಣಕ್ಕೆ ವಿರಸ ಬಂದಿದೆ. ಹಿರಿಯಳಾದ ಅಕ್ಕ ತನ್ನ ತಂಗಿಗೆ ಆಡೀನ ಮೊಲೆ ಹಾಗೆಯೇ ಜೋಡಿ ನಾವಿಬ್ಬರೂ ತಾಯಿ ಹೊಟ್ಟೆಯಿಂದ ಹುಟ್ಟಿ, ಜೋಡಿಯಾಗಿ ಬೆಳೆದವರು. ಇಲ್ಲಸಲ್ಲದ ಚಾಡಿ ಮಾತುಗಳನ್ನು ಕೇಳಿ ಜಗಳವನ್ನು ತೆಗೆಯಬೇಡ. ಏಕೆಂದರೆ ಕದನವು ಬಂದಿತೆಂದರೆ ಜೋಡಿ ಹಕ್ಕಿಗಳೂ ಕೂಡ ಅಗಲುತ್ತವೆ ಎಂದು ಬುದ್ಧಿ ಹೇಳುತ್ತಾಳೆ. ಜನಪದರಲ್ಲಿನ ಬುದ್ಧಿವಂತಿಕೆಯೇ ಅಂಥಹದ್ದು. ಬಾಂಧವ್ಯ

ಉಳಿಯಬೇಕು. ಜನ ಮೆಚ್ಚಬೇಕು. ಆದ್ದರಿಂದ ಅವರು ಪ್ರಕೃತಿ, ಪ್ರಾಣಿ, ಪಕ್ಷಿಗಳ ಉದಾಹರಣೆಗಳನ್ನು ನೀಡಿ ಮನುಷ್ಯನ ಗುಣ ತಿದ್ದುವ ಕಾರ್ಯ ಮಾಡುತ್ತಾರೆ. ಅಂತೆಯೇ ಅಕ್ಕ ಇಲ್ಲಿ ತಂಗಿಯ ಬಾಂಧವ್ಯಕ್ಕಾಗಿ ಉದಾಹರಣೆಯೊಂದಿಗೆ ತಂಗಿಯ ಕೋಪ ತಿದ್ದುವ ಕಾರ್ಯವನ್ನು ಮಾಡುತ್ತಾಳೆ. ಒಂದು ವೇಳೆ ಅಕ್ಕ ಕದನವನ್ನು ಹೂಡಿದ್ದರೆ, ತಂಗಿ ಸಮಾಧಾನ ಮಾಡಿ 'ಬೇಡಿರಕ್ಕಯ್ಯ ಕದನವು' ಎಂದು ಭಿನ್ನವಿಸಿಕೊಂಡು ಬಾಂಧವ್ಯ ಉಳಿಸಿಕೊಳ್ಳುತ್ತಾಳೆ. ಅವರಲ್ಲಿನ ಹೊಂದಾಣಿಕೆ, ನಯವಿನಯ ರೂಪವನ್ನು ಕಂಡು ಊರಿನವರೆಲ್ಲ ಅಕ್ಕ-ತಂಗಿಯರ ಕುರಿತು ಹೊಗಳುತ್ತಾರೆ. ಅವರ ಸಂಬಂಧವನ್ನು ಇತರರಿಗೆ ಮಾದರಿಯಾಗಿ ತೋರಿಸುತ್ತಾರೆ. ಅಕ್ಕ-ತಂಗಿಯರ ರೂಪದ ಬಗ್ಗೆ ಗರತಿಯೊಬ್ಬಳು ಹೀಗೆ ಹಾಡಿದ್ದಾಳೆ.

ಅಕ್ಕತಂಗೇರ ಬಣ್ಣ ಅವರಿ ಹೂವಿನ ಬಣ್ಣ
ಕುಬುಸದ ಬಣ್ಣ ಕುತನೀಯ । ಹಡೆದಂಥ
ನಾರಿ ನಿನ್ನ ಬಣ್ಣ ರವಿ ಚಿನ್ನ । (ಹಲಸಂಗಿ ಗೆಳೆಯರು, ೧೯೩೧, ಪು-೪೫)

ಅವರೆಯ ಹೂವಿನ ಹಾಗೆ ಚೆಲುವುಳ್ಳ, ಬಣ್ಣವುಳ್ಳ ಅಕ್ಕ-ತಂಗಿಯರು ತೊಟ್ಟಿದ್ದು ಕುತುನಿ ಕುಬಸ. ಅವರೀರ್ವರ ಚೆಲುವಿಕೆ ಬೆರುಗುಗೊಳಿಸುವಂತಹದ್ದು. ಮಾರು ಹೋಗುವಂತದ್ದು. ಅದನ್ನೇ ಜನಪದ ಗರತಿಯೊಬ್ಬಳು 'ನೂಲಿನಂತೆ ಸೀರೆ, ತಾಯಿಯಂತೆ ಮಗಳು' ಎಂಬ ಗಾದೆಯಂತೆಯೇ ತಾಯಿ ಹೇಗೆ ರೂಪವತಿಯಾಗಿದ್ದಾಳೋ ಅದೇ ರೀತಿಯ ಅವಳು ಹೆತ್ತ ಮಕ್ಕಳು ರೂಪವತಿ, ಗುಣವತಿಯರಾಗಿದ್ದಾರೆಂದು ಗೀತೆಯ ಮೂಲಕ ಸ್ಪಷ್ಟಪಡಿಸುತ್ತಾರೆ.

ಅಕ್ಕತಂಗಿಯರ ಬಾಂಧವ್ಯ ಕೇವಲ ತವರಿಗೆ ಮೀಸಲಲ್ಲ. ಕೆಲವೊಮ್ಮೆ ಮದುವೆಯಾಗಿ ಒಂದೇ ಮನೆಯನ್ನು ಸೇರುತ್ತಾರೆ. ಅಲ್ಲಿಯೂ ಅದರ ಬಾಂಧವ್ಯ ಮುಂದುವರೆಯುತ್ತದೆ. ಯಾರೆಷ್ಟೇ ಸಂಬಂಧಕ್ಕೆ ಚ್ಯುತಿ ತರಲು ಯತ್ನಿಸಿದರೂ ಅದು ಫಲ ನೀಡುವುದಿಲ್ಲ. ಅಷ್ಟು ಪ್ರೀತಿ, ನಂಬಿಕೆ, ವಿಶ್ವಾಸ ಅವರಲ್ಲಿ ಮೂಡಿರುತ್ತದೆ. ಕೆಲವು ವಿರಸಗಳಿದ್ದರೂ ಅವು ಅಮವಾಸ್ಯೆಯ ಚಂದ್ರನಂತೆ ಕ್ಷಣಿಕ, ಮತ್ತೆ ಹುಣ್ಣಿಮೆಯ ಪೂರ್ಣಚಂದ್ರ ಮೂಡಲೇಬೇಕು. ಮದುವೆಯಾಗಿ ಗಂಡನ ಮನೆಯಲ್ಲಿದ್ದರೂ ಹೆಣ್ಣಿಗೆ ತವರಿನ ಮೇಲಿನ ಮೋಹ ಕಡಿಮೆಯಾಗಿರುವುದಿಲ್ಲ. ತವರಿನವರು ಸಿರಿವಂತರು. ಮೇಲಾಗಿ ಊರ ಜಾತ್ರೆಯೂ ನಡೆಯುತ್ತಿದೆ. ಅಂತಹ ಸಂದರ್ಭದಲ್ಲಿ ಅಕ್ಕ ತಂಗಿ ಕೂಡಿ ನೀರಿಗೆ ಹೋಗಿದ್ದಾರೆ. ಆಗ ತಂಗಿಯು ದೂರದಿಂದ ಕಾಣುವ ತವರೂರ ಜಾತ್ರೆಯ ಸಡಗರವನ್ನು ಕಂಡು ಅಕ್ಕನಿಗೆ ಹೀಗೆ ಹೇಳುತ್ತಾಳೆ.

ಅಕ್ಕ ತಂಗೀರು ಕಟ್ಟೆ ನೀರಿಗೆ ಹೋಗಿ
ಅಲ್ಲಿ ನೋಡೆ ಅಕ್ಕ ತವರೂರು । ಬೀದಿಯ

ಹದಿನಾರು ತೇರು ಹರಿದಾವು ।

(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೭೦)

ಗಂಡನ ಮನೆಯಲ್ಲಿರುವ ಅಕ್ಕ ತಂಗಿ ಕೂಡಿಕೊಂಡು ಕಟ್ಟೆ ನೀರಿಗೆ ಬಂದಿದ್ದಾರೆ. ಅನತಿ ದೂರದಲ್ಲಿ ತವರೂರಿದೆ. ತವರೂರಿನಲ್ಲಿ ಅಂದು ಜಾತ್ರೆ. ಆಗ ತಂಗಿಯೂ ಅಕ್ಕನಿಗೆ ಅಲ್ಲಿ ನೋಡು ತವರೂರಿನ ಬೀದಿಯಲ್ಲಿ ಹದಿನಾರು ತೇರು ಸೊಗಸಾಗಿ ಹರಿದಿವೆ ಎಂದು ತವರೂರಿನ ಜಾತ್ರೆಯ ಸಡಗರವನ್ನು ಸೊಗಸನ್ನು ತೋರಿಸುತ್ತಾಳೆ. ತಾವು ತವರಿನಲ್ಲಿದ್ದರೆ ಜಾತ್ರೆಯ ಸಿರಿ ಅನುಭವಿಸಬಹುದಿತ್ತು ಎಂಬುದು ತಂಗಿಯ ಆಸೆ. ಆದರೆ ಗಂಡನ ಮನೆಯಲ್ಲಿದ್ದ ಬಳಿಕ ತವರೂರನ್ನು ತವರಿನ ಸಿರಿಯನ್ನು ಬಯಸುವುದು ತರವಲ್ಲ ಎಂದು ತಿರುಗಿ ಅಕ್ಕ ತನ್ನ ತಂಗಿಗೆ ಕೆಳಕಂಡ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾಳೆ.

ಹರಿದರೆ ಹರಿಯಲೀ ಮುರಿದರೆ ಮುರಿಯಲೀ

ನಾವೊಬ್ರ ಮನೆಯ ಸೊಸೆಯಾದೊ । ತಂಗ್ಯಮ್ಮ

ತವರೂರ ಸುದ್ದಿ ನಮಗೇನ ।

(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೭೦)

ಚಂಚಲ ಸ್ವಭಾವದ ತಂಗಿಗೆ ಅಕ್ಕ ಇಲ್ಲಿ ಬುದ್ಧಿವಾದ ಹೇಳುತ್ತಾಳೆ. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬ ಗಾದೆಯಂತೆಯೇ ಬದುಕಬೇಕೆಂಬುದನ್ನು ತಂಗಿಗೆ ಮನದಟ್ಟು ಮಾಡುತ್ತಾಳೆ. ತೇರುಗಳು ಹರಿದರೆ ಹರಿಯಲಿ, ಮುರಿದರೆ ಮುರಿಯಲಿ ಅದು ನಮಗೆ ಬೇಡವಾದ ವಿಷಯ. ಏಕೆಂದರೆ ನಾವೀಗ ಮತ್ತೊಬ್ಬರ ಮನೆಯ ಸೊಸೆಯಂದಿರು. ಹಾಗಾಗಿ ನಮಗೆ ಕೊಟ್ಟಮನೆಯೇ ಶಾಶ್ವತ. ತವರೂರಿನ ಬಗ್ಗೆ ಹಾರೈಕೆ ಇರಬೇಕು. ಆದರೆ ಅತಿಮೋಹ ಸಲ್ಲದು. ತವರೂರಿನ ಬದುಕು ನಮಗೆ ಮದುವೆಯಾಗುವತನಕ ಅಷ್ಟೇ. ಮದುವೆಯ ಬಳಿಕ ಗಂಡನ ಮನೆಯೇ ಸರ್ವಸ್ವ, ಆದ್ದರಿಂದ ಗಂಡನ ಮನೆಯ ಏಳಿಗೆಯ ಬಗ್ಗೆ ಮಾತಾಡಬೇಕು. ತವರೂರಿನ ಸುದ್ದಿ ನಮಗೀಗ ಬೇಡವೆಂದು ತಂಗಿಗೆ ತಿಳಿಸುತ್ತಾಳೆ. ಪ್ರತಿ ಹಂತದಲ್ಲಿಯೂ ಅಕ್ಕ ತಂಗಿಗೆ ತಾಯಿಯಾಗಿ, ಗೆಳತಿಯಾಗಿ ಜೀವನದುದ್ದಕ್ಕೂ ಸನ್ಮಾರ್ಗವನ್ನು ತೋರುತ್ತಾಳೆ. ಅಂತೆಯೇ ತಂಗಿಯೂ ಅಕ್ಕನಾಶ್ರಯದಲ್ಲಿ ವಿಧೇಯತೆಯನ್ನು ತೋರುತ್ತಾಳೆ.

ಇಬ್ಬರ  ನಡಿವೊಂದ ಇಬ್ಬರ ನುಡಿವೊಂದ

ಇಬ್ಬರುಡು ಸೀರಿ ಸೇರಗೊಂದ । ನಾ ನನ್ನಕ್ಕ

ಇಬ್ಬರ್ಹೋಗಿ ಬರುವ ತವರೊಂದ। (ಜ್ಯೋತಿ ಹೊಸೂರು, ೧೯೭೮, ಪು-೩೮)

'ದೇಹಗಳೆರಡಾದರೂ ನಮ್ಮ ಮನವೊಂದೇ' ಎಂಬಂತೆ ಬದುಕಿದ ಅಕ್ಕ-ತಂಗಿಯರ ಕುರಿತಾಗಿ ತಂಗಿಯೊಬ್ಬಳು ಅಭಿವ್ಯಕ್ತಿಸಿದ ಪರಿ ಇಲ್ಲಿ ಕಂಡುಬರುತ್ತದೆ. ಅಕ್ಕತಂಗಿಯರು ನಾವಿಬ್ಬರೂ ಬೇರೆಯಾಗಿರಬಹುದು ಆದರೆ ನಮ್ಮಿಬ್ಬರ ನಡೆ-ನುಡಿಗಳೊಂದೇ. ಹಾಕುವ ಬಟ್ಟೆ ಉಡುವ ಸೀರೆಯ

ಬಣ್ಣ-ವಿನ್ಯಾಸ, ತೊಡುವ ಆಭರಣ ಎಲ್ಲದರಲ್ಲೂ ಒಂದೇ ಅಭಿರುಚಿಯಿದೆ. ಏಕೆಂದರೆ ಅವರೀರ್ವರ ತವರುಮನೆ ಒಂದೇ ಆಗಿದೆ. ಹಬ್ಬಹರಿದಿನಗಳಲ್ಲಿ ತವರಿಗೆ ಬಂದ ಅಕ್ಕ-ತಂಗಿಯರಿಗೆ ಒಂದೇ ರೀತಿಯ ಉಡುಗೊರೆ ನೀಡಿ, ಸಮಾನತೆಯಲ್ಲಿ ಬಾಂಧವ್ಯವನ್ನು ಕಂಡುಕೊಂಡಿದ್ದಾರೆ. ತಂಗಿ ತಮ್ಮ ನಡುವಿನ ಒಗ್ಗಟ್ಟು, ಪ್ರೀತಿ, ಸೌಹಾರ್ದ ಗುಣದ ಕುರಿತು ಗೀತೆಯಲ್ಲಿ ಅಭಿವ್ಯಕ್ತಿಸಿದ್ದಾಳೆ.

### ೪.೧.೮ ಅಕ್ಕ-ತಮ್ಮ

ಅಕ್ಕ-ತಮ್ಮನ ಬಾಂಧವ್ಯವು ಕೂಡ ಅಣ್ಣತಂಗಿಯಂತೆ ಸಹೋದರ ಸಂಬಂಧವನ್ನು ಪ್ರತಿನಿಧಿಸುತ್ತದೆ. ಇದು ಒಡಹುಟ್ಟಿನಿಂದ ಬರುತ್ತದೆ. ಕೆಲವೊಂದು ಸಂದರ್ಭಗಳಲ್ಲಿ ಜನಪದರು ನೆರೆಹೊರೆಯವರನ್ನು ಅಕ್ಕ ತಮ್ಮನೆಂದು ಸಂಭೋದಿಸುವುದು ಚಾಲ್ತಿಯಲ್ಲಿದೆ. ಬಹುಪಾಲು ಜನಪದರರದು ಪುರುಷ ಪ್ರಧಾನ ಸಮಾಜ. ಅಲ್ಲಿ ಪುರುಷನೇ ಕುಟುಂಬದ ಒಡೆಯನಾಗಿರುತ್ತಾನೆ. ಮನೆಯಲ್ಲಿ ಹಿರಿಯಕ್ಕ ಇದ್ದರೂ ತಮ್ಮನಿಗೆ ಮಣೆ. ಆತನೇ ಕುಟುಂಬದ ಒಡೆಯನಾಗಿರುತ್ತಾನೆ. ಎಲ್ಲ ಜವಾಬ್ದಾರಿಗಳನ್ನು ನಿರ್ವಹಿಸುತ್ತಾನೆ.

ಜನಪದರು ತಾವು ಕಂಡ ಪ್ರಕೃತಿಯ ಗಿಡಮರಬಳ್ಳಿಗಳನ್ನೇ ತಮ್ಮ ಸಾಹಿತ್ಯದಲ್ಲಿ ಸಾದೃಶ್ಯವಾಗಿ ಬಳಸುತ್ತಾರೆ. ಈ ಬಗೆಯ ಸಾದೃಶ್ಯಗಳು ಗೀತೆಗಳಿಗೆ ವಿಶಿಷ್ಟ ಶಕ್ತಿಯನ್ನು ತುಂಬುತ್ತವೆ. ಪ್ರಕೃತಿಯ ಸಾದೃಶ್ಯಗಳು ಜನಪದ ಗೀತೆಗಳಲ್ಲಿ ಹೇರಳವಾಗಿವೆ. ಬಳಕುವ ಮೈಯ ತಮ್ಮನನ್ನು ಕಂಡ ಅಕ್ಕ 'ಗಾಳಿ ಬಂದತ್ತ ಬಳುಕೂವ ನನ ತಮ್ಮ ಬಾಳಿ ಎಲಿಗಿಂತ ಬಲು ಚೆಲುವ' ಎಂದು ಹಾಡುತ್ತಾಳೆ. ಬಾಳೆ ಎಲೆ ನೋಡಲು ತುಂಬಾ ಸುಂದರ ಮತ್ತು ವಿಶಾಲ. ಮಜಭೂತಾಗಿದ್ದರೂ ಸಣ್ಣಗಾಳಿಗೂ ಆ ಕಡೆಗೆ ಈ ಕಡೆಗೆ ವಾಲಾಡುತ್ತದೆ. ಬಾಳೆ ಎಲೆ ವಾಲಾಡುವ ಚಂದಕ್ಕೆ ತಮ್ಮನನ್ನು ಹೋಲಿಸಿರುವ ರೀತಿ ಅಪರೂಪದ್ದಾಗಿದೆ. ತಮ್ಮ ಬರುವ ಚಂದವನ್ನು ಕಂಡು ಹಿರಿಹಿರಿ ಹಿಗ್ಗಿದ ಅಕ್ಕ ಹಾಡುವ ರೀತಿ ಸೊಗಸಾಗಿದೆ.

ಕುದರೀಯ ಕುಣಿಸೂತ ಆನೀಯ ನಡಿಸೂತ
ಅರಗಿಣಿಗೆ ಮಾತ ಕಲೆಸೂತ । ಬರತಾನ
ಬರಿಗೊಡದಮ್ಮ ಬದಿಗಾಗ । (ವಿನೀತ ರಾಮಚಂದ್ರರಾಯ, ೧೯೬೦, ಪು-೪೩)

ಕುದುರೆಯನ್ನು ಚೆಂಗು ಚೆಂಗನೆ ಕುಣಿಸುತ್ತ, ಆನೆಗೆ ಗಾಂಭೀರ್ಯ ನಡಿಗೆಯ ಕಲಿಸುತ್ತ, ಅರಗಿಣಿಗೆ ಮುದ್ದು ಮುದ್ದಾಗಿ ಮಾತನಾಡುವ ಕಲೆಯನ್ನು ಕಲಿಸುತ್ತ, ತಮ್ಮ ಬರುತ್ತಿದ್ದಾನೆ ಎನ್ನುವಲ್ಲಿ ತಮ್ಮನ ಸೌಂದರ್ಯದ ಸೊಗಸಿನ ವರ್ಣನೆಯಿದೆ. ತಮ್ಮನ ಬರುವಿಕೆಯಲ್ಲಿ ಶುಭ ಸಮಾಚಾರದ ಸೂಚನೆಯನ್ನು ಅಕ್ಕ ಗ್ರಹಿಸುತ್ತಾಳೆ. ಶುಭ ಸಮಾಚಾರವನ್ನು ತರುತ್ತಿರುವವರ ಎದುರು ಬರಿಗೊಡಗಳು ಬರಬಾರದು. ತುಂಜಿದ ಕೊಡಗಳು ಬರಬೇಕು. ಅತ್ಯುತ್ಸಾಹದಿಂದ ಬರುತ್ತಿರುವ ತಮ್ಮನಿಗೆ ಎದುರಾದ

ಬರಿಕೊಡದಮ್ಮ ಎದುರಾಗುವುದನ್ನು ಸಹಿಸದ ಅಕ್ಕ, ಬದಿಗಾಗೆಂದು ಪ್ರೀತಿಯಿಂದ ವಿನಂತಿಸಿಕೊಳ್ಳುತ್ತಾಳೆ. ಅಕ್ಕನ ಪ್ರೀತಿ, ತಮ್ಮನ ಸೌಂದರ್ಯ, ಶುಭಅಶುಭ ಸೂಚಕ ಹೀಗೆ ಅನೇಕ ವಿಚಾರಗಳ ಮೇಲೆ ಈ ಗೀತೆ ಬೆಳಕು ಚೆಲ್ಲುತ್ತದೆ. ಗೀತೆಯಲ್ಲಿ ಹರಿದಾಡುವ ಉತ್ಸಾಹ ಲಯ ಗೀತೆಗೆ ಹೊಸತನದ ಮೆರುಗನ್ನು ಕೊಟ್ಟಿದೆ.

ಅಕ್ಕನೆಂದರೆ ಆತನಿಗೆ ಬಲುಪ್ರೀತಿ. ಅವಳಿಗೇನಾದರೂ ತೊಂದರೆಯಾದರೆ ಒಡನೆ ನೆರವಿಗೆ ಧಾವಿಸುತ್ತಾನೆ. ಅವಳು ತನ್ನ ಕಷ್ಟ ಹೇಳಿಕೊಳ್ಳದಿದ್ದರೂ ಅವಳ ಚಿಂತೆಗೆ ಕಾರಣ ಹುಡುಕಿ ಅದನ್ನು ನಿವಾರಿಸಲು ತಮ್ಮನಾದವನು ಯತ್ನಿಸುತ್ತಾನೆ.

ಹಸರ ಕುಬಸದ ಮ್ಯಾಲ ಎಸಳ ಕೂದಲ ಬಿಟ್ಟು
ಬಿಸಿಲಿಗ್ಯಾಕಕ್ಕ ಮಲಗ್ಯಾಳ । ಅಕ್ಕನ
ಕುಸಿ ಮೋಜಿನ ಬಯಕಿ ತಿಳಿಯುವ । (ಹಲಸಂಗಿ ಗೆಳೆಯರು, ೧೯೩೧, ಪು-೪೧)

ಬಿಸಿಲಿಗೆ ತಲೆಯೊಡ್ಡಿ ಚಿಂತಿ ಮಾಡುತ್ತ ಕುಳಿತಿರುವ ಅಕ್ಕನನ್ನು ಕಂಡ ತಮ್ಮನು ಮನೆಯವರನ್ನು ಪ್ರಶ್ನಿಸುತ್ತಾನೆ. ಅವಳ ವ್ಯಥೆಗೆ ಕಾರಣವೇನೆಂಬುದನ್ನು ಹುಡುಕಲು ಪ್ರಯತ್ನಿಸುತ್ತಾನೆ. ಅಕ್ಕನು ಖುಷಿಯಿಂದ ಇರಬೇಕಾದರೆ ಆಕೆಯ ಆಸೆಗಳನ್ನು ತಿಳಿದು ಈಡೇರಿಸುವ ನಿಟ್ಟಿನಲ್ಲಿ ನಡೆದುಕೊಳ್ಳುತ್ತಾನೆ. ಮದುವೆಯಾಗದಿದ್ದರೆ ಅವಳಿಗೆ ಗಂಡು ನೋಡಿ ಮದುವೆ ಮಾಡಿಕೊಡುತ್ತಾನೆ. ಗಂಡನ ಮನೆಯಲ್ಲಿ ಸುಖದಿಂದ ಇರಲು ಉಡುಗೊರೆಗಳನ್ನು ನೀಡುತ್ತಾನೆ. ಆಕೆಯ ಮನದಿಚ್ಛೆಯನ್ನು ಪೂರೈಸುತ್ತಾನೆ. ಒಂದು ವೇಳೆ ತಂದೆ-ತಾಯಿ ಇದ್ದರೆ ಎಲ್ಲ ಕಾರ್ಯವನ್ನು ಅವರೇ ಮಾಡುತ್ತಾರೆ. ಇಲ್ಲದಿದ್ದ ಪಕ್ಷದಲ್ಲಿ ತಮ್ಮನೇ ಎಲ್ಲವನ್ನು ವಹಿಸಿಕೊಳ್ಳುತ್ತಾನೆ. ಅಂತೆಯೇ ಅಕ್ಕನಿಗೂ ತಮ್ಮನ ಮೇಲೆ ಎಲ್ಲಿಲ್ಲದ ಪ್ರೀತಿ-ಕಾಳಜಿ. ಅವನ ಕಾಯಕದ ನಿಷ್ಠೆಯನ್ನು ಗೆಳತಿಯರೊಂದಿಗೆ ಹಂಚಿಕೊಳ್ಳುತ್ತಾಳೆ.

ಎಳೆಹುಲ್ಲು ಅಡವ್ಯಾಗ ತಿಳಿನೀರು ಕೊಳದಾಗ
ಬಲವುಳ್ಳ ನಾಯಿ ಸಾಕ್ಯಾನ । ನನ ತಮ್ಮ
ಒನಪೀಲೆ ಕುರಿಯ ಕಾಯ್ದಾನ । (ಹಲಸಂಗಿ ಗೆಳೆಯರು, ೧೯೩೧, ಪು-೪೫)

ಅಕ್ಕನಿಗೆ ತನ್ನ ತಮ್ಮ ಬಡವನಿರಲಿ ಶ್ರೀಮಂತನಿರಲಿ ಚಿಂತೆಯಿಲ್ಲ. ಅವರಿಬ್ಬರ ಪ್ರೀತಿಗೆ ಎಂದೂ ಕುಂದುಬಾರದು. ಪ್ರತಿಯೊಂದು ಸಂದರ್ಭದಲ್ಲಿಯೂ ಅಕ್ಕ ತಮ್ಮನ ಗುಣಗಾನ ಮಾಡುತ್ತಾಳೆ. ಕುರಿಯ ಕಾಯುವ ತಮ್ಮ ಬಲವುಳ್ಳ ನಾಯಿಯನ್ನು ಸಾಕಿದ್ದಾನೆ. ಆತನ ಎಳೆಯ ಹುಲಿ ಇರುವ ಅಡವಿಯಲ್ಲಿ, ತಿಳಿನೀರು ಇರುವ ಕೊಳವುಳ್ಳ ಪ್ರದೇಶದಲ್ಲಿ ವಾಸವಾಗಿದ್ದಾನೆ. ಅಂದರೆ ತಮ್ಮನಿಗೆ ಯಾವುದೇ ಕೊರೆತೆಯಿಲ್ಲ. ಆತ ಸುಖದಿಂದ ಇದ್ದಾನೆಂಬುದು ಅವಳ ಆಶಯ. ಮತ್ತೊಬ್ಬ ಹೆಣ್ಣುಮಗಳ ತಮ್ಮ ಸಾಹುಕಾರನಾಗಿದ್ದಾನೆ. ಆಗ ಅವಳು ತಮ್ಮನನ್ನು ಹಾಡಿ ಹೊಗಳಿರುವ ಪರಿಯನ್ನು ಈ ಕೆಳಕಂಡ ಸಾಲುಗಳಲ್ಲಿ ಕಾಣುತ್ತೇವೆ.

ಪುಂಡಿಯ ಪಲ್ಲೀಯ ಚೆಂಡೀಯ ಕಡಿದಂಗ
ಪುಂಡ ನನ್ನ ತಮ್ಮ ಸಾವುಕಾರ । ನ ಮಾತು
ಬಂಡೀಗಿ ಕೀಲು ಜಡಿದಂಗ । (ಹಲಸಂಗಿ ಗೆಳೆಯರು, ೨೦೦೮, ಪು-೪೨)

ತಮ್ಮನು ಊರ ಗೌಡನೋ ಸರದಾರನೋ ಆಗಿದ್ದಾನೆ. ಆತ ಸಾಹುಕಾರ, ಸಿರಿವಂತ, ಬಲುಶೂರನೂ ಹೌದು. ಏಕೆಂದರೆ ಗರತಿಯು ನುಡಿದಂತೆ ಪುಂಡೀ ಪಲ್ಯೆಯ ಚಿಗುರನ್ನು ಚಿವುಟಿದ ಹಾಗೆ ವೈರಿಗಳ ಶಿರಚ್ಛೇದನ ಮಾಡುತ್ತಾನೆ. ಅಂತಹ ಶೂರನವನು. ತೋಳ್ಬಲವಷ್ಟೇ ಅಲ್ಲ, ಬುದ್ಧಿಬಲವು ಆತನಲ್ಲಿದೆ. ಬಂಡೀಗೆ ಕೀಲು ಹಾಕಿದ ಹಾಗೆ ಕುಶಲದ ಮಾತನ್ನಾಡುತ್ತಾನೆಂದು ಅಕ್ಕ ಹೊಗಳುತ್ತಾಳೆ. ಮದುವೆಯಾಗಿ ಗಂಡನ ಮನೆ ಸೇರಿದರೂ, ಸಾಹುಕಾರ ತಮ್ಮನದೇ ಕನವರಿಕೆ. ತುಂಬಿದ ಮನೆಯಲ್ಲಿ ಆತನದೇ ಹೊಗಳಿಕೆ. ಅಕ್ಕನಿಚ್ಛೆ ಏನೆಂದರೆ ಮುಂದೆ ತನಗೆ ಹೆಣ್ಣುಮಗು ಜನಿಸಬೇಕು. ಅವಳನ್ನು ತನ್ನ ತಮ್ಮನಿಗೆ ನೀಡಬೇಕು. ಆತ ಹೊಸಬೀಗನಾಗಿ ಮತ್ತೆ ನನ್ನೊಂದಿಗೆ ಒಡನಾಟ ಹೊಂದಬೇಕು ಎಂಬುದಾಗಿದೆ.

ಬಸರಾದರ ತೊಡಬೇಕ ಹಸರ ತಾಬುತಿ ಕುಬಸ
ಹಸರೆಲಿ ಒಳಗ ಉಣಬೇಕ । ನನ ತಮ್ಮ
ಹೊಸಬೀಗನಾಗಿ ಬರಬೇಕ । (ಹಲಸಂಗಿ ಗೆಳೆಯರು, ೧೯೩೧, ಪು-೪೨)

ಹೆಣ್ಣು ಗರ್ಭಿಣಿಯಾದಾಗ ಅವಳಿಗೆ ನೂರೆಂಟು ಆಸೆಗಳಿರುತ್ತವೆ. ಅವಳು ಹುಟ್ಟುವ ಕೂಸಿನ ಬಗ್ಗೆ ಸಾಕಷ್ಟು ಕನಸು ಕಟ್ಟಿಕೊಂಡಿರುತ್ತಾಳೆ. ಸಂಪ್ರದಾಯದ ಸೀಮಂತವು ನಡೆಯುತ್ತದೆ. ತವರವರು ಸೀಮಂತಕ್ಕೆ ಹಸಿರುಬಳೆ, ಹಸಿರುಸೀರೆಯನ್ನು ತರುತ್ತಾರೆ. ಆಕೆಗೆ ಹಸಿರು ಸೀರೆ-ಕುಪ್ಪಸವನ್ನು ಉಟ್ಟುಕೊಳ್ಳುವ ಆಸೆ. ನಾನಾ ರೀತಿಯ ಭಕ್ಷ್ಯ-ಭೋಜ್ಯಗಳನ್ನು ಬಾಳೆಯ ಎಲೆಯಲ್ಲಿ ಊಟ ಮಾಡುವಾಸೆ; ಇವುಗಳಷ್ಟೇ ಅಲ್ಲದೇ, ಆಕೆಗೆ ತಮ್ಮನೇ ಹೊಸ ಬೀಗನಾಗಿ ಬರಬೇಕು. ಅಂದರೆ ತನಗೆ ಹುಟ್ಟುವ ಮಗು ಹೆಣ್ಣೇ. ಅವಳನ್ನು ತನ್ನ ತಮ್ಮನಿಗೆ ಧಾರೆಯೆರೆಯುತ್ತೇನೆಂಬುದು ಅವಳ ನಂಬಿಕೆ. ಹೀಗೆಯೇ ತವರಿನ ಸಂಬಂಧವನ್ನು ಕಡಿದುಕೊಳ್ಳಲು ಬಯಸದ ಅಕ್ಕ ತಮ್ಮನಿಗಾಗಿಯೇ ಹೊಸ ಸಂಬಂಧ ಬೆಳೆಸಲು ಸಿದ್ಧಳಾಗಿರುತ್ತಾಳೆ. ತವರಿನ ರಸಬಳ್ಳಿ ತನ್ನ ಮಗಳಿಂದಲೇ ಹಬ್ಬಲಿ ಎಂಬುದು ಅಕ್ಕನ ಆಸೆಯಾಗಿದೆ.

ಜನಪದ ಗೀತೆಗಳಲ್ಲಿ ಚಿತ್ರಿತವಾಗಿರುವ ಸಹೋದರ ಪ್ರೀತಿ ಅಪೂರ್ವವಾದುದು. ಒಟ್ಟಿಗೆ ಆಡಿಪಾಡಿ ಅಕ್ಕ-ತಮ್ಮ ಬೆಳೆದ ಮೇಲೆ ತಮ್ಮ ತಮ್ಮ ಕುಟುಂಬಗಳನ್ನು ಕಟ್ಟಿಕೊಳ್ಳಬೇಕಾಗುವುದು ಅನಿವಾರ್ಯ. ಬೇರೆ ಬೇರೆಯಾಗಿ ವಾಸಿಸಿದ ಮಾತ್ರಕ್ಕೆ ಸಂಬಂಧಗಳು ಕಡಿದುಹೋಗುವುದಿಲ್ಲ. ಮದುವೆಯಾಗಿ ಹುಟ್ಟಿದ ಮನೆಯನ್ನು ಬಿಟ್ಟು ಪರಮನೆಗೆ ಹೋದ ಹೆಣ್ಣಿಗೆ ಅಣ್ಣತಮ್ಮಂದಿರ ನೆನಪು ಸದಾ ಕಾಡುತ್ತದೆ. ಆ ನೆನಪುಗಳನ್ನು ಜನಪದ ಗೀತೆಗಳು ಬಹು ಸುಂದರವಾಗಿ ಕಟ್ಟಿಕೊಡುತ್ತವೆ.

ಜನಪದ ಗೀತೆಗಳು ಅಕ್ಕ-ತಮ್ಮ ಇವರ ನಡುವಿನ ಭಾವನೆಗಳ ಅಪೂರ್ವ ಲೋಕವನ್ನು ತೆರೆದಿಡುತ್ತದೆ. ಅಕ್ಕ-ತಮ್ಮನ ಮೇಲೆ ತೋರುವ ಪ್ರೀತಿ, ಅವನ ಹೆಂಡತಿಯ ತಿರಸ್ಕಾರ ಮೊದಲಾದ ಸೂಕ್ಷ್ಮ ವಿಚಾರಗಳನ್ನು ಜನಪದ ಗೀತೆಗಳು ಅರ್ಥಪೂರ್ಣವಾಗಿ ತೆರೆದಿಡುತ್ತವೆ.

ತಮ್ಮನಿಗೆ ತನ್ನಕ್ಕನನ್ನು ಕಂಡರೆ ಎಲ್ಲಿಲ್ಲದ ಪ್ರೀತಿ, ಗೌರವಾಧರ. ಅದನ್ನು ಕಂಡ ಜನಪದ ಕವಯಿತ್ರಿ ಭಾವಪೂರ್ಣವಾಗಿ ಹಾಡುತ್ತಾಳೆ. ತಮ್ಮನ ಗೌರವಾಧರಗಳನ್ನು ಹೃದಯಪೂರ್ವಕವಾಗಿ ಸ್ವೀಕರಿಸುತ್ತಾಳೆ. ತಮ್ಮನು ಅಕ್ಕನಿಗೆ ತೋರಿಸುವ ಗೌರವ ಈ ಕೆಳಗಿನ ಗೀತೆಯಲ್ಲಿ ಸೊಗಸಾಗಿ ಮೂಡಿಬಂದಿದೆ.

ನನ್ನೊಂದಿಗೆ ಹುಟ್ಟಿ ನನಗೆ ಬೀಗನಾಗಿ
ನೀ ಚನ್ನಪಟ್ಟಣ್ಣಕ್ಕೆ ದೊರೆಯಾಗಿ । ತಮ್ಮಯ್ಯ
ನನ್ನ ಕಂಡು ಕುದುರೆ ಇಳಿದಾನು । (ದೇ. ಜವರೇಗೌಡ, ೧೯೭೮, ಪು-೫೫)

ಒಟ್ಟಿಗೆ ಹುಟ್ಟಿ ಮಗಳನ್ನು ಕೊಟ್ಟು ಬೀಗನಾದವನು, ಐಶ್ವರ್ಯದಲ್ಲಿ, ಅಂತಸ್ತಿನಲ್ಲಿ ಹೆಚ್ಚಿನ ಸ್ಥಾನಮಾನವನ್ನು ಪಡೆದವನು. ಆದರೂ ತಮ್ಮ ಮಾರ್ಗದಲ್ಲಿ ಕಾಲ್ನಡುಗೆಯಲ್ಲಿ ಹೋಗುವ ಅಕ್ಕನನ್ನು ಕಂಡು ಕುದುರೆಯಿಂದಿಳಿದು ಗೌರವ ತೋರಿಸುತ್ತಾನೆ. ಭಾರತೀಯರ ಸಜ್ಜನಿಕೆಯ ಚಿತ್ರಣ ಇಲ್ಲಿ ಮೂಡಿನಿಂತಿದೆ. ಭಾರತೀಯರಿಗೆ ಸ್ಥಾನಮಾನಗಳು ಮುಖ್ಯವಲ್ಲ. ಪ್ರೀತಿ ಸಹೋದರತ್ವ ಮುಖ್ಯವಾದವುಗಳೆಂಬ ಆದರ್ಶ ಪ್ರಸ್ತುತ ಈ ಗೀತೆಯಲ್ಲಿದೆ. ಈ ಬಗೆಯ ಭಾವನಾತ್ಮಕ ಸಂಬಂಧ ಭಾರತೀಯ ಸಮಾಜದ ಹೃದಯ ಹೃದಯಗಳಲ್ಲಿ ಅಂತರ್‌ವಾಹಿನಿಯಾಗಿ ಹರಿಯುತ್ತಾ, ಸದಾ ಸಮಾಜದ ಸ್ವಾಸ್ತ್ಯವನ್ನು ಕಾಯ್ದುಕೊಂಡು ಬರುತ್ತಿದೆ. ಅಕ್ಕ ಪ್ರೀತಿಯಿಂಬ ಬುದ್ಧಿಯನ್ನು ಹೇಳುವ ಅಧಿಕಾರವನ್ನು ಕೂಡ ಪಡೆದಿದ್ದಾಳೆ. ಅವಳು ತಮ್ಮನಿಗೆ ತಿಳಿ ಹೇಳುವ ಪ್ರಸಂಗವನ್ನು ಈ ಕೆಳಕಂಡ ಸಾಲುಗಳಲ್ಲಿ ಕಾಣುತ್ತೇವೆ.

ತಾಯವ್ವಗ ಬೈಬ್ಯಾಡ ತಿಳಿಗೇಡಿ ನನ ತಮ್ಮ
ಭಾಳ ದಿನದಾಕಿ ಹಡೆದವ್ವಗ । ಬೈದರ
ಭಾಳ ಮರುಗ್ಯಾಳ ಮನದಾಗ । (ಹಲಸಂಗಿ ಗೆಳೆಯರು, ೧೯೩೧, ಪು-೧೦೩)

ನಮ್ಮ ಸಮಾಜದಲ್ಲಿ ಅನೇಕ ಹೃದಯಸ್ಪರ್ಶಿ ಸಂಪ್ರದಾಯಗಳು ಆಚರಣೆಯಲ್ಲಿವೆ. ಈ ಆಚರಣೆಗಳು ಕೌಟುಂಬಿಕ ಸಂಬಂಧಗಳನ್ನು ಗಟ್ಟಿಗೊಳಿಸುತ್ತವೆ. ಸಂಬಂಧಗಳು ಬಹುಕಾಲ ಬೆಳೆಯುವಂತಾಗಲು ಸಹಕಾರಿಯಾಗಿವೆ. ನಮ್ಮ ಸಮಾಜದಲ್ಲಿ ಮೊದಲ ಹೆರಿಗೆ ತವರುಮನೆಯಲ್ಲಿಯೇ ಆಗಬೇಕೆಂಬ ಸಂಪ್ರದಾಯವಿದೆ. ಮದುವೆ ಮಾಡಿಕೊಟ್ಟ ಹೆಣ್ಣಿಗೆ ಮತ್ತೆ ತವರುಮನೆ ಸಂಬಂಧವನ್ನು ಬೆಸೆಯುತ್ತದೆ ಈ ಸಂಪ್ರದಾಯ. ಹಾಗೆಯೇ ನಂತರದಲ್ಲಿ ತವರು ಮನೆಯಲ್ಲಿ ಹೆರಿಗೆಯಾದರೆ ಗಂಡನ ಮನೆಯವರು ತಾಯಿಗೆ ಹೊಸ ಸೀರೆ ಮತ್ತು ಮಗುವಿಗೆ ಹೊಸ ಆಭರಣ ಮಾಡಿಕೊಂಡು

ಹೋಗಿಯೇ ತಾಯಿ ಮತ್ತು ಮಗುವಿನ ಮುಖ ನೋಡಬೇಕೆಂಬ ಸಂಪ್ರದಾಯವಿದೆ. ಈ ಸಂಪ್ರದಾಯಗಳನ್ನು ಜನಪದ ಗೀತೆಗಳಲ್ಲಿ ಕಾಣಬಹುದು. ಮಗುವನ್ನು ಹೆತ್ತ ಅಕ್ಕನಿಗೆ ಸೀರೆ, ಮಗುವಿಗೆ ಆಭರಣವನ್ನು ಉಡುಗೊರೆಯಾಗಿ ನೀಡುವ ತಮ್ಮನ ಪ್ರೀತಿ ಅನುಕರಣೀಯವಾದುದು. ಪ್ರೀತಿಯ ಅಕ್ಕ ಹಾಗೂ ಆಕೆಯ ಮಕ್ಕಳನ್ನು ಊರಿನ ಜಾತ್ರೆಗೆ ಕರೆತರಲು ಉತ್ಸಾಹದಿಂದ ಬಂಡಿಕಟ್ಟುತ್ತಾನೆ. ಅವರನ್ನು ಬಂಡಿಯಲ್ಲಿ ಕರೆತರುವಾಗ ತಮ್ಮನ ಮನದಲ್ಲಿ ಮೂಡಿದ ಸಂಭ್ರಮಕ್ಕೆ ಕೊನೆಯಿಲ್ಲ.

ಅಕ್ಕನ ಕರಕೊಂಡು ಬಂಡಿಯ ಹೊಡಕೊಂಡು
ಅಕ್ಕನ ಮಕ್ಕಳಿಗೆ ಬಿಸುಲೆಂದು । ತಮ್ಮಯ್ಯ
ವಲ್ಲಿ ಮುಂಜೆರಗ ಹಿಡಿದಾನ । (ಎಲ್. ಗುಂಡಪ್ಪ, ೧೯೪೭, ಪು-೬೬)

ತಮ್ಮನಿಗೆ ಅಕ್ಕನನ್ನು ಮತ್ತು ಅವಳ ಹೆತ್ತ ಮಕ್ಕಳನ್ನು ನೋಡುವ ಆಸೆಯಿದೆ. ಆದರೆ ಬಿಡುವಿಲ್ಲ. ಊರ ಜಾತ್ರೆಗೆ ಸಂಪ್ರದಾಯ ಮರೆಯುವಂತಿಲ್ಲ. ಅದಕ್ಕೂ ಮಿಗಿಲಾಗಿ ಅಕ್ಕನ ಮಕ್ಕಳನ್ನು ನೋಡುವ ಆಸೆಯಿಂದ ಬಂಡಿಯ ಕಟ್ಟಿ, ಊರ ಜಾತ್ರೆಗೆ ಅವರನ್ನು ಕರೆತರುತ್ತಾನೆ. ತಮ್ಮನ ಪ್ರೀತಿಯಿಲ್ಲಿ ಹಾಡಾಗಿದೆ. ಅಕ್ಕ-ತಮ್ಮನ ನಡುವಿನ ಮಾನವೀಯ ಭಾವನೆಗಳನ್ನು ಮಿಡಿಸುತ್ತಲೇ ಸಂಬಂಧಗಳ ಮಹತ್ವವನ್ನು ಈ ಗೀತೆ ಚಿತ್ರಿಸುತ್ತದೆ. ಜನಪದ ಗೀತೆಗಳಲ್ಲಿ ಉನ್ನತ ಮಟ್ಟದ ಕಾವ್ಯ ಲಕ್ಷಣಗಳು ಕಂಡುಬರುವಂತೆ ಜನಪದ ಸಂಪ್ರದಾಯ ಆಚರಣೆಗಳನ್ನು ಒಳಗೊಂಡಿರುವುದು ಮಹತ್ವದ ಸಂಗತಿಯಾಗಿದೆ.

### ೪.೧.೯ ಅಜ್ಜ-ಅಜ್ಜಿ-ಮೊಮ್ಮಕ್ಕಳು

ಜನಪದರು ಕೂಡು ಕುಟುಂಬಕ್ಕೆ ಆದ್ಯತೆ ನೀಡುತ್ತಿದ್ದರು. ಹಿರಿಯ ತಲೆಮಾರಿನವರ ಮಾರ್ಗದರ್ಶನದಲ್ಲಿ ಅವರೊಂದಿಗೆ ಬದುಕಿನ ಕ್ಷಣಗಳನ್ನು ಕಳೆಯಲು ಇಷ್ಟಪಡುತ್ತಿದ್ದರು. ಮುಪ್ಪಿನ ಜೀವಗಳನ್ನು ತಮ್ಮ ಮಕ್ಕಳಂತೆಯೇ ಪಾಲನೆ ಮಾಡುತ್ತಿದ್ದರು. ಚಿಕ್ಕ ಮಕ್ಕಳೊಂದಿಗೆ ಅಜ್ಜ-ಅಜ್ಜಿ, ಮುತ್ತಜ್ಜ ಮುತ್ತಜ್ಜಿಯರು ಸ್ನೇಹದಿಂದ ವರ್ತಿಸುತ್ತಿದ್ದರು. ಮೊಮ್ಮಕ್ಕಳನ್ನು ಪ್ರೀತಿಯಿಂದ ಕಾಣುತ್ತಿದ್ದರು. ಮೊಮ್ಮಕ್ಕಿಲ್ಲದ ಅಂಗಳನ್ನು ಕುರಿತು ಜನಪದರು ಈ ಕೆಳಗಿನಂತೆ ಹಾಡಿದ್ದಾರೆ.

ಆಡುವರಿಲ್ಲದೇ ಅಂಗಳ ಭಿನ್ನದೊ
ಹೂಡಿದರು ಹೊನ್ನ ಬುಗರೀಯ । ಹುಯ್ಲದ ಮೇಲೆ
ಮೊಮ್ಮಕ್ಕಳಾಡಿದರು ಧೂಳೆದ್ದು ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೪೩)

ಮೇಲಿನ ಗೀತೆಯಲ್ಲಿ ಅಂಗಳಕ್ಕಿಂತ ಅಂಗಳದಲ್ಲಿ ಆಟವಾಡುವ ಮೊಮ್ಮಕ್ಕಳು ಇರಬೇಕೆಂಬುದು ಮುಖ್ಯ ಆಶಯವಾಗಿದೆ. ಹೀಗೆ ಅನೇಕ ಗೀತೆಗಳು ಜನಪದರಲ್ಲಿನ ಅಜ್ಜ-ಅಜ್ಜಿ-ಮೊಮ್ಮಕ್ಕಳ ನಡುವಿನ ಸಂಬಂಧಗಳನ್ನು ವ್ಯಕ್ತಪಡಿಸಿವೆ.

ತಂದೆಯ ಅಥವಾ ತಾಯಿಯ ತಂದೆ ಅಜ್ಜನೆಂದೂ, ತಂದೆಯ ಅಥವಾ ತಾಯಿಯ ತಾಯಿಯನ್ನು ಅಜ್ಜಿಯೆಂದು ಸಂಬೋಧಿಸಲಾಗುತ್ತದೆ. ಕರ್ನಾಟಕದ ಕೆಲವು ಭಾಗಗಳಲ್ಲಿ ಅಜ್ಜನಿಗೆ ತಾತ, ಮುತ್ಯಾ ಎಂದು, ಅಜ್ಜಿಗೆ ಅಮ್ಮ, ಆಯಿ ಎಂದು ಕರೆಯುವ ರೂಢಿ ಜನಪದರಲ್ಲಿದೆ. ಮಗ ಅಥವಾ ಮಗಳ ಮಗನನ್ನು ಮೊಮ್ಮಗನೆಂದು, ಮಗ ಅಥವಾ ಮಗಳ ಮಗಳನ್ನು ಮೊಮ್ಮಗಳೆಂದು ಕರೆಯುತ್ತಾರೆ. ಅಜ್ಜ-ಅಜ್ಜಿ-ಮೊಮ್ಮಕ್ಕಳಲ್ಲಿ ಸಲಿಗೆಯು ಹೆಚ್ಚಾಗಿದ್ದು, ಯಾವುದೇ ರೀತಿಯ ವಿನೋದವನ್ನು ಮುಕ್ತವಾಗಿ ಅನುಭವಿಸುವ ಸ್ವಾತಂತ್ರ್ಯವನ್ನು ಪಡೆದಿದ್ದಾರೆ. ಇವರಲ್ಲಿ ತಲೆಮಾರುಗಳ ಅಂತರವಿದ್ದರೂ ವಾಸ್ತವ ಬದುಕಿಗೆ ಹೊಂದಿಕೊಳ್ಳುವ ಮನೋಧರ್ಮ ಅವರಲ್ಲಿತ್ತು.

ಅಜ್ಜ-ಅಜ್ಜಿಗೆ ಮೊಮ್ಮಕ್ಕಳೆಂದರೆ ಬಲುಪ್ರೀತಿ. ಅಪ್ಪ ಕೋಪಗೊಂಡಾಗ ಇಲ್ಲವೇ ಅಮ್ಮ ಹೊಡೆಯಲು ಬಂದಾಗ ಪ್ರೀತಿಯಿಂದ ಅಜ್ಜ-ಅಜ್ಜಿಯ ಬೆನ್ನ ಹಿಂದೆ ಅವಿತುಕೊಂಡು ಮೊಮ್ಮಕ್ಕಳು ಅಪ್ಪ-ಅಮ್ಮನಿಂದ ತಪ್ಪಿಸಿಕೊಳ್ಳುತ್ತಾರೆ. ಮೊಮ್ಮಕ್ಕಳಿಗೂ ಅಜ್ಜ-ಅಜ್ಜಿಯೆಂದರೆ ಪ್ರೀತಿ, ಸಲುಗೆ, ಅವಲಂಬನೆಯೂ ಜಾಸ್ತಿಯೇ ಇರುತ್ತದೆ.

ಅಜ್ಜ ಅಜ್ಜಿಗೆ ಮುದ್ದು ಗೆಜ್ಜೆ ಕಾಲಿಗೆ ಮುದ್ದು
ಹಣ್ಣುಳ್ಳ ಮರಕೆ ಗಿಣಿಮುದ್ದು । ಬಾಲಯ್ಯ
ನೀ ಮುದ್ದು ನಮ್ಮ ಬಳಗಕ್ಕೆ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೪೩)

ಮೊಮ್ಮಗನೆಂದರೆ ಬಲುಮುದ್ದು ಎಂಬ ಅತಿಯಾದ ಪ್ರೀತಿಯನ್ನು ಮೇಲಿನ ನೀತೆಯು ತೋರುತ್ತದೆ. ಮುದ್ದಾದ ಬಾಲಯ್ಯನು ಅಜ್ಜ-ಅಜ್ಜಿಗೆ ಅಲ್ಲದೇ ಇಡೀ ಬಳಗಕ್ಕೆ ಪ್ರಿಯವಾದವನು ಎಂಬ ಅಂಶವು ಪ್ರಸ್ತುತ ಗೀತೆಯಲ್ಲಿದೆ. ಇನ್ನೊಂದೆಡೆ ಅಜ್ಜನು ಮಾಡಿದ ಸತ್ಕಾರ್ಯವನ್ನು ಹಾಡಿನ ಮೂಲಕ ವ್ಯಕ್ತಪಡಿಸಿ, ಅಜ್ಜನ ಗುಣವನ್ನು ಎಲ್ಲರಿಗೂ ದೃಷ್ಟಾಂತವೊಂದನ್ನು ಗಮನಿಸಬಹುದು.

ಕೆರೆಯ ಕಟ್ಟಿಸ್ಯಾನೆ ಅರವಟಿಗೆ ಹಿಡಿಸ್ಯಾನೆ
ಸೆರೆಯ ಹೋಗೋರ ಬಿಡಿಸ್ಯಾನೆ । ನಮ್ಮಜ್ಜಗ
ದೊರೆಗಳು ಓಲೆ ಕಳುವ್ಯಾರೆ । (ಕರಾಕೃ, ೧೯೫೯, ಪು-೩೦೮)

ಜನರಿಗಾಗಿ ಅರವಟಿಗೆ, ದನಕರುಗಳಿಗಾಗಿ ಕೆರೆಯನ್ನು ಕಟ್ಟಿಸುವಂತ ಭೂಪ ಅಜ್ಜನನ್ನು ಮನದುಂಬಿ ಹಾಡಿದ ಪರಿಯು ಮೇಲಿದೆ. ಏನೂ ತಪ್ಪನ್ನು ಮಾಡದೇ ಸೆರೆಗೆ ಹೋಗುವವರನ್ನು

ವಿಚಾರಿಸಿ ಅದನ್ನು ತಡೆದು, ಆ ರಾಜ್ಯದ ದೊರೆಗಳಿಂದಲೇ ಸನ್ಮಾನ ಪತ್ರವನ್ನು ಪಡೆದ ಅಜ್ಜನನ್ನು ಅಭಿಮಾನದಿಂದ ಅಭಿವ್ಯಕ್ತಿಸಲಾಗಿದೆ.

ಅತ್ತರೆ ಅಳುವಲ್ಲ ರಚ್ಚೆ ಮಾಡೋ ಮಗಳಲ್ಲ
ಅತ್ತ ಬಂದಾಳು ನಿಮ್ಮಜ್ಜಿ । ಕಂದಮ್ಮ
ಬಾಚಿ ತಬ್ಬಿದಳು ಬಲಭುಜನ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು–೫೦)

ಅಳುವ ಮಗಳಲ್ಲ ಹಠ ಹಿಡಿಯುವುದಿಲ್ಲ ಆದರೆ ಆಕೆಗೆ ಅಜ್ಜಿಯೆಂದರೆ ಬಲುಪ್ರೀತಿ. ಅರಗಳಿಗೆಯು ಅಜ್ಜಿಯನ್ನು ಬಿಟ್ಟಿರಲಾರಳು. ಅಜ್ಜಿಯು ಕಣ್ಣಿಗೆ ಕಾಣದಿದ್ದಾಗ ಹತಾಶೆಗೊಳ್ಳುವ ಮೇಲ್ಕಂಡ ಗೀತೆಯಲ್ಲಿ ಅಭಿವ್ಯಕ್ತವಾಗಿದೆ. ಈ ಎಲ್ಲ ದೃಷ್ಟಾಂತಗಳು ಜನಪದರಲ್ಲಿನ ಅಜ್ಜ–ಅಜ್ಜಿ–ಮೊಮ್ಮಕ್ಕಳ ನಡುವಿನ ಸಂಬಂಧಗಳನ್ನು ವ್ಯಕ್ತಪಡಿಸಿವೆ.

ಸಾಮಾನ್ಯವಾಗಿ ರೈತರಾದ ಜನಪದರು ದಿನನಿತ್ಯ ಹೊಲದ ಕೆಲಸಗಳಲ್ಲಿ ನಿರತರಾಗಿರುತ್ತಾರೆ. ಮನೆಯ ಕೆಲಸವನ್ನು ಹೆಂಗಸರು ಮಾಡುತ್ತಾರೆ. ಮನೆಯ ಮಕ್ಕಳ ಲಾಲನೆ–ಪಾಲನೆಯ ಜವಾಬ್ದಾರಿಯೂ ಅಜ್ಜ–ಅಜ್ಜಿಯರದ್ದಾಗಿರುತ್ತದೆ. ಮೊಮ್ಮಕ್ಕಳಿಗೆ ಅಜ್ಜನ ಹೆಗಲು, ಅಜ್ಜಿಯ ಮಡಿಲೆಂದರೆ ಖುಷಿಯ ಉಪ್ಪರಿಗೆ ಇದ್ದ ಹಾಗೆ. ಅಜ್ಜನ ಕೋಲು, ಅಜ್ಜಿಯ ಅಡಿಕೆ ಚೀಲವೆಂದರೆ ಮೊಮ್ಮಕ್ಕಳಿಗೆ ಬಹಳ ಇಷ್ಟ. ಹೀಗೆ ಅಜ್ಜ–ಅಜ್ಜಿಯರನ್ನು ಮೊಮ್ಮಕ್ಕಳು ಕಾಡಿಸುವ, ಪೀಡಿಸುವ ಸನ್ನಿವೇಶಗಳು ಮನಸ್ಸುಗಳನ್ನು ಹಗುರ ಮಾಡಿಕೊಳ್ಳಲೆಂದೇ ನಿರ್ಮಾಣವಾಗಿವೆ. ಅದಕ್ಕಾಗಿಯೇ ಜನಪದರು 'ಮನೆಗೆ ಮಕ್ಕಳು ಚಂದ, ಬನಕೆ ವೃಕ್ಷಮಾ ಚೆಂದ. ಮನೆಗೊಬ್ಬ ಅಜ್ಜಿ ಇರೆ ಚೆಂದ' ಎಂದು ಹಾಡಿದ್ದಾರೆ

### ೪.೨ ಜನಪದರ ವೈವಾಹಿಕ ಸಂಬಂಧಗಳು

ಸಾಮಾಜಿಕ ಜೀವನವನ್ನು ಕ್ರಮಬದ್ಧವಾಗಿ ಸಾಗಿಸಲು ಮಾನವನು ಅನೇಕ ಪದ್ಧತಿಗಳನ್ನು ಆಚರಣೆಗೆ ತಂದಿದ್ದಾನೆ. ಅವುಗಳಲ್ಲಿ ವಿವಾಹವೂ ಒಂದು. ಪ್ರಪಂಚದ ಎಲ್ಲ ಸಮಾಜಗಳಲ್ಲಿಯೂ ಇದು ರೂಢಿಯಲ್ಲಿದೆ. ರಾಬಿನ್ ಫಾಕ್ಸ್ ಹೇಳುವಂತೆ ಬಂಧುತ್ವ ಮತ್ತು ವಿವಾಹಗಳು ಮಾನವನ ಜೀವನದ ಮೂಲಭೂತ ಸತ್ಯಗಳು. ವಿವಾಹವು ಕುಟುಂಬದ ಅಡಿಪಾಯ. ವಿವಾಹದಿಂದ ಒಂದು ಕುಟುಂಬ ಹಲವು ಕುಟುಂಬಗಳಿಂದ ಒಂದು ಸಮಾಜ ನಿರ್ಮಾಣಗೊಳ್ಳುತ್ತದೆ. ಆದುದರಿಂದ ವಿವಾಹ ಮತ್ತು ಕುಟುಂಬ ವ್ಯವಸ್ಥೆಗಳು ಮಾನವನ ಶಾರೀರಿಕ ಹಾಗೂ ಸಾಮಾಜಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವುದಕ್ಕಾಗಿ ಏರ್ಪಡಿಸಿಕೊಂಡಿರುವ ವ್ಯವಸ್ಥೆಗಳು. ವಿವಾಹದ ಮೂಲ ಉದ್ದೇಶ ಲೈಂಗಿಕ ಬಯಕೆಗಳನ್ನು ಈಡೇರಿಸುವುದು ಎಂಬುದು ಕೆಲವರ ಅಭಿಪ್ರಾಯ. ಇದು ಎಲ್ಲ ಬಗೆಯ ಸಂಬಂಧಗಳನ್ನು ಕ್ರಮಬದ್ಧಗೊಳಿಸುತ್ತದೆ. ರಾಲ್ಫ್ ಲಿಂಟನ್ ಎಂಬ ಸಮಾಜಶಾಸ್ತ್ರಜ್ಞನು 'ವಿವಾಹವನ್ನು

ಸಮಾಜದಿಂದ ಅಂಗೀಕರಿಸಲ್ಪಟ್ಟ ವಿಭಿನ್ನ ಲಿಂಗಭೇದವುಳ್ಳ ವ್ಯಕ್ತಿಗಳ ಸಹಜೀವನ' ಎಂದಿದ್ದಾರೆ. ವ್ಯಕ್ತಿಗಳಲ್ಲಿನ ಪರಸ್ಪರ ಸಂಬಂಧಗಳು, ಲೈಂಗಿಕ ಸಂಬಂಧಗಳು ಹಾಗೂ ಅವು ಯಾವ ರೂಪ ತಾಳುತ್ತವೆ? ಆ ಸಂದರ್ಭದಲ್ಲಿ ವ್ಯಕ್ತಿಗಳು ಯಾವ ರೀತಿ ವರ್ತಿಸುತ್ತಾರೆ? ಮುಂತಾದವುಗಳನ್ನು ತಿಳಿಸುವುದೇ ವಿವಾಹದ ಸಾರವಾಗಿದೆ.

ಜನಪದರ ಜೀವನದಲ್ಲಿಯೂ ವಿವಾಹ ಎಂಬ ವ್ಯವಸ್ಥೆ ಇದೆ. ಹಿಂದೂ ಪರಂಪರೆಯಲ್ಲಿ ವಿವಾಹವನ್ನು ವ್ಯಾವಹಾರಿಕ ದೃಷ್ಟಿಯಿಂದ ನೋಡುವ ಕ್ರಮವಿಲ್ಲ. ಅಂತೆಯೇ ಹಿಂದೂಗಳಲ್ಲಿ ವಿವಾಹವು ಒಂದು ಪವಿತ್ರ ಕರ್ಮವಾಗಿದೆಯೇ ವಿನಃ ಕರಾರಿನಂತಲ್ಲ. ಪುರುಷಾರ್ಥಗಳ ಸಾಧನೆಗಾಗಿ ವಿವಾಹ ಸಂಸ್ಕಾರವನ್ನು ಒಳಗೊಂಡಿರುವ ಗೃಹಸ್ಥಾಶ್ರಮವು ಅಗತ್ಯ ಹಾಗೂ ಅನಿವಾರ್ಯ ಎಂದು ನಂಬಿಕೆ ಹಿಂದೂಗಳಲ್ಲಿದೆ. ಆದರೆ ಜನಪದರು ವಿವಾಹದಿಂದ ಎಲ್ಲ ಮಾನವ ಸಂಬಂಧಗಳನ್ನು ಸರಿಯಾಗಿ ಬೆಸೆಯಬಹುದು ಎಂಬ ನಂಬಿಕೆಯಿಂದ ಜೀವನ ನಡೆಸುತ್ತ ಬಂದಿದ್ದಾರೆ. ಕುಟುಂಬದಲ್ಲಿ ಕಾಣಬರುವ ಎಲ್ಲಾ ಸಂಬಂಧಗಳನ್ನು ನಿರ್ಧರಿಸುವುದು ಹಾಗೂ ನಿರ್ದೇಶಿಸುವುದು ವಿವಾಹವೇ ಆಗಿದೆ. ವಿವಾಹದ ಬಳಿಕ ಹೆಣ್ಣುಮಗಳು ತಾನು ಹೇಗಿರಬೇಕೆಂಬುದನ್ನು ಈ ರೀತಿ ಅಭಿವ್ಯಕ್ತಿಸಿದ್ದಾಳೆ.

ಅತ್ತೆ ಮಾವಗಂಜಿ ಚಿಕ್ಕ ಮೈದುನಗಂಜಿ
ಹಿರಿಯರು ಭಾವಯ್ಯ ದನಿಗಂಜಿ । ಬದುಕಿದರೆ
ಒಪ್ಪು ಕಾಣವ್ವ ಮನಸಿಗೆ । (ಎಲ್. ಗುಂಡಪ್ಪ, ೧೯೪೭, ಪು–೭೪)

ವಿವಾಹದಿಂದ ಗಂಡ–ಹೆಂಡಿರ ನಡುವಿನ ದಾಂಪತ್ಯ ಸಂಬಂಧವು ಚಿರಕಾಲ ಮುಂದುವರೆಯುತ್ತದೆ. ಅಲ್ಲದೇ ಅತ್ತೆ–ಸೊಸೆ, ಭಾವ–ನಾದಿನಿ, ಮಾವ–ಸೊಸೆ, ಅತ್ತಿಗೆ–ನಾದಿನಿ, ಮಾವ–ಅಳಿಯ, ಅತ್ತೆ–ಅಳಿಯ, ಅತ್ತಿಗೆ–ಮೈದುನ ಹೀಗೆ ಹಲವಾರು ಸಂಬಂಧಗಳು ಏರ್ಪಡುತ್ತವೆ. ಅವುಗಳನ್ನು ನಿಭಾಯಿಸಿಕೊಂಡು ಹೋಗುವ ಜವಾಬ್ದಾರಿಯ ಬದುಕು ಹೆಣ್ಣಿನದಾಗಿರುತ್ತದೆ. ಮೇಲ್ಕಂಡ ಎಲ್ಲ ಸಂಬಂಧಗಳನ್ನು ಒಟ್ಟಾರೆಯಾಗಿ ವೈವಾಹಿಕ ಸಂಬಂಧಗಳೆಂದು ಅಧ್ಯಯನಕ್ಕೆ ಪೂರಕವಾಗಿ ಕರೆಯಲಾಗಿದೆ. ಇಂತಹ ಸಂಬಂಧಗಳಲ್ಲಿ ರಕ್ತಸಂಬಂಧಿಗಳು ತೀರ ವಿರಳ. ಇವರನ್ನು ನೆಂಟರು ಎಂತಲೂ ಸಂಭೋದಿಸಲಾಗಿದೆ.

ಜನಪದರ ಆದರ್ಶ ವೈವಾಹಿಕ ಸಂಬಂಧಗಳನ್ನು ಅವಲೋಕಿಸಿದಾಗ ಈಗಿನ ಆಧುನಿಕ ಯುಗದಲ್ಲಿ ಅನೇಕ ಸಂಬಂಧಗಳು ಆಘಾತಕ್ಕೆ ಒಳಗಾಗುತ್ತಿವೆ. ಗಂಡ–ಹೆಂಡಿರ ನಡುವೆ ಇರಬೇಕಾದ ಅನ್ಯೋನ್ಯತೆಯ ಕೊರತೆಯಿದೆ. ಅತ್ತೆ–ಮಾವ–ಸೊಸೆಯರ ನಡುವೆ ಹೊಂದಾಣಿಕೆಯ ಸ್ವಭಾವ ಕಡಿಮೆಯಾಗುತ್ತಿದೆ. ಒಟ್ಟಾರೆ ಈಗಿನ ಕಾಲದ ವೈವಾಹಿಕ ಸಂಬಂಧಗಳು ಅನುಕೂಲಕ್ಕಾಗಿ ಕಲ್ಪಿಸಿದ ಗುತ್ತಿಗೆಯಂತಿವೆ. ಜನಪದರ ಪರಂಪರೆಯನ್ನು ಅವಲೋಕಿಸಿದಾಗ ವೈವಾಹಿಕ ಸಂಬಂಧ ಎಂಬುದು ಕೇವಲ ಶಾರೀರಿಕ ಕಾಮನೆಗಳಿಗಿಂತ ಕೌಟುಂಬಿಕ ಸಾಮಾಜಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳ

ಆಯಾಮವನ್ನು ಈ ಸಂಬಂಧಕ್ಕೆ ಕಲ್ಪಿಸಿದೆ. ಹೀಗಾಗಿ ತಮ್ಮ ವೈಯಕ್ತಿಕ ಸುಖಕ್ಕಿಂತ ಮಿಗಿಲಾದ ಜವಾಬ್ದಾರಿಗಳು ಇವೆ. ಅತ್ತೆ, ಮಾವ, ಸೊಸೆ, ಮೈದುನ, ನಾದಿನಿ, ಭಾಮೈದ, ಓರಗಿತ್ತಿ ಮೊದಲಾದ ಸಂಬಂಧಗಳ ಯೋಗಕ್ಷೇಮವೇ ಇಲ್ಲಿ ಪ್ರಧಾನವಾಗಿತ್ತು. ಜನಪದರ ಜೀವನದಲ್ಲಿಯೂ ಇಂತಹ ಆದರ್ಶ ಸಂಬಂಧಗಳನ್ನು ಕಾಣುತ್ತೇವೆ. ಏಕೆಂದರೆ ಅವರಿಗೆ ವ್ಯಕ್ತಿಯ ಹಿತಕ್ಕಿಂತ ಸಮಷ್ಟಿಯ ಹಿತವೇ ಯೋಗ್ಯವಾದುದು ಎಂಬುದನ್ನು ಜನಪದರು ಅರಿತಿದ್ದಾರೆ.

ವಿವಾಹದ ಹಿನ್ನೆಲೆಯಲ್ಲಿ ವೈವಾಹಿಕ ಸಂಬಂಧಗಳು ಕಂಡುಬರುತ್ತವೆ. ಇಲ್ಲಿನ ಸಂಬಂಧಗಳು ಗಂಡು-ಹೆಣ್ಣು ವಿವಾಹವಾದ ಬಳಿಕ ರೂಪಗೊಳ್ಳುತ್ತವೆ. ಆದ್ದರಿಂದ ವಿವಾಹದಿಂದ ಜನಪದರಲ್ಲಿ ಏರ್ಪಟ್ಟ ಸಂಬಂಧಗಳಾದ ಪತಿ-ಪತ್ನಿ, ಅತ್ತೆ-ಮಾವ, ಅತ್ತೆ-ಸೊಸೆ, ಭಾವ-ಮೈದುನ, ನೆಗೆಣ್ಣಿ-ನಾದುನಿ ಅತ್ತಿಗೆ-ನಾದಿನಿ, ಅತ್ತಿಗೆ-ಮೈದುನ, ನೆಗೆಣ್ಣಿ-ಓರಗಿತ್ತಿ, ಸೋದರಮಾವ-ಸೋದರ ಸೊಸೆ ಮುಂತಾದ ಆನುಷಂಗಿಕ ಸಂಬಂಧಗಳನ್ನು ವೈವಾಹಿಕ ಸಂಬಂಧಗಳಲ್ಲಿ ವಿಶ್ಲೇಷಿಸಲಾಗಿದೆ.

### ೪.೨.೧ ಗಂಡ-ಹೆಂಡತಿ

ರಕ್ತ ಸಂಬಂಧವನ್ನು ಮೀರಿದ್ದು ಗಂಡ-ಹೆಂಡತಿಯ ಸಂಬಂಧ. ಗಂಡು ತನ್ನನ್ನು ಮೆಚ್ಚುವಂತಹ ಹೆಣ್ಣನ್ನು, ಹೆಣ್ಣು ತನ್ನನ್ನು ಮೆಚ್ಚುವಂತಹ ಗಂಡನ್ನು ಮದುವೆಯಾಗುತ್ತಾರೆ. ಎಲ್ಲರ ಒಪ್ಪಿಗೆಯಿಂದ ವಿವಾಹಗಳು ಜರುಗುವುದು ಅವಶ್ಯಕ. ಆದರೆ ಕೆಲವೊಮ್ಮೆ ಇವರ ಇಚ್ಛೆಯ ವಿರುದ್ಧವಾಗಿಯೂ ಮದುವೆ ಹಿರಿಯರ ಸಮ್ಮುಖದಲ್ಲಿ ಜರುಗಿಬಿಡುತ್ತದೆ. ಇಲ್ಲವೇ ಗಂಡು-ಹೆಣ್ಣು ತಾವೇ ಮೆಚ್ಚಿಕೊಂಡು ಹಿರಿಯರ ವಿರುದ್ಧವಾಗಿ ಮದುವೆ ಆಗುತ್ತಾರೆ. ಹೀಗೆ ಜರುಗಿದ ಮದುವೆಯಿಂದ ಗಂಡು-ಹೆಣ್ಣಿನ ನಡುವೆ ಪತಿ-ಪತ್ನಿಯ ಸಂಬಂಧ ರೂಪುಗೊಳ್ಳುತ್ತದೆ. ಗಂಡು-ಹೆಣ್ಣು ಸೃಷ್ಟಿಯ ಎರಡು ಕಣ್ಣು ಎನ್ನುವಂತೆ ಮಾನವ ಸಂಪನ್ಮೂಲ ಬೆಳವಣಿಗೆಯಾಗುವುದರೊಂದಿಗೆ ಸೃಷ್ಟಿಕಾರ್ಯ ನಡೆಯುತ್ತದೆ. "ಮದುವೆಯು ಗಂಡು ಹೆಣ್ಣಿನ ಲೈಂಗಿಕ ಸಂಬಂಧವನ್ನು ಕ್ರಮಗೊಳಿಸುವ ಒಂದು ಸಂಸ್ಕಾರ. ಮಾನವನ ಪ್ರಾಥಮಿಕ ಅವಶ್ಯಕತೆಯನ್ನು ಪೂರೈಸುವ ಒಂದು ವ್ಯವಸ್ಥೆ. ಸಾಮಾಜಿಕ ಕಟ್ಟಳೆ, ವ್ಯಕ್ತಿಯನ್ನು ಕ್ರಮಬದ್ಧ ಜೀವನಕ್ಕೆ ಅಳವಡಿಸುವ ನೀತಿ, ನಡಾವಳಿ, ಮದುವೆಯು ವ್ಯಕ್ತಿಗಳಿಗೆ ಪತಿ-ಪತ್ನಿಯಾಗಿರಲು ಸಾಮಾಜಿಕ ಒಪ್ಪಿಗೆ ನೀಡುವುದಲ್ಲದೇ ಅವರ ಮಕ್ಕಳಿಗೆ ಸ್ಥಾನಮಾನವನ್ನು ಕೊಡುವುದು." (ಶಶಿಕಲಾ ಮೋಳ್ದಿ, ೨೦೦೯, ಮುನ್ನುಡಿ)

ಮದುವೆಯಿಂದ ಗಂಡ-ಹೆಂಡತಿಯ ಭಾಂದವ್ಯ ಆರಂಭಗೊಂಡು, ಒಂದು ಕುಟುಂಬವಾಗಿ ಅದು ರೂಪುಗೊಳ್ಳುತ್ತದೆ. ಮಕ್ಕಳು, ಸೊಸೆಯರು, ಅಳಿಯಂದಿರು ಮೊಮ್ಮಕ್ಕಳು ಹೀಗೆ ನಾನಾ ಸಂಬಂಧಗಳು ವಿವಾಹದ ಹಿನ್ನೆಲೆಯಲ್ಲಿ ರೂಪುಗೊಳ್ಳುತ್ತವೆ. ಜನಪದರಲ್ಲಿ ಗಂಡ-ಹೆಂಡತಿಯ ಸಂಬಂಧಗಳ ಕುರಿತಾಗಿ ಅನೇಕ ದೃಷ್ಟಾಂತಗಳನ್ನು ಗರತಿಯರ ಹಾಡುಗಳಲ್ಲಿ ಕಾಣುತ್ತೇವೆ. ಜೀವನದ

ಪ್ರತಿ ತಿರುವಿನಲ್ಲಿ ಜೊತೆಯಾಗಿದ್ದು, ಕಷ್ಟ-ಸುಖಗಳನ್ನು ಸಮವಾಗಿ ಹಂಚಿಕೊಂಡು ಬದುಕುವ ಜೀವಿಗಳೇ ಗಂಡ-ಹೆಂಡತಿ. ಇಲ್ಲಿ ಪ್ರೇಮ-ಕಾಮ, ಸ್ನೇಹ-ಪ್ರೀತಿ, ನೋವು-ನಲಿವು, ಸರಸ-ವಿರಸ, ಕೂಡುವಿಕೆ-ಅಗಲುವಿಕೆ ಎಲ್ಲವೂ ಇದೆ. ಪ್ರತಿ ಹಂತದಲ್ಲೂ ಅನುಸರಿಸಿಕೊಂಡು ಹೋಗುವ ಗುಣ ಗಂಡನಲ್ಲೋ ಇಲ್ಲವೇ ಹೆಂಡತಿಯಲ್ಲೋ ಇದ್ದೆ ಇರುತ್ತದೆ.

ಗಂಡಹೆಂಡಿರ ಜಗಳ ಗಂಧ ತೀಡಿದ್ಹಾಂಗ
ನಿಂಗಕ ನೀರು ಎರೆದಾಂಗ । ಹಿರಿಹೊಳೆಯ
ಗಂಗವ್ವ ಸಾಗಿ ಹರೆದಾಂಗ । (ಹಲಸಂಗಿ ಗೆಳೆಯರು, ೧೯೩೧, ಪು-೫೬)

'ಗಂಡ ಹೆಂಡಿರ ಜಗಳ ಉಂಡು ಮಲಗುವ ತನಕ' ಎಂಬ ಗಾದೆಯಂತೆ ಇವರ ಜಗಳಕ್ಕೆ ಅರ್ಥವೇ ಇರುವುದಿಲ್ಲ. ಗಂಡ ಹೆಂಡಿರ ನಡುವಿನ ಮಧುರ ಸಂಬಂಧದ ಮೇಲೆ ಈ ಪದ್ಯ ಬೆಳಕು ಚೆಲ್ಲುತ್ತದೆ. ಅಪರೂಪದ ಕಾವ್ಯಾಂಶಗಳಿಂದ ತುಂಬಿದ ಪದ್ಯವಿದು. ಗರತಿಯೊಬ್ಬಳು ಗಂಡ-ಹೆಂಡಿರ ಜಗಳವು ಗಂಧವನ್ನು ಲೇಪಿಸಿದಂತೆ, ಲಿಂಗಪೂಜೆಗೆ ಬಳಸುವ ನೀರು ಇದ್ದಂತೆ. ಕೆಲವೊಮ್ಮೆ ಉಕ್ಕಿ ಹರಿಯುವ ಕೆಲವೊಮ್ಮೆ ಶಾಂತ ವಾಹಿನಿಯಾಗಿ ಗಂಗಾ ನದಿಯು ಹರಿದಂತೆ ಎಂತೆಲ್ಲ ಬಣ್ಣಿಸುತ್ತಾಳೆ. ಅವರೀರ್ವರ ಬಾಂಧವ್ಯವು ಅನುರೂಪವಾದದ್ದು. "ಮದುವೆಯಾದ ಮೇಲೆ ಮೊದಲನೆಯ ಸಲ ಹೆಣ್ಣು ಗಂಡನ ಮನೆಗೆ ಹೋದಾಗ ಅವಳಿಗೆ ಎಲ್ಲವೂ ಹೊಸತು; ಪ್ರಯತ್ನ ಮಾಡಿ ಇದ್ದ ಸ್ಥಿತಿಗತಿಗೆ ಹೊಂದಿಕೊಂಡು ಹೋಗುವಳು. ಅವಳ ಕೆಲಸ-ಬೊಗಸಿ, ಊಟ-ಉಪಚಾರ, ಗಂಡನ ಸುಖಕ್ಕಾಗಿ, ತನ್ನ ಬಳಗದಲ್ಲಿದ್ದು ಬೆಳೆದ ಹೆಣ್ಣು ದಿನದಿನಕ್ಕೆ ಆ ಬಳಗವನ್ನು ಮರೆತು ಗಂಡನೇ ಸರ್ವಸ್ವವೆಂದು ಅವನನ್ನೇ ಅವಲಂಬಿಸುವಳು" (ಬಿ.ಎಸ್. ಗದ್ದಗಿಮಠ, ೧೯೫೫, ಪು-೧೨೩) ಜೀವನದಲ್ಲಿ ಬರೀ ಪ್ರೀತಿಯಿದ್ದರೆ ಸಾಲದು ಕೋಪ, ಮುನಿಸುಗಳು ಇದ್ದಾಗಲೇ ಪ್ರೀತಿಗೆ ನಿಜವಾದ ಅರ್ಥ ಬರುತ್ತದೆ. ಮದುವೆಯಾದ ದಿನದಿಂದ ಬದುಕಿನ ಕೊನೆವರೆಗೂ ಕೂಡಿಯೇ ಬಾಳುವ ಸಂಕಲ್ಪ ಇವರದು. ಒಬ್ಬರೊಬ್ಬರನ್ನು ಬಿಟ್ಟು ಇರಲಾರರು. ಗಂಡನಿಗೆ ಹೆಂಡತಿ, ಹೆಂಡತಿಗೆ ಗಂಡ ಪರಸ್ಪರರಲ್ಲಿ ಹೊಂದಾಣಿಕೆಯು ತೀರ ಅಗತ್ಯವಿರಬೇಕಾಗಿರುತ್ತದೆ.

ಜನಪದರಿಗೆ ಓದುಬರಹ ಅರಿವಿಲ್ಲವಾದರೂ ಪ್ರೇಮದ ಹಂಬಲಿಗರು. ಗಂಡ ಕಾಯಕದ ನಿಮಿತ್ತ ಹೊರಗಡೆ ಹೋಗಿದ್ದಾನೆ. ಅದೇ ವೇಳೆಗೆ ಗಂಡ ಮನೆಗೆ ಬರುವಷ್ಟರಲ್ಲಿ ತವರೂರಿನವರು ಬಂದು ಹೆಂಡತಿಯನ್ನು ಕರೆದೊಯ್ದಿದ್ದಾರೆ. ಗಂಡ ಹಿಂದಿರುಗಿ ಬಂದಾಗ ಹೆಂಡತಿಯ ಸುಳಿವು ಇಲ್ಲದೆ ಮನೆ ಬಿಕೋ ಎನ್ನುತ್ತಿದೆ. ಬರುತ್ತಿದ್ದಂತೆ ನಗುಚೆಲ್ಲಿ ಕೈಕಾಲುಗಳಿಗೆ ನೀರು ಕೊಡುವ ಮಡದಿಯ ಸುಳಿವಿಲ್ಲ. ಮನೆಯವರನ್ನು ಕೇಳುವ ಹಾಗಿಲ್ಲ ಕೇಳಿದರೆ ಏನೆಂದುಕೊಂಡಾರೆಂಬ ನಾಚಿಕೆ ಜೊತೆಗೆ ಭಯ. ಮೈಮನದಲ್ಲಿ ಆಲಸ್ಯ ಮೂಡುತ್ತದೆ. ಮನೆಯಲ್ಲಿ ಹೆಂಡತಿಯನ್ನು ಕಾಣದ ಗಂಡ ತನ್ನ ಮನದ ಬೇಗುದಿಯನ್ನು ತಾಯಿಯ ಬಳಿಗೆ ತೋಡಿಕೊಳ್ಳುತ್ತಾನೆ.

ಅಡಗೀಯ ಮನಿಯಾಗ ಮಡದೀಯ ಸುಳಿವಿಲ್ಲ
ಅಡಗಿ ಬಾಯೀಗಿ ರುಚಿಯಿಲ್ಲ । ಹಡೆದವ್ವ
ಮಡದಿ ತವರೀಗಿ ಹೋಗ್ಯಾಳ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೭೪)

ಮಡದಿ ತವರಿಗೆ ಹೋದರೆ ಗಂಡನಿಗೆ ಚಡಪಡಿಕೆ. ಗಂಡನು ಊರಬಿಟ್ಟು ಹೊರಗೆ ಕೆಲಸಕ್ಕೆ ಹೋದರೆ ಹೆಂಡತಿಗೆ ತೊಳಲಾಟ. ಆಷಾಡಕ್ಕೊ, ಮೊದಲ ಹೆರಿಗೆಗೊ ಹೆಂಡತಿ ತವರಿಗೆ ಹೋಗಿದ್ದಾಳೆ. ಅವಳಿಲ್ಲದೇ ಗಂಡನಿಗೆ ಏನೊಂದು ರುಚಿಸುತ್ತಿಲ್ಲ. ಅಡುಗೆಯ ಮನೆಯಲ್ಲಿ ಮಡದಿಯ ಸುಳಿವು ಇಲ್ಲ. ಘಲಘಲ ಬಳೆನಾದದ ಶಬ್ದವಿಲ್ಲ. ಮಡದಿಯ ಅಗಲುವಿಕೆಯಲ್ಲಿರುವ ಪತಿಪುರುಷ ತನ್ನ ತಾಯಿಗೆ ಹೇಳುತ್ತಾನೆ. ಅಡುಗೆ ಯಾಕೋ ರುಚಿಸುತ್ತಿಲ್ಲ. ಊಟವೂ ಸೇರದು. ಇದಕ್ಕೆ ಕಾರಣ ನನ್ನ ನೆಚ್ಚಿನ ಮಡದಿ ಬಳಿಯಿರದೇ ತವರಿಗೆ ಹೋಗಿದ್ದಾಳೆ ಎನ್ನುತ್ತಾನೆ. ದುಡಿದು ಬಂದ ಮಗನಿಗಾಗಿ ತಾಯಿ ರುಚಿರುಚಿಯಾದ ಅಡುಗೆ ಮಾಡಿ ಬಡಿಸಿದರೆ ಅವನ ಮನಸ್ಸು ಮಡದಿಗಾಗಿ ಹಂಬಲಿಸುತ್ತದೆ. ತಾಯಿ ರುಚಿಯಾದ ಅಡಗಿ ಮಾಡಿ ಮಗನಿಗೆ ಉಣಬಡಿಸಿದರೆ ಅದು ಅವನಿಗೆ ರುಚಿಯಿಲ್ಲದಂತಾಗಿದೆ. ಅದಕ್ಕೆ ಕಾರಣ ಮಡದಿ ತವರೂರಿಗೆ ಹೋಗಿರುವುದು. ರುಚಿಯಾದ ಊಟಕ್ಕಿಂತ ಅವನಿಗೆ ಮಿಗಿಲು ಮಡದಿಯ ಸಾಮಿಪ್ಯ. ಅಡುಗೆಯ ರುಚಿ ಅದರಲ್ಲಿ ಬಳಸಿರುವ ವಸ್ತುಗಳಿಗಿಂತಲೂ ಬಡಿಸುವವರ ಮತ್ತು ಉಣ್ಣುವವರ ನಡುವಿನ ಮಧುರ ಸಂಬಂಧದ ಮೇಲೆ ನಿಂತಿರುತ್ತದೆ. ಗಂಡ ಹೆಂಡತಿಯರ ಪರಸ್ಪರ ಪ್ರೇಮ, ಉದ್ವೇಗ, ಕಾತುರ, ನಿರಾಸೆಗಳು ಅತ್ಯಂತ ಸಹಜವಾಗಿ ಮೇಲ್ಕಂಡ ಗೀತೆಯಲ್ಲಿ ಮೂಡಿ ನಿಂತಿದೆ.

ಗಂಡನಷ್ಟೇ ಅಲ್ಲ ಹೆಂಡತಿಯು ತನ್ನ ಪತಿಯನ್ನು ಅಗಲಿ ಇರಲಾರಳು. ಹುಟ್ಟಿದ ಮನೆಯನ್ನು ಬಿಟ್ಟು ಬರುವಾಗ ಎಷ್ಟೇ ದುಃಖಿಸಿದರೂ, ನೋವು ಹೊಂದಿದ್ದರೂ ಗಂಡನ ತೋಳಬಂದಿಯಲ್ಲಿ ಸಿಕ್ಕಾದ ಮೇಲೆ ತವರನ್ನೇ ಮರೆತುಬಿಡುತ್ತಾಳೆ. ಗಂಡನ ಮನೆಯ ಪ್ರೀತಿ ತವರನ್ನು ಮರೆಸುವಷ್ಟು ಪ್ರಬಲವಾಗುತ್ತದೆ. ಸ್ವತಃ ಹೆತ್ತ ತಾಯಿಯೇ ತನ್ನ ಮಗಳನ್ನು ತವರಿಗೆ ಕರೆದೊಯ್ಯಲು ಬಂದಾಗ ಆಕೆ ಉತ್ತರಿಸುವ ರೀತಿ ಅಚ್ಚರಿಗೊಳಿಸುತ್ತದೆ. ಹೆಣ್ಣಿಗೆ ತವರೂರೆಂದರೆ ಪಂಚಪ್ರಾಣ. ತಾಯಿಯೇ ಸ್ವತಃ ಮಗಳನ್ನು ತವರೂರಿಗೆ ಕರೆಯಲು ಬಂದಿದ್ದಾಳೆ. ಮಗಳಿಗೆ ಧರ್ಮಸಂಕಟ. ತವರೂರಿಗೆ ಹೋಗಲೇಬೇಕೆಂಬ ಬಯಕೆಯಿದೆ. ಆದರೆ ಪ್ರೀತಿಯನ್ನು ತೋರುವ ಗಂಡನನ್ನು ಬಿಟ್ಟು ಹೋಗಲು ಅವಳಿಗೆ ಮನಸ್ಸಿಲ್ಲ. ಗಂಡನ ಪ್ರೇಮವು ತಾಯಿ, ತವರೂರಿನ ಮಮತೆಯನ್ನು ಮರೆಸುವಷ್ಟು ಗಾಢವಾದುದು. ಆದರ್ಶ ದಾಂಪತ್ಯವು ಗಂಡ ಹೆಂಡತಿಯನ್ನು ಮಧುರವಾಗಿ ಬೆಸೆಯುತ್ತದೆ. ಪರಸ್ಪರ ಒಬ್ಬರನ್ನೊಬ್ಬರು ಬಿಟ್ಟಿರಲಾರದ ಗಾಢವಾದ ಬೆಸುಗೆ ಅದು.

ಹಚ್ಚಡದ ಪದರಾಗ ಅಚ್ಚ ಮಲ್ಲಿಗಿ ಹೂವ
ಬಿಚ್ಚಿ ನನ್ನ ಮ್ಯಾಲ ಒಗೆವಂಥ । ರಾಯರನ
ಬಿಟ್ಟ್ಯಾಂಗ ಬರಲೆ ಹಡೆದವ್ವ । (ವಿನೀತ ರಾಮಚಂದ್ರರಾಯ, ೧೯೬೦, ಪು-೪೯)

ತಾಯಿ ತವರಿಗೆ ಕರೆಯಬಂದಾಗಲೂ ಪ್ರೀತಿಯಿಂದ ನೋಡಿಕೊಳ್ಳುವ ಪತಿಯನ್ನು ಬಿಟ್ಟು ಹೇಗೆ ಬರಲಿ ನನ್ನವ್ವ ? ಎಂದು ತಾಯಿಯನ್ನೇ ಕೇಳುತ್ತಾಳೆ. ಯಾವುದಕ್ಕೂ ಕೊರತೆಬಾರದೇ ಸುಖದ ಸುಪ್ಪತ್ತಿಗೆಯಲ್ಲಿ ತನ್ನನ್ನು ಗಂಡನಾದವನು ನೋಡಿಕೊಳ್ಳುತ್ತಾನೆ. ಇಲ್ಲಿ ಸುಖದ ಸುಪ್ಪತ್ತಿಗೆಯೆಂದರೆ ಹಣ-ಐಶ್ವರ್ಯವಲ್ಲ. ಬದಲಾಗಿ ತನ್ನ ಗಂಡನ ಒಲುಮೆ. ತಾನೆಷ್ಟು ಗಂಡನನ್ನು ಪ್ರೀತಿಸುತ್ತಾಳೆಯೋ ಅದಕ್ಕಿಂತ ಮಿಗಿಲಾಗಿ ತನ್ನನ್ನು ಪ್ರೀತಿಸುತ್ತಿದ್ದಾನೆ. ಹಾಗಾಗಿ ಅವನನ್ನು ಬಿಟ್ಟು ಬರುವುದು ಕಷ್ಟ ಎಂಬುದು ಅವಳ ಅಭಿಪ್ರಾಯ. ಗಂಡನ ಹೆಂಡತಿಯಾದ "ಆಕೆ ಪ್ರೇಮದ ಖಣಿ. ಕೂಲಿ, ಮಾಡಿದರೂ, ಕೋರಿ ಹೊತ್ತರೂ ಗರತಿಗೆ ಆಕೆಯ ಪತಿಯು ಸರದಾರನೇ, ಅರಸನೇ, ಮಾರಾಯರೇ. ಓರಿಗೆಯ ಪತಿಪುರುಷನು ಹಣಚಿಬಟ್ಟಿನ ಮೇಲೆ ಹರಿದಾಡುವ ಕುಂಕುಮವಿದ್ದ ಹಾಗೆ; ಅವನಿಂದ ಆಕೆ ತವರು ಮರೆಯುವಳು. ಆತನು ಸರದೊಳಗೆ ಇರುವ ಗುಳದಾಳಿಯಂತೆ ಸರ್ವಬಳಗದಲ್ಲಿ ಶ್ರೇಷ್ಠನು; ಅವನಿಂದ ಸರ್ವಬಳಗವನ್ನು ಮರೆಯುವಳು." (ಹಲಸಂಗಿ ಗೆಳೆಯರು, ೧೯೩೧, ಪು-೧೩) ಹೀಗೆಯೇ ಗಂಡನ ಬಗ್ಗೆ ಹೆಂಡತಿಯೂ ಗೌರವ ಹಾಗೂ ಧನಾತ್ಮಕ ಭಾವನೆಗಳನ್ನು ಹೊಂದಿರುತ್ತಾಳೆ.

ತನ್ನ ಸಂಸಾರದ ಮೇಲೆ ಯಾವ ವಕ್ರದೃಷ್ಟಿಯು ಬೀಳದಿರಲೆಂದು ಸದಾ ದೇವರಲ್ಲಿ ಬೇಡಿಕೊಳ್ಳುತ್ತಾಳೆ. ಗಂಡನ ಕುರಿತಾಗಿ ಯಾರೇನೇ ದೂರು ಹೇಳಿದರೂ ನಂಬುವುದಿಲ್ಲ. ದೂರು ಹೇಳಿದವರ ಮುಂದೆ ಭಂಡತನ ತೋರಿದರೂ ಪರೀಕ್ಷಿಸದೇ ಬಿಡುವುದಿಲ್ಲ. ಗಂಡನ ನಿರುದ್ಯೋಗ, ಚಟ, ಮುಗ್ಗಲಗೇಡಿತನ, ಸುಳ್ಳು ಹೀಗೆ ಎಲ್ಲವನ್ನು ಸಹಿಸಿಕೊಳ್ಳುವ ಹೆಂಡತಿಯು, ಸವತಿಯ ವಿಷಯ ಬಂದಾಗ ಕಸಿವಿಸಿಗೊಳ್ಳುತ್ತಾಳೆ. ಗಂಡನ ಮನಸ್ಸನ್ನು ಹೊಕ್ಕು ಆಕೆಯ ಹೇಳಿಕೊಳ್ಳುವ ಮಾತು ಹೊಟ್ಟೆಯೊಳಗಿನ ಹರಳನ್ನು ಕರಗಿಸುವಂತದ್ದು. ಗಂಡನಿಗೆ ತಿದ್ದಿ ಹೇಳುವ ಪರಿ ಸೊಬಗಿನಿಂದ ಕೂಡಿದೆ.

ಅಂಗೀಯ ಮ್ಯಾಲಂಗಿ ಛಂದೇನೊ ನನರಾಯ
ರಂಬಿ ಮ್ಯಾಲ ರಂಬಿ ಪ್ರತಿರಂಬಿ । ಬಂದರ
ಛಂದೇನೊ ರಾಯ ಮನಿಯಾಗ । (ಹಲಸಂಗಿ ಗೆಳೆಯರು, ೧೯೩೧, ಪು-೩೮)

ಅಂಗಿ ಮೇಲೆ ಅಂಗಿಯ ಧರಿಸಿದರೆ ಸೂಕ್ತವಲ್ಲ. ಅದು ಅಂದವನ್ನು ಕೊಡದು. ಅಂತೆಯೇ ಹೆಂಡತಿಯಿರುವಾಗಲೇ ಮತ್ತೊಬ್ಬಳನ್ನು ಮದುವೆಯಾಗುವುದು ಜನಪದರ ಬದುಕಿಗೆ ಒಗ್ಗದು. ಬೇರೆ ಹೆಣ್ಣಿನ ಸಹವಾಸ ಇಲ್ಲವೇ ಸೂಳೆಯ ಸಂಗವು ಸಂಪ್ರದಾಯ ಮೀರಿದ್ದು ಎಂಬುದು ಜನಪದರ ನಂಬಿಕೆ. ಅದನ್ನು ಹೆಂಡತಿಯಾದವಳು ಗಂಡನಿಗೆ ಬೆಣ್ಣೆಯೊಳಗಿನ ಕೂದಲನ್ನು ತೆಗೆಯುವಂತೆ

ಸೂಕ್ಷ್ಮವಾಗಿ ಸಮಸ್ಯೆಯಿಂದ ಪಾರಾಗಲು ಪ್ರಯತ್ನಿಸುತ್ತಾಳೆ. ಅದಕ್ಕವನು ನಗುವಿನಿಂದಲೇ ಉತ್ತರಿಸುತ್ತಾನೆ. ಹೆಂಡತಿಯು ಯಾರದೋ ಚಾಡಿ ಮಾತಿನಿಂದ ತನಗೆ ಪ್ರಶ್ನಿಸುತ್ತಿದ್ದಾಳೆಂಬುದು ಆತನಿಗೆ ಅರಿವಾಗುತ್ತದೆ. ಸಂಶಯ ಬಂದಾಗಲೇ ಅದನ್ನು ಪರಿಹರಿಸಬೇಕು. ಇಲ್ಲದಿದ್ದರೆ ಸಂಸಾರ ನೌಕೆ ಒಡೆದುಹೋಗಬಹುದೆಂದು ಅರಿತು ಕೆಳಕಂಡಂತೆ ಹೆಂಡತಿಯ ಮನದ ಸಂಶಯವನ್ನು ನಿವಾರಿಸುತ್ತಾನೆ.

ಸವತೀನ ತರಲಾಕ ಸಾವುಕಾರ ನಾನಲ್ಲ
ಶೆಟ್ಟರ ರೊಕ್ಕ ನನಗಿಲ್ಲ । ಕಟ್ಟಾಣಿ
ಕಷ್ಟದ ಜೀವಿ ಕಡುಬಡವ । (ಹಲಸಂಗಿ ಗೆಳೆಯರು, ೧೯೩೧, ಪು–೯೨)

ಆಗಿನ ಕಾಲದ ಗೌಡರು, ಶಾನುಭೋಗ, ಜಮೀನ್ದಾರರು, ವ್ಯಾಪಾರಸ್ಥರು, ರಾಜವಂಶಸ್ಥರು ಹೀಗೆ ಹಲವಾರು ಶ್ರೀಮಂತ ಕುಟುಂಬಗಳಲ್ಲಿ ಬಹುಪತ್ನಿತ್ವ ರೂಢಿಯಲ್ಲಿತ್ತು. ಹೆಚ್ಚು ಪತ್ನಿಯರನ್ನು ಹೊಂದುವುದು ಪ್ರತಿಷ್ಠೆಯ ವಿಷಯ ಕೂಡ ಆಗಿತ್ತು. ಗಂಡ–ಹೆಂಡತಿಯ ಸಂಬಂಧವು ಅನುರೂಪವಾದದ್ದು. ಸಿರಿವಂತ ಸಾಹುಕಾರನು ಸವತೀನ ತರಬಹುದು. ಸಿರಿವಂತ ಬೇರೆ ಹೆಣ್ಣಿನ ಸಹವಾಸ ಮಾಡಬಹುದು. ಆದರೆ ನಾನು ಬಡವ. ನನ್ನದು ಕಷ್ಟದ ಜೀವನ ಅಂದರೆ ದುಡಿದು ಬದುಕುವ ಬಡವನಿಗೆ ಜೀವನ ನಡೆಸುವುದೇ ದುಸ್ತರವಾಗಿರುವಾಗ ಮತ್ತೊಂದು ಮದುವೆ ಕನಸಿನ ಮಾತು. ಅದಕ್ಕಾಗಿ ಆತ ಸವತೀನ ತರುವುದಕ್ಕೆ ನಾನೇನು ಶ್ರೀಮಂತನಲ್ಲ. ಶೆಟ್ಟರಂತೆ ವ್ಯಾಪಾರದಿಂದ ಗಳಿಸಿದ ಧನವು ನನ್ನ ಬಳಿಯಿಲ್ಲ. ಹಾಗಾಗಿ ನಾನೇನು ಸವತಿಯನ್ನು ತರುವುದಿಲ್ಲ ಗಾಬರಿಯಾಗದಿರೆಂದು ಒಲವಿನ ನುಡಿಗಳಿಂದ ಹೆಂಡತಿಯನ್ನು ಸಮಾಧಾನಪಡಿಸುತ್ತಾನೆ. ಪ್ರೀತಿಯಿಂದ ಕಟ್ಟಾಣಿ ಎಂದು ಪತ್ನಿಯನ್ನು ಸಂಬೋಧಿಸಿರುವುದು ಅವಳ ಮೇಲಿನ ಪ್ರೇಮಕ್ಕೆ ಕುರುಹಾಗಿದೆ.

"ಈ ಬಾಳಿನಲ್ಲಿ ಪ್ರೇಮ ಜೀವನವು ಇದೆ, ಕಾಮ ಜೀವನವು ಇದೆ. ಆದರೆ ಜೀವನದ ತಿರಳು ಇದಲ್ಲ ಎಂದು ಗ್ರಹಿಕೆಯೂ ಇದೆ. ಪ್ರೇಮವು ಜೀವನದಲ್ಲಿ ಹೆಚ್ಚು ಭಾಗ, ಮುಖ್ಯ ಭಾಗವೂ ಹೌದು. ಆದರೆ ಪ್ರೇಮವೇ ಪೂರ್ತಿ ಜೀವನವಲ್ಲ. ಸ್ತ್ರೀಪುರುಷರ ಪರಸ್ಪರ ಸಂಬಂಧದಲ್ಲಿ ಜೀವನ ನಿಷ್ಠೆಯಿದೆ. ಧರ್ಮಪ್ರವೃತ್ತಿ ಇದೆ. ಪಶು ಕ್ರೀಡೆಯಾಗುವ ಕಾಮ ಸಂತಾನದ ಆಸೆಯಿಂದ ಪವಿತ್ರವಾಗುತ್ತದೆ" (ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೪೩, ಪು–೫೩) ಸ್ತ್ರೀಪುರುಷರ ಸಂಬಂಧವು ಗಂಡ–ಹೆಂಡತಿಯ ರೂಪದಲ್ಲಿ ಬದಲಾಗಿ ಪವಿತ್ರ ಸಂಬಂಧವೆನಿಸಿಕೊಳ್ಳುತ್ತದೆ. ಲೋಕಕಲ್ಯಾಣಕ್ಕಾಗಿ ಸಂತಾನ ಕಾರ್ಯ ಜರುಗುತ್ತದೆ. ಮದುವೆಯ ಬಂಧವು ಪತಿ ಪತ್ನಿಯ ಸಂಬಂಧವನ್ನು ಇನ್ನೂ ಹತ್ತಿರಗೊಳಿಸಿ ಸಾಮಾಜಿಕ ಸ್ಥಾನಮಾನವನ್ನು ನೀಡುತ್ತದೆ.

ದಾಂಪತ್ಯದಲ್ಲಿ ಗಂಡಹೆಂಡತಿಯನ್ನು ಮರಣದವರೆಗೆ ಪರ್ಯಂತ ಒಂದುಗೂಡಿಸುವ ಶಕ್ತಿ ಪ್ರೇಮ. ಜನಪದ ಹೆಣ್ಣು ಗಂಡುಗಳಲ್ಲಿ ಮೊಳೆಯುವ ಪ್ರೇಮ ನಿಷ್ಕಪಟ ನೆಲೆಯುಳ್ಳದ್ದು. ತ್ಯಾಗ, ಸಹನೆ

ಬಂದು ಬಾಂಧವರ ಒಪ್ಪಿಗೆಯಲ್ಲಿ ಬೆಳೆಯುವಂಥದ್ದು. ಬದುಕಿನ ಒತ್ತಾಸೆಯಲ್ಲಿ ಅದು ಮಾಗುವಂಥದ್ದು. ಗಂಡಹೆಂಡತಿಯ ನಡುವಿನ ಪ್ರೇಮ ಆರೋಗ್ಯಕರ ಕುಟುಂಬಕ್ಕೆ ಪ್ರೇರಕ ಶಕ್ತಿ. ಸದ್ವರ್ತನೆಯ ದಂಪತಿಗಳು ಸಮಾಜಕ್ಕೆ ಸತ್ಪ್ರಜೆಗಳನ್ನೇ ನೀಡುತ್ತಾರೆ. ತಮ್ಮ ಸಂತಾನಕ್ಕೆ ಉತ್ತಮ ಸಂಸ್ಕಾರವನ್ನು ನೀಡಿ ಸತ್ಪ್ರಜೆಗಳನ್ನಾಗಿ ಮಾಡುವ ಜವಾಬ್ದಾರಿ ದಂಪತಿಗಳದ್ದಾಗಿರುತ್ತದೆ.

ಗಂಡಹೆಂಡತಿಯ ದಾಂಪತ್ಯ ಜೀವನದಲ್ಲಿ ಮರಣದವರೆಗೆ ಹಲವಾರು ಸ್ತರಗಳಿರುತ್ತವೆ. ಮದುವೆ, ಒಸಗೆ, ಗರ್ಭದಾನ, ಸಂತಾನ, ಮಕ್ಕಳ ಪಾಲನೆ, ಪೋಷಣೆ, ಮರಣ ಮುಂತಾದವು ಬಹುಮುಖ್ಯವಾದವು. ಬದುಕಿನ ಈ ಎಲ್ಲ ಸ್ತರಗಳನ್ನು ಕುರಿತು ಜನಪದರು ಗೀತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಜನನ ಜನಪದರಿಗೆ ಹೆಮ್ಮೆಯ ಸಂಗತಿ. ನವ ಶಿಶುವನ್ನು ಲೋಕಕ್ಕೆ ಸ್ವಾಗತಿಸುತ್ತ ಹಾರೈಸುತ್ತಾರೆ. ಮರಣದಲ್ಲಿ ನೋವನ್ನು ಮಿಡಿಯುತ್ತಾರೆ. ಶುಭ ಸಮಾರಂಭಗಳಲ್ಲಿ ಸಂತೋಷದಿಂದ ನಲಿಯುತ್ತಾರೆ. ಈ ಎಲ್ಲಾ ಸಂದರ್ಭಗಳು ಸಾಹಿತ್ಯದ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಗಂಡು ಹೆಣ್ಣಿನ ನಡುವಿನ ಪ್ರೇಮ ಅವರ ಗೀತೆಗಳಲ್ಲಿ ಜೀವ ತಳೆದಿದೆ. ಅತ್ಯಂತ ಸಹಜ ಅಭಿವ್ಯಕ್ತಿಯ ಈ ಗೀತೆಗಳು ಅರ್ಥಗರ್ಭಿತವಾಗಿವೆ. ಸರಳ ಭಾಷೆಯ ಜನಪದ ಗೀತೆಗಳು ಶಿಷ್ಟ ಕಾವ್ಯಗಳಿಗಿಂತ ಭಿನ್ನವಾಗಿ ವಿನೂತನವಾಗಿರುತ್ತವೆ. ಇದು ಜನಪದ ಗೀತೆಗಳ ಅಂತಃಶಕ್ತಿಯೂ ಕೂಡ. ಹೆಂಡತಿಯ ಸೌಂದರ್ಯವನ್ನು ಕಂಡು ಗಂಡನೊಬ್ಬ ಹೀಗೆ ವರ್ಣಿಸುತ್ತಾನೆ.

ಸಂಗಾತಿ ಹೆಣ್ಣು ಜಂಬು ನೇರಿಲೆ ಹಣ್ಣು
ಮುಂಗಯ್ಯ ಹಿಡಿದು ನಗಿಸೋಳು । ಮುಖಭಾವ
ಮುಂಗಾರು ಮಿಂಚು ಹೊಳೆದಂಗೆ । (ಹಲಸಂಗಿ ಗೆಳೆಯರು, ೧೯೩೧, ಪು–೭೬)

ಹೆಂಡತಿ ಸೌಂದರ್ಯವನ್ನು ಜಂಬುನೇರಳೆಗೂ, ಮುಖದ ಕಾಂತಿಯನ್ನು ಮಿಂಚಿಗೂ ಹೋಲಿಸಲಾಗಿದೆ. ಅವಳ ಅಂಗ ಸೌಷ್ಟವವನ್ನು, ಮನದ ಪಕ್ವತೆಯನ್ನು, ಸೌಂದರ್ಯವನ್ನು ಮತ್ತು ಮೈಬಣ್ಣ ಕಾಂತಿಯನ್ನು ಜಂಬುನೇರಳೆ ಹಣ್ಣು ಧ್ವನಿಸುತ್ತದೆ. ರಸಿಕ ಪ್ರವೃತ್ತಿಯ ಜನಪದ ಕವಿಯೊಬ್ಬ ಹೆಣ್ಣಿನ ಸ್ವಭಾವ ಸೌಂದರ್ಯದ ಕುರಿತು ಚಿತ್ರಣ ಒಡಮೂಡಿದೆ. ಕೊನೆಯ ಸಾಲಿನಲ್ಲಿ ಮೂಡಿದ ಉಪಮಾನ ಸೊಗಸಾಗಿದೆ. ಮುಂಗಾರಿನಲ್ಲಿ ಮಿಂಚು ಕಣ್ಣು ಕೋರೈಸುವಂತೆ ಮಿನುಗುತ್ತದೆ. ಗಂಡನಿಗೆ ತನ್ನ ಸಂಗಾತಿಯ ಮುಖಭಾವ ಆ ಮಿಂಚಿಗೆ ಸಮನಾಗಿ ತೋರಿದೆ. ಗಂಡ–ಹೆಂಡತಿಯ ಪ್ರೀತಿಗೆ ಪೂರಕವೆಂಬಂತೆ ಅಭಿವ್ಯಕ್ತಗೊಂಡಿದೆ.

ಗಂಡ–ಹೆಂಡತಿಯ ನಡುವಿನ ಸಂಬಂಧ ಸದಾಕಾಲ ಒಂದೇ ರೀತಿಯಲ್ಲಿರುತ್ತದೆ ಎಂದು ಹೇಳಲಾಗುವುದಿಲ್ಲ. ಮೈಮನಸ್ಸು, ಕೋಪತಾಪಗಳು ಬಂದು ಹೋಗುವುದೂ ಉಂಟು. ಈ ಮೈಮನಸ್ಸುಗಳಿಂದ, ಮುನಿಸುಗಳಿಂದ ಗಂಡಹೆಂಡಿರ ನಡುವಿನ ಸಂಬಂಧ ಭದ್ರಗೊಳ್ಳುತ್ತದೆ ಹೊರತು ಅದು ಶಿಥಿಲಗೊಳ್ಳುವುದಿಲ್ಲ. 'ಗಂಡಹೆಂಡಿರ ಜಗಳ ಗಂಧ ತೀಡೀದಾಂಗ' ಗಂಧವನ್ನು ಉಜ್ಜಿದಷ್ಟು

ಅದರ ಪರಿಮಳ ಹೆಚ್ಚುತ್ತದೆ. ಗಂಡಹೆಂಡತಿಯ ನಡುವಿನ ಮುನಿಸು ಅವರ ಸಂಬಂಧವನ್ನು ಭದ್ರಗೊಳಿಸುತ್ತದೆ.

ಮಡದೀನ ಬಡಿದಾನ ಮನದಾಗ ಮರುಗ್ಯಾನ
ಒಳಗ್ಹೋಗಿ ಸೆರಗ ಹಿಡಿಯೂತ । ಕೇಳ್ಯಾನ
ನಾ ಹೆಚ್ಚೊ ನಿನ್ನ ತವರ್ಹೆಚ್ಚೊ । (ವಿನೀತ ರಾಮಚಂದ್ರರಾಯ, ೧೯೬೦, ಪು-೫೦)

ತವರೂರಿಗೆ ಹೋಗುವುದಾಗಿ ಹಠ ಹಿಡಿದ ಹೆಂಡತಿಯನ್ನು ಗಂಡ ಹೊಡೆದಿದ್ದಾನೆ. ಆಮೇಲೆ ಅವನಿಗೆ ತನ್ನ ಮೂರ್ಖತನದ ಅರಿವಾಗಿದೆ. ಅವನು ಮುಸುಮುಸು ಅಳುತ್ತಿರುವ ಮಡದಿಯ ಬಳಿಗೆ ಸಾರಿ ರಮಿಸುತ್ತಾನೆ. ತಾನು ಮಾಡಿದ ತಪ್ಪನ್ನು ಒಪ್ಪಿಕೊಳ್ಳುತ್ತಾನೆ. ಈ ಮನೋಧರ್ಮ ವರ್ತನೆಗಳು ಜನಪದರ ಹೃದಯ ಪರಿಶುದ್ಧತೆಗೆ ಧ್ಯೋತಕವಾಗಿವೆ.

ಗಂಡನಿಗಾಗಿ ದೇಹತ್ಯಾಗ ಮಾಡಿದ 'ಸತಿಸಹಗಮನ'ದ ಅನೇಕ ಕುರುಹುಗಳು ಭಾರತೀಯ ನೆಲದಲ್ಲಿವೆ. ಹೆಂಡತಿಯ ಮೇಲಿನ ಪ್ರೇಮಕ್ಕಾಗಿ ತಾಜ್‌ಮಹಲ್‌ನ್ನೇ ಕಟ್ಟಿಸಿದ ದೃಷ್ಟಾಂತಗಳು ಇತಿಹಾಸದಲ್ಲಿವೆ. ಗಂಡನ ಸಾವನ್ನು ನಿರಾಕರಿಸಿ ಯಮನಿಂದಲೇ ಗಂಡನ ಪ್ರಾಣ ತಿರುಗಿ ಪಡೆದ ಸಾವಿತ್ರಿಯ ಪುರಾಣ ಕಥೆಗಳಿವೆ. "ರಾಜಕುಮಾರನೊಬ್ಬ ಮದುವೆಯಿಲ್ಲದೆ ಸತ್ತಾಗ ಮದುವೆಯಿಲ್ಲದೇ ಆತನನ್ನು ಹೂಳುವಂತಿಲ್ಲ ಎಂಬ ಕಾರಣಕ್ಕಾಗಿ ಸಾವಿರ ಹೊನ್ನು ಕೊಟ್ಟು ಹೆಣ್ಣು ತರುತ್ತಾರೆ. ಶವವನ್ನೇ ಮದುವೆಯಾದ ಆ ಹುಡುಗಿ ನಿಷ್ಠೆಯಿಂದ ವ್ರತಮಾಡಿ ಅವನನ್ನು ಬದುಕಿಸಿಕೊಳ್ಳುತ್ತಾಳೆ." (ಕೆ. ಆರ್.ಸಂಧ್ಯಾರೆಡ್ಡಿ, ೧೯೮೨, ಪು-೬) ಇಂತಹ ಪಾತಿವ್ರತ್ಯದ ಕಥೆಗಳು ಜನಪದರಲ್ಲಿ ಸಾಕಷ್ಟಿವೆ. ಪತಿ-ಪತ್ನಿಯರ ನಡುವಿನ ಬಾಂಧವ್ಯಕ್ಕೆ ಸಾಕ್ಷಿಯಾಗಿ ನಿಂತಿವೆ. ಪತಿ-ಪತ್ನಿಯರ ಇಂದು ನಿನ್ನೆಯದಲ್ಲ ಅದು ಪ್ರಾಚೀನ ಪರಂಪರೆಯಿಂದ ಬಳುವಳಿಯಾಗಿ ಬಂದದ್ದು ಎಂಬ ನಿದರ್ಶನ ನೀಡುತ್ತದೆ.

ಹೀಗೆ ಜನಪದರ ದಾಂಪತ್ಯದ ಬದುಕು ಪರಿಶುದ್ಧವಾದುದು, ಪರಿಪೂರ್ಣವಾದುದು. ಕನ್ನಡ ಜನಪದಗೀತೆಗಳಲ್ಲಿ ಮೂಡಿ ನಿಂತಿರುವ ದಾಂಪತ್ಯ ಜೀವನ ಅಪ್ರತಿಮವಾದುದು. ಶಿಷ್ಟ ಸಾಹಿತ್ಯಕ್ಕೂ ಮಿಗಿಲಾದ ಅರ್ಥ ಸಂಪತ್ತು ಜನಪದ ಗೀತೆಗಳಲ್ಲಿ ತುಂಬಿನಿಂತಿದೆ. ಆ ಶಬ್ದ ಸಂಪತ್ತಿನ ಹಿರಿಮೆಯನ್ನು ಓದಿಯೇ ಆನಂದಿಸಬೇಕು.

### ೪.೨.೨ ಅತ್ತೆ – ಸೊಸೆ

ಮದುವೆಯ ಸಂಪ್ರದಾಯದಿಂದ ಹಲವಾರು ಸಂಬಂಧಗಳು ಹೆಣೆದುಕೊಳ್ಳುತ್ತವೆ. ಅವುಗಳಲ್ಲಿ ತೀರ ಹತ್ತಿರದ ಸಂಬಂಧವೆಂದರೆ ಅತ್ತೆಯದು. ಹೆಣ್ಣಿಗೆ ಗಂಡನ ತಾಯಿ ಅತ್ತೆಯಾಗುತ್ತಾಳೆ. ತಂದೆಯ ತಂಗಿ ಅಥವಾ ಅಕ್ಕ, ಮಾವನ ಹೆಂಡತಿ ಇವರೆಲ್ಲರೂ ಸಂಬಂಧದಲ್ಲಿ ಅತ್ತೆಯಾಗುತ್ತಾರೆ. ಆದರೆ ಇಲ್ಲಿ ವಿಶ್ಲೇಷಣೆಗೊಳಪಡುವ ಅತ್ತೆ ಗಂಡನ ತಾಯಿಯಾಗಿದ್ದಾಳೆ. ಸೊಸೆಯೆಂದರೆ ಮಗನ ಹೆಂಡತಿ. 'ಕೊಡಲಿ

ಕಾವು ಕುಲಕ್ಕೆ ಮೃತ್ಯು' ಎಂಬ ಗಾದೆಯಂತೆ ಹೆಣ್ಣಿಗೆ ಹೆಣ್ಣೇ ಶತ್ರು ಎಂಬುದನ್ನು ಅತ್ತೆ-ಸೊಸೆಯ ಕಿತ್ತಾಟದಿಂದ ಕಂಡುಕೊಳ್ಳಬಹುದು. ಇವರಲ್ಲಿ ಹೊಂದಾಣಿಕೆ ತೀರ ಕಡಿಮೆ. ಅತ್ತೆಯೆಂಬ ಅಹಂಕಾರಕ್ಕೊ ತಾನೇ ಬುದ್ಧಿವಂತಳೆನ್ನೋ ಸೊಸೆಯ ಗರ್ವಕ್ಕೊ ಒಟ್ಟಾರೆಯಾಗಿ ಇವರೀರ್ವರ ನಡುವಿನ ಬಾಂಧವ್ಯವು ಎಣ್ಣೆಸೀಗೆಕಾಯಿ ಇದ್ದಂತೆ. ಕೆಲವು ಸನ್ನಿವೇಶಗಳಲ್ಲಿ ಅತ್ತೆ ಸೊಸೆಯನ್ನು ತನ್ನ ಹೆತ್ತ ಮಗಳಂತೆ ನೋಡುತ್ತಾಳೆ. ಸೊಸೆಯೂ ಕೂಡ ಅತ್ತೆಯನ್ನು ತಾಯಿಯಂತೆ ಕಾಣುತ್ತಾಳೆ. ಆಧುನಿಕ ಕಾಲದಲ್ಲಿ ಗತಕಾಲದ ಅತ್ತೆಯ ಗಂಭೀರತೆಯೂ ಮಾಯವಾಗಿ ಇರ್ವರಲ್ಲಿಯೂ ಹೊಂದಾಣಿಕೆ ಸ್ವಭಾವವನ್ನು ಕಾಣುತ್ತೇವೆ. ಜನಪದ ಸಂಪ್ರದಾಯದಲ್ಲಿ ಸಹ್ಯ ಮತ್ತು ವೈರುಧ್ಯ ಗುಣಗಳನ್ನು ಅತ್ತೆ-ಸೊಸೆಯರ ಸಂಬಂಧಗಳನ್ನು ಕಾಣುತ್ತೇವೆ.

ಅತ್ತೆಯನ್ನು ತಾಯಿ, ಮಾವನನ್ನು ತಂದೆ ಎಂದು ಪೂಜಿಸುವ ಗರತಿಯೊಬ್ಬಳು ತಾನಿದ್ದ ಮನೆಯೇ ಕೈಲಾಸವೆಂದು ಪರಿಭಾವಿಸುತ್ತಾಳೆ. ಅತ್ತೆ-ಮಾವ, ತಂದೆ-ತಾಯಿ, ಗುರುಹಿರಿಯರಿಗೆ ವಿಧೇಯರಾಗಿದ್ದು, ಸದಾ ಅವರ ಮಾರ್ಗದರ್ಶನದಲ್ಲಿ ಬದುಕನ್ನು ನಡೆಸಿದರೆ ಅದೇ ಸ್ವರ್ಗ ಎನ್ನುವ ಭಾವನೆ ಹೊಂದಿದ ಜನಪದ ಹೆಣ್ಣುಮಗಳು ಈ ಕೆಳಗಿನಂತೆ ಹಾಡಿದ್ದಾಳೆ.

ಅತ್ತೆಮಾವರ ಪಾದ ತಂದೆತಾಯಿಯ ಪಾದ
ಮತ್ತೆ ಗಂಡನ ಶ್ರೀಪಾದ । ನೆನೆದರೆ
ಬೆನ್ ಹಿಂದೆ ಇದೆಯೊ ಕೈಲಾಸ । (ಮತಿಘಟ್ಟ ಕೃಷ್ಣಮೂರ್ತಿ, ೧೯೫೨, ಪು-೬೪)

ಸಹನಶೀಲಳಾದ ಸೊಸೆಯು ಗಂಡನೇ ಸರ್ವಸ್ವವೆಂದು ತಿಳಿದು ಬಾಳುತ್ತಾಳೆ. ತವರಿನ ನಂತರ ಗಂಡನಮನೆಯೇ ಅವಳಿಗೆ ಶಾಶ್ವತವೆಂಬುದು ಅರಿತು ಅತ್ತೆಮಾವನ ಸೇವೆಯನ್ನು ಮಾಡುತ್ತಾಳೆ. ಅವಳ ಗುಣಕ್ಕೆ ಅತ್ತೆಯೂ ಸಹಿತವಾಗಿ ಎಲ್ಲರೂ ಮಾರುಹೋಗಿ ಪ್ರೀತಿಯಿಂದ ಕಾಣುತ್ತಾರೆ. ಹಿರಿಯರಿಗೆ ನಮಸ್ಕರಿಸಿ ಅವರ ಸೇವೆ ಮಾಡುತ್ತಿದ್ದರೆ ಬೆನ್ನಹಿಂದೆಯೇ ಸ್ವರ್ಗವೆಂಬುದನ್ನು ಸ್ಪಷ್ಟಪಡಿಸುತ್ತಾಳೆ. ಬದುಕಿನ ರುಚಿಯೇ ಸಹಕಾರ, ಸೌಹಾರ್ದತೆಯಲ್ಲಿಡಗಿದೆ. ಗೌರವ, ಪ್ರೀತಿ, ವಿಶ್ವಾಸ ಮುಂತಾದವುಗಳನ್ನು ಇತರಿಗೆ ಕೊಟ್ಟು ಪಡೆದುಕೊಳ್ಳಬೇಕು. ಇದು ಜನಪದರ ಜೀವನದಲ್ಲಿ ಕಂಡುಬರುವ ಸಾಮಾಜಿಕ ಮೌಲ್ಯ. ಅಂತಹ ಸೊಸೆಯನ್ನು ಕಂಡ ಅತ್ತೆಗೂ ಮಗಳ ಅಗಲುವಿಕೆ ಇಲ್ಲವೇ ತನಗೆ ಮಗಳಿಲ್ಲವೆಂಬ ಕೊರತೆಯನ್ನು ತುಂಬಿದ ಭರವಸೆ ಮೂಡುತ್ತದೆ. ಪ್ರೀತಿಯ ಸೊಸೆಯನ್ನು ಕಂಡು ಆಕೆಗೆ ತಾಯಿಯಂತೆ ಬುದ್ಧಿವಾದ ಹೇಳುತ್ತಾಳೆ.

ನನ್ನ ಅಣ್ಣನ ಮಗಳ ನನಗೆ ಹೋಲಲಿಬ್ಯಾಡ
ನನ್ನಲ್ಲಿ ಭಾರಿ ಗುಣವಿಲ್ಲ । ಹೇಮರಡ್ಡಿ
ಮಲ್ಲಮ್ಮಗ್ಹೋಲ ನನಸೊಸಿಯ । (ಹಲಸಂಗಿ ಗೆಳೆಯರು, ೧೯೩೧, ಪು-೭೫)

ತನ್ನ ಅಣ್ಣನ ಮಗಳನ್ನೇ ಮನೆತುಂಬಿಸಿಕೊಂಡ ಗರತಿಯೊಬ್ಬಳು ತನ್ನ ಸೊಸೆಗೆ ನೀನು ನನ್ನ ಗುಣಗಳನ್ನು ಅನುಕರಣೆ ಮಾಡಬೇಡ. ನನ್ನಲ್ಲಿ ಅಂತಹ ಒಳ್ಳೆಯ ಗುಣಗಳು ಯಾವವು ಇಲ್ಲ. ಆದ್ದರಿಂದ ಹೇಮರಡ್ಡಿ ಮಲ್ಲಮ್ಮನ ಗುಣಗಳನ್ನು ಹೊಂದಿದರೆ ನಿನಗೆ ಒಳ್ಳೆಯದಾಗುತ್ತದೆ ಎಂದು ಹೇಳುತ್ತಾಳೆ. ಹೀಗೆ ಅತ್ತೆ ತನ್ನ ಸೊಸೆಗೆ ಹೇಳಲು ಕಾರಣವೇನೆಂದರೆ 'ನನ್ನಲ್ಲಿ ಸಿಡುಕು, ಕೋಪ, ಸ್ವಾರ್ಥದಂತಹ ಕೆಲವು ದುರ್ಗುಣಗಳು ಇವೆ. ಅದಕ್ಕಾಗಿ ನೀನು ನನ್ನನ್ನು ಹೋಲಬೇಡ ಎಂದು ಸೊಸೆಗೆ ಬುದ್ಧಿವಾದ ಹೇಳುತ್ತಾಳೆ. ಇಡೀ ಸ್ತ್ರೀ ಕುಲಕ್ಕೆ ಭೂಷಣವಾದ ಹೇಮರೆಡ್ಡಿ ಮಲ್ಲಮ್ಮನ ಗುಣಗಳು ನಿನಗೆ ಬರಲಿ' ಎಂದು ಸೊಸೆಗೆ ಹಾರೈಸುತ್ತಾಳೆ. ಸೊಸೆಯ ಒಳ್ಳೆಯತನ ಕಂಡು ಅತ್ತೆಯೂ ತನ್ನ ವರ್ತನೆಯಲ್ಲಿ ಬದಲಾವಣೆ ತಂದುಕೊಂಡಿದ್ದಾಳೆ. ಮಗ ಮತ್ತು ಸೊಸೆಯ ಜೋಡಿಯನ್ನು ಕಂಡು ಮನದುಂಬಿ ಹೀಗೆ ಹರಸುತ್ತಾಳೆ.

ಗಂಡಹೆಂಡಿರ ಜೋಡಿ ಮುತ್ತು ರತ್ನದ ಜೋಡಿ
ಕಂಡವರು ಕರುಬ್ಯಾರು ಸೊಸಿಯೆ । ಬೈಗಾಗ
ಮುತ್ತೀನ ದ್ರಿಷ್ಟಿ ತೆಗೆದೇನು । (ಎಸ್. ಜಿ. ಸಿದ್ಧರಾಮಯ್ಯ, ೨೦೦೬, ಪು–೨೮೮)

ಮಗ ಮತ್ತು ಸೊಸೆಯ ಜೋಡಿಯು ಮುತ್ತು ರತ್ನದಂತೆ ಹೋಲಿಕೆಯುಳ್ಳ ಜೋಡಿಯಾಗಿದೆ. ಇಂತಹ ಜೋಡಿಯನ್ನು ಕಂಡಂತಹ ಜನರು ಕಂಡು ಹೊಟ್ಟೆಕಿಚ್ಚುಪಡುತ್ತಿದ್ದಾರೆ. ಅವರ ಜೋಡಿಯ ನೋಡಿ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದಾರೆ. ಅಂತಹ ಜನರ ಕಣ್ಣೋಟದಿಂದ ನಿಮಗೆ ತೊಂದರೆಯಾದೀತು? ಎಂದು ಅತ್ತೆ ಸೊಸೆಗೆ ಕಿವಿಮಾತು ಹೇಳಿ ಸಂಜೆಯಲ್ಲಿ ನಿಮಗೆ ದೃಷ್ಟಿ (ನೆದರು) ತೆಗೆಯುತ್ತೇನೆಂದು ಹೇಳಿ ಸಂತೋಷಪಡುತ್ತಾಳೆ. ಮಗ–ಸೊಸೆಯನ್ನು ಕಂಡು ಹೆಮ್ಮೆಪಡುತ್ತಾಳೆ. ಅತ್ತೆ–ಸೊಸೆಯರ ಸಂಬಂಧವು ಆರಂಭದಿಂದ ಕೊನೆಯವರೆಗೂ ಇರುತ್ತದೆ. ಕೆಲವೊಮ್ಮೆ ಮದುವೆಯಾದ ಹೊಸತರಲ್ಲಿ ಮಾತ್ರ ಹೊಂದಾಣಿಕೆ ಕಂಡುಬಂದು ನಂತರ ಕಾಲಕಳೆದಂತೆ ಇರ್ವರ ನಿಜರೂಪ ತಿಳಿಯತೊಡಗುತ್ತದೆ. ಅತ್ತ ಅತ್ತೆ ಬದಲಾದರೆ ಇತ್ತ ಸೊಸೆಯೂ ಬದಲಾಗುತ್ತಾಳೆ.

ಕೆಲವು ಅತ್ತೆ–ಸೊಸೆಯರಲ್ಲಿ ಅನ್ಯೋನ್ಯತೆ ಕಂಡುಬಂದರೆ, ಇನ್ನು ಕೆಲವು ಅತ್ತೆ–ಸೊಸೆಯರ ಸಂಬಂಧಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಕೈಯಲ್ಲಿನ ಐದು ಬೆರಳುಗಳು ಒಂದಕ್ಕೊಂದು ಹೇಗೆ ಸಮವಿಲ್ಲವೋ ಅಂತೆಯೇ ಲೋಕದ ಅತ್ತೆ–ಸೊಸೆಯರಲ್ಲಿ ಭೇದಗಳಿರುತ್ತವೆ. ಕೆಲವು ಸಂದರ್ಭಗಳಲ್ಲಿ ಅತ್ತೆ ಕೆಟ್ಟವಳಾಗಿದ್ದರೆ ಇನ್ನೂ ಕೆಲವು ಸಂದರ್ಭಗಳಲ್ಲಿ ಸೊಸೆ ದುರ್ಗುಣಿಯಾಗಿರುತ್ತಾಳೆ. ಒಂದು ಸಮಾಜದಲ್ಲಿ ಎಲ್ಲ ಬಗೆಯ ಮನುಷ್ಯರು ಇರುವುದು ಸಹಜ. ಅತ್ತೆಯ ಕಾಟವನ್ನು ತಾಳಲಾರದೇ ನೋವು ನುಂಗಿಕೊಂಡ ಸೊಸೆಯೊಬ್ಬಳು ಬೀಸುವ ಕಲ್ಲಿನ ಮುಂದೆ ಕುಳಿತುಕೊಂಡು ತನ್ನ ನೋವು ತೋಡಿಕೊಂಡ ಬಗೆಯನ್ನು ಕೆಳಗಿನ ಪದ್ಯದಲ್ಲಿ ಕಾಣುತ್ತೇವೆ.

ಅತ್ತೆ ಮಾಡುವ ಮಾಟ ಯಾರಿಗೆ ಹೇಳಾಲಿ
ನಾನಿದ್ರು ಕೂಡ ಭೂಮೀಲಿ । ನಾಯಿಯ
ಮರಿಯಂತ ಜನ್ಮ ನನಗೀಗ । (ಎಸ್. ಕೆ. ಕರೀಂಖಾನ್, ೧೯೫೫, ಪು–೬೫)

ಸಹನಶೀಲಳಾದ ಸೊಸೆಯು ಅತ್ತೆಮನೆಯ ಕಷ್ಟವನ್ನು ನುಂಗಿಕೊಂಡು ಬದುಕುತ್ತಾಳೆ. ಆ ಕಷ್ಟವು ಅತಿಯಾದಾಗ ದೇವರ ಮೊರೆ ಹೋಗುತ್ತಾಳೆ. ವಿನಃ ಯಾರೊಂದಿಗೂ ನೋವನ್ನು ಹಂಚಿಕೊಳ್ಳುವುದಿಲ್ಲ. ಅತ್ತೆಯ ಕೊಡುವ ಕಿರುಕುಳವನ್ನು ಯಾರ ಮುಂದೆ ಹೇಳಿಕೊಳ್ಳಬೇಕು. ಪತಿ, ಮಾವ, ಮೈದುನರೆಲ್ಲರೂ ಅತ್ತೆಯ ಮಾತಿಗೆ ಉತ್ತರ ನೀಡುವುದಿಲ್ಲ. ಆದ್ದರಿಂದ ಬೀಸುವ ಕಲ್ಲಿನ ಮುಂದೆ ಕುಳಿತು ತನ್ನ ಒಡಲ ದುಃಖವನ್ನು ಹಂಚಿಕೊಳ್ಳುತ್ತಾಳೆ. ನಾನು ಭೂಮಿ ಮೇಲೆ ಬದುಕಿದ್ದರು ನಾಯಿ ಮರಿಯಂತೆ ನನ್ನ ಬದುಕು. ಅವರ ಹಾಕಿದರೆ ಉಣಬೇಕು, ಕರೆದರೆ ಹೋಗಬೇಕು ಎಂದು ಬಹಳ ನೊಂದು ನುಡಿಯುತ್ತಾಳೆ. ಸಾಧ್ಯವಾದಷ್ಟು ಮಟ್ಟಿಗೆ ಅತ್ತೆಯೂ ಕೂಡ ತನ್ನಂತೆ ಹೆಣ್ಣೆಂದು ತಿಳಿದು ಅವಳಲ್ಲಿ ವಿನಂತಿಸಿಕೊಳ್ಳುತ್ತಾಳೆ.

ಅತ್ತೀಯ ಮನಿಯಾಗ ಅರವತ್ತು ಗಂಗಾಳ
ಬೆಳಗೂತಿನಿ ಅತ್ತಿ ಬೈಬ್ಯಾಡ । ನಮ್ಮವರು
ಸರಮುತ್ತು ಮಾಡಿ ಸಲುವ್ಯಾರ । (ಆರ್. ಎಸ್. ಪಂಚಮುಖಿ, ೧೯೫೩, ಪು–೧)

ತವರಿನಲ್ಲಿ ಮಲ್ಲಿಗೆಯ ಹಾಗೆ ಅಣ್ಣತಮ್ಮರ ನಡುವೆ, ಅಕ್ಕತಂಗಿಯರ ನಡುವೆ ತಂದೆ–ತಾಯಿ ನನ್ನನ್ನು ಮುತ್ತಾಗಿ ಸಲುಹಿದ್ದಾರೆ. ಆದಕಾರಣ ನನ್ನನ್ನು ಬಯ್ಯಬೇಡೆಂದು ಅತ್ತೆಗೆ ವಿನಂತಿಸಿಕೊಳ್ಳುತ್ತಿದ್ದಾಳೆ. ಮನೆಯಲ್ಲಿ ಅರವತ್ತು ತಟ್ಟೆಯನ್ನು, ಪಾತ್ರೆ, ಪಗಡ ಬೆಳಗುತ್ತೇನೆ. ಅಲ್ಲದೇ ನೀವು ಹೇಳಿದ ಕೆಲಸವನ್ನು ಮಾಡುತ್ತೇನೆಂದು ಭರವಸೆ ನೀಡುವ ಮೂಲಕ ವಿನಂತಿಸಿಕೊಳ್ಳುತ್ತಿದ್ದಾಳೆ. ತವರಲ್ಲಿ ಯಾವ ಕೆಲಸವನ್ನು ಮಾಡಲು ಬಿಡದೆ ನನ್ನ ತಂದೆತಾಯಿ ಅಂಗೈ ಅರಗಿಣಿಯಂತೆ ತನ್ನನ್ನು ಬೆಳೆಸಿದ್ದಾರೆ. ನಾನು ಕೆಲಸವನ್ನು ಕಲಿತಿದ್ದು ಗಂಡನ ಮನೆಯಲ್ಲಿಯೇ. ಆದ್ದರಿಂದ ಕಾಲಾವಕಾಶ ಕೊಡಿ, ಎಲ್ಲ ಕೆಲಸವನ್ನು ಕಲಿಯುತ್ತೇನೆಂದು ಕಿರುಕುಳ ಕೊಡುವ ಅತ್ತೆಯನ್ನು ಸಮಾಧಾನಪಡಿಸುತ್ತಾಳೆ. ಹೀಗೆಯೇ ಸೊಸೆಯನ್ನು ಕಾಡುವ ಅತ್ತೆಯರನ್ನು ಕಾಣುತ್ತೇವೆ. ಅತ್ತೆಗೆ ಹೊಂದಿಕೊಂಡು ಹೋಗುವ ಮನೋಭಾವವನ್ನು ಸೊಸೆ ತೋರಿಸುತ್ತಾಳೆ.

ಕೆಲವೊಂದು ಸಂದರ್ಭದಲ್ಲಿ ಅತ್ತೆಗೆ ಎದುರು ಮಾತನಾಡದೇ ಬದುಕು ನಡೆಸುವ ಸೊಸೆಯಂದಿರು ಅವರಿಷ್ಟದಂತೆಯೇ ನಡೆದುಕೊಳ್ಳುತ್ತಿದ್ದರು. ಕಾಲಕಳೆದಂತೆ ಸೊಸೆಯ ಗುಣದಲ್ಲಿ ಬದಲಾವಣೆ ಕಂಡಿತು. ಮೃದುಸ್ವಭಾವದ ಅತ್ತೆಯನ್ನು ಪೀಡಿಸುವ, ಕಾಡಿಸುವ, ಮನೆಯಿಂದಲೇ ಹೊರದೂಡುವ ಪ್ರವೃತ್ತಿಯ ಸೊಸೆಯನ್ನು ಕಾಣಬಹುದು. ಗಂಡನ ಚಂಚಲತೆ, ಮೋಹವನ್ನು ಮುಂದಿಟ್ಟುಕೊಂಡು ವಯೋವೃದ್ಧರಾದ ಅತ್ತೆಮಾವರನ್ನು ಮನೆಯಿಂದ ಹೊರದೂಡಿದ ಪ್ರಸಂಗಗಳು

ಜನಪದರಲ್ಲಿವೆ. ಅತೀ ಸಂತೋಷದಿಂದ ಸೊಸೆ ಬರುತ್ತಾಳೆಂದು ಅವಳ ಕೈಯಲ್ಲಿ ಬಿಸಿ ಅಡುಗೆ ಮಾಡಿಸಿಕೊಂಡು ತಿಂದು ನೆಮ್ಮದಿಯಿಂದ ಇರಬಹುದೆಂದು ಕನಸು ಕಾಣುತ್ತಾಳೆ. ಎಲ್ಲ ಜವಾಬ್ದಾರಿ ಅವಳಿಗೆ ವಹಿಸಿದರಾಯಿತೆಂದು ಮಗನ ಮದುವೆ ಮಾಡಿದ ಗರತಿಯೊಬ್ಬಳ ಪಾಡಿಲ್ಲಿ ಹಾಡಾಗಿದೆ.

ಸೊಸಿಯು ಬರತಾಳಂತ ಭಾಳ ಮನದಾಗ
ಸೊಸಿ ಬಂದು ಮಗನ ಕಸಗೊಂಡು । ಬಾಳ್ವಾಗ
ಮುಗಿಲೀಗಿ ಬಾಯ ತಗದಾಳ । (ಹಲಸಂಗಿ ಗೆಳೆಯರು, ೧೯೩೧, ಪು-೭೮)

ಹರೆಯಕ್ಕೆ ಬಂದ ಮಗನ ಮದುವೆ ಮಾಡಬೇಕೆಂದು ನಿಶ್ಚಯಿಸಿದ ಗರತಿಯೊಬ್ಬಳು ಬಹಳ ಖುಷಿಯಿಂದ ಓಡಾಡಿ ಸುಂದರವಾದ ಮಗನಿಗೊಪ್ಪುವ ಹೆಣ್ಣೊಂದನ್ನು ಹುಡುಕಿ ಮದುವೆ ಮಾಡುತ್ತಾಳೆ. ಸೊಸೆಯನ್ನು ಮನೆ ತುಂಬಿಸಿಕೊಂಡು ಮನೆಗೆ ಬರುತ್ತಾಳೆ. ಅವಳ ಕೈಯಲ್ಲಿ ಮನೆಯ ಜವಾಬ್ದಾರಿಯನ್ನು ನೀಡಿ, ತಾನು ನಿಶ್ಚಿಂತೆಯಿಂದ ಕಾಲಕಳೆಯಬೇಕೆಂದು ಯೋಚನೆ ಮಾಡುತ್ತಾಳೆ. ಆದರೆ ಬಂದ ಸೊಸೆಯು ಒಂದೇ ವರುಷದಲ್ಲಿ ಮಗನನ್ನು ತನ್ನಿಂದ ದೂರಮಾಡಿ, ತನ್ನನ್ನು ಕಷ್ಟಕ್ಕೀಡು ಮಾಡಿದಾಗ ನೊಂದುಕೊಳ್ಳುತ್ತಾಳೆ. ಅತ್ತೆಯ ಬಾಳಿನಲ್ಲಿ ಸೊಸೆ ಬಂದು ಖುಷಿ ಕೊಡದೇ ಕಷ್ಟವನ್ನೇ ನೀಡುತ್ತಾಳೆ.

ಸೊಸೆಯಾಗಿ ಬಂದವಳು ಹೊರಗಿನವಳಲ್ಲ. ಆಕೆ ಸ್ವಂತ ಅಣ್ಣ ಮಗಳು ಮೇಲಾಗಿ ಕರುಳಬಳ್ಳಿ. ಅವಳನ್ನೇ ತಂದುಕೊಂಡರೆ ಇರುವ ಒಬ್ಬ ಮಗನನ್ನು ಹಾಗೂ ಇದುವರೆಗೆ ಮಗನನ್ನು ಬೆಳೆಸಲು ಕಷ್ಟಪಟ್ಟ ತನ್ನನ್ನು ಚೆನ್ನಾಗಿ ನೋಡಿಕೊಳ್ಳುತ್ತಾಳೆಂಬ ಭಾವನೆ. ಕುಟುಂಬದಲ್ಲಿ ಏನೇ ಏರುಪೇರಾದರೂ ಎಲ್ಲ ಸುಗಮವಾಗುವುದೆಂಬ ನಂಬಿಕೆ ಆಕೆಯದು. ಆದರೆ ಆಗಿದ್ದೇ ಬೇರೆ. ವಿಧಿ ಆಟವನ್ನು ಬಲ್ಲವರು ಯಾರು? ಯಾರ ಅಂತರಂಗದಲ್ಲಿ ಏನು ಅಡಗಿದೆಂಬುದನ್ನು ಅರಿಯಲು ಸಾಧ್ಯವೇ? ಯಾವ ಹುತ್ತದಲ್ಲಿ ಹಾವಿದೆ ಎಂದು ನಿಖರವಾಗಿ ಹೊರಗೆ ನಿಂತು ಹೇಳಲು ಸಾಧ್ಯವಾಗದು. ತಾನು ಸೊಸೆಗೆ ಬುದ್ಧಿ ಹೇಳುತ್ತಾಳೆ. ಕೇಳದಿದ್ದಾಗ ತನ್ನ ಸ್ವಂತ ಅಣ್ಣನಲ್ಲಿ ತನ್ನ ನೋವನ್ನು ತೋಡಿಕೊಳ್ಳುತ್ತಾಳೆ.

ಅಣ್ಣನ ಮಗಳಂತ ಹಮ್ಮೀಲಿ ನಾ ತಂದೆ
ಉಣ್ಣಾಳ ಮುಸಕ ತಗಿಯಾಳ । ಅಣ್ಣಯ್ಯ
ಮನ್ನುಣಿ ಹೇಳ ಮಗಳಿಗೆ । (ಬಿ.ಎಸ್. ಗದ್ದಗಿಮಠ, ೧೯೫೬, ಪು-೬೫)

ಅಣ್ಣನ ಮಗಳೆಂದು ಹೆಮ್ಮೆಯಿಂದ ತನ್ನ ಮಗನಿಗೆ ತಂದು ಮದುವೆ ಮಾಡಿದೆ. ಆದರೆ ಸೋಗಿನ ಸೊಸೆಯ ದಿನವೊಂದು ತಗಾದೇ ತೆಗೆದು ನೆಮ್ಮದಿ ಕೆಡಿಸುತ್ತಿದ್ದಾಳೆ. ಹಠದ ಸ್ವಭಾವದಿಂದ ತನಗೆ ಬೇಕಾದ್ದನ್ನು ಪಡೆಯುವ ಅಸ್ತ್ರವೇ ಊಟ ಬಿಡುವುದು. ಅಲ್ಲದೇ ಮಾಡಿದ ಅಡುಗೆಯನ್ನು ಊಟ ಮಾಡಿದರೆ ಕೊನೆಗೆ ಪಾತ್ರೆಗಳನ್ನಾದರೂ ತೊಳೆಯಬೇಕಾಗುತ್ತದೆ ಎಂದು ಮುಸುಕು ಹಾಕಿ ಮಲಗಿದಂತೆ ನಾಟಕವಾಡುತ್ತಿರುವ ಸೊಸೆಯ ಗುಣವನ್ನು ಅತ್ತೆ ಗಮನಿಸುತ್ತಾಳೆ. ಆಗ ತನ್ನಣ್ಣನಿಗೆ 'ನಿನ್ನ

ಮಗಳು ಉಣ್ಣುತ್ತಿಲ್ಲ. ಕೋಣೆಯಲ್ಲಿ ಹೊದ್ದುಕೊಂಡು ಮಲಗಿದ್ದಾಳೆ. ಅವಳಿಗೆ ಬುದ್ಧಿ ಹೇಳು' ಎಂದು ವಿನಿಂತಿಸಿಕೊಳ್ಳುತ್ತಾಳೆ. ಆದರೂ ಕೇಳದ ಸಂದರ್ಭದಲ್ಲಿ ಇಳಿವಯಸ್ಸಿನಲ್ಲೂ ಅತ್ತೆಯಾದವಳು ಸೊಸೆಯಿಂದ ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಸಹ್ಯ ಹಾಗೂ ವೈರುಧ್ಯಗಳಿಂದ ಕೂಡಿದ ಎರಡು ರೀತಿಯ ಗುಣಗಳನ್ನು ಹೊಂದಿರುವ ಅತ್ತೆ-ಸೊಸೆ ನಡುವಿನ ಸಂಬಂಧಗಳನ್ನು ಜನಪದ ಗೀತೆಗಳಲ್ಲಿ ಕಾಣುತ್ತೇವೆ.

**೪.೨.೩ ಮಾವ – ಸೊಸೆ**

ಸಂಬಂಧಗಳಲ್ಲಿ ಕೆಲವು ಒಡಹುಟ್ಟಿನಿಂದ ರೂಪುಗೊಂಡರೆ, ಇನ್ನೂ ಕೆಲವು ಬೀಗತನ ಬೆಳೆಸುವ ಮೂಲಕ ಉಂಟಾಗುತ್ತದೆ. ಅಂತವುಗಳಲ್ಲಿ ಮಾವ ಮತ್ತು ಸೊಸೆಯ ನಡುವಿನ ಸಂಬಂಧವೂ ಒಂದು. ಇಲ್ಲಿ ಚರ್ಚಿಸಲಾದ ಮಾವನೆಂದರೆ ಮದುವೆಯಾದ ಗಂಡನ ಅಪ್ಪ. ಸೊಸೆಯೆಂದರೆ ಮಗನ ಹೆಂಡತಿ. ಆದ್ದರಿಂದ ಇದು ಮದುವೆಯ ಬಂಧದಿಂದ ಉಂಟಾದ ಸಂಬಂಧ. ಮದುವೆಗೂ ಮುನ್ನ ಹೆಣ್ಣುಮಗಳು ತನ್ನ ಗಂಡನಾಗುವವನ ಬಗೆಗೆ, ಗಂಡನ ಮನೆ-ಮನೆಯವರ ಬಗೆಗೆ ಸಾಕಷ್ಟು ಕನಸುಗಳನ್ನು ಕಟ್ಟಿಕೊಂಡವಳಾಗಿರುತ್ತಾಳೆ. ಮದುವೆ ನಂತರ ಅತ್ತೆ-ಮಾವ ಮತ್ತು ಗಂಡನಿಂದ ಪ್ರೀತಿ, ಸಹಕಾರವನ್ನು ಅವಳು ನಿರೀಕ್ಷಿಸುತ್ತಿರುತ್ತಾಳೆ. ಸಹಕಾರ ದೊರೆಯದಿದ್ದಾಗ ಸೋತು ಸುಣ್ಣವಾಗುತ್ತಾಳೆ. ಇಂತಹ ಸಂದರ್ಭಗಳಲ್ಲಿ ಗಂಡ, ಅತ್ತೆ, ಮಾವ ಯಾರೊಬ್ಬರಾದರೂ ಅನುಕಂಪ ತೋರಿಸುತ್ತಾರೆ. ನೀರಿನ ಸೆಳೆವಿಗೆ ಸಿಕ್ಕ ಇರುವೆಗೆ ದೊರೆತ ಎಲೆಯಂತೆ ಅನುಕಂಪದಿಂದ ಬದುಕು ನಡೆಸುತ್ತಾಳೆ. ತಾನು ಬಯಸುವ ಕನಸಿನ ಗಂಡನ ಮನೆ ದೊರೆತರೆ ಆಕೆಗೆ ಅತೀವ ಆನಂದ. ಆಕೆಯ ಬದುಕು ಸುಂದರಗೊಳ್ಳುವುದಲ್ಲದೇ ಅತ್ತೆ ಮಾವನ ಕಾಳಜಿ, ಗಂಡನ ಪ್ರೀತಿಯಲ್ಲಿ ಆಕೆ ತವರನ್ನೇ ಮರೆಯುವ ಪ್ರಸಂಗ ಬರಬಹುದು. ಅದಕ್ಕೆ ಕಾರಣ ಕೆಳಗಿನ ಗೀತೆಯಲ್ಲಿ ಅಭಿವ್ಯಕ್ತಗೊಂಡಿದೆ.

ಆಕಳದಂಥಾ ಅತ್ತಿ ಗೋಕುಲದಂಥಾ ಮಾವ
ಶ್ರೀ ಕೃಷ್ಣನಂಥಾ ಪತಿರಾಯ । ನಿದ್ದರ
ಸಾಕೀದ ತವರ ಮರತೇನ । (ಹಲಸಂಗಿ ಗೆಳೆಯರು, ೧೯೩೧, ಪು-೫೨)

ಇಲ್ಲಿ ಜನಪದದರ ಪೌರಾಣಿಕ ಪ್ರಜ್ಞೆ ಜೀವನಾನುಭವವಾಗಿ ಬದಲಾಗಿದೆ. ಹಸುವಿನ ಗುಣವುಳ್ಳ ಅತ್ತೆ, ಗೋಕುಲದಂತಹ ಸುಂದರ ಗುಣವುಳ್ಳ ಮಾವ ಹಾಗೂ ಶ್ರೀಕೃಷ್ಣನಂತಹ ಪತಿಯು ಇದ್ದರೆ ಇಷ್ಟು ವರ್ಷ ಸಾಕಿ ಸಲುಹಿದ ಹಾಲುಂಡ ತವರನ್ನು ಮರೆತುಬಿಡುತ್ತೇನೆ ಎಂದು ಹೆಣ್ಣುಮಗಳು ಹಾಡಿದ್ದಾಳೆ. ಮದುವೆಯಾದ ಮೇಲೆ ಹೆಣ್ಣಿಗೆ ಗಂಡನ ಮನೆಯೇ ಶಾಶ್ವತ. ಗಂಡನ ಮನೆಯಲ್ಲಿ ಸುಖ-ಸಂತೋಷ ದೊರೆತರೆ ಅವಳ ತವರಿನ ಮೋಹ ತಾನಾಗಿಯೇ ಕಡಿಮೆಯಾಗುವುದು. ನಂದಗೋಕುಲದಂಥ ಮನೆಗೆ ತಾನು ಸೊಸೆಯಾಗಿ ಬಂದಿರುವುದಕ್ಕೆ ಖುಷಿಪಡುತ್ತಾಳೆ. ಸುಂದರ ಕೂಡು ಕುಟುಂಬದ

ಸದಸ್ಯಳೆಂದು ಹೆಮ್ಮೆಯಿಂದ ಬೀಗುತ್ತಾಳೆ. ಪ್ರೀತಿಯ ವಾತಾವರಣವಿದ್ದರೆ ತವರಿನ ನೆನಪು ಬಾರದೆಂದು ಗರತಿಯೊಬ್ಬಳು ಹಾಡಾಗಿಸಿದ್ದಾಳೆ. ಹಸು, ಗೋಕುಲ ಹಾಗೂ ಶ್ರೀಕೃಷ್ಣ ಇವುಗಳ ಕಲ್ಪನೆ ಜನಪದರಲ್ಲಿ ಮೂಡಿರುವುದು ಶ್ಲಾಘನೀಯ. ಇದು ಅವರಲ್ಲಿನ ಪೌರಾಣಿಕ ಪ್ರಜ್ಞೆಗೆ ಸಾಕ್ಷಿಯೆನಿಸಿದೆ. ಮಾವನೆಂದರೆ ಆಕೆಗೆ ತಂದೆಯಂತಹ ಗುಣವುಳ್ಳ ವ್ಯಕ್ತಿಯಾಗಿರಬೇಕು. ಮಾವನ ಆಶೀರ್ವಾದ, ಮಾರ್ಗದರ್ಶನದಲ್ಲಿಯೇ ಬದುಕನ್ನು ಸೊಸೆಯಾದವಳು ನಡೆಸುತ್ತಾಳೆ.

ಮಾವಿನ ಮಿಡಿ ತಂದು ಮಾವ ಉಡಿಯಾಗ್ಹಾಕಿ
ಮಾಯಾದ ಮಕ್ಕಳ್ಹಡಿಯೆಂದು । ಹಿಗ್ಗೀಲಿ
ಮಾವ ಬಂದ್ಹರಕಿ ಕೊಡತಾರ । (ಹಲಸಂಗಿ ಗೆಳೆಯರು, ೧೯೩೧, ಪು-೬೨)

ಮುದ್ದಿನ ಸೊಸೆಯು ಗರ್ಭಿಣಿಯಾಗಿದ್ದಾಳೆ. ಅವಳಿಗೆ ಸೀಮಂತದ ನಡೆಯುತ್ತಿದೆ. ಅಂತಹ ಸಂದರ್ಭದಲ್ಲಿ ಸೊಸೆಯ ಬಯಕೆಯನ್ನು ತೀರಿಸಬೇಕಾದುದು ಹಿರಿಯರ ಹಾಗೂ ಗಂಡನ ಆದ್ಯ ಕರ್ತವ್ಯ. ಆಶೀರ್ವಾದ ಬೇಡಿದ ಸೊಸೆಗೆ ಮಾವ 'ಸುಂದರವಾದ ಮಕ್ಕಳು ಹೆತ್ತು ಕೊಡು' ಎಂದು ಆಶೀರ್ವದಿಸುತ್ತಾನೆ. ಅದನ್ನೇ ಗರತಿಯೊಬ್ಬಳು ಹಾಡಾಗಿ ಅಭಿವ್ಯಕ್ತಿಸಿದ್ದಾಳೆ. ಮಾವಿನ ಮಿಡಿಯನ್ನು ತಂದು ಉಡಿಯಲ್ಲಿ ಹಾಕುವ ಮಾವನ ಪ್ರೀತಿಯು ತಂದೆಯಂತಹದು. ಸೊಸೆಯ ಬಯಕೆ ತೀರಿಸಿದ ಮಾವ 'ಮುದ್ದಾದ ಮಕ್ಕಳನ್ನು ಹೆತ್ತು ಕೊಟ್ಟು ಸುಮಂಗಲಿಯಾಗು' ಎಂದು ಹರಸುವಲ್ಲಿ ಮಾವ-ಸೊಸೆಯ ಅನ್ಯೋನ್ಯತೆ ಅಡಗಿದೆ.

ಹೆಣ್ಣು ಮಗಳಾಗಿ ಹುಟ್ಟಿದ ಮನೆಯನ್ನು, ಸೊಸೆಯಾಗಿ ಮೆಟ್ಟಿದ ಮನೆಯನ್ನು ಬೆಳಗುವಂತವಳು. ಮಗಳಾಗಿ ಗೆದ್ದ ಹೆಣ್ಣಿಗೆ ಸೊಸೆಯಾಗಿ ಗೆಲ್ಲುವುದು ಕಷ್ಟವೆನಿಸಬಹುದು. "ಸಾಂಪ್ರದಾಯಿಕ ಭಾರತೀಯ ಸೊಸೆಯ ಪಾತ್ರ ಕಠಿಣವಾದದ್ದೂ ಅಹುದು, ಮಹತ್ವಪೂರ್ಣವಾದದ್ದೂ ಅಹುದು, ಹತ್ತಾರು ವರ್ಷ ತಂದೆತಾಯಿಯರ ತೋಳ್ತೆಕ್ಕೆಯಲ್ಲಿ, ಅಕ್ಕತಂಗಿಯರ ಅಕ್ಕರೆಯ ಅಂಗಳದಲ್ಲಿ, ಅಣ್ಣ-ತಮ್ಮಂದಿರ ಕಣ್ಬಲದ ಬೆಳ್ದಿಂಗಳಲ್ಲಿ ಬೆಳೆದ, ಕಷ್ಟಕಾರ್ಪಣ್ಯಗಳ ಕಲ್ಪನೆಯೇ ಇಲ್ಲದ ಮುಗ್ಧ ಹೆಣ್ಣು ಹಠಾತ್ತನೆ ಅಪರಿಚಯದ ಸಂದಿಗ್ಧ ವಾತಾವರಣವನ್ನು ಪ್ರವೇಶಿಸುವಾಗ ಅವಳ ಹೃದ್ಗುಹೆಯಲ್ಲಿ ಮೂಡುವ ವಿವಿಧ ಸ್ವರೂಪದ ಭಾವತರಂಗಗಳು ಎಣಿಕೆ. ಹಿಂದೆ ಹೊತ್ತು ಹೆತ್ತು ಸಾಕಿ ಸಲುಹಿದ್ದ ತವರು, ಮುಂದೆ ಪ್ರೇಮ ತ್ಯಾಗಗಳಿಂದ ಬೆಳಕು ಮೂಡಬೇಕಾಗಿರುವ ಮಾವನ ಮನೆ, ಈ ಎರಡನ್ನೂ ಮರೆಯುವಂತಿಲ್ಲ" (ದೇ. ಜವರೇಗೌಡ, ೧೯೭೮, ಪು-೧) ಅತ್ತೆ-ಮಾವನಿಲ್ಲದ ವರನನ್ನು ಅರಸುವ ಇಂದಿನ ಪೀಳಿಗೆಯು ಸಂಬಂಧಗಳ ಮಧುರತೆಯನ್ನು ಅನುಭವಿಸಬೇಕು. ಅತ್ತೆ-ಮಾವನನ್ನು ವೃದ್ಧಾಶ್ರಮಕ್ಕೆ ತಳ್ಳುವ ಸೊಸೆಯಂದಿರಿಗೆ ಜನಪದರಲ್ಲಿನ ಬಾಂಧವ್ಯಗಳು ಆದರ್ಶ ಎನಿಸುತ್ತವೆ.

ಹೆರಿಗೆಗೆ ತವರಿಗೆ ಬಂದ ಸೊಸೆಯನ್ನು ಮಾವ ಕರೆಯಲು ಬರುತ್ತಾನೆ. ತವರಿನಲ್ಲಿರುವಾಗ ಮಾವ ಕರೆಯಲು ಬಂದನೆಂದು ಸೊಸೆ ಸಂತೋಷಪಡುತ್ತಾಳೆ. ಆದರೆ ಆತನಿಗೆ ಅಡುಗೆ ಮಾಡಿ

ಬಡಿಸಲು ಸೌದೆಯಿಲ್ಲ. ತವರಿನ ಬಡತನ ಅಂತಹದು. ಆದರೂ ಅವಳು ಕಳವಳ ಪಡದೇ ಮಾಣಿಕ್ಯವನ್ನೇ ಸೀಳಿ ಒಲೆಗಿಕ್ಕಿ ಅಡುಗೆ ಮಾಡಿಯಾದರೂ ಮಾವನಿಗೆ ಬಡಿಸುತ್ತೇನೆಂಬ ಭಾವನೆ ಅವಳಲ್ಲಿದೆ. ಅವಳಿಗೆ ತವರಿನ ಮಾನ ಕಾಪಾಡುವುದರೊಂದಿಗೆ ಮನೆಗೆ ಬಂದ ಮಾವನನ್ನು ಸತ್ಕರಿಸುವ ಆಸೆ. ಮಾಣಿಕ್ಯಕ್ಕಿಂತ ಅವಳಿಗೆ ಮಾವನ ಆದರ ಮುಖ್ಯ. ಜೊತೆಗೆ ತವರಿನ ಮಾನ ಮುಖ್ಯ. ಇಂತಹ ಪ್ರೀತ್ಯಾದರಗಳು ಜನಪದರಲ್ಲಿ ಕಂಡುಬರುತ್ತವೆ. ಹಳ್ಳಿಯ ಹಾಡುಗಳು ಮಾನವೀಯ ಸಂಬಂಧಗಳನ್ನು ಒಡಲೊಳಗಿಟ್ಟುಕೊಂಡು ಅಭಿವ್ಯಕ್ತವಾಗಿವೆ.

ಮಾವಯ್ಯ ಬಂದಾ ಮಾಡುವರೆ ಸೌದಿಲ್ಲ
ಮಾಣಿಕವ ಸೀಳಿ ಒಲೆಗಿಕ್ಕಿ । ಅಡಿಗೆಮಾಡಿ
ಮಾವಯ್ಯ ದೊರೆಗೆ ಬಡಿಸೇನು ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೮೮)

ಸೊಸೆಯು ಮಾವನಿಗೆ ತಕ್ಕ ಗೌರವವನ್ನು ತೋರುತ್ತಾಳೆ. ಎಲ್ಲರ ಒಲುಮೆಗೆ ಪಾತ್ರಳಾಗಿ ಪತಿಯ ಮನೆಯಲ್ಲಿ ಮುತ್ತಾಗಿ ಆಕೆ ಇರುತ್ತಾಳೆ. ಎಲ್ಲರ ಪ್ರೀತಿಗೆ ಪಾತ್ರಳಾದ ಆಕೆ ಎಲ್ಲರೊಂದಿಗೆ ಹೊಂದಿಕೊಂಡು ನಡೆಯುವ ಸ್ವಭಾವದವಳಾಗಿದ್ದಾಳೆ. ಹುಟ್ಟಿದ ಮನೆಗೂ, ಮೆಟ್ಟಿದ ಮನೆಗೂ ಕೀರ್ತಿಯನ್ನು ತರುವ ಗರತಿಯಾಗಿದ್ದಾಳೆ. ಪ್ರತಿ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸುವ ಆಕೆಯ ಮೇಲೆ ಮಾವನಿಗೆ ಎಲ್ಲಿಲ್ಲದ ಪ್ರೀತಿ. ಹೆತ್ತ ಮಗಳಂತೆಯೇ ಅವಳನ್ನು ಪ್ರೀತಿ ವಾತ್ಸಲ್ಯದಿಂದ ನೋಡಿಕೊಳ್ಳುತ್ತಾನೆ. ಪೇಟೆಗೆ ಬಂದಾಗ ಸೊಸೆಗೆ ಏನಾದರೂ ಉಡುಗೊರೆಗಳನ್ನು ಮಾವ ಪ್ರೀತಿಯಿಂದ ತಂದುಕೊಡುತ್ತಾನೆ. ಅಂತಹ ನಿದರ್ಶನಗಳನ್ನು ಜನಪದ ಗೀತೆಗಳಲ್ಲಿ ಕಾಣುತ್ತೇವೆ. ಇಂತಹ ಸಂಬಂಧಗಳು ಜನಪದರ ಬದುಕಿನ ಆದರ್ಶವನ್ನು ಬಿಂಬಿಸುತ್ತವೆ. ಪೇಟೆಗೆ ಹೋದಾಗ ಸೊಸೆಗೆ ಉಡುಗೊರೆಯನ್ನು ತರಬೇಕೆನ್ನುವ ಮಾವನ ಪ್ರೀತಿಯು ಈ ಕೆಳಗಿನಂತೆ ಹಾಡಾಗಿದೆ.

ಅತ್ತ ಹೋದರೆ ಹವಳ ಇತ್ತ ಬಂದರೆ ಮುತ್ತು
ಪಟ್ಟ ಹೋದಾರೆ ಚವಲೀಯ । ಚಿನ್ನದ ಗುಬ್ಬಿ
ಇನ್ನೇನು ತರಲಿ ಸೊಸೆ ಮುದ್ದೆ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೮೮)

ಗಂಡನ ಮನೆಯಲ್ಲಿ ಎಲ್ಲರಿಗೂ ಇಷ್ಟವಾಗುವ ಆಕೆಯನ್ನು ಕಂಡರೆ ಮಾವನಿಗೂ ಪ್ರೀತಿ, ಅತ್ತ ಹೋದರೆ ಹವಳ ಇತ್ತ ಬಂದರೆ ಮುತ್ತು ಅಂದರೆ ತವರಿಗೆ ಹೋದರೂ ಗಂಡನ ಮನೆಗೆ ಬಂದರೂ ಎಲ್ಲರ ಪ್ರೀತಿಗೆ ಪಾತ್ರಳಾದ ಹೆಣ್ಣುಮಗಳು ತನ್ನ ಮನೆಯ ಸೊಸೆಯಾಗಿ ಬಂದಿದ್ದಾಳೆ. ಮಾವ ಪಟ್ಟಣಕ್ಕೆ ಹೋಗುವಾಗ ತನ್ನ ಮುದ್ದಿನ ಸೊಸೆಯನ್ನು ಕರೆದು 'ಚಿನ್ನದ ಗುಬ್ಬಿಯಂತಹ ಮುದ್ದಿನ ಸೊಸೆಯೇ ನಿನಗೇನು ತರಲಿ' ಎಂದು ಕೇಳುತ್ತಾನೆ. ಕೇಳಿದ್ದೆ ಭಾಗ್ಯವೆಂದು ಭಾವಿಸಿ, ಏನೊಂದು ಬೇಡದ

ಸೊಸೆಯನ್ನು ಕಂಡು ಅವಳ ಮೇಲೆ ಮತ್ತಷ್ಟು ಪ್ರೀತಿದೋರುತ್ತಾನೆ. ಏನಾದರೊಂದು ಉಡುಗೊರೆಯ ತಂದು ಕೊಡುವ ಮಾವನ ಪ್ರೀತಿಗೆ ಬೆಲೆ ಕಟ್ಟಲಾಗದು. ಇಂತಹ ಸಂದರ್ಭಗಳು ಮಾವ ಮತ್ತು ಸೊಸೆಯ ನಡುವಿನ ಆದರ್ಶ ಸಂಬಂಧಗಳಿಗೆ ಸಾಕ್ಷಿಯೆನಿಸುತ್ತವೆ.

### ೪.೨.೪ ಮಾವ – ಅಳಿಯ

ಜನಪದರಲ್ಲಿ ಮಗಳ ಗಂಡನನ್ನು ಅಥವಾ ಸಹೋದರಿಯ ಮಗನನ್ನು ಅಳಿಯನೆಂದು ಸಂಭೋದಿಸಿದರೆ, ಹೆಂಡತಿಯ ತಂದೆ ಇಲ್ಲವೇ ತಾಯಿಯ ಸಹೋದರನನ್ನು ಮಾವನೆಂದು ಸಂಭೋದಿಸಲಾಗುತ್ತದೆ. ಸಹೋದರಿಯ ಮಗ ಸೋದರಳಿಯನಾದರೆ, ತಾಯಿಯ ಸಹೋದರನು ಸೋದರ ಮಾವನಾಗುತ್ತಾನೆ. ನೆಂಟಸ್ಥಿಕೆಯಿಂದಲೇ ಈ ತರಹದ ಸಂಬಂಧಗಳು ಉಂಟಾಗುತ್ತವೆ. ಜನಪದರು ಹೆಣ್ಣು ಕೊಟ್ಟ ಮಾವನನ್ನು ತಂದೆಯಂತೆಯೇ ಗೌರವಿಸುತ್ತಾರೆ. 'ಹೆಣ್ಣು ಕೊಟ್ಟ ಮಾವ ಕಣ್ಣು ಕೊಟ್ಟ ದೇವರು' ಎಂಬ ಗಾದೆಯಂತೆಯೇ ಜನಪದರ ಬದುಕಿನಲ್ಲಿ ಅಳಿಯ–ಮಾವನ ಬಾಂಧವ್ಯವು ಕಂಡುಬರುತ್ತದೆ. ಜೀವನದಲ್ಲಿ ಎಷ್ಟೇ ಸಂಕಷ್ಟಗಳು ಎದುರಾದರೂ ನಗು ಮೊಗದಿಂದ ಎಲ್ಲವನ್ನು ಧನಾತ್ಮಕ ಮನೋಭಾವದಿಂದ ಜನಪದರು ಎದುರಿಸುತ್ತಾರೆ. ಕೋಪ ಬಂದಾಗ ತಮ್ಮಲ್ಲಿನ ಹಾಸ್ಯಪ್ರಜ್ಞೆಯಿಂದ ಸಮಸ್ಯೆಯನ್ನು ತಿಳಿಗೊಳಿಸುವ ಕಲೆ ಅವರಿಗೆ ಸಿದ್ಧಿಸಿದೆ. ಮಾವನ ಮನಸ್ಸನ್ನು ಗೆದ್ದು ಮಾವನ ಮಗಳನ್ನು ಬಯಸುವ ಅಳಿಯನ ಇಂಗಿತವನ್ನು ಕೆಳಗಿನ ಗೀತೆಯು ವ್ಯಕ್ತಪಡಿಸುತ್ತದೆ.

ಮಾವಯ್ಯ ನಿನ್ನ ಮಗಳ ಮಲ್ಲಾಡಕ ಕೊಡಬ್ಯಾಡ
ನೀರ ಹೊತ್ತೊತ್ತ ತಲಿ ದಡ್ಡ । ಮಾವಯ್ಯ
ಭತ್ತ ಕುಟ್ಟಿ ಕುಟ್ಟಿ ಕೈ ದಡ್ಡ । (ಹಲಸಂಗಿ ಗೆಳೆಯರು, ೧೯೩೧, ಪು–೭೮)

ಮಾವನ ಮಗಳ ರೂಪಕ್ಕೆ ಮರುಳಾದ ಅಳಿಯನೊಬ್ಬ ಮಲೆನಾಡಿಗೆ ತನ್ನ ಮಗಳನ್ನು ಕೊಡಲು ಸಿದ್ಧನಾದ ಮಾವನಿಗೆ ಬುದ್ಧಿ ಹೇಳುತ್ತಾನೆ. ತನ್ನ ಮಾವನಿಗೆ ಮಲೆನಾಡಿನ ಹೆಣ್ಣು ಮಕ್ಕಳಿಗೆ ಒದಗಬಹುದಾದ ಕಷ್ಟಗಳನ್ನು ವಿವರಿಸುತ್ತಾನೆ. ಮಾವನು ತನ್ನ ಮಗಳನ್ನು ಕಣ್ಮುಂದೆಯೇ ಇರಿಸಿಕೊಳ್ಳುವಂತೆ ವಿಚಾರ ಮಾಡಲು ಹಚ್ಚುತ್ತಾನೆ. ಆತನ ವಿಚಾರಗಳಲ್ಲಿ ತಾನೇ ನಿಂತು ತನಗೆ ಮಾವನು ಮಗಳನ್ನು ಕೊಡಬಹುದೆಂಬ ಎಣಿಕೆ ಅಳಿಯನದಾಗಿದೆ. ಅಳಿಯನು ತನ್ನ ಮಗಳನ್ನು ಇಷ್ಟಪಡುವ ವಿಚಾರವನ್ನು ತಿಳಿದ ಮಾವನು ಬಹುಸಡಗರದಿಂದ ಮಗಳನ್ನು ಧಾರೆಯೆರೆಯುತ್ತಾನೆ. ಮಗಳನ್ನು ಮದುವೆ ಮಾಡಿಕೊಟ್ಟ ಮಾವನು ಅಳಿಯನಿಗೆ ಅನೇಕ ಉಡುಗೊರೆಗಳನ್ನು ಕೊಡುತ್ತಾನೆ. ಅದರಲ್ಲಿ ಮಾವನೇ ಹೆಣೆದ ಉಣ್ಣೆ ಶಲ್ಯೆ ಸೇರಿಕೊಂಡಿದೆ. ಯಾವುದೋ ಒಂದು ಸಂದರ್ಭಕ್ಕೆ ಹೆಂಡತಿ ತವರಿಗೆ ಮರಳಿದಾಗ ಮಾವ ಮಾಡಿಕೊಟ್ಟ ಶಲ್ಯೆಯನ್ನು ಹೊತ್ತು ಮಲಗಿದ ಅಳಿಯನಲ್ಲಿ ಮಾವನ ಮೇಲಿನ ಅಕ್ಕರೆ, ಮಾವನ ಮಗಳ ಮೇಲಿನ ಪ್ರೀತಿಗಳೆರೆಡೂ ಕೆಳಗಿನಂತೆ ಅಭಿವ್ಯಕ್ತವಾಗಿದೆ.

ಮಾವ ಮಾಡಿದ ಸೆಲ್ಲೆ ಮಾರಿ ಮ್ಯಾಲ್ಹಾಕೊಂಡು
ಮಾಲದಾಗ್ಯಾಕ ಮಲಗೀದೋ । ನನ ಬಾಲ
ಮಾದೇವನಳಿಯ ಉಣ್ಣೇಳೋ । (ಹಲಸಂಗಿ ಗೆಳೆಯರು, ೧೯೩೧, ಪು-೭೭)

ಹೆಂಡತಿಯನ್ನು ತವರಿಗೆ ಕಳುಹಿದ ಮಗನ ನಡವಳಿಕೆಯನ್ನು ತಾಯಿಯು ಮೇಲಿನಂತೆ ವರ್ಣಿಸುತ್ತಾಳೆ. ಮಾವನ ಮಗಳು ಮತ್ತು ಮಾವನ ಮೇಲಿನ ಅಳಿಯನ ಕಾಳಜಿ ವ್ಯಕ್ತವಾಗುತ್ತದೆ. ಆತ ಕೆಲಸ ಮಾಡದೇ ಉಡುಗೊರೆಯಾಗಿ ಮಾವ ಕೊಟ್ಟ ಶಲ್ಯೆಯನ್ನು ಹೊದ್ದುಕೊಂಡು ಮನೆಯಲ್ಲಿಯೇ ಮಲಗಿದ್ದಾನೆ. ಮಾವನ ಶಲ್ಯೆಯನ್ನು ಹೊದ್ದುಕೊಂಡಿದ್ದು ಮಾವ-ಅಳಿಯರ ಬಾಂಧವ್ಯದ ಬೆಸುಗೆಯಂತೆ ಇಲ್ಲಿ ಬಳಕೆಯಾಗಿದೆ. ಮಾವನು ತನ್ನ ಮಗಳನ್ನು ಅಳಿಯನಿಗೆ ಕೊಟ್ಟರೆ ಸರಿ. ಇಲ್ಲವಾದರೆ ಸಂಬಂಧಗಳಲ್ಲಿ ಬಿರುಕು ಮೂಡುತ್ತವೆ. ಅಳಿಯನಿಚ್ಛೆಗೆ ವಿರುದ್ಧವಾಗಿ ಮಾವ ತನ್ನ ಮಗಳಿಗೆ ಬೇರೊಂದು ವರನನ್ನು ಹುಡುಕಲು ಪ್ರಯತ್ನ ಮಾಡುತ್ತಿರುತ್ತಾನೆ. ಆಗ ಮಾವನ ಮಗಳ ಮೇಲೆ ಕನಸು ಕಟ್ಟಿಕೊಂಡಿದ್ದ ಅಳಿಯನು ನೇರವಾಗಿ ಮಾವನ ಮನೆಗೆ ಹೋಗಿ ತಮ್ಮ ಪ್ರೀತಿಗೆ ಅಡ್ಡಬರಬಾರದೆಂದು ವಿನಂತಿಸಿಕೊಳ್ಳುತ್ತಾನೆ. ಮಾವನು ತನ್ನ ವಿನಂತಿಗೆ ಸ್ಪಂದಿಸದಿದ್ದಾಗ ಕೋಪದಿಂದ ಕೆಳಗಿನಂತೆ ವರ್ತಿಸಿದ ಉದಾಹರಣೆಗಳಿವೆ.

ಏನ ಮಾವಾ ಹುಡುಗ ನಾ ಎಲ್ಲಿತನಾ ಕಾಯ್ಬೇಕು
ನೋಡಷ್ಟು ದಿನಾ ನೋಡತೀನೋ । ಒಮ್ಮೆ
ನಿನ ಮಗಳ ಹೊರತೀನೋ । (ಅಪ್ರಕಟಿತ)

ಮಾವನ ಮಗಳಿಗೆ ಕಾಯ್ದು ಕುಳಿತಿರುವ ಅಳಿಯನು ಮಾವನ ಒಪ್ಪಿಗೆಗೆ ಕಾಯುವಷ್ಟು ದಿನ ಕಾಯುತ್ತಾನೆ. ಆಗಲೂ ಮಾವ ಮಗಳನ್ನು ಮದುವೆ ಮಾಡಿಕೊಡದಿದ್ದರೆ ನಿನ್ನ ಮಗಳನ್ನು ಹೊತ್ತುಕೊಂಡು ಹೋಗಿ ಮದುವೆಯಾಗುತ್ತೇನೆಂದು ಹೆದರಿಸುತ್ತಾನೆ. ಮಾವನು ತನ್ನ ಮಗಳನ್ನು ಧಾರೆಯೆರೆದು ಕೊಡಲೆಂಬ ಬಯಕೆ ಆತನದು. ಸಮಾಜಕ್ಕೆ ಬದ್ಧರಾಗಿ ಬದುಕುವ ಜನಪದರು ಅನ್ಯಮಾರ್ಗ ತುಳಿಯಲು ಹಿಂಜರಿಯುತ್ತಾರೆ. ಯಾವುದೇ ಕಾರಣಗಳಿದ್ದರೂ ದುಷ್ಟಮಾರ್ಗಗಳನ್ನು ಹಿಡಿಯುವುದಿಲ್ಲ. ಹಲವು ವರ್ಷ ಕಳೆದರೂ ಮಾವ ಮದುವೆ ಮಾಡಿಕೊಡದಿದ್ದಾಗ ಹಣೆಬರಹವೆಂದು ಅಳಿಯ ಸುಮ್ಮನಾಗಿ ಬಿಡುತ್ತಾನೆ.

ಮಾವನ ಮನೆ ಮುಂದೆ ಮಾವಿನ ಮರಹುಟ್ಟಿ
ಹೂವಾದರೇನು ಫಲವಿಲ್ಲ । ಮಾವಯ್ಯ
ನಿನ್ಗೆ ಮಗಳಿದ್ದರೇನೋ ರುಣವಿಲ್ಲ । (ಎಸ್. ಕೆ. ಕರೀಂಖಾನ್, ೧೯೫೫, ಪು-೬೨)

ಮಾವನಿಗೆ ಮಗಳಿದ್ದರೂ ತನಗೆ ಅವಳನ್ನು ಮದುವೆಯಾಗುವ ಯೋಗವಿಲ್ಲವೆಂದು ಅಳಿಯನನ್ನು ವಿಧಿ ಹಳಿದು ಸುಮ್ಮನಾಗುತ್ತಾನೆ. ಕೆಲವು ದಿನ ಮನಸ್ಸಿಗೆ ನೋವಾದರೂ ಯಾವುದೇ

ಕಾರಣಕ್ಕೂ ಸಂಬಂಧಗಳಿಗೆ ಬಾಧೆಬರದಂತೆ ಎಚ್ಚರವಹಿಸುತ್ತಾನೆ. ಸಂಪ್ರದಾಯಗಳಲ್ಲಿನ ನಂಬಿಕೆಯಿಂದ ಬದುಕುತ್ತಾನೆ. ಅಳಿಯನು ಅಳಿಯನಾಗಿಯೇ ಉಳಿದರೆ ಬಾಂಧವ್ಯದಲ್ಲಿ ಅನ್ಯೂನ್ಯತೆ ಕಂಡುಬರುತ್ತದೆ. ಆದರೆ ಮಗಳನ್ನು ಮದುವೆಯಾದ ಬಳಿಕ ಮನೆ ಅಳಿಯನಾದರೆ ಅಂತಹ ಸಂದರ್ಭಗಳಲ್ಲಿ ಪರಸ್ಪರ ಗೌರವದ ಕೊರತೆ ಕಂಡುಬರುತ್ತದೆ. ಏಕೆಂದರೆ 'ಮನೆಗೆ ಬಂದ ಅಳಿಯ ಮಗನಲ್ಲ' ಎಂಬ ಗಾದೆಯಂತೆಯೇ ಅಳಿಯನು ಎಷ್ಟೇ ಕುಟುಂಬದ ಹಿತಬಯಸಿದರೂ ಮಗನಂತೆಯೇ ಹೊರತು ಮಗನಲ್ಲವೆಂಬುದು ಜನಪದರ ವಾದ. ಮೇಲಿನ ಸಂಬಂಧಗಳಿಗೆ ವ್ಯತಿರಿಕ್ತವಾದ ಭಾಂದವ್ಯವನ್ನು ಕೆಲವೊಮ್ಮೆ ಕಾಣುತ್ತೇವೆ. ದೂರವಿದ್ದಷ್ಟು ಅಕ್ಕರೆ, ಪ್ರೀತಿ ಹೆಚ್ಚುತ್ತದೆ. ಅಳಿಯ-ಮಾವರ ಬಾಂಧವ್ಯವು ದೂರದಿಂದಲೇ ಪ್ರೀತಿ, ಗೌರವದಿಂದ ಹೆಚ್ಚುತ್ತದೆಂಬ ನಂಬಿಕೆ ಜನಪದರಲ್ಲಿದೆ.

### ೪.೨.೫ ಅತ್ತೆ-ಅಳಿಯ

ಮದುವೆಯ ಬಂಧದಿಂದ ಉಂಟಾಗುವ ಸಂಬಂಧವೇ ಅತ್ತೆ-ಅಳಿಯನದು. ಹೆಂಡತಿಯ ತಾಯಿಯನ್ನು ಅತ್ತೆ ಎಂದು, ಮಗಳ ಗಂಡನನ್ನು ಅಳಿಯನೆಂದು ಕರೆಯಲಾಗುತ್ತದೆ. ತಂದೆಯ ಸಹೋದರಿಯೂ ಸೋದರಮಾವನ ಹೆಂಡತಿಯೂ ಗಂಡನ ತಾಯಿಯೂ ಸಂಬಂಧದಲ್ಲಿ ಅತ್ತೆಯಾಗುತ್ತಾಳೆ. ಹೆಂಡತಿಯ ಸಹೋದರನ ಮಗನೂ ಗಂಡಿನ ಸಹೋದರಿಯ ಮಗನೂ ಸಂಬಂಧದಲ್ಲಿ ಅಳಿಯನಾಗುತ್ತಾನೆ. ಪ್ರಸ್ತುತ ಅಧ್ಯಯನದಲ್ಲಿ ಹೆಂಡತಿಯ ತಾಯಿಯನ್ನು ಅತ್ತೆಯೆಂದು ಮಗಳ ಗಂಡನನ್ನು ಅಳಿಯನೆಂದು ಸಂಭೋದಿಸುವ ಸಂಬಂಧವನ್ನು ವಿಶ್ಲೇಷಿಸಲಾಗಿದೆ. ಜೀವನದಲ್ಲಿ ಪ್ರತಿಯೊಂದು ಸಂಬಂಧಕ್ಕೂ ಅದರದ್ದೇ ತೂಕವಿದೆ, ಮೌಲ್ಯವಿದೆ. ಬದುಕಿನಲ್ಲಿ ಸರಿಸಮನಾಗಿದ್ದರೆ ಎಲ್ಲವೂ ಸುಗಮಗೊಳ್ಳುವುದು. ಒಂದು ವೇಳೆ ಏರುಪೇರು ಕಂಡುಬಂದರೆ ಸಂಬಂಧಗಳು ಮುರಿದುಬೀಳುತ್ತವೆ. ಇಲ್ಲವೇ ಮೌಲ್ಯವನ್ನು ಕಳೆದುಕೊಳ್ಳುತ್ತವೆ. ಅತ್ತೆಯಾದವಳು ಅಳಿಯನನ್ನು ಬಹಳ ಗೌರವದಿಂದ ಕಾಣುತ್ತಾಳೆ. ಏಕೆಂದರೆ ಆತ ಮಗಳ ಗಂಡ. ಅಳಿಯನಾದ ವ್ಯಕ್ತಿಯೂ ತನ್ನ ಮೇಲಿನ ಗೌರವವನ್ನು ಉಳಿಸಿಕೊಳ್ಳಬೇಕಾದರೆ ಆದರ್ಶಗಳಿಂದ ಬದುಕಬೇಕಾಗುತ್ತದೆ. ಉತ್ತಮ ಮೌಲ್ಯಗಳನ್ನು ಹೊಂದಿದ ಅಳಿಯನ ಬಗ್ಗೆ ಹಳ್ಳಿಗರು ಹಾಡಿದ್ದಾರೆ.

ಸಿಟ್ಟಿನ ಹರದೀಗಿ ಶ್ರೀಕೃಷ್ಣ ದೊರೆತಾನ
ಸುತ್ತೇಳು ಬಳಗ ಮರಸ್ಯಾನ । ಕಂದೌವ್ವ
ಹರಿಚಂದರಾಯ ದೊರೆತಾನ । (ಹಲಸಂಗಿ ಗೆಳೆಯರು, ೧೯೩೧, ಪು-೭೭)

ಕೋಪದ ಸ್ವಭಾವದವಳಾದ ಮಗಳಿಗೆ ಶ್ರೀಕೃಷ್ಣನಂತಹ ಅಳಿಯ ಸಿಕ್ಕಿದ್ದಾನೆ. ತಾಯಿಗೆ ಇದಕ್ಕಿಂತ ಮಿಗಿಲಾದದ್ದು ಏನು ಬೇಕು? ಅಳಿಯನ ಸುತ್ತಲಿರುವ ಮೈಬಳಗವನ್ನೆಲ್ಲ ಮರೆಸುವಂತಹ ಜಾಣ. ಅಳಿಯನ ಗುಣಗಳು ಸತ್ಯಹರಿಶ್ಚಂದ್ರನಂತೆಯೇ ಇವೆ. ಮಗಳಿಗೆ ಸಾಕ್ಷಾತ್ ಹರಿಶ್ಚಂದ್ರನೇ

ದೊರೆತಿದ್ದಾನೆಂದು ಅಳಿಯನ ಗುಣಗಳ ಬಗ್ಗೆ ಗರತಿಯೊಬ್ಬಳು ಹಾಡಿ ಹೊಗಳಿದ್ದಾಳೆ. ಎಲ್ಲರಿಗೂ ಹೊಂದಿಕೊಂಡು ಬಾಳುವ, ಬಾಳಿನ ಸವಿಯನ್ನು ಅನುಭವಿಸುವ ಅಳಿಯಂದಿರು ಸಿಗುವುದು ಕಡಿಮೆ. ಏಕೆಂದರೆ 'ಅಳಿಯ ಮನೆ ತೊಳಿಯ' ಎಂಬ ಗಾದೆ ಮಾತಿನಂತೆ ಸಿಕ್ಕಷ್ಟು ಸೆಳೆದುಬಿಡುವ ಜಾಯಮಾನದವರೇ ಹೆಚ್ಚು. ಎಷ್ಟೇ ಸವಲತ್ತುಗಳನ್ನು ನೀಡಿದರೂ ಮನೆಗೆ ಬಂದ ಅಳಿಯ ಮಗನಾಗುವುದಿಲ್ಲ. ಅಂತವರನ್ನು ಹೊರತಾಗಿ ಒಳ್ಳೆಯ ಸ್ವಭಾವದ ವ್ಯಕ್ತಿಗಳಿದ್ದಾರೆ. ಏಕೆಂದರೆ ಜನಪದರು ಪ್ರೀತಿ, ನಂಬಿಕೆ, ವಿಶ್ವಾಸ, ಗೌರವಕ್ಕಾಗಿ ಬದುಕು ನಡೆಸುವಂತಹ ಸಾತ್ವಿಕರು. ಅಳಿಯನಾದವನು ಗೌರವದಿಂದ ಬದುಕಿದ ಉದಾಹರಣೆಗಳು ಜನಪದರಲ್ಲಿ ಸಾಕಷ್ಟಿವೆ. ಅನ್ಯೂನ್ಯತೆಯ ಪ್ರತೀಕವಾಗಿರುವ ಮಗಳು ಮತ್ತು ಅಳಿಯನ ಸಂಬಂಧವನ್ನು ಕುರಿತಾಗಿ ಜನಪದ ಹೆಣ್ಣುಮಗಳು ಹಾಡಿದ ಪರಿ ಇಲ್ಲಿದೆ.

ಮಗಳು ಎಂಥ ಚೆಲುವಿ ನಕ್ಕರೆ ತುಟಿಗೆಂಪು
ಅಳಿಯ ಎಂಥವರು ನನಗ್ಹೇಳ । ಹಂಪೀಯ
ವಿರುಪಾಕ್ಷಗಿಂತ ಚೆಲುವರು ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೧೧೦)

ಹೊಟ್ಟೆಯಲ್ಲಿ ಹುಟ್ಟಿದ ಮಗಳು ಚೆಲುವೆ. ಅಂತಹ ಸುಂದರಾಂಗಿಯನ್ನು ಮದುವೆಯಾದ ಅಳಿಯನು ಚೆಲುವ. ಆತನು ಹಂಪಿಯ ವಿರೂಪಾಕ್ಷನಿಗಿಂತಲೂ ಅತಿಚೆಲುವ. ಮಗಳು ಮತ್ತು ಅಳಿಯನ ಜೋಡಿಯ ಶಿವ-ಪಾರ್ವತಿಯರಂತೆ ಎಂದು ಇತರರ ಮುಂದೆ ಅಳಿಯನ ಚೆಲುವಿಕೆಯನ್ನು ಹೊಗಳುತ್ತಾಳೆ. ಹೀಗೆ ಹೇಳುವಲ್ಲಿ ಅತ್ತೆ-ಅಳಿಯನ ನಡುವಿನ ಬಾಂಧವ್ಯ ಅಡಗಿದೆ. ಅಳಿಯನೂ ಕೂಡ ಅತ್ತೆಯನ್ನು ಹೆತ್ತ ತಾಯಿಯಂತೆ ಗೌರವಿಸುತ್ತಾನೆ. ಕೆಲವೊಮ್ಮೆ ಆಶ್ರಯವನ್ನು ಕೂಡ ನೀಡುತ್ತಾನೆ. 'ಅತ್ತೆಯೋ ಮುತ್ತಿನಂಥವಳು ಮಾಣಿಕ್ಯವನ್ನು ಹೆತ್ತು ಕೊಟ್ಟವಳು' ಎಂದು ಅತ್ತೆಯ ಕುರಿತಾಗಿ ಅಭಿಮಾನದಿಂದ ಹೇಳುತ್ತಾನೆ. ಹೆಂಡತಿಯ ಮನೆಗೆ ಸಿರಿಗೆ ಆಸೆಪಡದೆ ಗೌರವದಿಂದ, ಸ್ವಾಭಿಮಾನದಿಂದ ಬದುಕು ನಡೆಸುವ ಅಳಿಯಂದಿರು ಜನಪದರಲ್ಲಿ ಇದ್ದಾರೆ.

ಜನಪದರಲ್ಲಿ ಮಗನಿಗಿಂತ ಅಳಿಯನೇ ಹೆಚ್ಚೆಂದು ಉಪಚಾರ ಮಾಡಿದ ದೃಷ್ಟಾಂತಗಳಿವೆ. ಅಳಿಯನು ಬಹಳ ಚೆಲುವ ಆದರೆ ಕಷ್ಟಪಟ್ಟು ದುಡಿಯುವವನಲ್ಲ. ಆತ ತನ್ನ ಮನೆಯನ್ನು ಬಿಟ್ಟು ಹೆಂಡತಿಯ ಮನೆಯನ್ನೇ ಆಶ್ರಯಿಸಿದ್ದಾನೆ. ಆತ ತಿಂದುಂಡು ಗೂಳಿಯ ಹಾಗೆ ತಿರುಗುವ ಸೋಮಾರಿ. ಮಗಳು ಅಳಿಯನ ಮೇಲಿನ ಮೋಹಕ್ಕಾಗಿ ಮಗ ಸಂಪಾದಿಸಿದ್ದನ್ನು ಅಳಿಯನಿಗೆ ದಾನ ಮಾಡಿ, ನಂತರ ಮಗನಿಗೆ ಸಾಲಪತ್ರವನ್ನು ನೀಡುವ ತಾಯಂದಿರು ಜನಪದರಲ್ಲಿದ್ದಾರೆ.

ಅಟ್ಟಡಿಗೆ ಅಳಿಯನಿಗೆ ಚೆಟ್ಟಿ ತುಪ್ಪ ಮಗಳೀಗೆ
ಸಾಲಾದ ಪತ್ರ ಮಗನೀಗೆ । ತಾಯಮ್ಮ

ಸಾಲ್ಯದಾ ಸೀರೆ ಮಗಳೀಗೆ ।

(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೧೦೭)

'ಅಟ್ಟಡಿಗೆ ಅಳಿಯನಿಗೆ ಇಟ್ಟನೀರು ಮಾವನಿಗೆ' ಎಂಬ ಗಾದೆಯಂತೆಯೇ ಮಾಡಿದ್ದೆಲ್ಲವೂ ಅಳಿಯನಿಗೆ ಸಿಗುತ್ತದೆ. ಉಳಿದ್ದದ್ದು ಮಾತ್ರ ಇತರರಿಗೆ ಮೇಲಿನ ಗೀತೆಯಲ್ಲಿ ಮಾಡಿದ ಅಡಿಗೆಯು ಅಳಿಯನಿಗೆ, ತುಪ್ಪವು ಮಗಳಿಗೆ, ಹೊಸಸೀರೆ, ಕುಪ್ಪಸ ಮಗಳಿಗೆಂದು ಕಾಯ್ದಿಡುವ ತಾಯಿಯೂ ಅದರಿಂದುಂಟಾಗುವ ಸಾಲ ಮಾತ್ರ ಮಗನ ತಲೆಯ ಮೇಲೆ ಹೊರಿಸುತ್ತಾಳೆ. 'ಉಂಡು ಹೋದ ಕೊಂಡು ಹೋದ' ಎಂಬಂತೆ ಅಳಿಯನು ಅತ್ತೆ ಮಾವನ ಮನೆಯಲ್ಲಿ ಸಿಕ್ಕಷ್ಟು ಕಬಳಿಸಿ, ಮನೆಯಲ್ಲಿರುವ ಮಗನ ಮೇಲೆ ಸಾಲದ ಗಂಟನ್ನು ಬಿಟ್ಟು ಹೋಗುತ್ತಾನೆ. ಜನಪದರಲ್ಲಿ ಅತ್ತೆ-ಅಳಿಯನ ಸಂಬಂಧವು ಕೆಲವೊಮ್ಮೆ ಹುಡುಗಾಟಿಕೆಯಲ್ಲಿ ಮುಳುಗಿ ಹೋಗುತ್ತದೆ. ಅತ್ತೆಯೂ ಅಳಿಯನೂ ಪರಸ್ಪರ ತಿಳಿದುಕೊಂಡು ನಗೆಗೀಡಾಗುವುದು ಸಹಜ. ನಗುವೇ ಜೀವನದ ಅಮೃತವೆಂಬುದನ್ನು ಜನಪದರು ಅರಿತವರಾಗಿದ್ದಾರೆ.

ಅಳಿಯನು ಅತ್ತೆಯ ಮನೆಯನ್ನು ಆಶ್ರಯಿಸಬಹುದು. ಅತ್ತೆಯೂ ಅಳಿಯನ ಮನೆಯನ್ನು ಆಶ್ರಯಿಸಬಹುದು. ಆದರೆ ಅತ್ತೆ-ಅಳಿಯನ ಸಂಬಂಧವು ಜನಪದರಲ್ಲಿ ಸ್ಥಿರವಾದುದಲ್ಲ. ಅತ್ತೆಯನ್ನು ಅತಿಥಿ; ಹಿತೈಷಿ, ಬಂಧುವಿನಂತೆ ಅಳಿಯನು ಕಾಣುತ್ತಾನೆ. ಅಳಿಯನನ್ನು ಕೂಡ ಹೀಗೆಯೇ ಅತ್ತೆಯಾದವಳು ಭಾವಿಸುತ್ತಾಳೆ. ಸತ್ಯಕ್ಕೆ ಹತ್ತಿರವಾದ ಬದುಕನ್ನು ಜನಪದರು ಒಪ್ಪಿಕೊಂಡು ಬಾಳಿದ್ದಾರೆ. 'ಅಳಿಯನ ಅರಮನೇಲಿರೊದ್ಕಿಂತ ಮಗನ ಕಿರುಮನೇಲಿರೋದು ಲೇಸು' ಎಂಬ ಗಾದೆಯನ್ನು ಕೇಳಿದಾಗ ಜನಪದರ ವಾಸ್ತವ ಬದುಕಿನ ಆಳ ಕಂಡುಬರುತ್ತದೆ. ಎಷ್ಟೇ ಮಾಡಿದರೂ ಅಳಿಯ ಅಳಿಯನೇ ಮಗನಾಗಲಾರ. ಅದಕ್ಕಾಗಿಯೇ 'ಅಳಿಯನಿಗೂ ಮಾಡೋದು ಒಂದೇ; ಆಳುಗಳಿಗೂ ಮಾಡೋದು ಒಂದೇ' ಎಂದು ಜನಪದರು ಹೇಳಿದ್ದಾರೆ. ಎಷ್ಟೇ ಪ್ರೀತಿ, ಕಕ್ಕುಲಾತಿಯನ್ನು ತೋರಿ ಅಳಿಯನಿಗೆ ನಾನಾ ರೀತಿಯ ಸೌಕರ್ಯಗಳನ್ನು ಒದಗಿಸಿಕೊಟ್ಟರೂ ಅಳಿಯನು ಎಂದಿಗೂ ಮಗನ ಕರುಣೆ, ವಾತ್ಸಲ್ಯವನ್ನು ಹೊಂದಿರಲಾರ ಎಂಬುದು ಜನಪದರ ನಂಬಿಕೆ.

ತಮ್ಮ ಮನೆಗೆ ಬಂದ ಅತಿಥಿಗಳನ್ನು ಸತ್ಕರಿಸುವುದು ಧರ್ಮ. ಅದರಲ್ಲೂ ಮಗಳ ಗಂಡನಾದ ಅಳಿಯ ಬಂದರೆ ಸತ್ಕಾರಕ್ಕೆ ಕೊರತೆಯಿರದು. ಆದರೆ ಕೂಡು ಕುಟುಂಬದಲ್ಲಿ ಅಳಿಯನ ಸತ್ಕಾರಕ್ಕೆ ಕೊರತೆಯುಂಟಾಗುವುದು ಸಹಜ. ಒಂದು ಕುಟುಂಬದಲ್ಲಿನ ಓರಗಿತ್ತಿಯರಿಗೆ ಹೆಣ್ಣುಮಕ್ಕಳಿದ್ದಾರೆ. ತನ್ನ ಮಗಳ ಗಂಡ ಬಂದಾಗ ಅತಿ ಕಾಳಜಿ ತೋರಿಸಿ ಓರಗಿತ್ತಿಯ ಮಗಳ ಗಂಡ ಬಂದಾಗ ಕಾಳಜಿ ತೋರಿಸದಿರುವ ಪ್ರಸಂಗಗಳು ನಡೆಯುತ್ತವೆ. ಇಬ್ಬರೂ ಅಳಿಯಂದಿರೇ ಅಲ್ಲವೇ ಸತ್ಕಾರದಲ್ಲಿ ಮಾತ್ರ ಏಕೆ ವ್ಯತ್ಯಾಸ ? ಹಾಗೆ ಮಾಡದಿರು ಎಂದು ಓರಗಿತ್ತಿ ಬುದ್ಧಿ ಮಾತು ಹೇಳುತ್ತಾಳೆ. ಈ ದೃಷ್ಟಾಂತವನ್ನು ಕೆಳಗಿನ ಪದ್ಯದಲ್ಲಿ ಕಾಣುತ್ತೇವೆ.

ನನ್ನಳಿಯ ನಿನ್ನಳಿಯ ಅನ್ನದಿರು ಅನ್ನಕ್ಕ
ನಿಮ್ಮೂವರಳಿಯ ಬಂದಾನೆ । ಹಾಲೇಶಿ
ಉಣ್ಣೀಸಿ ವೀಳ್ಯವ ಕೋಡುವೇನ । (ಕೆ. ವಿರುಪಾಕ್ಷಗೌಡ, ೧೯೭೦, ಪು-೧೨)

ಮನೆಗೆ ಬಂದಿರುವ ಅಳಿಯನನ್ನು ನನ್ನಳಿಯ ಇಲ್ಲವೇ ನಿನ್ನಳಿಯನೆಂದು ಭೇದವನ್ನು ಮಾಡದೇ ಆತನನ್ನು ಸತ್ಕರಿಸುಬೇಕು. ಅದು ನಮ್ಮ ಮೊದಲ ಕರ್ತವ್ಯ. ಆದರೆ ಅತಿಥಿಗಳಲ್ಲಿ ಭೇದವಿರಕೂಡದು. ಮನೆಗೆ ಬಂದವರನ್ನು ಸ್ವಾಗತಿಸಿ ಆತಿಥ್ಯ ನೀಡಬೇಕೆಂಬುದು ಇಲ್ಲಿನ ಆಶಯ. ಒಂದು ಕುಟುಂಬದಲ್ಲಿ ಮೂವರು ಓರಗಿತ್ತಿಯರಿಗೆ ಪ್ರತಿಯೊಬ್ಬರಿಗೂ ಹೆಣ್ಣು ಮಕ್ಕಳು ಇದ್ದಾರೆ. ಈಗ ಅವರೆಲ್ಲ ಮದುವೆಯಾಗಿ ಗಂಡನ ಸೇರಿದ್ದಾರೆ. ಅಂತಹ ಸಂದರ್ಭದಲ್ಲಿ ಮೂವರಲ್ಲಿ ಯಾರ ಮಗಳ ಗಂಡ ಅರ್ಥಾತ್ ಅಳಿಯನೇ ಬರಲಿ ಆತನನ್ನು ಸತ್ಕರಿಸುವುದು ನಮ್ಮ ಗುಣವಾಗಬೇಕು. ಬದಲಾಗಿ ಬಂದ ಅತಿಥಿಗಳಲ್ಲಿ ಭೇದ ಮಾಡುವುದಲ್ಲ ಎಂಬುದನ್ನು ತಿಳಿಯದ ಅಕ್ಕನಿಗೆ ತಂಗಿಯಾದ ಓರಗಿತ್ತಿಯು ಕುಟುಂಬದ ಒಗ್ಗಟ್ಟಿನ ಸೂತ್ರವನ್ನು ಹಾಡಾಗಿಸಿದ್ದಾಳೆ.

### ೪.೨.೬ ಭಾವ-ನಾದಿನಿ

ಸಹಜತೆ ಜನಪದ ಸಾಹಿತ್ಯದ ವೈಶಿಷ್ಟ್ಯ. ಅದರಲ್ಲಿ ಚಿತ್ರಿತವಾಗಿರುವ ಭಾವನೆಗಳು ಅನೇಕ. ಆದರೆ ಸಾಮಾಜಿಕ ಪ್ರಜ್ಞೆಯನ್ನು ಗಮನದಲ್ಲಿರಿಸಿಕೊಂಡು ಹದವಾಗಿ ಸದ್ಗುಣ ಹಾಗೂ ದುರ್ಗುಣಗಳನ್ನು ನಯವಾಗಿ ಹೇಳಿದೆ. ಜನಪದರ ಜೀವನದ ಎಲ್ಲ ಮಗ್ಗುಲುಗಳನ್ನು ಗೀತೆಗಳು ಒಳಗೊಂಡಿವೆ. ಜನಪದ ಗೀತೆಗಳಲ್ಲಿ ಅನೇಕ ವೈವಾಹಿಕ ಸಂಬಂಧಗಳ ಚಿತ್ರಣವನ್ನು ನೋಡಿದ್ದು ಅವುಗಳಿಗೆ ಭಾವ-ನಾದಿನಿಯರ ಸಂಬಂಧವೂ ಸೇರುತ್ತದೆ. ಭಾವ ನಾದಿನಿಯರ ಹಾಸ್ಯ ಪ್ರಸಂಗಗಳುಳ್ಳ ಅನೇಕ ನಿದರ್ಶನಗಳ ಗೀತೆಗಳಲ್ಲಿವೆ. ಅಕ್ಕನ ಗಂಡನೇ ಇಲ್ಲಿ ಭಾವ. ಹೆಂಡತಿಯ ತಂಗಿಯೇ ನಾದಿನಿ. ಇವರೀರ್ವರ ಸಂಬಂಧವನ್ನು ಗಮನಿಸಿದಾಗ ಭಾವನನ್ನು ಗೇಲಿ ಮಾಡುವ ಅನೇಕ ಪ್ರಸಂಗಗಳು ಜನಪದರಲ್ಲಿ ಕಾಣುತ್ತೇವೆ. ಗೇಲಿ ಮಾಡುವುದು ಇಲ್ಲಿ ಕೀಳು ಅಭಿರುಚಿಯಲ್ಲ. ಬದಲಾಗಿ ಹದವಾದ ನವಿರು ಹಾಸ್ಯ ಒಡಮೂಡಿ, ತಾನು ನಕ್ಕು ಎಲ್ಲರನ್ನೂ ನಗಿಸುವ ಕ್ರಿಯೆ. 'ರಸಿಕನಾಡುವ ಮಾತು ಶಶಿಯುದಿಸಿ ಬಂದಂತೆ' ಎಂಬ ಸರ್ವಜ್ಞನ ನುಡಿಯಂತೆ ಒಮ್ಮೊಮ್ಮೆ ರಸಿಕತನದ ನುಡಿಗಳು ಹಾಸ್ಯಾತ್ಮಕವಾಗಿ ಹೊರಹೊಮ್ಮುತ್ತವೆ. ಅದು ಜೀವನದಿಂದ ಸಹಜ ಸ್ವಾಭಾವಿಕವಾಗಿ ಒಡಮೂಡಿದ್ದು ಹೊರತು ಉದ್ದೇಶಪೂರ್ವಕವಲ್ಲ. ಭಾವನನ್ನು 'ಕುಕ್ಕೇ ಕೊರಮ' ಎಂದು ಸಂಭೋದಿಸುವ ನಾದಿನಿಯ ಮಾತು ನಗೆಯುಕ್ಕಿಸುತ್ತದೆ. ಅಂತಹ ಸ್ವಾರಸ್ಯಕರ ಪ್ರಸಂಗ ಕೆಳಗಿನ ಪದ್ಯದಲ್ಲಿದೆ.

ಅಕ್ಕನಾ ಗಂಡ ಕುಕ್ಕೇ ಕೊರಮ ಭಾವಯ್ಯ
ಕೊಕ್ಕಾರೆ ಮೀಸೆ ಕೊನೆ ಮೀಸೆ । ಭಾವಯ್ನ

ಕೊಚ್ಚಿಕೊಂಡ್ಹೋಗೊ ಮಳೆದೇವ ।

(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೧೩೩)

ಅಕ್ಕನ ಗಂಡನನ್ನು ಮಳೆಯು ಬಂದು ಕೊಚ್ಚಿಕೊಂಡು ಹೋಗಬೇಕು. ಭಾವನನ್ನು ಕುಕ್ಕೇ ಕೊರಮನೆಂದು, ಕೊಕ್ಕಾರೆ ಮೀಸೆಯುಳ್ಳವನೆಂದು ನಾದಿನಿ ವರ್ಣಿಸುತ್ತಾಳೆ. ಭಾವನು ವಾಚಾಳಿಯಾಗಿದ್ದರೆ ಪ್ರತಿಯಾಗಿ ನಾದಿನಿಗೆ ತಕ್ಕ ಉತ್ತರವನ್ನು ನೀಡುತ್ತಾನೆ. ಇಲ್ಲವಾದರೆ ನಾದಿನಿಯ ಮುಂದೆ ಬೆದರುಬೊಂಬೆಯಾಗಿ ನಿಲ್ಲಬೇಕಾಗುವುದು. ಇನ್ನೊಂದೆಡೆಯಲ್ಲಿ ನಾದಿನಿ ಭಾವನನ್ನು ಗೆಂಡ ಹೊಟ್ಟೆಯವನು ಎಂದು ಕರೆಯುತ್ತಾಳೆ. ಒಟ್ಟಾರೆ ಆಕೆಗೆ ಭಾವನ ಕಾಲೆಳೆದು, ಎಲ್ಲರಲ್ಲಿ ನಗೆಮೂಡಿಸುವುದೇ ಮುಖ್ಯ ಉದ್ದೇಶವಾಗಿರುತ್ತದೆ.

ಹಟ್ಟಿಗೆ ಕುರಿಬಂತು ಕುರಿಗಳಿಗೆ ಜರಬಂತು

ಒಲೆಮೇಗ್ಲ ನೀರು ಉಗೆ ಬಂತು । ಭಾವಯ್ನ

ಗೆಂಡ್ಹೊಟ್ಟೆ ಕಂಡು ನಗುಬಂತು ।

(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೧೩೩)

ಭಾವನ ಉಂಡೆಯಾಕಾರದ ದುಂಡುಹೊಟ್ಟೆಯನ್ನು ಕಂಡು ಪರರನ್ನು ನಗಿಸುವ ತಾನೂ ನಗುವ ನಾದಿನಿಯ ಹಾಸ್ಯಪ್ರಜ್ಞೆಯನ್ನು ಇಲ್ಲಿ ಕಾಣುತ್ತೇವೆ. ಯಾವಾಗಲೂ ಹಳ್ಳಿಗರು ಸಂಬಂಧಗಳನ್ನು ನವಿರಾಗಿ ಕಟ್ಟಿಕೊಳ್ಳುತ್ತಾರೆ. ಸಂಬಂಧಗಳ ಸವಿರುಚಿಯನ್ನು ಅನುಭವಿಸುತ್ತಾರೆ. ಕೆಲವೊಂದು ಸನ್ನಿವೇಶಗಳಲ್ಲಿ ಚಿತ್ತಚಾಂಚಲ್ಯವುಂಟಾಗಿ ಅಕ್ಕನ ಗಂಡನ ಮೇಲೆ ಅನುರಾಗ ಬೆಳೆದು, ಇಲ್ಲವೇ ಭಾವನಲ್ಲಿ ಹೆಂಡತಿಯ ತಂಗಿ ನಾದಿನಿ ಮೇಲೆ ಪ್ರೀತಿಯಂಟಾಗಿ ಭಾವನಿಗೂ ನಾದಿನಿಗೂ ಉಂಟಾದ ಪ್ರಣಯವನ್ನು 'ಅಕ್ಕನ ಮನೆಯಲ್ಲಿ ತಂಗಿ' ಮತ್ತು 'ಭಾವ-ನಾದಿನಿಯರ ಸರಸ' ಎಂಬ ಎರಡು ಜನಪದ ಹಾಡುಗಳಲ್ಲಿ ಸಮರ್ಥವಾಗಿ ಚಿತ್ರಿಸಿದ್ದಾರೆ.

'ಭಾವ-ನಾದಿನಿಯರ ಸರಸ'ದಲ್ಲಿ ನಿಷ್ಕಲ್ಮಷವಾದ ಭಾವ-ನಾದಿನಿಯರ ಸರಸ ಕಂಡುಬರುತ್ತದೆ. ಇಲ್ಲಿ ಶ್ಲೇಷೆಯಿದ್ದರೂ ಯಾವ ಅಪಾರ್ಥಕ್ಕೂ ಅವಕಾಶವಿಲ್ಲದೇ ಶುದ್ಧವಾದ ಹಾಸ್ಯವಿದೆ. ಕೆಲವೊಮ್ಮೆ ಪದ್ಯ ನಾಟಕೀಯ ರೂಪವನ್ನು ತಾಳಿದರೂ ನಿರೂಪಣೆ ಎಲ್ಲರನ್ನು ಮುದಗೊಳಿಸುತ್ತದೆ. ನಾದಿನಿಯ ವಾಚಾಳಿತನವನ್ನು ಕಂಡು ಭಾವನು ಅವಳನ್ನು ರೇಗಿಸುತ್ತಾನೆ. ಅವಳ ವಾಕ್‌ಚಾತುರ್ಯಕ್ಕೆ ಬೆರಗಾಗುತ್ತಾನೆ. ಅದಕ್ಕೆ ಪ್ರತಿಯಾಗಿ ನಾದಿನಿಯ ಹುಸಿಮುನಿಸು, ಒನಪು ಒಯ್ಯಾರಗಳು ಹಾಡಿನಲ್ಲಿ ಸಹಜವಾಗಿ ಕಂಡುಬರುತ್ತವೆ. ಅವಳ ಅಕ್ಕನನ್ನು ಮದುವೆಯಾಗುವಾಗ ನಾದಿನಿ ಇನ್ನೂ ಚಿಕ್ಕವಳು ಈಗ ಬೆಳೆದಿದ್ದಾಳೆ. ಪಟಪಟನೆ ಮಾತಾಡುವ ಕೌಶಲ್ಯ ಪಡೆದಿದ್ದಾಳೆ. ಅದನ್ನು ಕಂಡು ಪ್ರಶ್ನಿಸಿದ ಭಾವನನ್ನು 'ಮಗ್ಗಾದ ಮಲ್ಲಿಗೆ ಅರಳಾದೆ ಭಾವ' ಎಂದು ಉತ್ತರಿಸುವ ಮೂಲಕ ಮೊಗ್ಗು ಹೂವಾಗಿ ಅರಳುವಂತೆ ಅವಳು ಬಾಲೆಯಲ್ಲ ದೊಡ್ಡವಳಾಗಿದ್ದಾಳೆ ಎಂಬುದನ್ನು ವಾಕ್‌ಪಟುತ್ವದಿಂದಲೇ ತಿಳಿಸುತ್ತಾಳೆ.

'ಅಕ್ಕನ ಮನೆಯಲ್ಲಿ ತಂಗಿ' ಎಂಬ ಗೀತೆ ಇದಕ್ಕೆ ಹೊರತಾಗಿದೆ. ಹಬ್ಬಕ್ಕೊ ಜಾತ್ರೆಗೊ ಅಕ್ಕನ ಮನೆಗೆ ಬಂದ ತಂಗಿಯು ಕೆಲವು ದಿನ ಅಲ್ಲಿಯೇ ನೆಲೆಸುತ್ತಾಳೆ. ಆಗ ಭಾವನಿಗೂ ನಾದಿನಿಗೂ ಅನುರಾಗ ಬೆಳೆದು ನಾದಿನಿ ಗರ್ಭವತಿಯಾಗುತ್ತಾಳೆ. ಅದು ಅಕ್ಕನ ಗಮನಕ್ಕೆ ಬಂದಾಗ ತಂಗಿಯನ್ನು ತವರಿಗೆ ಕಳುಹಿ, ಅವಳಿಗೆ ಮದುವೆ ಮಾಡಿ ತನ್ನ ಸಂಸಾರವನ್ನು ಕಾಪಾಡಿಕೊಳ್ಳುತ್ತಾಳೆ. ಭಾವ-ನಾದಿನಿಯರ ಪ್ರಣಯವನ್ನು ಇಲ್ಲಿ ನೇರವಾಗಿ ವ್ಯಕ್ತಪಡಿಸದೇ ಸಾಂಕೇತಿಕವಾಗಿ ಕಟ್ಟಿಕೊಡುವ ಜನಪದ ಕವಿಯ ಪ್ರಜ್ಞೆ ಮೆಚ್ಚುವಂತದ್ದು. ಅಕ್ಕನಿಗೆ ತಂಗಿಯ ಮೇಲೆ ಸಂಶಯ ಮೂಡಿದಾಗ 'ತಂಗಿ ನಿನ್ನ ಮೈಯು ನಿಜಗೆಂಪು' ಬಣ್ಣಕ್ಕೆ ತಿರುಗಿದೆ ಅದಕ್ಕೆ ಕಾರಣವನ್ನು ಕೇಳಿದಾಗ 'ವಿಜಯನಗರದ ಅರಿಶಿವ ಮಿಂದಿದಿನಿ' ಎಂದು ತಂಗಿ ಹಾರಿಕೆ ಉತ್ತರವನ್ನು ನೀಡುತ್ತಾಳೆ. ಬೆಂಕಿಯನ್ನು ಸೆರಗಲ್ಲಿ ಕಟ್ಟಿಕೊಂಡರೆ ಹೊಗೆಯಾಡದೆ ಬಿಟ್ಟತೇ? ಅಂತೆಯೇ ಬಸಿರನ್ನು ಮುಚ್ಚಿಡಲಾದೀತೇ? ಮುಂದೆ ತಂಗಿ ತಾನು ಗರ್ಭಿಣಿಯಾಗಿರುವುದಕ್ಕೆ ಅಕ್ಕನ ಗಂಡನೇ ಕಾರಣವೆಂದು ತಿಳಿಸಿದಾಗ, ಅಕ್ಕ ಈಗ ಏನೂ ಮಾಡದ ಅಸಹಾಯಕ ಸ್ಥಿತಿಯಲ್ಲಿದ್ದಾಳೆ. ಆಗಿಹೋದದ್ದನ್ನು ಮುಚ್ಚಿಟ್ಟು ಮುಂದಿನ ಮಾರ್ಗೋಪಾಯಗಳನ್ನು ಹುಡುಕುತ್ತಾಳೆ. 'ಆದರಾಗಲಿ ತಂಗಿ, ಯಾರಿಗ್ಹೇಳಲು ಬೇಡ, ಹೋಗ್ಬಾರೆ ತೌರೀಗೆ' ಎಂದು ಹೇಳಿ ತಂಗಿಯನ್ನು ತವರಿಗೆ ಕಳುಹುತ್ತಾಳೆ. ಆಗ ನಾದಿನಿ ತವರಿಗೆ ಹೋಗುವಾಗ ತನಗೆ ಸುಖವಿತ್ತ ಭಾವನ ಸಂಬಂಧಕ್ಕೆ ಹೊಸತನ ನೀಡಲು ಪ್ರಯತ್ನಿಸುತ್ತಾಳೆ. ಅಂತಹ ಪ್ರಸಂಗವೊಂದರ ಅಭಿವ್ಯಕ್ತಿಯನ್ನು ಈ ಕೆಳಗೆ ನೀಡಲಾಗಿದೆ.

ಹೋಗ್ತೀನಿ ಹೊಸ್ತಿಲೆ ಹೋಗ್ತೀನಿ ಬಾಗಿಲೆ
ನಾಗಸಂಪಂಗಿ ನಡುಮನೆಯೆ । ಭಾವಯ್ಯ
ಹೋಗಿ ಬರ್ತೀನಿ ತೌರಿಗೆ । (ಎಲ್. ಗುಂಡಪ್ಪ, ೧೯೪೭, ಪು-೭೬)

ನಾದಿನಿ ಹೋಗುವಾಗ ಮನೆಯ ಹೊಸ್ತಿಲು ಬಾಗಿಲುಗಳಿಗೆ, ತನಗೆ ಹೇಳುವುದನ್ನು ಕಂಡ ಭಾವನಿಗೆ ಅವಳು ಹೋಗುವುದು ಇಷ್ಟವಿಲ್ಲ. ಏಕೆಂದರೆ ಕಳ್ಳ ಪ್ರಣಯದ ಸವಿ. ಮತ್ತೆ ಅವಳನ್ನು ಕಾತರದಿಂದ 'ಹೋಗೋಳು ಹೋಗ್ತೀಯ ಹೊನ್ನೋಲೆ ನಾದಿನಿ ನಾರಿ ನೀ ಬರುವ ದಿನ ಹೇಳೆ' ಎಂದು ಕೇಳುತ್ತಾನೆ. ಆದರೆ ಸಮಾಜದ ರೀತಿರಿವಾಜುಗಳ ಅರಿವಿಲ್ಲದ ಮುಗ್ದೆ ನಾದಿನಿ ದಿಟ್ಟವಾಗಿ ನುಡಿಯುತ್ತಾಳೆ.

ಕಕ್ಕೆ ಕಾಯಾದಾಗ ಬಿಕ್ಕೆ ಫಲ ಬಿಟ್ಟಾಗ
ನಾ ಗಂಡು ಮಗನ ಹಡೆದಾಗ । ಭಾವಯ್ಯ
ಆಗ ಪಾಲಿಗೆ ಬರುತೀನಿ । (ಎಲ್. ಗುಂಡಪ್ಪ, ೧೯೪೭, ಪು-೭೬)

ಮದುವೆಯಾದ ಹೆಣ್ಣಿಗೆ ಯಾವ ರೀತಿಯಾಗಿ ಎಲ್ಲ ಸ್ಥಾನಮಾನಗಳು ಸಿಕ್ಕುತ್ತವೆಯೋ? ಅದೇ ರೀತಿ ತನಗೂ ಹಕ್ಕುಗಳು ಸಿಗುತ್ತವೆಂದು ಅವಳು ನಂಬಿರಬೇಕು. ಅದಕ್ಕಾಗಿ ಅವಳು ಹೆರಿಗೆಯಾದ

ಮೇಲೆ ಗಂಡು ಮಗುವಿಗೆ ತಾಯಿಯಾಗಿ ನಿನ್ನ ಮನೆ ಹಾಗೂ ಮನಸ್ಸಿನಲ್ಲಿ ಪಾಲು ಕೇಳುವುದಕ್ಕೆ ಬರುತ್ತೇನೆಂದು ಹೇಳುತ್ತಾಳೆ. ಚಿಕ್ಕ ಪ್ರಾಯದ ಆಕೆಗೆ ತನ್ನಕ್ಕನ ಸಂಸಾರವು ಮುರಿದು ಬೀಳುವುದೆಂಬ ಕಲ್ಪನೆಯೂ ಇಲ್ಲದಿರುವುದನ್ನು ಇಲ್ಲಿ ಗಮನಿಸಬಹುದು. ನಾದಿನಿಯ ಮಾತು ಕೇಳಿದ ಭಾವನಿಗೆ ಕಿವಿಯಲ್ಲಿ ಕಾಸಿದೆಣ್ಣೆಯ ಸುರಿದ ಹಾಗೆ ಭಾಸವಾಗುತ್ತದೆ ಆಗ ಅವನಾಡುವ ಮಾತು, ನೀಡುವ ಪ್ರತಿಕ್ರಿಯೆ ಆಶ್ಚರ್ಯವೆನಿಸುತ್ತದೆ.

ಪಾಲಿಗೆ ಬಂದರೆ ನಾಲಿಗೆ ಸೀಳಿಸುವೆ
ನೋಡೋ ಕಣ್ಣುಗಳ ಇರಿಸುವೆ । ಎಲೆ ಹೆಣ್ಣೆ
ಪಾಲು ನಿನಗ್ಹೆಂಗೆ ಸಲುವೆವೆ । (ಹಲಸಂಗಿ ಗೆಳೆಯರು, ೧೯೩೧, ಪು-೯೮)

ಗಂಡಿಗೆ ಸುಖ ಬೇಕು. ಅಪಮಾನವಲ್ಲ. ಭೋಗ ಬೇಕು. ಆದರೆ ಜವಾಬ್ದಾರಿ ಬೇಕಿಲ್ಲ. ಸುಖಭೋಗಗಳು ಹೇಗಾದರೂ ಬರಲಿ ಅನುಭವಿಸುತ್ತಾನೆ. ಬೆಕ್ಕು ಕಣ್ಣು ಮುಚ್ಚಿ ಹಾಲು ಸವಿಯುವಂತೆ ಸವಿಯುತ್ತಾನೆ. ಆದರೆ ಅದರಿಂದ ಬರುವ ನೋವು, ಅಪಮಾನ, ಜವಾಬ್ದಾರಿಗಳೆಂದು ಆತನಿಗೆ ಬೇಕಿಲ್ಲ. ಇಲ್ಲಿ ಭಾವನ ಸ್ವಾರ್ಥ ಮನೋಭಾವವು ಅನಾವರಣಗೊಳ್ಳುತ್ತದೆ. ಸಾಮಾಜಿಕ ಮೌಲ್ಯದಡೀ ಯೋಚಿಸಿದಾಗ ಅವನ ಸ್ವಭಾವವು ತೀರ ಸ್ವಾಭಾವಿಕವೆನಿಸುತ್ತದೆ. ಏಕೆಂದರೆ ಸಮಾಜಕ್ಕೆ ಹೆದರಿ, ಕಳ್ಳ ಸಂಬಂಧವನ್ನು ನಿರಾಕರಿಸುತ್ತಾನೆ. ಅದನ್ನು ಸಾಮಾಜಿಕವಾಗಿ ಒಪ್ಪಿಕೊಳ್ಳಲು ಅತ ಸಿದ್ಧನಿಲ್ಲ. ಹೀಗೆಯೇ ಹಲವು ರೀತಿಯ ಭಾವ ನಾದಿನಿಯರ ಸಂಬಂಧಗಳು ಜಾನಪದ ಗೀತೆಗಳಲ್ಲಿ ಕಂಡು ಬರುತ್ತವೆ.

ಕೆಲವು ಸಂದರ್ಭಗಳಲ್ಲಿ ಹೆಂಡತಿಯ ತಂಗಿಯನ್ನು ಮಗಳಂತೆ ಪಾಲನೆ-ಪೋಷಣೆ ಮಾಡಿದ ನಂತರ ಮದುವೆ ಮಾಡಿಕೊಟ್ಟ ಪ್ರಸಂಗಗಳು ಜನಪದರಲ್ಲಿ ಕಂಡುಬರುತ್ತವೆ. ಮಗಳಿಗೆ ನೀಡುವ ಸೌಕರ್ಯ, ಕೊಡುವ ಸೌಲಭ್ಯ ಎಲ್ಲವನ್ನು ಭಾವನು ನಾದಿನಿಗೆ ನೀಡುತ್ತಾನೆ. ತಾನೆ ಮುಂದೆ ನಿಂತು ಧಾರೆಯೆರೆದು ಕೊಡುವ ಭಾವ-ನಾದಿನಿಯರ ಸಂಬಂಧಗಳ ಜನಪದರ ಆದರ್ಶ ಜೀವನಕ್ಕೆ ಸಾಕ್ಷಿಯೆನಿಸಿವೆ.

### ೪.೨.೭ ಅತ್ತಿಗೆ – ನಾದಿನಿ

ಅಣ್ಣನ ಹೆಂಡತಿ, ಗಂಡನ ಅಥವಾ ಹೆಂಡತಿಯ ಅಕ್ಕನನ್ನು ಅತ್ತಿಗೆ ಎಂದು ಕರೆಯುತ್ತಾರೆ. ಗಂಡನ ತಂಗಿ, ತಮ್ಮನ ಹೆಂಡತಿ, ಹೆಂಡತಿಯ ತಂಗಿಗೆ ನಾದಿನಿ ಎಂದು ಕರೆಯುತ್ತಾರೆ. ಪ್ರಸ್ತುತ ಅಧ್ಯಯನದಲ್ಲಿ ಅಣ್ಣನ ಹೆಂಡತಿ ಅತ್ತಿಗೆ ಹಾಗೂ ಗಂಡನ ತಂಗಿ ನಾದಿನಿ ಇವರೀರ್ವರ ನಡುವಿನ ಸಂಬಂಧವನ್ನು ವಿಶ್ಲೇಷಿಸಲಾಗಿದೆ. ಜನಪದರು ಸೂಕ್ತ ಸಂವೇದನೆಯನ್ನು ಹೊಂದಿದವರು. ಅವರು ಜೀವನದ ಪ್ರತಿಯೊಂದು ಸನ್ನಿವೇಶವನ್ನು ಸುಖ-ಸಂತೋಷದಿಂದ ಕಳೆಯಲು ಸಂಕಲ್ಪ ತೊಟ್ಟವರು. ಆದರೂ ಕೆಲವು ಸಂದರ್ಭಗಳಲ್ಲಿ ಕಷ್ಟ ಅವರನ್ನೂ ಬೆನ್ನುಬಿಡದು. ಪ್ರತಿಯೊಂದು ಸಂಬಂಧವನ್ನು

ಮಜ್ಜಿಗೆಯೊಳಗಿನ ಬೆಣ್ಣೆಯಂತೆ ನಾಜೂಕಿನಿಂದ ಕಾಪಾಡಿಕೊಂಡು ಬಂದಿದ್ದಾರೆ. ಕೆಲವು ಸಂಬಂಧಗಳನ್ನು ನಿಭಾಯಿಸದೇ ಕೈತೊಳೆದುಕೊಂಡಿದ್ದುಂಟು. ಅತ್ತಿಗೆ-ನಾದಿನಿಯರ ಸಂಬಂಧದಲ್ಲೂ ಎರಡು ಮುಖಗಳನ್ನು ಕಾಣುತ್ತೇವೆ. ಒಲುಮೆ, ನಂಬಿಕೆ, ಪರಸ್ಪರ ಸೌಹಾರ್ದತೆಯಿಂದ ಬದುಕುವುದು ಒಂದು ಮುಖವಾದರೆ; ಅಸೂಯೆ, ದ್ವೇಷ, ಈರ್ಷೆ ಮತ್ಸರಗಳಿಂದ ಬಾಳುವುದು ಇನ್ನೊಂದು ಮುಖ.

ಹೆಣ್ಣು ಮದುವೆಯಾದ ಬಳಿಕ ಗಂಡನ ಮನೆಯಲ್ಲಿ ನಾನಾ ರೀತಿಯ ಹೊಸ ಬಾಂಧವ್ಯಗಳನ್ನು ನಿಭಾಯಿಸಬೇಕಾಗುತ್ತದೆ. ಮದುವೆಯಾಗಿ ಬಂದ ಹೆಣ್ಣು ಗಂಡನ ತಂಗಿಗೆ ಅತ್ತಿಗೆಯಾಗಿಯೂ, ಮನೆಯಲ್ಲಿರುವ ಹೆಣ್ಣು ಅಂದರೆ ಗಂಡನ ತಂಗಿ ಅಣ್ಣನ ಹೆಂಡತಿಗೆ ನಾದಿನಿಯಾಗಿಯೂ ಸಂಬಂಧಗಳನ್ನು ನಿಭಾಯಿಸಬೇಕಾಗುತ್ತದೆ. ತವರಿನ ಹಂಗು ತೊರೆದು ಗಂಡನ ಮನೆ ಸೇರಿದ ನಾದಿನಿಯೊಬ್ಬಳು, ಅತ್ತಿಗೆಯ ನಿಷ್ಕಾಳಜಿಯ ನಡುವೆಯೂ ತವರಿಗೆ ತನ್ನ ಅತ್ತಿಗೆಗೆ ಒಳ್ಳೆಯದಾಗಲಿ ಎಂದು ಹಾರೈಸುವ ಆಕೆಯ ಮನೋಧರ್ಮ ಮೆಚ್ಚತಕ್ಕದ್ದು. ತಾನು ಮದುವೆಯಾಗಿ ಬೇರೊಬ್ಬರ ಮನೆಯ ಸೊಸೆಯಾದರೂ ಹೆಣ್ಣುಮಗಳ ತವರಿನ ಹಾರೈಕೆ ನಿಲ್ಲದು. ತವರಿನ ಸಂಬಂಧವನ್ನು ಕಡಿದುಕೊಳ್ಳಲು ಇಷ್ಟಪಡದ ಆಕೆಯ ಹಾರೈಕೆ ಕೆಳಗಿನ ಪದ್ಯದಲ್ಲಿದೆ.

ಅತ್ತೀಗೆ ಹಡಿಯಲಿ, ಹತ್ತೆಮ್ಮಿ ಕರಿಯಲಿ
ಹಿತ್ತಲ ಬಾಳಿ ಚಿಗಿಯಲಿ । ಅತ್ಯೆಂದು
ಅತ್ತಿಗೆ ಮಗಳು ಕರಿಯಲಿ । (ವಿನೀತ ರಾಮಚಂದ್ರರಾಯ, ೧೯೬೦, ಪು-೫೬)

ಅಣ್ಣನ ಹೆಂಡತಿಯಾದ ಅತ್ತಿಗೆ ಹೆಣ್ಣು ಮಗಳನ್ನು ಹೆರಬೇಕು. ಅವಳು ತನಗೆ ಅತ್ತೆಯೆಂದು ಕರೆಯಬೇಕೆಂಬುದು ನಾದಿನಿಯ ಬಯಕೆಯಾಗಿದೆ. ಸಾಧ್ಯವಾದರೆ ತನ್ನ ಮಗನಿಗೆ ತವರಿನ ಕುಡಿಯಾದ ಅಣ್ಣ-ಅತ್ತಿಗೆಯರ ಮಗಳನ್ನು ತಂದುಕೊಳ್ಳುವ ಆಸೆ. ತವರಿನ ರಸಬಳ್ಳಿ ಹಬ್ಬಬೇಕು. ತವರಿನ ಸಿರಿ ಹೆಚ್ಚಬೇಕೆಂಬುದೇ ಆಕೆಯ ಉದ್ದೇಶ. ಬದುಕಿನ ಪ್ರತಿಯೊಂದು ತಿರುವುಗಳನ್ನು ಚೌಕಟ್ಟಿನೊಳಗೆ ಹೆಣ್ಣು ಅನುಭವಿಸುತ್ತಾಳೆ. ಆಕೆಗೆ ಒಂದು ಪರಿಮಿತಿಯಿದೆ. ಅದರಲ್ಲಿಯೇ ಅವಳು ಬದುಕಬೇಕು. ಇನ್ನೂ ನಾದಿನಿಯ ಮನೆಯ ವೈಭವವನ್ನು ಕಂಡು ಅತ್ತಿಗೆಯು ಇತರರೊಂದಿಗೆ ಹಂಚಿಕೊಂಡು ಹೆಮ್ಮೆಯಿಂದ ಬೀಗುತ್ತಾಳೆ. ಸಂಪತ್ತು ನಾದಿನಿಯದಾದರೂ ತನ್ನದೇ ಎನ್ನವಷ್ಟು ಸಂತೋಷಪಡುತ್ತಾಳೆ. ಬದಲಾಗಿ ಕರುಬುವುದಿಲ್ಲ. ಏಕೆಂದರೆ ಅತ್ತಿಗೆ-ನಾದಿನಿಯರ ನಡುವೆ ಅನ್ಯೂನ್ಯತೆಯಿದೆ. ಅವರೀರ್ವರ ಗುಣಸಂಪತ್ತಿನ ನಡುವೆ ಹಣಸಂಪತ್ತು ಕೇವಲ ಎನಿಸುತ್ತದೆ.

ನನ್ನ ನಾದುನಿ ಅವಳೇನು ಕಮ್ಮಿಯೆ
ನಲ್ವತ್ತು ದೀವಿಗೆ ಬೆಳಗ್ಯಾವು । ನನ್ನ
ನಾದಿನರಸಿಯ ಮನೆಮುಂದೆ । (ಎಸ್. ಕೆ. ಕರೀಂಖಾನ್, ೧೯೫೫, ಪು-೫೨)

ನನ್ನ ನಾದಿನಿಯ ಗಂಡನ ಮನೆಯಲ್ಲಿ ಸಿರಿಸಂಪತ್ತಿನೊಂದಿಗೆ ಸುಖಸಂತೋಷವು ತುಂಬಿಕೊಂಡಿದೆ. ಅವಳ ಸಿರಿವಂತಿಕೆಗೆ ಆಕೆಯ ಮನೆಯ ಅಂಗಳಲ್ಲಿ ಬೆಳಗುವ ನಲವತ್ತು ದೀವಿಗೆಗಳೇ ಸಾಕ್ಷಿಯೆನ್ನುತ್ತಾಳೆ. ಇತರರಿಗೆ ತನ್ನ ನಾದಿನಿ ಅರಸಿಯೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ. ಇತರರು ಅವಳ ಸುಖದ ಬಗ್ಗೆ ಕೇಳಿದಾಗ 'ಸುಖದಲ್ಲಿ ನಾನೂ ಕಡಿಮೆಯಿಲ್ಲ ನನ್ನ ನಾದಿನಿಯೂ ಕಡಿಮೆಯಿಲ್ಲ' ಎನ್ನುತ್ತಾಳೆ. ಪ್ರೀತಿ, ನಂಬಿಕೆ, ಸಹಕಾರ ಇವೆಲ್ಲ ಇದ್ದಾಗ ಉತ್ತಮ ಬಾಂಧವ್ಯ ಸಾಧ್ಯವಾಗುತ್ತದೆ. ಒಂದು ವೇಳೆ ಅವುಗಳಲ್ಲಿ ವ್ಯತ್ಯಾಸ ಕಂಡುಬಂದಾಗ ಸಂಬಂಧಗಳಲ್ಲಿಯೂ ಏರುಪೇರು ಉಂಟಾಗುತ್ತದೆ.

ಅಣ್ಣನ ಹೆಂಡತಿ ಕಣ್ಣಿಗೆ ಒಳ್ಳೆಯವಳು
ಸುಣ್ಣದ ನೀರ ಒಲಿಮುಂದ । ಇಟಗೊಂಡು
ಎಮ್ಮಿ ಹಾಲೆಂದು ಬಡಸ್ಯಾಳ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೯೧)

ಅತ್ತಿಗೆಯೂ ನೋಡಲು ಒಳ್ಳೆಯವಳೇ ಆದರೆ ಅವಳ ಮನೋಗುಣ ಸರಿಯಿಲ್ಲ. ಅವಳ ಸಣ್ಣ ಪುಟ್ಟ ವಿಷಯಕ್ಕೆ ಕಿರಿಕಿರಿ ಮಾಡುವ ಸ್ವಭಾವ. ಅಣ್ಣನ ಮುಂದೆ ಚೆನ್ನಾಗಿ ಮಾತನಾಡುವ ಅತ್ತಿಗೆ ಅಣ್ಣನಿಲ್ಲದ ವೇಳೆ ಹಂಗಿಸಿ ಮಾತನಾಡುತ್ತಾಳೆ ಎಂದು ನೊಂದ ನಾದಿನಿಯೊಬ್ಬಳು ಅಣ್ಣನ ಹೆಂಡತಿಯ ಬಗೆಗೆ ದೂರುತ್ತಾಳೆ. ಪರಿಪರಿಯಾಗಿ ಕಾಡುವ ಅತ್ತಿಗೆಯೂ ಸುಣ್ಣದ ನೀರನ್ನೇ ಎಮ್ಮೆಯ ಹಾಲೆಂದು ಬಡಿಸುತ್ತಾಳೆ. ಅದರಿಂದ ನಾದಿನಿಗೆ ಕೆಡಕಾಗಬೇಕೆಂದು ಅವಳ ಬಯಕೆ. ಅದನ್ನೇ ಗೆಳತಿಯರೊಂದಿಗೆ ಹಂಚಿಕೊಳ್ಳುವ ನಾದಿನಿಯ ನುಡಿಗಳನ್ನು ಕಾಣುತ್ತೇವೆ. ಅವಳು ಅತ್ತಿಗೆಯ ಬಳಿಹೋಗಿ ಸಮಸ್ಯೆ ತಿಳಿಯಾಗಿಸುವ ಪ್ರಯತ್ನ ಮಾಡುತ್ತಾಳೆ. ಏಕೆಂದರೆ ತನ್ನ ಅಣ್ಣನಿಗೆ ವಿಷಯ ತಿಳಿದರೆ ಅತ್ತಿಗೆಯನ್ನು ಬಯ್ಯಬಹುದು ಇಲ್ಲವೇ ಹೊಡೆಯಬಹುದೆಂದು ಅತ್ತಿಗೆಗೆ ಸಲಹೆಗಳನ್ನು ನೀಡುವ ಪ್ರಸಂಗ ಕೆಳಕಂಡ ಗೀತೆಯಲ್ಲಿದೆ.

ಕಣ್ಣೀಗಿ ಮೂಗೀಗಿ ಎರಡೇನ ಅತ್ತೀಗಿ
ನಾ ನನ್ನ ಅಣ್ಣ ಎರಡೇನ । ಅತಿಗೆಮ್ಮ
ನಿನ್ನಿಂದ ಅಣ್ಣ ಎರಡಾದ । (ಹಲಸಂಗಿ ಗೆಳೆಯರು, ೧೯೩೧, ಪು-೪೪)

ಅತ್ತಿಗೆಯನ್ನು ಅಮ್ಮನೆಂದು ಕರೆಯುವ ನಾದಿನಿ, ಅವಳ ಮನಸ್ಸನ್ನು ತಿದ್ದಲು ಪ್ರಯತ್ನಿಸುತ್ತಾಳೆ. ತಾಯಿಯಿಲ್ಲದ ನಾದಿನಿಗೆ ಅತ್ತಿಗೆಯೇ ಅಮ್ಮ. ಒಂದೇ ಗಿಡದಲ್ಲಿ ಅರಳಿದ ಹೂಗಳು ಬೇರೆಯಲ್ಲ. ಹಾಗೆಯೇ ನಾನು ಮತ್ತು ನನ್ನ ಅಣ್ಣನೂ ಬೇರೆಯಲ್ಲ. ಒಂದೇ ಮುಖದಲ್ಲಿರುವ ಕಣ್ಣಿಗೂ ಮೂಗಿಗೂ ತರತಮ ಉಂಟೇ? ಆದರೆ ನಿನ್ನನು ಮದುವೆಯಾದ ಬಳಿಕ ನನ್ನಣ್ಣನ ಮನಸ್ಸು ಬದಲಾಯಿತು. ಬದಲಾವಣೆಗೆ ಕಾರಣ ನೀನೇ. ಅಣ್ಣನು ನಿನ್ನ ಮಾತು ಕೇಳಿ ನನ್ನನ್ನು ತಿರಸ್ಕಾರ ಭಾವನೆಯಿಂದ ನೋಡುತ್ತಿದ್ದಾನೆ. ಅಣ್ಣನನ್ನು ಪ್ರೀತಿಯಿಂದ ಕಾಣುವ ನೀನು ನನ್ನಲ್ಲಿ ಭಿನ್ನತೆ ಏಕೆ ತೋರುತ್ತಿರುವೆ?

ಎಂದು ಅತ್ತಿಗೆಯನ್ನು ಪ್ರಶ್ನಿಸುತ್ತಾಳೆ. ಆದರೆ ಅದು ಯಾವುದೇ ಫಲವನ್ನು ನೀಡುವುದಿಲ್ಲ. ಅತ್ತಿಗೆ ಮನಸ್ಸನ್ನು ಬದಲಾಯಿಸುವ ಪ್ರಯತ್ನವನ್ನು ನಾದಿನಿ ಬಿಡುವುದಿಲ್ಲ. ಮುಂದೆ ನಾದಿನಿಯ ಮದುವೆಯಾಗಿ ಗಂಡನ ಮನೆ ಸೇರುತ್ತಾಳೆ. ಅವಳಿಗೆ ಗಂಡುಮಗು ಹುಟ್ಟುತ್ತದೆ. ಅತ್ತಿಗೆ ಹೆಣ್ಣುಮಗುವನ್ನು ಹೆರುತ್ತಾಳೆ. ಬೆಳೆದು ದೊಡ್ಡವರಾದ ಮೇಲೆ ಮದುವೆಯ ವಯಸ್ಸಿಗೆ ಮಕ್ಕಳು ಬಂದಾಗ ತವರಿನ ಸಂಬಂಧ ಬಯಸಿ ತನ್ನಣ್ಣನ ಮನೆಗೆ ಹೆಣ್ಣು ಕೇಳಲು ಹೋಗುತ್ತಾಳೆ. ಆಗ ಅಣ್ಣನ ಹೆಂಡತಿಯಾದ ಅತ್ತಿಗೆ ನಿರಾಕರಿಸುತ್ತಾಳೆ. ಅವಳ ಕುರಿತು ನಾದಿನಿ ಹೀಗೆ ಹೇಳುತ್ತಾಳೆ.

ಕಣ್ಣು ಮುಚ್ಚಾರೆ ಅನ್ಯಾರ ಮಗಳಲ್ಲ
ನಾ ನಿಮ್ಮ ರಾಯ್ಗೆ ಕಿರಿತಂಗೆ । ಅತಿಗೆಮ್ಮ
ಹೆಣ್ಣು ಕೊಡಿ ನಮ್ಮ ಮಗನೀಗೆ । (ದೇ. ಜವರೇಗೌಡ, ೧೯೭೮, ಪು-೬೭)

'ನಾನು ನಿನ್ನ ಗಂಡನ ಸಣ್ಣ ತಂಗಿ. ಅದಕ್ಕಾಗಿ ನನ್ನ ಮಗನಿಗೆ ನಿಮ್ಮ ಮಗಳನ್ನು ಕೊಡಿರೆಂದು ಅತ್ತಿಗೆಯನ್ನು ಬೇಡಿಕೊಳ್ಳುತ್ತಾಳೆ. ಅಣ್ಣನ ಮನಸ್ಸನ್ನು ಬದಲಾಯಿಸಬೇಡ. ತವರಿನ ಸಂಬಂಧವನ್ನು ಬಯಸಿ ಬಂದಿದ್ದೇನೆ' ಎಂದು ನಾದಿನಿ ಅತ್ತಿಗೆಯ ಬಳಿ ವಿನಂತಿಸಿಕೊಳ್ಳುತ್ತಾಳೆ. ಆದರೆ ಅದು ಸಾಧ್ಯವಾಗುವುದಿಲ್ಲ. ಮೊದಲಿನಿಂದಲೂ ಹೆಂಡತಿಯ ಮಾತನ್ನು ಕೇಳುತ್ತಾ ಬಂದ ಅಣ್ಣನು ತಂಗಿಯ ಸಂಬಂಧ ನಿರಾಕರಿಸುತ್ತಾನೆ. ಆಗಲೂ ಅತ್ತಿಗೆಯ ಮಾತನ್ನು ಕೇಳಿದ ಅಣ್ಣನಿಗೆ 'ನಾನೇನು ನನ್ನ ಮಗನಿಗೆ ಹೆಣ್ಣು ಸಿಗುವುದಿಲ್ಲವೆಂದು ನಿನ್ನ ಮಗಳನ್ನು ಕೇಳಲು ಬಂದಿಲ್ಲ ಬದಲಾಗಿ, ತವರಿನ ಸಂಬಂಧ ಕಡಿದುಕೊಳ್ಳಬಾರದೆಂಬ ಆಸೆಯಿಂದ ಬಂದೆ. ನನ್ನ ಮಗನಿಗೆ ನಿನ್ನ ಮಗಳಿಗಿಂತ ಚೆಲುವೆಯನ್ನು ತಂದು ಮದುವೆ ಮಾಡುತ್ತೇನೆ'. ಎಂದು ಅಣ್ಣ-ಅತ್ತಿಗೆಯರ ಮೇಲೆ ಕೋಪಿಸಿಕೊಳ್ಳುತ್ತಾಳೆ. ಮನುಷ್ಯ ಸಂಬಂಧಗಳು ಯಾವಾಗಲೂ ಹೀಗೆ ಕೆಲವು ಖುಷಿ ಕೊಟ್ಟರೆ ಕೆಲವು ನೋವು ಕೊಡುತ್ತವೆ. ಇನ್ನೂ ಕೆಲವು ವಿರಸಕ್ಕೆ ಕಾರಣವಾಗುತ್ತವೆ.

ಮೇಲ್ಕಂಡ ದೃಷ್ಟಾಂತಗಳಲ್ಲಿ ಅತ್ತಿಗೆಯ ದುರ್ಗುಣಗಳ ಕುರಿತು ಪ್ರಸ್ತಾಪವಾಗಿದೆ. ನಾದಿನಿಯು ಅಲ್ಲಿ ಒಳ್ಳೆಯ ಗುಣ ಹೊಂದಿದವಳಾಗಿದ್ದಳು. ಇದಕ್ಕೆ ಹೊರತಾಗಿ ನಾದಿನಿಯು ತವರ ಮನೆಯ ಸ್ವತ್ತೆಲ್ಲ ತನ್ನದೇ ಎನ್ನುವಂತೆ ವರ್ತಿಸಿ, ಅತ್ತಿಗೆಗೆ ಕಿರುಕುಳ ನೀಡುತ್ತಿರುತ್ತಾಳೆ ಅಂತಹ ನಾದಿನಿಗೆ ಆಶ್ರಯಕೊಟ್ಟ ಅತ್ತಿಗೆಯೊಬ್ಬಳು ಅವಳ ದುರಾಸೆಯ ಕುರಿತಾಗಿ ಹೀಗೆ ಹೇಳುತ್ತಾಳೆ. 'ಇರಾಕ ಜಾಗ ಕೊಟ್ಟರೆ ಮನೆಯಲ್ಲ ನಂದು ಅಂದರಂತೆ' ಎಂಬ ಗಾದೆಯಂತಹ ಸ್ವಭಾವದ ನಾದಿನಿಯ ಗುಣವಿಲ್ಲಿ ಅನಾವರಣಗೊಳ್ಳುತ್ತದೆ.

ನಾದಿನೊಳ್ಳ್ಯೋಳೆಂದು ಹಾದೀಲಿ ಮನೆ ಕೊಟ್ಟೆ
ನಾಯಿಗೆ ಮುದ್ದೆ ಹೊರುವೋಳ । ಕಂಡಾರೆ ।
ನಾಡಿಗೆಲ್ಲ ಆಸೆ ಅವಳ್ಮೇಲೆ । (ಎಸ್. ಕೆ. ಕರೀಂಖಾನ್, ೧೯೫೫, ಪು-೬೭)

ನಾದಿನಿಯು ಒಳ್ಳೆಯವಳೆಂದು ನಾನಿರುವ ಓಣಿಯಲ್ಲಿಯೇ ಅವಳಿಗೆ ಇರಲು ಆಶ್ರಯ ಕೊಟ್ಟೆ. ನಾಯಿಗೆ ಮುದ್ದೆ ಹೊರುವವಳು ನಾದಿನಿ ಆದರೂ ಆಕೆಗೆ ನಾಡಿನ ಮೇಲೆ ಆಸೆ. ದುರಾಸೆಯ ಗುಣವುಳ್ಳ ನಾದಿನಿಯನ್ನು ಕುರಿತು ಅತ್ತಿಗೆಯೊಬ್ಬಳು ಹೇಳಿದ ಮಾತುಗಳಿವು. ಹೀಗೆ ಜನಪದ ಗೀತೆಗಳ್ಲಿ ಅತ್ತಿಗೆ-ನಾದಿನಿಯರ ನಡುವಿನ ಇಬ್ಬಗೆಯ ಬಾಂಧವ್ಯಗಳನ್ನು ಕಾಣುತ್ತೇವೆ.

### ೪.೨.೮ ಅತ್ತಿಗೆ – ಮೈದುನ

ಅಣ್ಣನ ಹೆಂಡತಿ, ಗಂಡನ ಅಕ್ಕ ಹಾಗೂ ಹೆಂಡತಿಯ ಅಕ್ಕ ಇವರೆಲ್ಲರೂ ಸಂಬಂಧದಲ್ಲಿ ಅತ್ತಿಗೆಯಾಗುತ್ತಾರೆ. ಜನಪದ ಗೀತೆಗಳಲ್ಲಿ ಅಣ್ಣನ ಹೆಂಡತಿ ಅತ್ತಿಗೆಯ ಪ್ರಸ್ತಾಪ ಹೆಚ್ಚು ಕಂಡುಬರುತ್ತದೆ. ಇನ್ನೂ ಮೈದುನನೆಂದರೆ ಗಂಡನ ತಮ್ಮ, ಹೆಂಡತಿಯ ತಮ್ಮ ಹಾಗೂ ತಂಗಿಯ ಗಂಡ ಇವರೆಲ್ಲರೂ ಸಂಬಂಧದಲ್ಲಿ ಮೈದುನರಾಗುತ್ತಾರೆ. ಇಲ್ಲಿಯೂ ಕೂಡ ಗಂಡನ ತಮ್ಮನಾಗಿ ಜನಪದ ಗೀತೆಗಳಲ್ಲಿ ಹೆಚ್ಚು ಅಭಿವ್ಯಕ್ತವಾಗಿವೆ. ಪ್ರಸ್ತುತ ಅಧ್ಯಯನದಲ್ಲಿ ಅತ್ತಿಗೆಯೆಂದರೆ ಅಣ್ಣನ ಹೆಂಡತಿ, ಮೈದುನನೆಂದರೆ ಗಂಡನ ತಮ್ಮನೆಂದು ಗುರುತಿಸಿಕೊಂಡು ಅವರೀರ್ವರ ನಡುವಿನ ಬಾಂಧವ್ಯವನ್ನು ಇಲ್ಲಿ ಚರ್ಚಿಸಲಾಗಿದೆ.

ಮದುವೆಯ ಹೊಸ ಬಾಂಧವ್ಯದಿಂದ ಹೊಸೆದುಕೊಳ್ಳುವ ಸಂಬಂಧಗಳಲ್ಲಿ ಅತ್ತಿಗೆ, ಮೈದುನರ ಸಂಬಂಧವು ಒಂದು. ಸಾಮಾನ್ಯವಾಗಿ ಜನಪದರು ಅತ್ತಿಗೆಯೆಂದರೆ ತಾಯಿಯೆಂದೇ ಭಾವಿಸುತ್ತಾರೆ. ಅತ್ತಿಗೆಯಲ್ಲಿ ತಾಯಿಯನ್ನು ಕಾಣುತ್ತಾರೆ. ಅತ್ತಿಗೆಯೂ ಸಹಿತ ಗಂಡನ ತಮ್ಮ-ತಂಗಿಯರನ್ನು ಹೊಟ್ಟೆಯ ಮಕ್ಕಳಂತೆಯೇ ನೋಡುತ್ತಾಳೆ. "ಹುಟ್ಟಿದ ಮನೆಯನ್ನು ಬಿಟ್ಟು ಮದುವೆಯಾದ ಮನೆಗೆ ಸೊಸೆಯಾಗಿ ಬಂದ ಮಹಿಳೆ ಗಂಡ, ಅತ್ತೆ-ಮಾವ, ನಾದುನಿ-ನೆಗೆಣ್ಣಿ, ಭಾವ-ಮೈದುನರು ಒಳ್ಳೆಯವರಾಗಿದ್ದರೆ ಮತ್ತಷ್ಟು ಸಂತೋಷದಿಂದ ತನ್ನ ಸಂಸಾರದ ಸೇವೆಯನ್ನು ಮಾಡುತ್ತಾ ಅಲ್ಲಿಯೇ ಆನಂದ ಪಡೆಯುವಳು." (ಅನಿತಾ ಬಂಡಾರೆ, ೨೦೦೧, ಪು-೪೧) ಅದರ ಹೊರತಾಗಿಯೂ ಕೆಲವು ಸಂದರ್ಭದಲ್ಲಿ ಅತ್ತಿಗೆ ಒಳ್ಳೆಯವಳಾಗಿರುವುದಿಲ್ಲ. ಕೆಲವು ಪ್ರಸಂಗಗಳಲ್ಲಿ ಮೈದುನ, ನಾದಿನಿಯರು ದುರ್ಗುಣದವರಾಗಿರುತ್ತಾರೆ. ಸಹ್ಯ ಹಾಗೂ ವೈರುಧ್ಯ ವಿಚಾರಗಳನ್ನು ಜನಪದ ಗೀತೆಗಳಲ್ಲಿ ಕಾಣುತ್ತೇವೆ. ಅತ್ತಿಗೆ-ಮೈದುನರ ಆದರ್ಶ ಸಂಬಂಧಕ್ಕೆ ಕೆಳಗಿನ ಪದ್ಯ ಸಾಕ್ಷಿಯಾಗಿದೆ.

ಅತ್ತಿಗೆ ಹಿರಿಯಳೆಂದು ಎತ್ತಿ ಮುಗಿದನು
ಮುತ್ತಿನುಂಗುರದ ಮೈದುನ । ನಿನ್ನಯ
ಅತ್ತಿಗೆ ಆಯುಷ್ಯ ಹರಸುವೆ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೯೧)

ಮೇಲಿನ ಗೀತೆಯಲ್ಲಿ ಅತ್ತಿಗೆಗೆ ಮೈದುನ ನೀಡುವ ಗೌರವದ ಕುರಿತು ತಿಳಿಯುತ್ತದೆ. ಅತ್ತಿಗೆಯಾದವಳು ತನಗಿಂತಲೂ ಹಿರಿಯಳು ಅಲ್ಲದೇ ತಾಯಿ ಹೃದಯದವಳು. ಅವಳಿಗೆ ಕೈಮುಗಿದು ನಮಿಸುವ ಮೈದುನನಿದ್ದಾನೆ. ಅಂತಹ ಮೈದುನನನ್ನು ಅತ್ತಿಗೆ ತನ್ನಾಯುಷ್ಯವನ್ನೇ ಆಶೀರ್ವದಿಸುವ ಮೂಲಕ ನೀಡುತ್ತಿದ್ದಾಳೆ. ಗೌರವ, ನಂಬಿಕೆ, ವಾತ್ಸಲ್ಯಗಳೆಲ್ಲವೂ ಅತ್ತಿಗೆ-ಮೈದುನರ ಸಂಬಂಧಗಳಲ್ಲಿ ಕಂಡುಬರುತ್ತವೆ. ಮೈದುನನನ್ನು ಅಕ್ಕರೆಯಿಂದ ಕಾಣುವ ಅತ್ತಿಗೆಗೆ ಆತನ ಬೈಗುಳಗಳನ್ನು ಸಹಿಸುವ ಶಕ್ತಿಯಿರುವುದಿಲ್ಲ. ಗಂಡನು ಬೈದರೆ ತಲೆಕೆಡಿಸಿಕೊಳ್ಳದ ಹೆಣ್ಣುಮಗಳು ಮೈದುನ ಬೈದಾಗ ಮನಸ್ಸನ್ನು ಕೆಡಿಸಿಕೊಳ್ಳುತ್ತಾಳೆ. ನೊಂದು ಹೀಗೇಕೆ ಮೈದುನ ನನ್ನನ್ನು ಅಂದನೆಂದು ಕಣ್ಣೀರನ್ನು ಸುರಿಸುತ್ತಾಳೆ.

ಮಾರಾಯರು ಬೈದರ ಬಾರಾವು ಕಣ್ಣೀರು
ಮಾರಾಯರ ತಮ್ಮ ಮೈದುನ । ಬೈದರ
ಮಾಡಿಲ್ಲದ ಮಳೆಯು ಸುರಿದಂಗ । (ಹಲಸಂಗಿ ಗೆಳೆಯರು, ೧೯೩೧, ಪು-೫೨)

'ಮಹಾರಾಯನೆಂದರೆ ಪತಿ. ಪತಿಯು ಬೈದರೆ ಕಣ್ಣೀರು ಬರುವುದಿಲ್ಲ. ಆದರೆ ಪತಿಯ ತಮ್ಮನಾದ ಮೈದುನ ಬೈದರೆ ಮೋಡಗಳಿಲ್ಲದೇ ಮಳೆಯು ಬಂದ ಹಾಗೆ ದುಃಖವಿಲ್ಲದೇ ಕಣ್ಣೀರು ದಳದಳನೆ ಬರುತ್ತವೆ' ಎಂದು ಗರತಿಯೊಬ್ಬಳು ಹಾಡಿದ್ದಾಳೆ. ಹೆಂಡತಿಗೆ ಬಯ್ಯುವುದನ್ನು ಕಂಡು ಇಲ್ಲವೇ ಪತ್ನಿಯಿಂದ ತಿಳಿದ ಪತಿರಾಯನು ತನ್ನ ತಮ್ಮನಿಗೆ ಬುದ್ಧಿವಾದ ಹೇಳುತ್ತಾನೆ. ಕೌಟುಂಬಿಕ ಜೀವನದ ಮುಖ್ಯವಾದ ಅಂಶವೆಂದರೆ ಪರಸ್ಪರ ಗೌರವ, ಸಹಕಾರ. ದಾರಿತಪ್ಪಿದ ತಮ್ಮನಿಗೆ ಬುದ್ಧಿವಾದ ಹೇಳಿದ ಪರಿಯನ್ನು ಕೆಳಕಂಡ  ಜನಪದ ಗೀತೆಯಲ್ಲಿ ಕಾಣುತ್ತೇವೆ.

ಮೈದೂನ ಬೈದುರ ಹೊಯ್ದು ಹೋಳಿಗೆಯಾದ
ಕೊಯ್ದು ಮಲ್ಲಿಗೆ ನೆನೆಯಾದ । ಮರ್ತ್ಯದಾಗ ।
ಅತ್ತೀಗಿ ಹೆತ್ತಾಯಿ ಸರಿಯೆಂದ । (ಹಲಸಂಗಿ ಗೆಳೆಯರು, ೧೯೩೧, ಪು-೫೩)

ತಾಯಿ ಸಮಾನಳಾದ ಅತ್ತಿಗೆಗೆ ಬಯ್ಯುವ ಮೈದುನನಿಗೆ ತಿಳಿಹೇಳುವ ಉಲ್ಲೇಖ ಗೀತೆಯಲ್ಲಿದೆ. ತನ್ನ ಹೆಂಡತಿಯೊಂದಿಗೆ ಮಾತನಾಡುವ ತಮ್ಮನ ಮಾತನ್ನು ಕೇಳಿದ ಚಿಕ್ಕ ಪ್ರಾಯದ ತಮ್ಮನು ಬೆಳೆಯಬೇಕಾದವನು. ಸಮಾಜದ ರೀತಿರಿವಾಜುಗಳನ್ನು ಕಲಿಯಬೇಕು. ತನ್ನಂತೆಯೇ ಸಮಾಜದಲ್ಲಿ ಆತನು ಗೌರವ ಪಡೆಯಬೇಕೆಂಬ ಹಂಬಲದಿಂದ ಅರಿಯದ ಸಂಪ್ರದಾಯವನ್ನು ತಮ್ಮನಿಗೆ ಹೇಳುತ್ತಾನೆ. ಅತ್ತಿಗೆಯೆಂದರೆ ಹಡೆದ ತಾಯಿಗೆ ಸಮಾನ. ಅವಳೊಂದಿಗೆ ಮಾತನಾಡುವಾಗ ಪದಬಳಕೆ ಶುದ್ಧವಾಗಿರಬೇಕು. ಅಲ್ಲದೇ ಅವಳಿಗೆ ಬಯ್ಯಬಾರದೆಂಬ ಬುದ್ಧಿವಾದ ಹೇಳುತ್ತಾನೆ. ಅದನ್ನೇ ಗರತಿಯೊಬ್ಬಳು ಹಾಡುವ ಮೂಲಕ ತಿಳಿಸಿದ್ದಾಳೆ. ಆದರೂ ಇಂತಹ ಸಂದರ್ಭಗಳಲ್ಲಿ ಅತ್ತಿಗೆ ತಾಯಿಯಷ್ಟೇ ಸಮಾಧಾನದಿಂದ ಇದ್ದು ಕೆಲವು ವಿಚಾರಗಳನ್ನು ಮರೆತುಬಿಡುತ್ತಾಳೆ. ಹೆತ್ತತಾಯಿಯಂತೆ

ಮೈದುನರಲ್ಲಿ ಮಗನನ್ನು ಕಾಣುತ್ತಾಳೆ. ಮಗನನ್ನು ಕ್ಷಮಿಸುವ ರೀತಿ ಕ್ಷಮಿಸಿಬಿಡುತ್ತಾಳೆ. ಆತನ ಶ್ರಮ ಹಾಗೂ ಕಾಯಕದ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡುತ್ತಾಳೆ.

ಹಾಲಹರವಿಯ ಸುತ್ತ ಯಾಲಕ್ಕಿ ನಾತಾವ
ಯಾರುಂಡರವ್ವ ಹಗಲೂಟ । ನನ ಮನಿಯ
ಮಾರಾಯರ ತಮ್ಮ ಮೈದೂನ । (ಹಲಸಂಗಿ ಗೆಳೆಯರು, ೧೯೩೧, ಪು-೫೩)

ಹಾಲಿನ ಗಡಿಗೆಯ ಸುತ್ತಲೂ ಯಾಲಕ್ಕಿ ವಾಸನೆ ಬರುತ್ತದೆ. ಅದಕ್ಕಾಗಿ ಗರತಿಯೊಬ್ಬಳನ್ನು 'ಯಾರು ಊಟ ಇಲ್ಲಿ ಮಾಡಿದರು ?' ಎಂದು ಪ್ರಶ್ನಿಸಿದಾಗ ಅವಳು ನನ್ನ ಮನೆಯ ಯಜಮಾನರ ತಮ್ಮ ಅಂದರೆ ಮೈದುನನೆಂದು ಹೇಳುತ್ತಾಳೆ. ಹೀಗೆ ಹೇಳುವಲ್ಲಿ ಅತ್ತಿಗೆ-ಮೈದುನರ ನಡುವಿನ ಅನ್ಯೋನ್ಯತೆ ಪ್ರೀತಿ, ವಾತ್ಸಲ್ಯಗಳು ಕಂಡುಬರುತ್ತವೆ. ಮೈದುನನಿಗೂ ಯಾಲಕ್ಕಿ ವಾಸನೆಗೂ ಏನು ಸಂಬಂಧವೆಂದು ಅಚ್ಚರಿಯಾಗಬಹುದು. ಮೈದುನನು ಯಾವ ಚಟಗಾರ ಅಲ್ಲ. ಮೇಲಾಗಿ ಅಡಿಕೆ-ಎಲೆಯನ್ನು ಸಹ ಹಾಕದ ವ್ಯಕ್ತಿ. ಊಟವಾದ ಮೇಲೆ ಯಾಲಕ್ಕಿಯನ್ನು ಮೆಲ್ಲುವ ರೂಢಿ ಆತನದು. ಆದ್ದರಿಂದ ಯಾಲಕ್ಕಿ ಮೆಲ್ಲುವಂತಹ ಸದ್ಗುಣಗಳನ್ನು ಹೊಂದಿದ ಮೈದುನನನ್ನು ಹೊಂದಿದ ಅತ್ತಿಗೆ ಆತನಿಗೆ ಶರಣೆಂದು ನಮಸ್ಕರಿಸುವ ಪರಿಯನ್ನು ಇಲ್ಲಿ ಕಾಣುತ್ತೇವೆ.

ಹತ್ತ ಮಂದ್ಯಾಗ ನನ್ನ ಅತ್ತಿಗೆಂದು ಕರೆವೋರ
ಉತ್ತಮರು ನನ್ನ ಮೈದುನರ । ಪಾದಕ
ಹತ್ತ ಬೆರಳಹಚ್ಚಿ ಶರಣೆಂದೆ । (ಶಾಂತಕುಮಾರಿ ಪಾಟೀಲ, ೧೯೭೯, ಪು-೬೫)

ಮೈದುನರು ಕೂಡಿದ ಜನರಲ್ಲಿ ಪ್ರೀತಿಯಿಂದ ಅತ್ತಿಗೆಮ್ಮ ಎಂದು ಸಂಬೋಧಿಸುತ್ತಾರೆ. ಅತ್ತಿಗೆಯೆಂಬ ನುಡಿಯೇ ಅವರ ಬಗೆಗೆ ಎಲ್ಲಿಲ್ಲದ ಗೌರವವನ್ನು ಆಕೆಯಲ್ಲಿ ಹುಟ್ಟಿಸುತ್ತದೆ. ಸಂಪ್ರದಾಯಬದ್ಧ ರೀತಿನೀತಿಗಳನ್ನು ಅವಳು ಬಯಸುತ್ತಾಳೆ. ಅಂತೆಯೇ ಮೈದುನರು ನಡೆನುಡಿಗಳಲ್ಲಿ ಪರಿಶುದ್ಧರು. ಅತ್ತಿಗೆಯನ್ನು ತಾಯಿಯೆಂದು ತಿಳಿದು ಗೌರವಿಸುವ ಅವರಿಗೆ ಹತ್ತು ಬೆರಳುಗಳನ್ನು ಕೂಡಿಸಿ ನಮಸ್ಕರಿಸುತ್ತೇನೆಂದು ಪ್ರತಿ ಗೌರವವನ್ನು ತೋರುತ್ತಾಳೆ. ಹೀಗೆ ಜನಪದರಲ್ಲಿ ಒಬ್ಬರಿಗೊಬ್ಬರು ಪರಸ್ಪರ ಗೌರವವನ್ನು ಕೊಟ್ಟು ಪಡೆಯುವ ಪದ್ಧತಿಯಿದೆ. ಇದನ್ನೇ ಅವರು ಸ್ವರ್ಗಕ್ಕೆ ಮಿಗಿಲಾದ ಬದುಕು ಎಂದು ನಂಬಿದ್ದಾರೆ. ಹೀಗೆ ಇಂತಹ ಪ್ರೀತಿ, ವಿಶ್ವಾಸ, ನಂಬಿಕೆ, ಗೌರವಗಳನ್ನುಳ್ಳ ಸಂಬಂಧವನ್ನು ಅತ್ತಿಗೆ-ಮೈದುನರಲ್ಲಿ ಗಮನಿಸುತ್ತೇವೆ.

### ೪.೨.೯ ನೆಗೆಣ್ಣಿ – ಓರಗಿತ್ತಿ

ನೆಗೆಣ್ಣಿ ಹಾಗೂ ಓರಗಿತ್ತಿ ಎಂಬ ಸಂಬಂಧಸೂಚಕ ಪದಗಳು ಸಾಮಾನ್ಯವಾಗಿ ಒಂದೇ ರೀತಿಯಲ್ಲಿ ಬಳಸಲ್ಪಡುತ್ತವೆ. ಗಂಡನ ಅಣ್ಣನ ಅಥವಾ ತಮ್ಮನ ಹೆಂಡತಿಯನ್ನು ನೆಗೆಣ್ಣಿ, ಓರಗಿತ್ತಿ

ಎಂದು ಕರೆಯಲಾಗುತ್ತದೆ. ಬೇರೆ ಬೇರೆ ಮನೆಯಿಂದ ಒಂದೇ ಮನೆಗೆ ಸೊಸೆಯಂದಿರಾಗಿ ಬಂದ ಹೆಣ್ಣುಮಕ್ಕಳು ಅಕ್ಕ-ತಂಗಿಯರಂತೆ ಬದುಕು ನಡೆಸುತ್ತಾರೆ. ಇಡೀ ಮನೆಯ ಸುಖ-ಸಂತೋಷವೆಲ್ಲವೂ ಅಡಗಿರುವುದೇ ಹೆಣ್ಣುಮಕ್ಕಳು ಕೆಲಸ, ನಡುವಳಿಕೆ ಮುಂತಾದವುಗಳಲ್ಲಿ. ಮನೆಯಲ್ಲಿ ಎಲ್ಲರೂ ಒಮ್ಮನದವರಾಗಿ ಕೆಲಸ-ಕಾರ್ಯಗಳನ್ನು ಹಂಚಿಕೊಂಡು ಬದುಕಿದರೆ ಬದುಕು ಸುಂದರವಾಗಿರುತ್ತದೆ. 'ಕೂಡಿ ಬಾಳಿದರೆ ಸ್ವರ್ಗ ಸುಖ' ಎಂದು ಜನಪದರೇ ಹೇಳಿಲ್ಲವೆ. ಅವಿಭಕ್ತ ಕುಟುಂಬಗಳಲ್ಲಿ ನೆಗೆಣ್ಣಿಯರ ನಡುವಿನ ಬಾಂಧವ್ಯಗಳು ಹೆಚ್ಚಾಗಿರುತ್ತವೆ. ಹೆಣ್ಣು ಮಕ್ಕಳು ಮೆಟ್ಟಿ ಬಂದ ಕುಟುಂಬದ ಸಂಪ್ರದಾಯಕ್ಕೆ ಹೊಂದಿಕೊಂಡು ಸದಾ ಕುಟುಂಬದ ಏಳಿಗೆಯನ್ನು ಬಯಸುತ್ತಾರೆ. ಇಲ್ಲಿ ಪರಸ್ಪರ ವಿಶ್ವಾಸ, ಪ್ರೀತಿ ನಂಬಿಕೆಗಳು ಅತಿಮುಖ್ಯ. ಆದರೂ ಕೆಲವು ಸಂದರ್ಭಗಳಲ್ಲಿ ಸಂಬಂಧಗಳಲ್ಲಿ ಬಿರುಕು ಕಾಣಿಸಿಕೊಳ್ಳುತ್ತದೆ. ಏಕೆಂದರೆ ಜಗತ್ತಿನಲ್ಲಿ ಒಬ್ಬರಂತೆ ಮತ್ತೊಬ್ಬರು ಇರಲು ಸಾಧ್ಯವಿಲ್ಲ. ಬಾಹ್ಯ ಹೋಲಿಕೆಯುಳ್ಳವರು ಸಿಕ್ಕರೂ ಅಂತರಂಗದ ಹೋಲಿಕೆಯುಳ್ಳ ವ್ಯಕ್ತಿಗಳು ಸಿಗಲಾರರು. ಕುಟುಂಬದಲ್ಲಿ ಬಿರುಕು ಮೂಡಿದಾಗ ಅವುಗಳನ್ನು ನಿವಾರಿಸಲು ಜನಪದದ ಗರತಿಯೊಬ್ಬಳು ತನ್ನ ನೆಗೆಣ್ಣಿಯ ವರ್ತನೆಯ ಕಂಡು ಗಂಡನಿಗೆ ದೂರುತ್ತಾಳೆ. ಆದರೆ ಅಣ್ಣನೆದುರು ಮಾತಾಡದ, ಗೌರವ ಕೊಡುವ ತಮ್ಮನಾದ್ದರಿಂದ ಹೆಂಡತಿಗೆ ಸಹಕರಿಸಿಕೊಂಡು ಹೋಗಲು ಬುದ್ಧಿವಾದ ಹೇಳುತ್ತಾನೆ. ಆಗ ಆಕೆ ನೀಡುವ ಉತ್ತರ ಕೆಳಗಿನ ಪದ್ಯರೂಪದಲ್ಲಿ ಬಂದಿದೆ.

ಭಾವಯ್ಯ ಮುನಿದರ ಬಲಗಾಲ ಹಿಡಿದೇನ
ಭಾವಯ್ಯನ ಮಡದಿ ನೆಗೆಣ್ಣಿ । ಮುನಿದರ
ಬಾರಕ್ಕನೆಂದು ಕರದೇನ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೧೧೨)

ನನ್ನ ಮಾತುಗಳಿಂದ ಗಂಡನ ಅಣ್ಣನಾದ ಭಾವನು ಕೋಪಗೊಂಡರೆ ಬಲಗಾಲನ್ನು ಹಿಡಿದು ಕ್ಷಮೆ ಕೇಳುತ್ತೇನೆ. ಭಾವನ ಹೆಂಡತಿಯಾದ ನೆಗೆಣ್ಣಿ ಕೋಪಗೊಂಡು ಮಾತನಾಡದೇ ಇದ್ದರೆ, ಬಾರಕ್ಕನೆಂದು ಪ್ರೀತಿಯಿಂದ ಕರೆಯುತ್ತೇನೆಂದು ಜನಪದ ಹೆಣ್ಣೊಬ್ಬಳು ತನ್ನಲ್ಲಿನ ಉದಾರ ಗುಣವನ್ನು ಪ್ರದರ್ಶಿಸುತ್ತಾಳೆ. ತನ್ನ ಗಂಡನ ಮನಸ್ಸನ್ನು ನೋಯಿಸದೆ, ತಾನು ಹುಟ್ಟಿದ ಮನೆಗೂ ಕಳಂಕ ತರದೇ ಮೆಟ್ಟಿದ ಮನೆಯ ಒಗ್ಗಟ್ಟನ್ನು ಮುರಿಯದೆ ಎಲ್ಲ ಸಂಬಂಧಗಳನ್ನು ನಾಜೂಕಿನಿಂದ ನಿವಾರಿಸುವ ಅವಳ ಗುಣಕ್ಕೆ ಶರಣು ಎನ್ನಲೇಬೇಕು. ಕದನ, ಕೋಪ, ದ್ವೇಷ ಇವುಗಳಿಂದ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಅವುಗಳನ್ನು ಬದಿಗೊತ್ತಿ, ದಯೆ, ಪ್ರೀತಿ, ಕರುಣೆ ನಂಬಿಕೆಗಳಿಂದ ಎಂತಹ ಕಲ್ಲನ್ನಾದರೂ ಕರಗಿಸಬಹುದು. ಒಂದು ವೇಳೆ ತಾನು ತಪ್ಪನ್ನೆಸಗಿದ್ದರೆ ಮನ್ನಿಸೆಂದು ಕೇಳುವ ಜನಪದರ ಜೀವನ ಪ್ರೀತಿ ಎಲ್ಲರಿಗೂ ಅನುಕರಣೀಯ. ಯಾವಾಗಲೂ ಒಗ್ಗಟ್ಟಿನಲ್ಲಿ ಬಲವೂ ಇದೆ. ಒಲವೂ ಇದೆ ಎಂಬುದನ್ನು ಅರಿತು ಜನಪದರು ಬದುಕನ್ನು ನಡೆಸುತ್ತಾರೆ.

ನೆಗೆಣ್ಣಿ ಮಾತೇನ ಸಗಣೀಯ ದಂಟೇನ
ಗಾಳೀಗೆ ಬಂದ ರವದೀಯ । ಮಾತೀಗೆ
ಮಾರಾಯ ಮನಸ ತಗದಾರ । (ಬಿ.ಎಸ್. ಗದ್ದಗಿಮಠ, ೧೯೫೬, ಪು-೬೫)

ಮನಸ್ಸು ಕೆಲವೊಮ್ಮೆ ಹದ್ದು ಮೀರುತ್ತದೆ. ಅದು ಯಾರ ಮಾತು ಕೇಳುವುದಿಲ್ಲ. ನೆಗೆಣ್ಣಿಯೊಬ್ಬಳು ತನ್ನ ಓರಗಿತ್ತಿಗೆ ಆಡಿದ ಮಾತುಗಳು ಸಹಿಸಲು ಅಸಾಧ್ಯ. ಹಾಗಾಗಿ ಆ ಮಾತುಗಳನ್ನು ಹಚ್ಚಿಕೊಳ್ಳದ ಓರಗಿತ್ತಿ ನೆಗೆಣ್ಣಿ ಆಡಿದ ಮಾತುಗಳು ಸಗಣಿಯಲ್ಲಿನ ದಂಟು ಇದ್ದ ಹಾಗೆ. ಕಸದಲ್ಲಿ ಹುಲ್ಲೆಸಳು ಇದ್ದ ಹಾಗೆ. ಅಂತಹ ಮಾತುಗಳನ್ನು ಕೇಳಿದ ಅವಳ ಯಜಮಾನರು ನೆಗೆಣ್ಣಿ ಮೇಲಿಟ್ಟಿದ್ದ ಭರವಸೆಯನ್ನು ತೆಗೆದುಹಾಕಿದ್ದಾರೆ. ಆಗ ತನ್ನ ತಪ್ಪಿನ ಅರಿವಾದ ನೆಗೆಣ್ಣಿಯು ಭಾವ ಮತ್ತು ಓರಗಿತ್ತಿಯನ್ನು ಕ್ಷಮೆ ಕೋರುತ್ತಾಳೆ. ಎಲುವಿಲ್ಲದ ನಾಲಗೆಯೆಂದು ಬೇಕಾದ್ದನ್ನು ಮಾತನಾಡಿದರೆ ಸಂಬಂಧಗಳು ಹಳಸುತ್ತವೆಂದು ಅರಿಯದೆ ಆಡಿದ ಮಾತಿಗೆ ಕ್ಷಮೆ ಕೋರುತ್ತಾವ ವೈಶಾಲ್ಯತೆಯು ಜನಪದರಲ್ಲಿ ಕಂಡುಬರುತ್ತದೆ.

ಸೌಹಾರ್ದತೆಯ ಬದುಕಿನ ನಡುವೆಯೂ ಒಡಕು ಮೂಡುತ್ತದೆ. ಒಡಕಿನ ಬದುಕು ದುಸ್ತರ. ಆದರೂ ಸಹನಶೀಲಳಾದ ಹೆಣ್ಣು ಎಲ್ಲವನ್ನು ಸರಿದೂಗಿಸಿಕೊಂಡು ಹೋಗುವ ಸಾಮರ್ಥ್ಯ ಪಡೆದಿದ್ದಾಳೆ. ನೆಗೆಣ್ಣಿ–ಓರಗಿತ್ತಿಯರು ಇರುವ ಮನೆಯಲ್ಲಿ ಎಲ್ಲರಿಗೂ ಸಮಭಾವನೆ ಮೂಡಿಸಲು ಒಂದೇ ತರಹದ ಬಟ್ಟೆ, ಆಭರಣಗಳನ್ನು ತಂದುಕೊಡುತ್ತಾರೆ. ಅದೇ ರೀತಿ ಎಲ್ಲರಿಗೂ ಸಮನಾಗಿ ಮನೆಗೆಲಸವನ್ನು ಹಂಚಿಕೊಂಡು ಮಾಡುತ್ತಾರೆ. ತಮ್ಮ ಪಾಲಿನ ಕೆಲಸವನ್ನು ಮುಗಿಸಿ ನಿಶ್ಚಿಂತೆಯ ಬದುಕನ್ನು ಬಾಳುತ್ತಾರೆ. ಆದರೆ ಮಕ್ಕಳು ಚಿಕ್ಕವಾಗಿದ್ದರೆ ಅವುಗಳನ್ನು ಸಂತೈಸುವುದರಲ್ಲಿಯೇ ಸಮಯ ಕಳೆದುಹೋಗುತ್ತದೆ. ತನ್ನ ಪಾಲಿನ ಕೆಲಸವನ್ನು ಉಳಿಸಿಕೊಂಡ ನೆಗೆಣ್ಣಿಯೊಬ್ಬಳು ತನ್ನ ಓರಗಿತ್ತಿ ಕೋಪಗೊಂಡಾಗ ಈ ರೀತಿ ಹೇಳುತ್ತಾಳೆ.

ಬೀಸಲಕ ಕುಂತೀನಿ ಕೂಸ ನನ ತೊಡಿಮ್ಯಾಲ
ವಾಸ್ಯಾಡಬ್ಯಾಡ ನೆಗೆಯೇಣಿ । ನಿನ ಕೆಲಸ
ತಾಸೊತ್ತಿನಾಗ ತಿರುವೇನ । (ಹಲಸಂಗಿ ಗೆಳೆಯರು, ೧೯೩೧, ಪು-೫೩)

ಮನೆಯಲ್ಲಿ ರೊಟ್ಟಿ ಮಾಡಬೇಕಾಗಿದೆ. ಆದರೆ ಹಿಟ್ಟಿಲ್ಲ. ಜೋಳವನ್ನು ಬೀಸುವ ಕೆಲಸ ನೆಗೆಣ್ಣಿಯದು. ಅವಳು ಬೀಸಿ ಕೊಟ್ಟಾಗಲೆ ಇವಳು ರೊಟ್ಟಿ ಮಾಡಬೇಕು. ಹಿಂದಿನ ಕಾಲದಲ್ಲಿ ಅಂದು ಮಾಡಬೇಕಾದ ರೊಟ್ಟಿ ಹಿಟ್ಟನ್ನು ಅಂದೇ ಬೀಸುತ್ತಿದ್ದರು. ಬೀಸುವುದಕ್ಕಾಗಿ ಈಗಿನ ಹಾಗೇ ಗಿರಣಿಗಳು ಇರಲಿಲ್ಲ. ಬದಲಾಗಿ ಬೀಸುವ ಕಲ್ಲಿನಿಂದಲೇ ಬೀಸಬೇಕು. ಜೋಳ ಬೀಸಿಲ್ಲವೆಂಬ ಕಾರಣಕ್ಕಾಗಿ ಸಿಟ್ಟಾದ ಓರಗಿತ್ತಿಯ ಕುರಿತು 'ಜೋಳ ಬೀಸುವುದಕ್ಕೆ ಕುಳಿತುಕೊಂಡಿರುವೆ. ಅಳುವ ಕೂಸು ತೊಡೆಯ ಮೇಲೆ

ಮಲಗಿದೆ. ನಿನ್ನ ಕೆಲಸವನ್ನು ಒಂದು ಘಂಟೆಯಲ್ಲಿ ಮಾಡಿಕೊಡುವೆ. ಅದಕ್ಕಾಗಿ ಕೋಪಗೊಳ್ಳಬೇಡ, ನನ್ನೊಂದಿಗೆ ವಾದ ಮಾಡಬೇಡ' ಎಂದು ಹೇಳುತ್ತಾಳೆ.

ಹುಚ್ಚನಂತ ಗಂಡ, ಹುಲಿಯಂತ ಮೈದೂನ
ನಿಚ್ಚಪಂಡಿತಳು ನೆಗೆಣ್ಣೆ । ಕೈಯಾಗ
ಹುಚ್ಚಿ ನಾ ಹ್ಯಾಂಗ ನಡಿಯಾಲಿ । (ಬಿ.ಎಸ್. ಗದ್ದಗಿಮಠ, ೧೯೫೬, ಪು- ೫೮)

ಮಂದಬುದ್ಧಿಯ ಗಂಡ ಒಳ್ಳೆಯವನು. ಎಲ್ಲವನ್ನು ನಂಬುವ ಸ್ವಭಾವದವನು. ಇಲ್ಲದ ಮಾತುಗಳನ್ನಾಡುವ ಮೂಲಕ ಗಂಡ_ಮೈದುನರನ್ನು ನಂಬಿಸಿ, ಬದುಕಿನ ಬವಣೆಗಳನ್ನು ಹೆಚ್ಚಿಸಿದ ನೆಗೆಣ್ಣೆಯ ಕುರಿತು ಈ ಹಾಡು ಧ್ವನಿಸುತ್ತದೆ. ಬದುಕು ಹೀಗೆಯೇ ಒಬ್ಬರಿಗೊಬ್ಬರು ದ್ವೇಷಿಸುತ್ತಾ, ಪ್ರೀತಿಸುತ್ತಾ ನಡೆಯುತ್ತದೆ. ಮೊಸರಿನಲ್ಲಿ ಕಲ್ಲು ಹುಡುಕುವ ಜಾಯಮಾನದವರು ಇದ್ದಾರೆ. ಶುದ್ಧ ಮನಸ್ಸಿನವರು ಇದ್ದಾರೆ. ಆದರೆ ಶುದ್ಧ ಮನಸ್ಸನ್ನು ಹೊಂದಿದವರು ಮಾತ್ರ ಉತ್ತಮ ಸಂಬಂಧಗಳನ್ನು ಕಾಪಾಡಿಕೊಂಡು ಜೀವನ ನಡೆಸುತ್ತಾರೆ.

### ೪.೨.೧೦ ಸೋದರಮಾವ-ಸೋದರ ಸೊಸೆ

ತಾಯಿಯ ಅಣ್ಣ ಅಥವಾ ತಮ್ಮಂದಿರು ಸಂಬಂಧದಲ್ಲಿ ಸೋದರ ಮಾವರೆನಿಸುತ್ತಾರೆ. ಗಂಡಿಗೆ ಅಕ್ಕ-ತಂಗಿಯರ ಮಗಳು ಸೋದರ ಸೊಸೆಯಾದರೆ ಹೆಣ್ಣಿಗೆ ಅಣ್ಣತಮ್ಮಂದಿರ ಮಗಳು ಸೋದರ ಸೊಸೆಯೆನಿಸುತ್ತಾಳೆ. ಜನಪದರಲ್ಲಿ ಸೋದರ ಮಾವ-ಸೋದರ ಸೊಸೆಯರ ಸಂಬಂಧ ನಗೆಚಾಟಿಕೆ ಸ್ವಭಾವ ಹಾಗೂ ರಸಿಕತನದಿಂದ ಕೂಡಿರುತ್ತದೆ. ಇವರಲ್ಲಿ ಆಡಿಕೊಳ್ಳುವ ಹುಡುಗಾಟಿಕೆ ಸ್ವಭಾವವನ್ನು ಹೆಚ್ಚಾಗಿ ಕಾಣುತ್ತೇವೆ. ಎಂತಹ ಗಂಭೀರ ಸ್ವಭಾವದವರಾದರೂ ಕಾಡುವ, ಕಾಲೆಳೆಯುವ ಗುಣಗಳನ್ನು ಪಡೆದಿರುತ್ತಾರೆ. ಇದು ಜನಪದರ ನವಿರು ಹಾಸ್ಯದಿಂದ ಕೂಡಿದ ಜೀವನದ ಸಂತೋಷವನ್ನು ಹೆಚ್ಚಿಸುತ್ತದೆ. ಸೋದರಮಾವ-ಸೊಸೆಯರ ಸಂಭಾಷಣೆಯನ್ನು ಕೆಳಗಿನ ಪದ್ಯಗಳಲ್ಲಿ ಕಾಣುತ್ತೇವೆ.

ಸೋದಾರ ಮಾವಯ್ನ ಪಾದಾದ ಸದ್ದು ಕೇಳಿ
ಹಾಲು ಇಟ್ಟೀದೆ ಒಲೆ ಮೇಲೆ । ಮಾವಯ್ಯ ।
ಆಳೆಷ್ಟು ನಿಮ್ಮ ಕುದುರೆಷ್ಟು ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೮೭)

ಸೊಸೆಯು ಸೋದರ ಮಾವ ಬಂದನೆಂದು ಆತನ ಹೆಜ್ಜೆಯ ಸದ್ದುಗಳಿಂದಲೇ ಗುರುತಿಸುತ್ತಾಳೆ. ಮನೆಯಿಂದ ಹೊರಬಂದು ಮಾವನಿಗೆ, 'ಒಲೆಯ ಮೇಲೆ ನಿಮಗಾಗಿ ನಾನು ಹಾಲನ್ನು ಇಟ್ಟಿದ್ದೇನೆ. ನಿಮ್ಮ ಆಳುಗಳೆಷ್ಟು? ನಿಮ್ಮ ಕುದುರೆಗಳೆಷ್ಟು?' ಎಂದು ಪ್ರಶ್ನಿಸುತ್ತಾಳೆ. ಏಕೆಂದರೆ ಕಾಲಾಳುಗಳಿಗೆ ಹಾಲಿನ ವ್ಯವಸ್ಥೆ ಮಾಡುವ, ಕುದುರೆಗೆ ಮೇವಿನ ವ್ಯವಸ್ಥೆ ಮಾಡುವ ಸಲುವಾಗಿ

ಪ್ರೀತಿಯಿಂದ ಕೇಳುತ್ತಾಳೆ. ಆದರೆ ಅವಳ ಈ ನುಡಿಗಳಲ್ಲಿ ವ್ಯಂಗ್ಯ ಅಡಗಿದೆ. ನಾನು ಯಾವ ಊರ ಸರದಾರನಿಗಿಂತಲೂ ಕಡಿಮೆಯೇನಿಲ್ಲ ಎಂದು ಹೇಳಿಕೊಳ್ಳುವ ಸೋದರ ಮಾವನಿಗೆ ಸೊಸೆಯು ವ್ಯಂಗ್ಯವಾಗಿ ಇಲ್ಲಿ ಕೇಳುತ್ತಾಳೆ. ಕುದುರೆಗಳು, ಕಾಲಾಳುಗಳನ್ನು ಜೊತೆಯಲ್ಲಿ ಕರೆತರದ ಸೋದರಮಾವ ನೀಡಿದ ಉತ್ತರ ಈ ಕೆಳಗಿನಂತಿದೆ.

ಆಳೊಂದು ಐನೂರು ಕುದುರೊಂದು ಮುನ್ನೂರು
ಕಾಲಾಳು ಲಕ್ಷ ಗಡುವಿಲ್ಲ । ಸೊಸೆ ಮುದ್ದೆ ।
ವೀಳ್ಯಾವ ಕೊಟ್ಟು ಕಳುಹೇನು ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೮೭)

ಸೊಸೆ ಕೇಳಿದ ಪ್ರಶ್ನೆಗೆ ಉತ್ತರವಾಗಿ 'ಐದುನೂರು ಆಳು, ಮುನ್ನೂರು ಕುದುರೆಗಳಿವೆ. ಆದರೆ ಕಾಲಾಳಿನ ಸಂಖ್ಯೆ ಲಕ್ಷ ದಾಟುವುದಿಲ್ಲ. ಮುದ್ದಿನ ಸೊಸೆಯೇ ಆಗಲೇ ಅವರ ಕೈಯಲ್ಲಿ ವೀಳ್ಯವನ್ನು ಕೊಟ್ಟು ಕಳುಹಿದ್ದೇನೆ' ಎಂದು ಜಾಣ್ಮೆಯಿಂದ ಸೋದರ ಮಾವ ಹೇಳುತ್ತಾನೆ. ಈ ಮಾವ-ಸೊಸೆಯರ ಬಾಂಧವ್ಯಕ್ಕೆ ಮೇಲಿನ ಸಂಭಾಷಣೆ ಸೂಕ್ತ ಉದಾಹರಣೆಯೆನಿಸಿದೆ. ಕುದುರೆ, ಕಾಲಾಳುಗಳೇ ಇಲ್ಲ ಆದರೂ ಸೊಸೆಯ ಮುಂದೆ ಭಂಡತನ ತೋರುವ ಸಲುವಾಗಿ ಐದುನೂರು ಆಳು, ಮೂರುನೂರು ಕುದುರೆಗಳಿದ್ದವು. ಆದರೆ ನಿನಗೆ ತೊಂದರೆ ಆಗುವುದೆಂದು ಅವರನ್ನು ಆಗಲೇ ಎಲೆ ಅಡಿಕೆ ಕೊಟ್ಟು ಕಳುಹಿಸಿಬಿಟ್ಟೆ ಎಂದು ಜಾರಿಕೊಳ್ಳುತ್ತಾನೆ. ಸೋದರಮಾವ-ಸೊಸೆಯ ನಡುವಿನ ಸಂಬಂಧವು ಕಾಲೆಳೆಯುವ ತಂತ್ರವನ್ನು ಬಳಕೆ ಮಾಡಿದರೂ ಅವರ ಸಂಬಂಧಕ್ಕೆ ಯಾವ ಕಾರಣಕ್ಕೂ ದಕ್ಕೆಬಾರದು. ಬಹಳಷ್ಟು ಆಸ್ತಿ ಸಂಪತ್ತನ್ನು ಹೊಂದಿದ ಅಣ್ಣನ ತಂಗಿಯೊಬ್ಬಳು ತನ್ನ ಮಗಳಿಗೆ 'ತನ್ನಣ್ಣನ ಸೊಸೆಯಾಗು' ಎಂದು ಕಿವಿಮಾತನ್ನು ಹೇಳುತ್ತಾಳೆ. ತವರಿನವರು ನಿನ್ನನ್ನು ಸುಖದಿಂದ ಬಾಳಿಸುತ್ತಾರೆ. ಅಲ್ಲದೇ ಪರಿಚಯವಿಲ್ಲದವರ ಬೀಗತನಕ್ಕಿಂತ ತವರಿಗೆ ಕೊಡುವುದು ಲೇಸೆಂಬುದೇ ಅವಳ ವಿಚಾರವಾಗಿದೆ. ಅದನ್ನು ಈ ರೀತಿಯಾಗಿ ಹೇಳುತ್ತಿದ್ದಾಳೆ.

ಸೋದರ ಮಾವನ ಸೊಸಿಯಾಗ ನನ ಮಗಳ
ಬಿಸಲಾಗ ನೀರ ತರಗೊಡನ । ನಿಮ್ಮಾವಾ ।
ನೀರ್ಹೊಳಿಗೆ ನಿಂಬಿಬನ ನಿಲುವಿ । (ಹಲಸಂಗಿ ಗೆಳೆಯರು, ೧೯೩೧, ಪು-೭೭)

'ನನ್ನಣ್ಣ ಅಂದರೆ ನಿನ್ನ ಸೋದರ ಮಾವನ ಮಗನನ್ನು ಮದುವೆಯಾಗಿ ಅವನ ಸೊಸೆಯಾಗು' ಎಂದು ತಾಯಿ ತನ್ನ ಮಗಳಿಗೆ ಕಿವಿಮಾತನ್ನು ಹೇಳುತ್ತಾಳೆ. ಕಾರಣ ಸಿರಿವಂತನಾದ ಅಣ್ಣನು ನಿನ್ನನ್ನು ನೀರನ್ನು ತರಲು ಹೊರಗೆ ಕಳುಹಿಸಲಾರ. ಬಿಸಿಲಲ್ಲಿ ಕೆಲಸ ಮಾಡಿಸಲಾರ. ಆತ ಸಾಕಷ್ಟು ತೋಟದ ಗದ್ದೆಗಳನ್ನು ಹೊಂದಿದ್ದಾನೆ. ನೀನು ಅವನ ಸೊಸೆಯಾದರೆ ಸುಖದ ಸುಪ್ಪತ್ತಿಗೆಯಲ್ಲಿರಬಹುದೆಂದು ಮಗಳಿಗೆ ಹೇಳುತ್ತಾಳೆ. ಅದಕ್ಕಿಂತ ಮಿಗಿಲಾಗಿ ತವರಿಗೆ ತನ್ನ ಮಗಳನ್ನು

ಕೊಡಬೇಕು. ಅಣ್ಣ ಹೊಸಬೀಗನಾಗಿ ಬರಬೇಕು. ತವರಿನ ರಸಬಳ್ಳಿ ಹಬ್ಬಬೇಕೆಂಬುದೇ ತಾಯಿಯ ಹೆಬ್ಬಯಕೆಯಾಗಿದೆ. ದೂರದಲ್ಲಿ ಬರುವ ಸೋದರ ಮಾವನನ್ನು ಗುರುತಿಸಿದ ಸೊಸೆಯು ತನ್ನ ತಾಯಿಗೆ ಈ ರೀತಿಯಾಗಿ ಹೇಳಿದ್ದಾಳೆ.

ಸೋದರ ಮಾವನೇನ ಸೂರ್ಯಚಂದ್ರರೇನ
ಬೆಳದಿಂಗಳ ಬಿಸಿಲೇನ । ಹಡೆದವ್ವ
ತಾಯಿ ನಿನ್ನಣ್ಣ ಹೌದೇನ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೮೮)

ಬೆಳದಿಂಗಳ ಚಂದ್ರನಂತೆ, ಬಿಸಿಲು ಸೂಸುವ ಸೂರ್ಯನಂತೆ ಹೋಲಿಕೆಯುಳ್ಳವನು ಸೋದರಮಾವನು ಇರಬಹುದೇ? ಎಂದು ಮಗಳು ತನ್ನ ಊಹಿಸಿದ ತಾಯಿಗೆ 'ಆತ ನಿನ್ನಣ್ಣ ಅಂದರೆ ನನ್ನ ಸೋದರ ಮಾವ ಆಗಿರಬಹುದೇ' ಎಂದು ಕೇಳುತ್ತಾಳೆ. ಹೋಲಿಕೆಯಲ್ಲಿ ತಾಯಿಯಂತೆ ಇರುವ ಸೋದರಮಾವನನ್ನು ದೂರದಿಂದಲೇ ಗುರುತಿಸುತ್ತಾಳೆ. ಎಷ್ಟೇ ಕಷ್ಟ ಬಂದರೂ ಬಂಧುಬಳಗದ ನಡುವಿನ ಕೊಂಡಿಯನ್ನು ನಮ್ಮ ಜನಪದರು ಕಳಚಿಕೊಳ್ಳಲಾರರು. ಇಂದಿಗೂ ಜನಪದ ಸಂಪ್ರದಾಯದಲ್ಲಿ ಗೌರಿ ಹುಣ್ಣಿಮೆಗೆ ಸೋದರ ಮಾವಂದಿರು ತಮ್ಮ ಸೊಸೆಯಂದಿರಿಗೆ ದಂಡಿ, ಸಕ್ಕರೆಯಾರತಿಯನ್ನು ಕೊಂಡೊಯ್ಯುವುದು ಬಾಂಧವ್ಯದ ಸಂಕೇತವಾಗಿ ಬೆಳೆದುಬಂದಿದೆ.

ಅಕ್ಕ ತನಗಿಂತಲೂ ಬಹಳ ಹಿರಿಯಳು. ಅವಳಿಗೆ ಮದುವೆಯಾಗಿ ಸಾಕಷ್ಟು ವರ್ಷಗಳೇ ಕಳೆದಿವೆ. ಅಕ್ಕನಿಗೆ ಮುದ್ದಾದ ಹೆಣ್ಣುಮಗಳಿದ್ದಾಳೆ. ಬಹಳ ಹಿಂದೆಯೇ ನೋಡಿದ ಸೋದರಮಾವನು ಅವಳು ದೊಡ್ಡವಳಾದ ಮೇಲೆ ಅಕ್ಕನ ಮನೆಗೆ ಬಂದಿದ್ದಾನೆ. ಆಗ ಸೋದರ ಮಾವ ರಸಿಕನಾಗಿದ್ದು, ಸೊಸೆಯನ್ನು ವರ್ಣಿಸುವ ಪರಿ ಇಲ್ಲಿದೆ.

ಮಾವನ ಮಗಳೇ ಕೋಗಿಲೆಯ ದನಿಯವಳೆ
ತಾವರೆ ಮೊಗ್ಗಿನ ಮೊಲೆಯವಳೆ । ಮಾವ್ನ ಮಗಳೆ
ಬಾಯಾರಿ ಬಂದೆ ನೀರ ಕೊಡೆ । (ಹಲಸಂಗಿ ಗೆಳೆಯರು, ೧೯೩೧, ಪು-೯೪)

ಸೊಸೆಯನ್ನು ಕೋಗಿಲೆಯ ಧ್ವನಿಯನ್ನು ಹೊಂದಿದವಳು, ತಾವರೆ ಮೊಗ್ಗುಗಳಂತೆ ಹಾಗೆ ಮೊಲೆಯನ್ನು ಹೊಂದಿದವಳು ಎಂದು ವರ್ಣಿಸುತ್ತಾನೆ. ಅವಳ ಸೌಂದರ್ಯಕ್ಕೆ ಮಾರುಹೋಗಿ, ತಾನೇ ಮದುವೆಯಾಗುವುದಕ್ಕೆ ಸಿದ್ಧನಿದ್ದಾನೆ. ಅವಳ ಸ್ವರವನ್ನು ಕೇಳಬೇಕೆಂಬ ಉದ್ದೇಶದಿಂದ ಬಿಸಿಲಲ್ಲಿ ಬಾಯಾರಿಕೆಯಿಂದ ಬಳಲಿದ್ದೇನೆ ನೀರು ಕೊಡು ಎಂದು ಕೇಳುತ್ತಾನೆ. ಪ್ರೀತಿ, ರಸಿಕತೆಯನ್ನು ಬಾಳಿನಲ್ಲಿ ಹೊಂದಿದ ಜನಪದರು ಅವುಗಳನ್ನು ಹಾಡಾಗಿಸಿದ್ದಾರೆ. ಇಂತಹ ಸಾಕಷ್ಟು ಉಲ್ಲೇಖಗಳು ಜನಪದ ಗೀತೆಗಳಲ್ಲಿ ಕಂಡುಬರುತ್ತವೆ.

## ೪.೩ ಜನಪದರ ಸಾಮಾಜಿಕ ಸಂಬಂಧಗಳು

ಮಾನವನು ಮೂಲತಃ ಸಮಾಜಜೀವಿ. ಆತನು ಯಾವಾಗಲೂ ಸಮಾಜದಲ್ಲಿಯೇ ವಾಸಿಸಲು ಇಷ್ಟಪಡುತ್ತಾನೆ. ಸಾಮೂಹಿಕ ಜೀವನದಲ್ಲಿ ಒಬ್ಬ ವ್ಯಕ್ತಿ ಅನೇಕ ವ್ಯಕ್ತಿಗಳೊಡನೆ ಸಮೂಹಗಳಲ್ಲಿ ವಿವಿಧ ರೀತಿಯ ಬಂಧಗಳಿಂದ ಬಂಧಿಸಲ್ಪಟ್ಟಿದ್ದಾನೆ. ಜನಪದರ ಜೀವನವು ಇದಕ್ಕೆ ಹೊರತಾದದ್ದಲ್ಲ. ಸಾಮಾನ್ಯವಾಗಿ ಸಮಾನ ಸ್ವಭಾವ ಜೀವಿಗಳು ಸಾಂಘಿಕವಾಗಿ ಸಂಬಂಧಗಳನ್ನು ಹೊಂದಿರುವ ವ್ಯವಸ್ಥೆಗೆ 'ಸಮಾಜ' ಎಂದು ಕರೆಯುವರು. ಇದು ಹಲವು ಜನರಿಂದ ಒಡಗೂಡಿದ ಸಮೂಹವಾಗಿದೆ. ವೈಯಕ್ತಿಕ ಹಿತಕ್ಕಿಂತಲೂ ಸಮಾಜದಲ್ಲಿ ಸಮಷ್ಠಿ ಹಿತ ಮುಖ್ಯವಾಗಿರುತ್ತದೆ.

"ಸಮಾಜವು ಪರಸ್ಪರ ಸಾಮಾಜಿಕ ಸಂಬಂಧಗಳಿಂದ ಕೂಡಿದ ಸಂಕೀರ್ಣ ವ್ಯವಸ್ಥೆ. ಮಾನವನ ಜೀವನವು ತುಂಬಾ ವೈವಿಧ್ಯಪೂರ್ಣವಾಗಿದೆ. ಆತನು ಇತರರೊಂದಿಗೆ ಅನೇಕ ಸಂಬಂಧಗಳನ್ನು ಹೊಂದಿರುತ್ತಾನೆ. ಒಂದು ಭೌತಿಕ ಸಂಬಂಧ; ಇನ್ನೊಂದು ಸಾಮಾಜಿಕ ಸಂಬಂಧ. ಮೇಜು ಮತ್ತು ನೆಲ, ಪಾಟಿ ಮತ್ತು ಪೆನ್ಸಿಲ್ ಇತ್ಯಾದಿಗಳ ಸಂಬಂಧವು ಭೌತಿಕವಾದದ್ದು. ಏಕೆಂದರೆ ಅವುಗಳಿಗೆ ಪರಸ್ಪರ ಅರಿವು ಇರಲಾರದು. ಗುರು-ಶಿಷ್ಯ, ನಲ್ಲ-ನಲ್ಲೆ ಮುಂತಾದ ವ್ಯಕ್ತಿಗಳ ನಡುವೆ ಏರ್ಪಟ್ಟ ಸಂಬಂಧವು ಸಾಮಾಜಿಕವಾದದ್ದು. ಇಂತಹ ಸಂಬಂಧಗಳಲ್ಲಿ ಪರಸ್ಪರ ಅರಿವು ತಿಳುವಳಿಕೆ ಇರುತ್ತದೆ." (ಎಚ್. ಬಿ. ಮಾಳಿ, ೧೯೯೨, ಪು-೪೧)

ಮೆಕೆವರ್ ಮತ್ತು ಪೇಜ್ ಎಂಬ ಸಮಾಜಶಾಸ್ತ್ರಜ್ಞರು 'ಸಂಕ್ಷಿಪ್ತವಾಗಿ ನಿರಂತರವಾಗಿ ಬದಲಾವಣೆ ಹೊಂದುತ್ತಿರುವ ಸಂಕೀರ್ಣ ವ್ಯವಸ್ಥೆ ಹಾಗೂ ಸಾಮಾಜಿಕ ಸಂಬಂಧಗಳ ಬಲೆಗೆ ಸಮಾಜ'ವೆಂದು ಹೇಳುತ್ತಾರೆ. ಸಮಾಜವು ಚಿಕ್ಕದಾಗಿದ್ದರೆ ಸಾಮಾಜಿಕ ಸಂಬಂಧಗಳು ಸರಳವಾಗಿರುತ್ತವೆ. ಸಮಾಜವು ದೊಡ್ಡದಾಗುತ್ತ ನಡೆದಂತೆ ಸಾಮಾಜಿಕ ಸಂಬಂಧಗಳು ಸಂಕೀರ್ಣ ಹಾಗೂ ಜಟಿಲವಾಗಿರುತ್ತವೆ. ಸಂಬಂಧಗಳು ಸ್ಥಿರವಾಗಿರದೆ ನಿತ್ಯ ಪರಿವರ್ತನಶೀಲವಾಗಿರುತ್ತವೆ. ಸಾಮಾಜಿಕ ಸಂಬಂಧಗಳು ಜೇಡರಬಲೆಯಂತೆ ಹೆಣೆದುಕೊಂಡಿರುತ್ತವೆ. ಸಮಾಜವು ವ್ಯಕ್ತಿಯಲ್ಲಿ ಏರ್ಪಟ್ಟ ಪರಸ್ಪರ ಅಂತರಕ್ರಿಯೆಯಾಗಿದ್ದು, ಹಾಗೆಯೇ ಅಂತರ ಸಂಬಂಧಗಳನ್ನು ಒಳಗೊಂಡಿರುತ್ತದೆ. ಮಾನವರ ಪರಸ್ಪರ ಸಂಬಂಧ ಮತ್ತು ಅವಲಂಬನೆಯಿಲ್ಲದೇ ಸಮಾಜವು ಹುಟ್ಟಿ ಬರಲಾರದು.

ಪರಸ್ಪರ ಅವಲಂಬನೆ, ಹೋಲಿಕೆ ಮತ್ತು ಭೇದ, ಸಹಕಾರ, ನಿತ್ಯಪರಿವರ್ತನಶೀಲ ಇವು ಸಮಾಜದ ಲಕ್ಷಣಗಳು. ಇಂತಹ ಸಾಮಾನ್ಯ ಲಕ್ಷಣಗಳನ್ನು ಜನಪದರಲ್ಲಿಯೂ ಕಾಣುತ್ತೇವೆ. ಸಮೂಹದಲ್ಲಿ ವಾಸಿಸಲು ಇಷ್ಟಪಡುವ ಜನಪದರು ಹೆಚ್ಚಾಗಿ ಪ್ರೀತಿ, ವಿಶ್ವಾಸ, ನಂಬಿಕೆಗಳಿಂದ ಪರಸ್ಪರ ಬಂಧಿತರಾಗಿರುತ್ತಾರೆ. "ಪರಸ್ಪರ ಸಂಬಂಧ ನಡುವಳಿಕೆಯ ದೃಷ್ಟಿಯಿಂದ ಗಮನಿಸಿದಾಗ ವ್ಯಕ್ತಿ-ವ್ಯಕ್ತಿಗಳ ನಡುವೆ, ವಯಸ್ಸು, ಲಿಂಗಭೇದ ಮತ್ತು ಸಂಬಂಧದ ಅಂಶಗಳ ಆಧಾರಿತ ಅಧಿಕಾರ-ಅಧೀನತೆಯ ನಡುವಳಿಕೆಯನ್ನು ಕಾಣಬಹುದು. ಅಂತೆಯೇ ವಯಸ್ಸಿನ ಅಂಶದ ಮೇಲೆ ಹಿರಿಯ-ಕಿರಿಯ,

ಲಿಂಗಭೇದದ ಅಂಶದ ಮೇಲೆ ಗಂಡಸು-ಹೆಂಗಸು, ಸಹೋದರ-ಸಹೋದರಿ ಮತ್ತು ಪರಸ್ಪರ ಸಂಬಂಧದ ಅಂಶದ ಮೇಲೆ ತಂದೆ-ತಾಯಿ-ಮಕ್ಕಳು, ಗಂಡ-ಹೆಂಡತಿ, ಅಣ್ಣ-ತಮ್ಮ-ತಂಗಿ-ಅಕ್ಕ, ಅತ್ತೆ, ಸೊಸೆ, ಮಾವ-ಸೊಸೆ ಇತ್ಯಾದಿ ಸದಸ್ಯರುಗಳ ಸಂಬಂಧ ನಡುವಳಿಕೆಯಲ್ಲಿ ಅಧಿಕಾರ ಮತ್ತು ಅಧೀನತೆಯನ್ನು ಕಾಣಬಹುದು". (ಎಸ್. ರಾಜಶೇಖರ್, ೧೯೯೦, ಪು-೧೨೨)

ಜನಪದ ಗೀತೆಗಳು ಜನಪದ ಸಮಾಜದ ಕೊಡುಗೆಗಳಾಗಿವೆ. ಜನಪದ ಸಮಾಜದ ಎಲ್ಲ ಕ್ರಿಯೆಗಳನ್ನು ಇವು ಆವರಿಸಿಕೊಂಡಿವೆ. ಜನಪದ ಸಮಾಜವನ್ನು ಅರಿತುಕೊಳ್ಳಬೇಕಾದರೆ ಜನಪದ ಗೀತೆಗಳ ಅಧ್ಯಯನ ಮಾಡಬೇಕೆಂಬಷ್ಟು ಜನಪದ ಗೀತೆಗಳ ಸಮಾಜದ ಅಂತರಂಗದ ಅನಂತಮುಖಗಳನ್ನು ತೆರೆದಿಡುತ್ತವೆ. ಜನಪದ ಗೀತೆಗಳು ಮಾನವನ ಬದುಕಿನ ನೈಜ ಚಿತ್ರಣವನ್ನು ಕೊಡುವುದು ಅವುಗಳ ಮತ್ತೊಂದು ವೈಶಿಷ್ಟವಾಗಿದೆ.

ಜನಪದ ಸಮಾಜ ಸುವ್ಯವಸ್ಥಿತವಾದುದು. ಅದರ ಸುಸ್ಥಿತಿಗೆ ಜನಪದರು ಪಾಲಿಸಿಕೊಂಡು ಬಂದ ನೀತಿ-ನಿಯಮಾವಳಿಗಳು, ಸಂಪ್ರದಾಯ-ಆಚರಣೆಗಳು, ಹಬ್ಬ-ಹರಿದಿನಗಳು, ಮೌಲ್ಯ-ಆದರ್ಶಗಳು ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತವೆ. ಜನರು ಸಮಾಜದಲ್ಲಿ ವ್ಯಕ್ತಿಗತ ಬದುಕು ಎಷ್ಟು ಮುಖ್ಯವೋ ಅದಕ್ಕಿಂತ ಮಿಗಿಲಾದುದು ಸಾಮೂಹಿಕ ಬದುಕು. ತಾನೂ ಬದುಕಬೇಕು. ತನ್ನಂತೆ ಇತರರನ್ನು ಬದುಕಲು ಬಿಡಬೇಕೆಂಬ ನೀತಿ ಜನಪದ ಸಮಾಜದಲ್ಲಿದೆ. ಎಲ್ಲರ ಬದುಕು ಹಸನಾಗಿರಲು, ಶಾಂತಿ-ನೆಮ್ಮದಿಯಿಂದ ಜೀವಿಸಲು ಜನರು ಅನೇಕ ನೀತಿ-ನಿಯಮಾವಳಿಗಳನ್ನು ರೂಪಿಸಿಕೊಂಡಿರುತ್ತಾರೆ. ಜನಪದ ಸಮಾಜದಲ್ಲಿ ಪ್ರಚಲಿತವಿರುವ ಮೌಲ್ಯಪರಿಪಾಲನೆ, ಹಬ್ಬಗಳು, ಸಂಪ್ರದಾಯ-ಆಚರಣೆ, ನೀತಿಗಳನ್ನು ಕುರಿತು ಅನೇಕ ಗೀತೆಗಳಿವೆ. ಜನಪದರು ತಮ್ಮ ಸಮಾಜವನ್ನು ಸುಸ್ಥಿತಿಯಲ್ಲಿಡಲು ಜನರನ್ನು ಜಾಗೃತಗೊಳಿಸಲು ಗೀತೆಗಳನ್ನು ಬಳಸಿಕೊಳ್ಳುತ್ತಾರೆ. ಜನಪದ ಗೀತೆಗಳಲ್ಲಿ ಸಾಮಾಜಿಕ ಗೀತೆಗಳ ಪಾತ್ರ ವೈಶಿಷ್ಟ್ಯವಾದದ್ದು. ಅವು ಸಮಾಜದ ಚೌಕಟ್ಟನ್ನು ಕಾಪಾಡುವಲ್ಲಿ ವಹಿಸುತ್ತಿರುವ ಪಾತ್ರ ಅತ್ಯಂತ ಮಹತ್ವದ್ದು.

ನೀತಿ ಬೋಧಿಸುವ, ನೀತಿ ಪಾಠ ಕೇಳುವ ಪರಿಪಾಟ ನಮ್ಮ ಸಮಾಜದಲ್ಲಿ ಬಹು ಹಿಂದಿನಿಂದಲೂ ನಡೆದುಬಂದಿದೆ. ಈಸೋಪನ ಕಥೆಗಳು, ಪಂಚತಂತ್ರದ ಕಥೆಗಳಲ್ಲಿ ಬಹುಪಾಲು ನೀತಿ ಕಥೆಗಳೇ ಇವೆ. ಮಾನವ ಸಮಾಜದ ಶತಶತಮಾನದ ಅನುಭವದಿಂದ ನೀತಿಗಳು ರಚನೆಯಾಗಿರುತ್ತವೆ. ಸಮಾಜದಲ್ಲಿ ವ್ಯಕ್ತಿ ದಾರಿ ತಪ್ಪಿದಾಗ ನೀತಿ ಹೇಳಿ ಸರಿ ದಾರಿಗೆ ತರಲು ಹಿರಿಯರು ಪ್ರಯತ್ನಿಸುತ್ತಾರೆ. ನೀತಿ ಸಮಾಜದಲ್ಲಿ ವ್ಯಕ್ತಿ ಸನ್ನಡತೆಯನ್ನು ರೂಪಿಸಿಕೊಳ್ಳುವಂತೆ ಬೋಧಿಸುತ್ತವೆ. ಅನಾದಿಯಿಂದ ಸಮಾಜ ಸರಿಯೆಂದು ಕಂಡುಕೊಂಡ ರೀತಿಯಲ್ಲಿ ಬದುಕುವವನನ್ನು ನೀತಿವಂತನೆಂದು ಕರೆಯುತ್ತಾರೆ. ಸಮಾಜದಲ್ಲಿ ದುರ್ನಡತೆಯನ್ನು ಹೊಂದಿದವರನ್ನು ನೀತಿಗೆಟ್ಟವರೆಂದು ಕರೆಯುತ್ತಾರೆ.

ಸಮಾಜವು ಕುಟುಂಬವನ್ನು ಒಳಗೊಂಡು ಕುಟುಂಬದ ಹೊರಗೆ ಅನೇಕ ವ್ಯಕ್ತಿಗಳ ಒಡನಾಟದಿಂದ ರೂಪುಗೊಂಡ ಸಾಮುದಾಯಿಕ ವ್ಯವಸ್ಥೆಯಾಗಿದೆ. ಸಹಕಾರ–ಸಹಬಾಳ್ವೆಯ ಆಶಯವನ್ನಿರಿಸಿಕೊಂಡು ಸಮಾಜವು ಹುಟ್ಟಿಕೊಂಡಿದೆ. ವ್ಯಕ್ತಿಗಳ ನಡುವಿನ ಆಪ್ತತೆ, ಕುಟುಂಬಗಳ ನಡುವಿನ ಸಹಚರ್ಯ, ಸಂಘ–ಸಂಸ್ಥೆಗಳ ನಡುವಿನ ಪಾಲ್ಗೊಳ್ಳುವಿಕೆಯಿಂದ ಸಾಮೂಹಿಕ ಚಿಂತನೆಗಳು ಹುಟ್ಟಿಕೊಂಡು ಸಾಮಾಜಿಕ ಸಂಬಂಧಗಳು ಏರ್ಪಡುತ್ತವೆ.

ಹೀಗೆ ಸಾಮಾಜಿಕವಾಗಿ ಏರ್ಪಟ್ಟ ನೆರೆಹೊರೆ, ಗುರು–ಶಿಷ್ಯ, ನಲ್ಲ–ನಲ್ಲೆ, ಗೆಳೆಯ–ಗೆಳೆಯರು, ಗೆಳತಿ–ಗೆಳತಿಯರು ಮುಂತಾದ ಸಾಮಾಜಿಕ ಸಂಬಂಧಗಳನ್ನು ಜನಪದರ ಜೀವನದ ಕುರುಹಾದ ಗೀತೆಗಳು ಕಟ್ಟಿಕೊಟ್ಟಿವೆ. ಅಂತಹ ಸಂಬಂಧಗಳನ್ನು ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

### ೪.೩.೧ ಗುರು–ಶಿಷ್ಯರು

ಗುರುಸ್ಮರಣೆಯಿದ್ದರೆ ಎಂತಹ ಕಷ್ಟ–ಕಾರ್ಪಣ್ಯಗಳನ್ನು ನೂಕಬಹುದು. ಗುರುವೇ ಗುರುವಿನ ಕೃಪಾಕಟಾಕ್ಷವಿದ್ದವನಿಗೆ ಎಂತಹ ಸಂಕಟ ಬಂದರೂ ಅದರೊಳಗಿಂದ ಪಾರಾಗಬಹುದೆಂಬ ನಂಬಿಕೆ ಜನಪದರದು. ಗುರು–ಶಿಷ್ಯರ ಸಂಬಂಧ ಇಂದು–ನಿನ್ನೆಯದಲ್ಲ. ಅದಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಹಿಂದೆ ಗುರುವಿನ ಬಳಿಯಲ್ಲಿದ್ದು ಆಶ್ರಮವಾಸಿಗಳಾಗಿ ಶಿಷ್ಯರು ಜ್ಞಾನ ಪಡೆಯಬೇಕಿತ್ತು. ಇಂದು ವಿದ್ಯಾದೇಗುಲಗಳು ಆ ಕಾರ್ಯವನ್ನು ನಿರ್ವಹಿಸುತ್ತಿವೆ. ವ್ಯಕ್ತಿಯ ವ್ಯಕ್ತಿತ್ವ ನಿರ್ಮಾಣದಲ್ಲಿ ಗುರುವಿನ ಪಾತ್ರ ಮಹತ್ವದ್ದು. ಗುರುವಿನ ಸ್ಥಾನ ಸಮಾಜದಲ್ಲಿ ಯಾವಾಗಲೂ ಉತ್ತುಂಗದಲ್ಲಿರುತ್ತದೆ. ಪ್ರತಿಯೊಬ್ಬರು ಗುರುವನ್ನು ಗೌರವಿಸುತ್ತಾರೆ. ಅದು ಪ್ರತಿಯೊಂದು ಸಮಾಜದ ಜನರೊಂದಿಗೆ ಜೀವನದ ಭಾಗವಾಗಿ ಬಂದಿದೆ.

ಭಾರತೀಯ ಗತ ಸಮಾಜವನ್ನು ಗಮನಿಸಿದಾಗ ಅದೆಷ್ಟೋ ಆದರ್ಶ ಗುರುಶಿಷ್ಯರನ್ನು ಕಾಣುತ್ತೇವೆ. ಗುರುವಿಗಾಗಿ ಅದೆಷ್ಟೋ ಶಿಷ್ಯರು ಪ್ರಾಣವನ್ನೇ ತ್ಯಜಿಸಿದ್ದನ್ನು, ಗುರುಗಳು ಶಿಷ್ಯನಿಗಾಗಿ ಪ್ರಾಣವನ್ನೇ ತೇಯ್ದಿದ್ದನ್ನು ನೆನೆಪಿಸಿಕೊಳ್ಳಬಹುದು. ಜನಪದರು ತಮ್ಮ ಜೀವನದಲ್ಲಿ ಗುರುವಿಗೆ ಸ್ಮರಿಸಿ, ದೇವರಿಗೆ ಕೈಮುಗಿದು ದಿನನಿತ್ಯದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆ. ಗುರುವಿನ ಮಾರ್ಗದರ್ಶನವಿಲ್ಲದೇ ಜನಪದರು ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳಲಾರರು. ಅವರ ಪ್ರಕಾರ ಗುರು ಕೇವಲ ಬುದ್ಧಿಯನ್ನು ನೀಡುವುದಿಲ್ಲ. ಬದಲಾಗಿ ಸನ್ಮಾರ್ಗವನ್ನು ತೋರುತ್ತಾನೆ.

ನಿದ್ದಿಗಣ್ಣಲಿ `ಕಂಡ ಸುದ್ದ ಗುರುವಿನ ಪಾದ
ಎದ್ದು ನೋಡಿದರ ನೀರಬಯಲ । ಗುರುರಾಯ
ರುದ್ದರನ ಮಹಿಮೆ ತಿಳಿಯಾವ। (ವಿನೀತ ರಾಮಚಂದ್ರರಾಯ, ೧೯೬೦, ಪು–೩೫)

ಜನಪದರು ನಿದ್ದೆಗಣ್ಣಲ್ಲಿಯೂ ಶ್ರೇಷ್ಠವಾದ ಸದ್ಗುರುವಿನ ಪಾದವನ್ನು ಸ್ಮರಿಸುತ್ತಾರೆ. ರುದ್ರನ ಮಹಿಮೆಯನ್ನು ತಿಳಿಯುವ ಕೌಶಲ್ಯವಿರುವುದು ಗುರುವಿಗೆ ಮಾತ್ರ ಎನ್ನುತ್ತಾರೆ. ಅವರ ದೃಷ್ಟಿಯಲ್ಲಿ ಗುರು ಹಾಗೂ ದೈವ ಎರಡೂ ಒಂದೇ. ದೈವಕ್ಕಿಂತಲೂ ಮಿಗಿಲಾದವನು ಗುರುವೆಂದು ನಂಬಿಕೆ ಉಳ್ಳವರು. ಅದಕ್ಕಾಗಿಯೇ ಅವರು 'ಹರ ಮುನಿದರೂ ಗುರು ಕಾಯ್ವನು' ಎಂದಿದ್ದಾರೆ. ಸಂತ ಕಬೀರನನ್ನು ಒಬ್ಬ 'ಗುರು ಮತ್ತು ದೇವರನ್ನು ನಿನ್ನ ಮುಂದೆ ನಿಲ್ಲಿಸಿದಾಗ ಯಾರಿಗೆ ಮೊದಲಿಗೆ ನಮಸ್ಕರಿಸುವೆ ?' ಎಂದು ಪ್ರಶ್ನಿಸಿದನಂತೆ. ಅದಕ್ಕೆ 'ಗುರುವಿಗೆ ಮೊದಲು ನನ್ನ ವಂದನೆ' ಎಂದು ಉತ್ತರಿಸಿದ ಕಬೀರ. ಯಾಕೆ? ಎಂದು ಮತ್ತೆ ಕೇಳಿದಾಗ 'ಸೃಷ್ಟಿಕರ್ತ ದೇವರು, ಆ ಸೃಷ್ಟಿಕರ್ತನನ್ನು ತೋರುವವನೇ ಗುರು ಹಾಗಾಗಿ ಆತನಿಗೆ ಮೊದಲು ನಮಿಸುವೆ' ಎಂದು ವಿವರಿಸಿದನಂತೆ. ಹೀಗೆ ಗುರುವಿನ ಮಹತ್ವವನ್ನು ತಿಳಿಸುವ ಅನೇಕ ಕತೆಗಳು ಸಮಾಜದಲ್ಲಿ ಚಾಲ್ತಿಯಲ್ಲಿವೆ. ಆದುದರಿಂದ ಸನ್ಮಾರ್ಗವನ್ನು ತೋರುವ ಗುರುರಾಯರಿಗೆ ಜನಪದರದು ಮೊದಲ ವಂದನೆ ಯಾಕೆಂದರೆ ಅವರು ದೇವರನ್ನು ಕಂಡಿಲ್ಲ. ಬದಲಾಗಿ ಶಿವನ ಮಹಿಮೆ ತಿಳಿಯಬಲ್ಲ ಗುರುವನ್ನು ಕಂಡಿದ್ದಾರೆ.

ಪಾದತೀರ್ಥವ ಸಲಿಸಿ ಪಾವನಾಯಿತ ಜನ್ಮ
ರೋಮರೋಮೆಲ್ಲ ರವಿಚಿನ್ನ । ಗುರು ನಿಮ್ಮ
ಪಾದದಲ್ಲಿ ಕಂಡೆ ಪರಶಿವ್ನ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೨)

ಹೀಗೆಂದು ಹಾಡುವ ಜನಪದರು ಗುರುವಿನ ಪಾದದಲ್ಲಿಯೇ ಪರಮಶಿವನನ್ನು ಕಂಡು ತಮ್ಮ ಜನ್ಮವನ್ನು ಪಾಪದಿಂದ ಮುಕ್ತ ಮಾಡಿಕೊಳ್ಳುವರು.  ತಂದೆ-ತಾಯಿಯರು ಜನನಕ್ಕೆ ಕಾರಣರಾದರೆ, ಗುರು ಉತ್ತಮ ವ್ಯಕ್ತಿಯನ್ನಾಗಿ ನಿರ್ಮಿಸುವಲ್ಲಿ ಗುರುತರವಾದ ಜವಾಬ್ದಾರಿಯನ್ನು ಹೊಂದಿರುತ್ತಾನೆ. ಶಿಷ್ಯಬಳಗವನ್ನು ಉತ್ತಮೋತ್ತವರನ್ನಾಗಿ ಮಾಡುವಲ್ಲಿ ಸದಾ ಸಿದ್ಧನಾಗಿರುತ್ತಾನೆ. ಜನಪದರ ಸಮಾಜಕ್ಕೆ ಒಬ್ಬ ಗುರುವಿದ್ದು ಆತನೇ ಅವರನ್ನು ಉದ್ಧರಿಸುವವನೆಂದು ಜನಪದರ ಭಾವನೆ.

ಕ್ಷಮಾಗುಣವನ್ನು ಹೊಂದಿ ಕರುಣೆಯಿಂದ ಬಾಳುವಂತವನೇ ಗುರು. ಇಡೀ ತನ್ನ ಜೀವನವನ್ನೇ ಪಾಂಡಿತ್ಯವನ್ನೇ ಸಮಾಜಕ್ಕಾಗಿ ಮೀಸಲಿಟ್ಟಿರುವ ಏಕೈಕ ವ್ಯಕ್ತಿ. ಜ್ಯೋತಿಯೊಂದು ತನ್ನನ್ನು ಸುಟ್ಟುಕೊಂಡೆ ಇತರರಿಗೆ ಬೆಳಕನ್ನು ನೀಡುತ್ತದೆ. ಇತರರ ಬಾಳಿಗೆ ಬೆಳಕಾಗುತ್ತದೆ. ಅಂತೆಯೇ ಗುರುವು ಕೂಡ. ಅಕ್ಷರಜ್ಞಾನವನ್ನು ಅರಿತು ಧನ್ಯತಾಭಾವದಿಂದ ಕರ್ಮವನ್ನು ಎಸಗುತ್ತ ಮನುಷ್ಯರನ್ನು ನಿರ್ಮಾಣ ಮಾಡುತ್ತಾನೆ. ಜನಪದರು ಬಡತನವಿರಲಿ, ಸಿರಿತನವಿರಲಿ ಗುರು ತೋರಿದ ಬಾಳನ್ನು ಸ್ವೀಕಾರ ಮಾಡುತ್ತಾರೆ. ಆದರೆ ಬಡತನದ ಚಿಂತೆಯನ್ನು ಶಿವನಿಗೆ ಬಿಟ್ಟು, ಬಾಳಿನಲ್ಲಿ ಬಾಳಿಸುವ ಹೊಣೆಯನ್ನು ಗುರುವಿನ ಮೇಲೆಯೇ ಹಾಕುತ್ತಾರೆ.

ಗುರುವಿನ ನೆನೆದೇನ ಗುರುಸ್ವಾಮಿ ನೆನೆದೇನ
ಗುರುವಿನ ಗುರುವ ನೆನೆದೇನ । ನನ್ನೂರ
ಹಿರಿಯ ಮಠದವರ ನೆನೆದೇನ । (ಕರಾಕ್ರೈ, ೧೯೫೭, ಪು-೧೩)

ಎಲ್ಲರನ್ನು ಗುರುವೆಂದು ಒಪ್ಪಿಕೊಳ್ಳಲಿಕ್ಕೆ ಸಾಧ್ಯವಿಲ್ಲ. ಸಮಾಜಕ್ಕೆ ಆತ ಆದರ್ಶನಾಗಿರಬೇಕು. ಆದರ್ಶ ಗುಣಗಳಿದ್ದ ಗುರುವೇ ಸರ್ವವಂದಿತ. ಗುರುವಿನ ವಚನ ಉಪದೇಶವು, ಉದ್ಧಾರ ಮಾರ್ಗವು, ಮೋಕ್ಷಪದವು ಶ್ರೇಷ್ಠವಾದ ವೇದಾಂತ ಮಾರ್ಗವೆಂದು ಶರಣರು ಪ್ರತಿಪಾದಿಸಿದ್ದಾರೆ. ಗುರುವಿನ ಮಾರ್ಗದರ್ಶನವೇ ಸಮಾಜಕ್ಕೆ ಇರದಿದ್ದರೆ ಏನಾಗುತ್ತಿತ್ತು ಎಂಬುದನ್ನು ಸ್ವಲ್ಪ ನೆನಪಿಸಿಕೊಳ್ಳಿ. ಏಕಲವ್ಯನಿಗೆ-ದ್ರೋಣರು, ವಿವೇಕಾನಂದರಿಗೆ-ಪರಮಹಂಸರು, ರಾಘವಾಂಕನಿಗೆ-ಹರಿಹರ, ದಾಸದ್ವಯರಿಗೆ-ವ್ಯಾಸರಾಯರು, ಷರೀಫ್‌ನಿಗೆ-ಗೋವಿಂದರು ಸಿಗದಿದ್ದರೆ ಸಂತ ಪರಂಪರೆ ಮುಂದುವರೆಯುತ್ತಿತ್ತೆ? ಎಂಬುದನ್ನು ಗಮನಿಸಬೇಕು. ಉತ್ತಮ ಗುರು ಯಾವಾಗಲೂ ಒಳ್ಳೆಯ ಸಮಾಜವನ್ನೇ ನಿರ್ಮಿಸುತ್ತಾನೆ. ಗಂಧ ಯಾವಾಗಲೂ ತಾನು ಸುಟ್ಟು ಸುಗಂಧವನ್ನೇ ನೀಡುತ್ತದೆ. ಅಂತೆಯೇ ಗುರು.

ಬದಲಾವಣೆ ಜಗದ ನಿಯಮ. ಜಗತ್ತು ಸಂದರ್ಭಕ್ಕೆ ತಕ್ಕಂತೆ ಬದಲಾಗುತ್ತಿದೆ. ಅನಾಗರಿಕನಾಗಿದ್ದ ಮಾನವ ನಾಗರಿಕನಾಗಿದ್ದಾನೆ. ಅನಕ್ಷರಸ್ಥ ಅಕ್ಷರಸ್ಥನಾಗಿದ್ದಾನೆ. ಪ್ರಾಚೀನ ಜಗವು ಅಳಿದು ಆಧುನಿಕ ಪ್ರಪಂಚ ರಚನೆಯಾಗಿದೆ. ಆದರೆ ಮಾನವೀಯ ಮೌಲ್ಯಗಳು ಬದಲಾಗಿಲ್ಲ. ಪ್ರೀತಿ, ಅಂತಃಕರಣ, ವಿನಯ, ವಿಧೇಯತೆ, ವಾತ್ಸಲ್ಯಗಳು ಎಂದಿಗೂ ಬದಲಾಗಲಾರವು. ಅಂತೆಯೇ ಗುರು-ಶಿಷ್ಯನ ಪರಂಪರೆಯೂ ಕೂಡ. ಭಾರತೀಯ ಸಂಸ್ಕೃತಿಯಲ್ಲಿ ಗುರುಪರಂಪರೆಗೆ ಪ್ರಾಚೀನ ಇತಿಹಾಸವಿದೆ. ವೇದಗಳ ಕಾಲದಿಂದಲೂ ಗುರು ಪೂಜ್ಯನೀಯ. ಸಮಾಜದ ಮಾರ್ಗದರ್ಶಕನಾಗಿದ್ದು, ಉತ್ತಮ ಭವಿಷ್ಯನ್ನು ರೂಪಿಸುವ ಹೊಣೆ ಗುರುವಿನದಾಗಿತ್ತು. ಗುರುಕುಲಗಳು, ಆಶ್ರಮಗಳು, ಮಠಗಳು ಅಂದಿನ ಸನ್ಮಾರ್ಗ ತೋರುವ ತಾಣಗಳಾಗಿದ್ದವು ಗುರು ಹಾಕಿದ ಗೆರೆಯನ್ನು ದಾಟದೆ, ಮಿತಿಯೊಳಗೆ ಗುರಿ ತಲುಪುವ ಶಿಷ್ಯ ಬಳಗ ಅಂದಿತ್ತು. ಅಂಥ ಗುರುವನ್ನು ಲೋಕಪಾಲಕರಾದ ತ್ರಿಮೂರ್ತಿಗಳಿಗೆ ಹೋಲಿಸಿದ್ದಾರೆ.

ಬಡತನ ನನಗಿರಲಿ ಭಾಳ ಮಕ್ಕಳಿಗಿರಲಿ
ಮ್ಯಾಗ ಗುರುವಿನ ದಯವಿರಲಿ । ನನ ಗುರುವೆ
ಬಡತನದ ಚಿಂತಿ ನಿನಗಿರಲಿ । (ಹಲಸಂಗಿ ಗೆಳೆಯರು, ೧೯೩೧, ಪು-೯೯)

ಜನಪದರು ಬಡತನವಿದ್ದರೂ ಚಿಂತೆಯಿಲ್ಲ. ಗುರುವಿನ ಮಾರ್ಗದರ್ಶನವಿದ್ದರೆ, ಎಲ್ಲ ಕಷ್ಟಗಳನ್ನು ಬಯಲು ಮಾಡುವ ಶಕ್ತಿ ಪಡೆದಿದೆ ಎಂದು ಗುರುವಿನ ಮಹತ್ವ ಸಾರಿದ್ದಾರೆ. ಎಲ್ಲ ಕಾಲಕ್ಕೂ ಆತನ ಸ್ಥಾನವೊಂದೆ ಎಂಬುವುದನ್ನು ನಾವೀಗ ಅರಿಯಬೇಕಿದೆ. ಆದರೆ ಇಂದಿನ ಯುಗದಲ್ಲಿ

ಗುರು ಶಿಷ್ಯ ಸ್ಥಾನಮಾನ ಕುಸಿದಿದೆ. ಅದಕ್ಕೆ ಕಾರಣ ತಾವೇ ಎಂಬುದನ್ನು ಗುರು-ಶಿಷ್ಯರು ಅರಿತುಕೊಂಡು ನಡೆಯಬೇಕು. ಗುರುವಾದವನು ತನ್ನ ಕಾರ್ಯಗಳನ್ನು ನಿಷ್ಕಾಮ ಕರ್ಮದಿಂದ ಮಾಡಬೇಕು. ಜಾತಿಮತ ಪಂಥಗಳ ಎಲ್ಲೇ ಮೀರಿ, ಸತತ ಸಮಾಜದ ಜನರಿಗೆ ವಿದ್ಯಾದಾನ ಮಾಡಬೇಕು. ಬದಲಿಗೆ ವಿಷಯ ಲಂಪಟನಾಗಿರಬಾರದು. ಪಕ್ಷಪಾತಿಯಾಗಿರಬಾರದು. ಅಂತಹ ಸಂದರ್ಭಗಳಲ್ಲಿ ಆತ ಸಮಾಜದ ಗೌರವವನ್ನು ಗಳಿಸಿಕೊಳ್ಳಲಾರ. ಶಿಷ್ಯರು ಸಹಿತ ವಿದ್ಯೆಯನ್ನು ಪಡೆಯುವಾಗ ತಮ್ಮ ಪ್ರತಿಷ್ಠೆ, ಅಹಂ, ಸಿರಿತನ, ದಾಷ್ಟ್ಯಗಳನ್ನು ಬದಿಗಿಡಬೇಕು. ವಿನಯ, ವಿದೇಯತೆಯಿಂದ ಜ್ಞಾನಗಳಿಸಿಕೊಳ್ಳಬೇಕು. ಇಲ್ಲದಿದ್ದರೆ ಪಾಂಡಿತ್ಯ ಲಭಿಸುವುದಿಲ್ಲ. ಅದಕ್ಕಾಗಿಯೇ ದಾಸಶ್ರೇಷ್ಠರು 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ' ಮುಕುತಿ ಎಂದಿದ್ದಾರೆ. ಆದ್ದರಿಂದ ಗುರುವಿಗೆ ಶಿಷ್ಯ ತಲೆಬಾಗಲೇಬೇಕು. ಶಿಷ್ಯನಿಗೆ ಗುರು ತಲೆದೂಗಲೇಬೇಕು.

ಯಾವುದೊಂದು ವಿದ್ಯೆಯನ್ನು ತಿಳಿಸಿ ಹೇಳುವಂತಹ ಯೋಗ್ಯತೆಯಿದ್ದವನೇ ಗುರು. ಗುರುವು ಹೇಳಿದ್ದನ್ನು ಲಕ್ಷ್ಯಗೊಟ್ಟು ಕೇಳಿ ತಿಳಿದುಕೊಳ್ಳುವ ಯೋಗ್ಯತೆಯುಳ್ಳವನೇ ಶಿಷ್ಯ. ಹೇಳಲಿಕ್ಕೆ ಬಾರದ ಗುರುವೂ ಹೇಳಿದ್ದನ್ನು ಕೇಳಲಾರದಂತಹ ಶಿಷ್ಯನು ಕೂಡಿದರೆ ಅದರ ಮೇಳವು ಹೇಗಾಗುವುದು? ಅದು ಎಂದಿಗೂ ಮೇಳವಾಗುವುದಿಲ್ಲ. ಅಂದು 'ಗುರುವೇ ನಮಃ' ಎಂದು ವಂದಿಸುತ್ತಿದ್ದ ಕೈಗಳು ಇಂದು 'ಗುರುವೇನ್ ಮಹಾ' ಎಂದು ಬೆರಳು ತೋರಿಸುತ್ತಿವೆ. ಇದಕ್ಕೆ ಯಾರು ಹೊಣೆ? ಎಂಬುದನ್ನು ಅರಿತುಕೊಳ್ಳಬೇಕಿದೆ.

ಬ್ರಹ್ಮಜ್ಞಾನವಿಲ್ಲದವನು, ಬೋಧಿಸುವ ಗುಣವಿಲ್ಲದವನು, ತಿಳಿಸಿ ಹೇಳಲಿಕ್ಕೆ ಬಾರದಂತವನು, ಯೋಗ್ಯವಾದ ವಿವರಣೆಯನ್ನು ತಿಳಿಸದೇ ಉಪದೇಶ ಮಾಡುವವನು ಗುರುವಾಗಲಾರ. ಆತನಿಗೆ ಪರಮಜ್ಞಾನ ಸಿದ್ಧಿಸಿರಬೇಕು. ಗುರು ಯಾವಾಗಲೂ ಉತ್ತಮವಾಗ್ಮಿಯೂ ಸೃಜನಶೀಲನೂ, ಲೋಕಜ್ಞಾನಿಯೂ, ಸಚ್ಚಾರಿತ್ರ್ಯನೂ ಹಾಗೂ ಸತತ ಅಧ್ಯಯನಶೀಲನಾಗಿರಬೇಕು. ಶುದ್ಧ ಚಿಂತನೆಗಳ ಸಾಕಾರಮೂರ್ತಿಯೇ ಗುರು. ಈತನನ್ನೇ ಸಮಾಜ, ಶಿಷ್ಯಬಳಗ ಅನುಕರಿಸುತ್ತದೆ. ಸನ್ನಡತೆಯನ್ನು ತೋರಿ ದೇಶದ ಭವಿಷ್ಯವನ್ನು ನಿರ್ಮಿಸುವಂತಹ ಗುಣಗಳು ಗುರುವಿನಲ್ಲಿರಬೇಕು. ಮೌಲಿಕ ಹಾಗೂ ನೈತಿಕ ಮಾತುಗಳನ್ನಾಡುವುದರ ಮೂಲಕ ಜನರಿಗೆ ಸ್ಫೂರ್ತಿ ಚೇತನದಂತಿರಬೇಕು. ಅಂತಹ ಗುರವಿಗೆ ಮಾತ್ರ ಜನಪದರು ತಲೆಬಾಗುತ್ತಾರೆ.

ಗುರುವಿನ ಮಠದಾಗ ಸುರಗಿ ಶಾವಂತೀಗಿ
ಗುರುಭಕ್ತರೆಂಬೊ ದನಬಂದು । ಮೇದಾವ
ಗುರುವೆ ತಿಳುವಿನ ದವಸಾವ । (ಕರಾಕ್ಯ, ೧೯೫೭, ಪು-೧೩)

ಪ್ರಾಚೀನ ಕಾಲದಿಂದಲೂ ಗುರುವಿನ ಆಶ್ರಮಗಳು ನಿಸರ್ಗದ ಮಡಿಲಲ್ಲಿಯೇ ನಿರ್ಮಾಣಗೊಂಡಿವೆ. ಪ್ರಕೃತಿಯ ಸೊಬಗನ್ನು ಅಸ್ವಾಧಿಸುತ್ತ ಜ್ಞಾನ ಪಡೆದರೆ ಬೇಗನೆ ಗ್ರಹಿಕೆಗೆ

ಒಳಪಡುತ್ತದೆ. ಅಂತೆಯೇ ಗುರುವಿನ ಮಠವು ಪ್ರಕೃತಿಯ ಸೊಬಗನ್ನು ಒಳಗೊಂಡಿದ್ದು, ಮಠದಲ್ಲಿ ಜ್ಞಾನವೆಂಬ ಮೇವಿದೆ ಆ ಮೇವನ್ನು ಮೇಯುವುದಕ್ಕೆ ಭಕ್ತರೆಂಬ ದನಗಳು ಬಂದಿವೆ ಎಂದು ಜನಪದರು ಗುರುವಿನ ಪಾತ್ರವನ್ನು ಗೀತೆಗಳಲ್ಲಿ ತಿಳಿಸಿದ್ದಾರೆ.

ಗುರುಬಳಗವನ್ನು ಜರಿಯುವ, ಅಣುಕಿಸುವ, ವಂಚಿಸುವ ಜನರೆಂದಿಗೂ ಜ್ಞಾನಿಯಾಗಲಾರರು. ಅಕ್ಷರವೊಂದು ಕಲಿಸಿದಾತ ಗುರು. ಇಡೀ ಸಮಾಜವೇ ತಲೆಬಾಗುವ ಗುರುಗಳಿಗೆ ಸದಾ ಗೌರವಿಸಬೇಕು. ದೇವರು ಎಲ್ಲ ಸಂದರ್ಭಗಳಲ್ಲೂ ತಾನು ಇರಲಾರ ಎಂದೇ ಭೂಮಿಯ ಮೇಲೆ ತಂದೆ, ತಾಯಿ ಹಾಗೂ ಗುರುವನ್ನು ಸೃಷ್ಟಿಸಿದ. ಅವರೇ ಕಣ್ಣಿಗೆ ಗೋಚರಿಸುವ ದೇವರು. ನಾವಿಂದು ಉತ್ತಮ ಜೀವನ ನಡೆಸುತ್ತಿದ್ದೇವೆಯೆಂದರೆ ಅದಕ್ಕೆ ಅವರೇ ಸ್ಫೂರ್ತಿ. ತಾಯಿಯಿಂದ ಮಮತೆಯನ್ನು, ತಂದೆಯಿಂದ ನಡತೆಯನ್ನು ಗುರುವಿಂದ ಪಾಂಡಿತ್ಯವನ್ನು ಪಡೆದು ಸಮಾಜದಲ್ಲಿ ಉತ್ತಮಸ್ಥಾನ ಹೊಂದಬೇಕು. ಒಳ್ಳೆಯ ನಡತೆ-ವಿನಯದಿಂದ ನಡೆದುಕೊಳ್ಳಬೇಕು. ಉತ್ತಮ ಸ್ನೇಹಿತನಾಗಿ, ಮಾರ್ಗದರ್ಶಕದಂತೆ ಕಾರ್ಯನಿರ್ವಹಿಸುವ ಗುರುವಿಗೆ ಯಾವಾಗಲೂ ಕೃತಜ್ಞನಾಗಿರಬೇಕು.

### ೪.೩.೨ ನಲ್ಲ-ನಲ್ಲೆ

ಮಾನವೀಯ ಸಂಬಂಧಗಳು ಬಿಗಿಗೊಳ್ಳಲು ಪ್ರೀತಿ, ನಂಬಿಕೆ, ವಿಶ್ವಾಸ, ಸಹೃದಯತೆ ಮುಂತಾದ ಮೌಲ್ಯಗಳು ಸಹಕಾರಿಯಾಗಿವೆ. ಅವುಗಳಿಂದ ಮನುಷ್ಯರ ನಡುವಿನ ಸಂಬಂಧಗಳು ರೂಪುಗೊಳ್ಳುತ್ತವೆ. ಸ್ನೇಹದ ಮೂಲಕ ಆರಂಭಗೊಂಡ ಬಾಂಧವ್ಯ ಪ್ರೀತಿಗೆ ತಿರುಗಿ ಮದುವೆಯೊಂದಿಗೆ ಕೊನೆಗೊಳ್ಳುತ್ತದೆ. ಕೆಲವೊಮ್ಮೆ ಮದುವೆಯೊಂದಿಗೆ ಸ್ನೇಹ ಸಂಬಂಧವೇ ಕೊನೆಗೊಳ್ಳುತ್ತದೆ. ಸ್ತ್ರೀಯರ ನಡುವಿನ, ಪುರುಷರ ನಡುವಿನ ಸ್ನೇಹವನ್ನು ಒಪ್ಪಿಕೊಳ್ಳುವ ಸಮಾಜವು ಸ್ತ್ರೀ-ಪುರುಷರ ನಡುವಿನ ಗೆಳೆತನವನ್ನು ಒಪ್ಪುವುದಿಲ್ಲ. ಅವರು ಎಷ್ಟೇ ಸ್ನೇಹಜೀವಿಗಳಾಗಿದ್ದರೂ ಬದಲಾಗಿ ಪ್ರೇಮಿಗಳು, ಪ್ರಣಯಿಗಳೆಂದೇ ಗುರುತಿಸುತ್ತದೆ. ಜನಪದರಲ್ಲಿಯೂ ಇಂತಹ ನಿದರ್ಶನಗಳು ಸಾಕಷ್ಟು ಕಂಡುಬರುತ್ತವೆ.

ಮೇಲು-ಕೀಳು, ಬಡವ-ಬಲ್ಲಿದ, ಜಾತಿ-ಮತ, ಕುಲ-ಗೋತ್ರಗಳನ್ನು ಮೀರಿದ್ದು ಪ್ರೀತಿ. ಚಿಕ್ಕಂದಿನಲ್ಲಿ ಕೂಡಿ ಆಡುವಾಗ, ಓದುವಾಗ ಹೀಗೆ ಇನ್ನು ಯಾವುದೋ ಸನ್ನಿವೇಶದಲ್ಲಿ ಕುಡಿಯೊಡೆದ ಪ್ರೀತಿಯು ಹೆಣ್ಣು-ಗಂಡು ಯಾರನ್ನೂ ಬಿಡದು. ಮನೆಮಂದಿ, ಊರಿನ ಜನರೆಲ್ಲರ ಕಣ್ಣು ತಪ್ಪಿಸಿ ಭೇಟಿಯಾಗುವುದು. ಪರಸ್ಪರ ಸುಖ-ದುಃಖವನ್ನು ಹಂಚಿಕೊಳ್ಳುವ ಹರೆಯದ ಪ್ರೀತಿಯು ಎಲ್ಲೆಯನ್ನು ಮೀರಿದ್ದು. ಯಾರ ಹಂಗಿಲ್ಲದೇ ವಿಹರಿಸುವ ಬಾನಾಡಿಗಳಂತೆ. ಪ್ರೇಮದ ಬಾನಿನಲ್ಲಿ ವಿಹರಿಸುವ ಹಕ್ಕಿಗಳೇ ಹರೆಯದ ಜೋಡಿಗಳು. ತಾನು ಪ್ರೀತಿಸುವ ಹುಡುಗಿಯನ್ನು ಉತ್ಸವಕ್ಕೊ, ಜಾತ್ರೆಗೂ ಕರೆದೊಯ್ದು ಆಕೆಯ ಮನಸ್ಸನ್ನು ಗೆಲ್ಲಬೇಕೆಂದು ಕಷ್ಟಪಡುವ ಹುಡುಗನ ಕಷ್ಟ ಹೇಳತೀರದು.

ಹುಡುಗೀಯ ಕರಕೊಂಡು ಹುಡುಗ ಜಾತ್ರೆಗೆ ಹೋದ
ಹುರುಗಡಲೆ ಬೆಲ್ಲ ಮಡಲಲ್ಲಿ । ಕಟ್ಕೊಂಡು
ಹುಡುಗಿಯ ಕೈಗೆ ಬಳೆಯಿಟ್ಟ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೨೨)

ಹುಡುಗಿಯನ್ನು ಜಾತ್ರೆಗೆ ಕರೆದೊಯ್ದು ಹುಡುಗನು ಜಾತ್ರೆಯ ತಿರುಗಾಡಿ ಆಯಾಸವಾದಾಗ, ಹಸಿವಾದಾಗ ತಿನ್ನಲೆಂದು ಮಡಿಲಲ್ಲಿ ಹುರಿದ ಕಡಲೆ ಕಾಳಿನ ಜೊತೆಗೆ ಬೆಲ್ಲವನ್ನು ಕಟ್ಟಿಕೊಂಡಿದ್ದಾನೆ. ಅವಳ ಮೆಚ್ಚುಗೆಯನ್ನು ಪಡೆಯಬೇಕೆಂದು ಬಗೆಬಗೆಯಾಗಿ ಪ್ರಯತ್ನಿಸುತ್ತಾನೆ. ಮುದ್ದು ಮಾತಾಡಿ ನಗಿಸುತ್ತಾನೆ. ತಾನೂ ನಗುತ್ತಾನೆ. ಹೀಗೆ ಹುಡುಗಿಯ ಮನಸ್ಸನ್ನು ಗೆಲ್ಲಲು ಬಳೆ ಕೊಡಿಸಿ, ಮುತ್ತಿನಂತ ಮಾತುಗಳನ್ನಾಡಿ ಆಕೆಯ ಮನಸ್ಸನ್ನು ಗೆಲ್ಲುತ್ತಾನೆ. ಇಬ್ಬರೂ ಪರಸ್ಪರ ಪ್ರೀತಿಸತೊಡಗುತ್ತಾರೆ. ಪ್ರೀತಿಯೆಂಬ ಮೌಲ್ಯದಿಂದ ಅವರಿಬ್ಬರ ಸಂಬಂಧವು ಬಿಗಿಗೊಳ್ಳುತ್ತದೆ. ತಾನು ಪ್ರೀತಿಸಿದ ಹುಡುಗಿಗೆ ಹಾಡಲು ಹೇಳುವ ಹುಡುಗನ ಪರಿಯಿಲ್ಲಿದೆ.

ಹಾಡು ಹಾಡೆಂದಾದರೆ ನಾನೇನ ಹಾಡಲಿ
ಹಾಡಲೊ ಗೆಣೆಯ ನನ ಮೇಲೆ । ಮೂಡಣ
ಜಾಣ ಕೂರಿಗೆ ಹೊಡೆದ್ಹಂಗೆ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೨೬)

ಹಾಡೆಂದರೆ ನಾನೇನು ಹಾಡಲಿ ನನಗೆ ಹಾಡಲು, ಹೊಗಳಲು ಬರುವುದಿಲ್ಲವೆಂದು ಹುಡುಗಿ ತನ್ನ ಗೆಳೆಯನಿಗೆ ನೀನೇ ಸೊಗಸಾಗಿ ಹಾಡುವೆ. ಅದಕ್ಕಾಗಿ ನೀನೇ ಹಾಡೊಂದನು ಹೇಳು ಎಂದು ಪ್ರತಿಯಾಗಿ ಪ್ರೀತಿಯಿಂದ ಹೇಳುತ್ತಾಳೆ. ರವಿಕಿರಣಗಳು ಬೀರಿ ಹೂವರಳುವಂತಹ, ಭೂಮಿಯು ಬೆಳಗುವಂತಹ ರೀತಿಯಲ್ಲಿ ನೀನು ನನ್ನ ಮೇಲೆ ಹಾಡುಗಳನ್ನು ಹಾಡು ಎನ್ನುವ ಗೆಳತಿಯು 'ಮೂಡಣದ ಜಾಣ ಕೂರಿಗೆ ಹೊಡೆದ್ಹಂಗೆ' ಎಂದು ವರ್ಣಿಸಿದ್ದಾರೆ. ನೀನೇ ಹಾಡಿದರೆ ಕಿವಿಗೆ ಇಂಪು, ಮನಕ್ಕೆ ತಂಪೆಂದು ಗೆಳತಿಯು ಗೆಳೆಯನಲ್ಲಿ ಭಿನ್ನವಿಸಿಕೊಳ್ಳುವ ಸನ್ನಿವೇಶವಿಲ್ಲಿ ಕಾಣುತ್ತೇವೆ. ಸಂಗಾತಿಯ ಸೌಂದರ್ಯವನ್ನು ತನ್ನ ಪದಕುಶಲತೆಯಲ್ಲಿ ಕಟ್ಟಿಕೊಡುವ ಗೆಳೆಯನ ಸೊಗಸುಗಾರಿಕೆ ಮೆಚ್ಚುವಂತಹದು.

ಸಂಗಾತಿ ಹೆಣ್ಣು ಜಂಬುನೇರಿಲೆ ಹಣ್ಣು
ಮುಂಗಯ್ಯ ಹಿಡಿದು ನಗಿಸೋಳು । ಮುಖಭಾವ
ಮುಂಗಾರು ಮಿಂಚು ಹೊಳದ್ಹಂಗೆ । (ಕರಾಕೃ, ೧೯೫೭, ಪು-೧೫)

ಗೆಳತಿಯನ್ನು ತನ್ನ ಸಂಗಾತಿಯೆಂದು ಕರೆದು ಹುಡುಗನು ಆಕೆಯನ್ನು ಜಂಬು ನೇರಿಲೆ ಹಣ್ಣಿಗೆ ಹೋಲಿಸುತ್ತಾನೆ. ಯಾವಾಗಲೂ ಮಾತಿನಲ್ಲಿ ಹಾಸ್ಯಪ್ರಜ್ಞೆಯುಳ್ಳ ಚೆಲುವೆ ನಗಿಸುತ್ತಾ ಇರುತ್ತಾಳೆ. ಆಕೆಯ

ಮುಖಭಾವವು ಮುಂಗಾರಿನಲ್ಲಿ ಹೊಳೆವ ಮಿಂಚಿನ ಸೆಳೆಯ ಹಾಗೆ ಎಂದು ರೂಪವನ್ನು ಉಪಮಾನಗಳಿಂದ ಹೋಲಿಸುತ್ತಾನೆ. ಹೀಗೆ ಪ್ರೀತಿಸಿ ಒಂದಾಗುವ ಕನಸನ್ನು ಕಾಣುತ್ತಾರೆ. ಹರೆಯದ ಭರದಲ್ಲಿ ಆಣೆ, ಪ್ರಮಾಣಗಳು ಸಾಕಷ್ಟು ಬಳಕೆಯಾಗುತ್ತವೆ. ಕೊನೆಗೊಮ್ಮೆ ಮನೆಯಲ್ಲಿ ಇವರ ವಿಚಾರ ತಿಳಿದಾಗ ಇಡೀ ವಾತಾವರಣವೇ ಬದಲಾಗುತ್ತದೆ.

ಜಾತಿ, ಅಂತಸ್ತು, ದ್ವೇಷ ಹೀಗೆಯೇ ಅನೇಕ ಕಾರಣಗಳಿಂದ ಪ್ರೀತಿಸಿದ ಹೃದಯಗಳು ಅಗಲಬೇಕಾಗುತ್ತದೆ. ಹಲವಾರು ಒತ್ತಡಗಳನ್ನು ಹೇರಿ ಹುಡುಗಿಗೆ ಬೇರೆ ಕಡೆ ವರನೋಡಿ ಮದುವೆ ಮಾಡುತ್ತಾರೆ. ವಿರಹಿಯಾದ ಗೆಳೆಯನ ಸ್ಥಿತಿ ಹೇಳತೀರದು. ಹಳ್ಳಿಯನ್ನು ಬಿಟ್ಟು ಹೊರಟ ಗೆಳತಿಗೆ ತಾವಾಡಿದ ಮಾತು, ತಿರುಗಾಡಿದ ಸ್ಥಳ, ಕೀಟಲೆಗಳನ್ನು ನೆನಪಿಗೆ ತರುತ್ತಾನೆ. ಆದರೆ ಸಮಾಜ ಸಂಪ್ರದಾಯಕ್ಕೆ ಹೆದರಿದ ಗೆಳತಿಯು ಗಂಡನ ಮನೆಯನ್ನು ಸೇರುತ್ತಾಳೆ.

ಪ್ರೀತಿಸಿದ ಹೆಣ್ಣನ್ನು ಮರೆಯಲಾಗದ ಗೆಳೆಯ ಅವಳನ್ನು ಕಾಣಲು ಅವಳ ಗಂಡನೂರಿಗೆ ಹೋಗುತ್ತಾನೆ. ಸಮಾಜವು ಈ ಭೇಟಿಯನ್ನು ಒಪ್ಪದಿದ್ದರೂ ಸಹಿತ ನಲ್ಲೆಯನ್ನು ಕಂಡು ಕುಶಲೋಪರಿಯನ್ನು ವಿಚಾರಿಸುವ ಬಯಕೆ ಆತನದು. ಸಮಾಜದ ನಿರ್ಬಂಧದ ನಡುವೆಯೂ ಅವಳನ್ನು ಭೇಟಿಯಾಗುವ ನಲ್ಲನ ಹುಂಬ ಧೈರ್ಯಕ್ಕೆ ಪ್ರೇರಣೆಯೇ ನಲ್ಲೆಯ ಮೇಲಿರುವ ಅತಿಯಾದ ಪ್ರೀತಿ. ಹೋಗುವ ದಾರಿಯಲ್ಲಿ ಅವನಿಗೆ ಬಾಯಾರಿಕೆ, ಆಯಾಸ ಒಂದೂ ಕಾಣದು. ಹೀಗೆ ದಾರಿ ಕ್ರಮಿಸಿ ಅವಳ ಕಂಡು ಹೀಗೆನ್ನುತ್ತಾನೆ.

ಅಡ್ಡಗುಡ್ಡವ ದಾಟಿ ಕದ್ದು ಕಣಿವೆಯ ದಾಟಿ
ಬಿದ್ದೋಡಿ ಬಂದೆ ನಿನಗಾಗಿ । ಗೆಣಕಾತಿ
ಕಬ್ಬಿನಂತವಳೆ ದನಿ ತೋರೆ । (ವಿನೀತ ರಾಮಚಂದ್ರರಾಯ, ೧೯೬೦, ಪು-೯೮)

ಅಡ್ಡಬಂದ ಗುಡ್ಡವನ್ನು ದಾಟಿ, ಯಾರಿಗೂ ಕಾಣದಂತೆ ಕಣಿವೆಯ ಕಳ್ಳ ದಾರಿಯಲ್ಲಿ ಗೆಳತಿಯನ್ನು ಕಾಣಲು ಬರುತ್ತಾನೆ. ಆತನನ್ನು ಯಾರೂ ನೋಡಬಾರದೆಂಬ ಕಾರಣಕ್ಕಾಗಿ ಕಳ್ಳಮಾರ್ಗದಲ್ಲಿ ಬಿದ್ದು-ಎದ್ದು ರಾತ್ರಿ ವೇಳೆಗೆ ಬಂದ ಗೆಳೆಯನು 'ಕಬ್ಬಿನಂತಹ ಗೆಳತಿಯೇ ನಾನು ಬಂದಿರುವೆ ಧ್ವನಿ ಮಾಡು' ಎಂದು ಕಳ್ಳ ಧ್ವನಿಯಲ್ಲಿ ಕೂಗುತ್ತಾನೆ. ಆದರೆ ಈಗ ಗೆಳತಿಯು ಇನ್ನೊಬ್ಬನ ಮಡದಿ. ಅವಳಿಗೆ ಗೆಳೆಯನಿಗಿಂತ ಗಂಡನೇ ಮುಖ್ಯನಾಗಿರುತ್ತಾನೆ. ಏಕೆಂದರೆ ಸಂಪ್ರದಾಯಕ್ಕಿಂತ ಪ್ರೀತಿ ದೊಡ್ಡದಲ್ಲ ಎಂಬ ನಂಬಿಕೆ ಆಕೆಯದು. ಅಂತರಂಗದಲ್ಲಿ ಗೆಳೆಯನಿಗೆ ಅಪಾರ ಪ್ರೀತಿಯಿದ್ದರೂ ಗೆಳತಿ ನೀಡುವ ಪ್ರತಿಕ್ರಿಯೆ ಹೀಗಿದೆ.

ದನಿ ಹೆಂಗ ತೋರಾಲಿ ಕದ ಹೆಂಗೆ ತೆಗೆಯಾಲಿ
ಮಗ್ಗಲಲ್ಲವನೆ ಮನೆ ಪುರುಷ । ಎಲೆ ಗೆಣೆಯ
ಮಗ್ಗಾಗಿ ಬಾರೊ ತುರುಬೀಗೆ । (ವಿನೀತ ರಾಮಚಂದ್ರರಾಯ, ೧೯೬೦, ಪು-೯೮)

ಗೆಳೆಯನ ಕೂಗು ಅವಳಿಗೆ ಕೇಳಿಸುತ್ತಿದೆ. ಆದರೆ ಅವಳು 'ಧ್ವನಿ ಹೇಗೆ ನೀಡಲಿ? ಬಾಗಿಲನ್ನು ತೆರೆದು ನಿನ್ನನ್ನು ಹೇಗೆ ಸ್ವಾಗತಿಸಲಿ?' ಎಂದು ವ್ಯಥೆಪಡುತ್ತಾಳೆ. ಎಷ್ಟೇ ಆದರೂ ಹೆಣ್ಣು ಸಂಪ್ರದಾಯಕ್ಕೆ ಬದ್ಧಳಾಗಿ ನೋವನ್ನು ಸಹಿಸಿಕೊಂಡು ಗೆಳೆಯನಿಗೆ ಬುದ್ಧಿವಾದ ಹೇಳುತ್ತಾಳೆ. ತಾವು ಕೂಡುವುದು ಅಸಾಧ್ಯವೆನಿಸಿ ಅನೈತಿಕತೆಯ ಛಾಯೆ ಮೂಡುತ್ತದೆ. ಆಗ 'ಮಲ್ಲಿಗೆ ಮೊಗ್ಗಾಗಿ ನೀನು ಬಾರೊ' ಎನ್ನುತ್ತಾಳೆ. ಅದನ್ನೇ ನಾನು ತಲೆಯಲ್ಲಿ ಮುಡಿದು ಪ್ರೀತಿಗೆ ಹೊಸ ಅರ್ಥ ಕೊಡುತ್ತೇನೆಂದು ಹೇಳುತ್ತಾಳೆ.

ಕೆಲವರ ಪ್ರೀತಿ ಹೀಗೆಯೇ ಮೊದಲು ಅರಳಿ ನಂತರ ಬಾಡುತ್ತದೆ. ಇನ್ನೂ ಕೆಲವು ಸಂದರ್ಭಗಳಲ್ಲಿ ಸದಾ ಅರಳಿ ನಿಂತ ಹೂವಾಗಿರುತ್ತದೆ. ಗೆಳೆಯ-ಗೆಳತಿಯರಲ್ಲಿ ರಕ್ತಸಂಬಂಧವಿಲ್ಲದೇ ಹೋದರೂ ಒಬ್ಬರನ್ನೊಬ್ಬರು ಬಿಟ್ಟು ಇರಲಾರದಷ್ಟು ಪ್ರೀತಿ, ವಿಶ್ವಾಸ, ನಂಬಿಕೆ ಸಹಕಾರಗಳೆಲ್ಲವೂ ಬೆಳೆದು ಬೇರೂರಿರುತ್ತವೆ. ಮಾನವನ ಜೀವನದಲ್ಲಿ ಮರೆಯಲಾಗದ ಆತ್ಮೀಯ ಸಂಬಂಧವೆಂದರೆ ಅದು ಪ್ರೀತಿಯಿಂದ ನಿರ್ಮಿತವಾದದ್ದು. ಇದರಲ್ಲಿ ನಂಬಿಕೆ ಹೆಚ್ಚಿರುತ್ತದೆ. ನಂಬಿಕೆ ಕಳೆದಾಗ ಮಾತ್ರ ಸಂಬಂಧ ಹಳಸುತ್ತದೆ.

ಇದ್ದೂರ ಗೆಣೆತನ ಇದ್ದೇನು ಸುಡಬೇಕು
ಮಾತಾಡಲು ಮನೆದೂರ । ನನ ಗೆಳತಿ
ಕೂಡುಣ್ಣಲು ಕುಲಬ್ಯಾರೆ । (ಕೆ. ವಿರುಪಾಕ್ಷಗೌಡ, ೧೯೭೦, ಪು-೩೯ )

ಒಂದೇ ಊರಿನಲ್ಲಿ ಹುಟ್ಟಿ, ಬೆಳೆದು ಪರಸ್ಪರರ ಭೇಟಿಯಿಂದಾಗಿ ಇರ್ವರಲ್ಲಿ ಪ್ರೀತಿ ಅಂಕುರಿಸಿದೆ. ನಲ್ಲ-ನಲ್ಲೆಯರ ಪ್ರೇಮ ಕಳ್ಳಾಟದಲ್ಲಿದೆ. ಒಂದೇ ಊರಲ್ಲಿದ್ದರೂ ಕೂಡ ಮಾತಾಡದ ಪರಿಸ್ಥಿತಿಯಲ್ಲಿ ಅವರಿದ್ದಾರೆ. ಏಕೆಂದರೆ ಮಾತಾಡಲು ಮನೆದೂರ, ಜೊತೆಗೂಡಿ ಊಟ ಮಾಡಲು ಕುಲ ಬೇರೆ ಬೇರೆಯಾಗಿದೆ. ಗೆಳೆಯನು ಗೆಳತಿಗೆ ಸಮಾಧಾನ ಮಾಡುವ ರೀತಿಯು ಮೇಲಿನ ಗೀತೆಯಲ್ಲಿ ಅಭಿವ್ಯಕ್ತವಾಗಿದೆ. ಹಲವು ಆಯಾಮಗಳನ್ನು ಹೊಂದಿರುವ ನಲ್ಲ-ನಲ್ಲೆಯ ಬಾಂಧವ್ಯಗಳು ಜನಪದ ಗೀತೆಗಳಲ್ಲಿ ಅಭಿವ್ಯಕ್ತಗೊಂಡಿವೆ.

### ೪.೩.೩ ಗೆಳತಿ – ಗೆಳತಿಯರ ಸಂಬಂಧ

ರಕ್ತ ಸಂಬಂಧವನ್ನು ಮೀರಿದ್ದು ಗೆಳೆತನ. ಗೆಳೆತನಕ್ಕೆ ಜಾತಿಮತ, ಕುಲಗೋತ್ರ, ಬಡವ-ಬಲ್ಲಿದರೆಂಬ ಭೇದವಿಲ್ಲ. ಇವುಗಳನ್ನು ಮೀರಿ ಸ್ನೇಹ ಸಂಬಂಧವು ರೂಪುಗೊಳ್ಳುತ್ತದೆ. ಇತರರೊಡನೆ ಹಂಚಿಕೊಳ್ಳಲಾಗದ ದುಗುಡವನ್ನು ಗೆಳತಿಯೊಂದಿಗೆ ಹಂಚಿಕೊಳ್ಳಬಹುದು. ಕಂಡುಕೊಳ್ಳಲಾಗದ ಸಮಸ್ಯೆಗಳಿಗೆ ಪರಿಹಾರ ಹುಡುಕಬಹುದು. ಮಾನವೀಯ ಸಂಬಂಧಗಳಲ್ಲಿ ಗೆಳೆತನಕ್ಕೆ ಉತ್ಕೃಷ್ಟವಾದ

ಸ್ಥಾನವಿದೆ. ತಂದೆತಾಯಿ ಹಾಗೂ ಮಕ್ಕಳ ನಡುವಿನ ಸಂಬಂಧವು ಶ್ರೇಷ್ಠವಾದದ್ದು. ಅದರ ನಂತರದ ಸ್ಥಾನವನ್ನು ಸ್ನೇಹ ಸಂಬಂಧ ಪಡೆಯುತ್ತದೆ.

ಗೆಳೆತನವೆಂಬುದು ಯಾವ ಸಂದರ್ಭದಲ್ಲಿಯಾದರೂ ಉಂಟಾಗಬಹುದು. ಬಾಲ್ಯದಲ್ಲಿ, ಶಾಲೆಯಲ್ಲಿ, ಊರುಗಳಲ್ಲಿ, ಪರ ಊರುಗಳಲ್ಲಿ ಹೀಗೆಯೇ ಎಲ್ಲಿ ಬೇಕಾದರೂ ಉಂಟಾಗಬಹುದು. ಬಾಲ್ಯದಿಂದ ಆರಂಭವಾದ ಸ್ನೇಹ ಕೊನೆಗಾಲದವರೆಗೂ ಸಿಗುತ್ತದೆ. ಜೀವನದ ಸವಿಯನ್ನು ಹೆಚ್ಚಿಸುವಂತದ್ದು ಗೆಳೆತನ. ಜನಪದರಲ್ಲಿಯೂ ಗೆಳೆತನಕ್ಕೆ ಬಹುಮುಖ್ಯ ಸ್ಥಾನವಿದೆ. ಸ್ನೇಹ ಮಾಡುವಾಗಲೂ ಜನಪದರು ಎಚ್ಚರದಿಂದ ಇರುತ್ತಾರೆ. 'ಅಲ್ಪರ ಸಂಗ ಅಭಿಮಾನ ಭಂಗ' ಎಂಬ ನೀತಿ ವಾಕ್ಯದಂತೆ ಗೆಳೆತನ ಮಾಡುವಾಗ ಬಹಳಷ್ಟು ಯೋಚಿಸಿ, ನಂತರ ಗೆಳೆತನ ಮುಂದುವರೆಸುತ್ತಾರೆ.

ಮನೆಯ ಮುಂದಿನ ಗೆಣತಿ ದನಿಯ ಕೂಡಿಸಬಾರ
ದನಿಸುದ್ದ ನಿನ ಗುಣಸುದ್ದ । ಗೆಳೆತವ್ವ
ಗುಣಕೆ ಕಟ್ಟೀನಿ ಗೆಳೆತನ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೬೨)

ಒಳ್ಳೆಯ ಗುಣಗಳನ್ನು ಹೊಂದಿದವರೇ ಉತ್ತಮ ಗೆಳತಿಯರೆನಿಸುತ್ತಾರೆ. ಮನೆಯ ಮುಂದಿನ ಗೆಳತಿಯ ಸ್ನೇಹ-ಬಾಂಧವ್ಯಕ್ಕೆ ಅವಳಲ್ಲಿನ ಒಳ್ಳೆಯತನವೇ ಕಾರಣವೆಂದು ಸ್ನೇಹಜೀವಿಯೊಬ್ಬಳು ಹಾಡಿದ್ದಾಳೆ. ಇಬ್ಬರೊಡಗೂಡಿ ಹಾಡುವುದಕ್ಕೆ ಗುಣ ಮತ್ತು ಧ್ವನಿ ಶುದ್ಧಿಯಾಗಿದ್ದರೆ ಒಳ್ಳೆಯದೆಂಬ ಅಭಿಪ್ರಾಯ ಅವಳದಾಗಿದೆ. ಸ್ನೇಹವು ಯಾವಾಗಲೂ ಆಸ್ತಿ, ಅಂತಸ್ತು, ಜಾತಿಮತಗಳನ್ನು ನೋಡಿ ಹುಟ್ಟಲಾರದು. ಅವರಲ್ಲಿನ ಸಮಾನ ಗುಣ ಸ್ವಭಾವಗಳಿಂದ ಗೆಳತಿಯರಾಗಿರುತ್ತಾರೆ. ಅಂತಹ ಗೆಳೆತನವನ್ನೇ ಪ್ರಶ್ನಿಸಿದಾಗ ಗೆಳತಿಯೊಬ್ಬಳು ನೀಡುವ ಉತ್ತರವನ್ನು ಕೆಳಗಿನ ಪದ್ಯದಲ್ಲಿ ಗಮನಿಸುತ್ತೇವೆ.

ನಾನು ನನ್ನ ಗೆಳದಿ ಕೂಡಿ ನೀರಿಗಿ ಹೋಗಿ
ಕುಲವ ಕೇಳ್ಯಾರ ಬಹುಮಂದಿ । ಕೇಳಿದರ
ಕುಲವೆರಡು ನಮ್ಮ ಮನವೊಂದು।(ವಿನೀತ ರಾಮಚಂದ್ರರಾಯ, ೧೯೬೦, ಪು-೫೬)

ಗೆಳೆತನಕ್ಕೆ ವಿದ್ಯೆ, ಪದವಿ, ಹಣ, ಕುಲಗಳು ಮುಖ್ಯವಲ್ಲ. ಸಮಾನ ಮನೋಧರ್ಮಗಳಿಂದ ಉಂಟಾದ ಸ್ನೇಹಕ್ಕೆ ಯಾವ ದಕ್ಕೆಯೂ ಬರದು. ಗರತಿಯೊಬ್ಬಳು ತನ್ನ ಗೆಳತಿಯೊಡನೆ ಊರ ಮುಂದಿನ ಬಾವಿಗೆ ನೀರನ್ನು ತರಲು ಹೋದಾಗ ಗೆಳತಿಯರ ಕುಲವನ್ನು ಪ್ರಶ್ನಿಸುತ್ತಾರೆ. ಅದಕ್ಕೆ ಪ್ರತಿಯಾಗಿ 'ನಮ್ಮ ಕುಲವೆರಡು ಇರಬಹುದು. ಆದರೆ ನಮ್ಮ ಮನಸ್ಸು ಒಂದೆಯಾಗಿದೆ'. ಎಂದು ಉತ್ತರಿಸಿ ಸ್ನೇಹಿತೆಯ ಬಾಂಧವ್ಯವನ್ನು ಉಳಿಸಿಕೊಳ್ಳುತ್ತಾಳೆ. ಸ್ನೇಹವು ಕುಲವನ್ನು ಮೀರಿದ್ದು ಎಂಬುದನ್ನು ಸಾಬೀತುಪಡಿಸುತ್ತಾಳೆ. ಕಾಲಾನಂತರದಲ್ಲಿ ಇವರಿಬ್ಬರಿಗೂ ಮದುವೆಯಾಗಿ ತಮ್ಮ ತಮ್ಮ

ಗಂಡನ ಮನೆಸೇರಿದರೂ ಗೆಳೆತನ ಮುರಿಯುದಿಲ್ಲ. ಪಂಚಮಿ, ದೀಪಾವಳಿ ಹೀಗೆ ಹಬ್ಬಹರಿದಿನಗಳಲ್ಲಿ ತವರಿಗೆ ಬಂದಾಗ ಹಿಂದಿನ ದಿನಗಳನ್ನು ಮೆಲುಕು ಹಾಕುತ್ತಾರೆ. ಏನಾದರೂ ತಮ್ಮ ಜೀವನದಲ್ಲಿ ನೋವಿದ್ದರೆ ಹಂಚಿಕೊಳ್ಳುತ್ತಾರೆ. ಆದರೆ ಮದುವೆಯಾಗಿ ಅಗಲುವಾಗ ಸಾಕಷ್ಟು ನೊಂದು ನುಡಿಯುವ ಭಾವಗಳೂ ಜನಪದ ಗೀತೆಯಲ್ಲಿ ಅಭಿವ್ಯಕ್ತವಾಗಿವೆ.

ಗೆಳೆತನ ಕೂಡಿದರ ಗೆಜ್ಜಿ ಜೋಡಿಸಿದ್ಹಾಂಗ
ಗಜರೀಯ ತುಂಬ ಕೊರೆದ್ಹಾಂಗ । ಗೆಳೆತವ್ವ
ಗುಜ್ಜಿ ನಾವ್ಹ್ಯಾಂಗ ಅಗಲೂನ । (ಹಲಸಂಗಿ ಗೆಳೆಯರು, ೧೯೩೧, ಪು-೫೧)

ಗೆಳತಿಯರು ಯಾವಾಗಲೂ ತಮ್ಮ ಗೆಳೆತನದ ಉನ್ನತಿಯ ಬಗ್ಗೆ ಚಿಂತಿಸುತ್ತಾರೆ. ಸ್ನೇಹವನ್ನು ಕಾಪಾಡಿಕೊಳ್ಳುವ ಸಲುವಾಗಿ ನಾನಾ ಪ್ರಯತ್ನಗಳನ್ನು ಮಾಡುತ್ತಾರೆ. ಗರತಿಯೊಬ್ಬಳು ಗೆಳೆತನದ ಬಗ್ಗೆ ಹಾಡುತ್ತ ಗೆಳೆತನ ಉಂಟಾದರೆ ಅದು ಗೆಜ್ಜೆಯ ಕೂಡಿಸಿದ ಹಾಗೆ, ಗೆಜ್ಜೆಗಳು ಬೇರೆಯಾದರೂ ಹೊಮ್ಮುವ ನಾದವೊಂದೆ, ಹೀಗಿರುವಾಗ ಇಂತಹ ಸ್ನೇಹವನ್ನು ಬಿಟ್ಟು ಅಗಲುವ ಸಂದರ್ಭ ಬಂದಾಗ ಅಗಲುವಿಕೆಗೆ ನೊಂದುಕೊಳ್ಳುತ್ತಾಳೆ. ನಾವು ಹೇಗೆ ಅಗಲೋಣವೆಂದು ಪರಸ್ಪರ ಚಿಂತಿಸುತ್ತಾರೆ. ಹೆಣ್ಣು ಮದುವೆಯಾಗಿ ಬೇರೊಂದು ಮನೆಯನ್ನು ಬೆಳಗಬೇಕೆಂದು ಸಮಾಧಾನ ಪಟ್ಟುಕೊಂಡು, ಒಂದೆಡೆ ಅಗಲಿಕೆ ನೋವನ್ನು ಸಹಿಸಿ, ನೂತನ ಬಾಳಿಗೆ ಪ್ರವೇಶಿಸುತ್ತಾಳೆ. ಗಂಡನ ಸ್ನೇಹದಲ್ಲಿ ಗೆಳೆತಿಯ ಸ್ನೇಹವನ್ನು ಕಾಣಲೆತ್ನಿಸುತ್ತಾಳೆ.

ಜೀವನದಲ್ಲಿ ಎಂತಹ ಕಷ್ಟಗಳು ಬಂದರೂ ಎದುರಿಸಬಹುದು. ಆದರೆ ಸ್ನೇಹಕ್ಕೆ ಕುಂದುಂಟುದಾಗ ಸಹಿಸಲೂ ಅಸಾಧ್ಯ. ಏಕೆಂದರೆ ಜೀವನದಲ್ಲಿ ಯಾವುದೂ ಕೈಹಿಡಿಯದೇ ಇದ್ದಾಗ ಸ್ನೇಹ ಕೈಹಿಡಿಯುತ್ತದೆ. ಜನಪದ ಕಥನಗೀತೆಗಳಲ್ಲಿ ಒಂದಾದ ಉತ್ತರದೇವಿಯ ಕಥೆಯಲ್ಲೂ ಎಲ್ಲರೂ ಕೈಬಿಟ್ಟಾಗ ಗೆಳತಿ ಜೊತೆಯಾಗುತ್ತಾಳೆ. ಉತ್ತರದೇವಿಯ ಅಣ್ಣ, ತಮ್ಮ, ಅಕ್ಕ, ತಂಗಿ, ಚಿಕ್ಕಪ್ಪ, ದೊಡ್ಡಪ್ಪ ಎಲ್ಲರ ಮನೆಗಳಿಗೂ ತಿರುಗಿ ಆಶ್ರಯ ಸಿಗದೆ ತನ್ನ ಬಾಲ್ಯದ ಗೆಳತಿಯ ಮನೆಗೆ ಬರುತ್ತಾಳೆ. ಅತ್ತೆ ಮನೆಯಕಾಟ ತಾಳಲಾರದೇ ಉತ್ತರದೇವಿ ನೊಂದು ತವರಿಗೆ ಬರಲು ಸಿದ್ಧಳಾಗುತ್ತಾಳೆ. ಎಲ್ಲರ ಮನೆಬಾಗಿಲನ್ನು ತಟ್ಟಿದರೂ ಪ್ರತಿಯೊಬ್ಬರು ಕಾರಣ ಹೇಳಿ ಉತ್ತರದೇವಿಯನ್ನು ಹೊರನೂಕುತ್ತಾರೆ. ಆಗ ಅವಳಿಗೆ ಉಳಿದಿದ್ದು ಗೆಳತಿಯ ಮನೆದಾರಿಯೊಂದೇ. ಗೆಳತಿಯ ಮನೆಗೆ ಹೋಗಿ ಆಶ್ರಯ ಕೋರುತ್ತಾಳೆ.

ಕದವನ್ನೇ ತೆಗೆದಾಳು ಕೈಹಿಡಿದು ಎಳೆದಾಳು
ಕಣ್ಣೀರ ಸಾಲ ಒರಿಸ್ಯಾಳು । ಗೆಳತಿಯೇ
ಏನಮ್ಮ ಇದು ಎಂದು ಕೇಳ್ಯಾಳು । (ಎಸ್. ಕೆ. ಕರೀಂಖಾನ್, ೧೯೫೫, ಪು-೩೫)

ಬಾಲ್ಯದ ಗೆಳತಿಯ ಧ್ವನಿಯನ್ನು ಕೇಳಿ ಕದವನ್ನು ತೆಗೆದು ಬಿಗಿದಪ್ಪಿಕೊಂಡು ಆನಂದಪಡುತ್ತಾಳೆ. ಉತ್ತರದೇವಿಯ ಕಣ್ಣೀರನ್ನು ಒರಿಸಿ, ಕಣ್ಣೀರಿಗೆ ಕಾರಣವೇನೆಂದು ಗೆಳತಿ ಕೇಳುತ್ತಾಳೆ. ಸಮಾಧಾನದ ಮಾತುಗಳನ್ನು ಆಡುತ್ತಾಳೆ. ಉತ್ತರದೇವಿಯ ಕಷ್ಟದ ಕಥೆಯನ್ನು ಕೇಳಿ ಮರುಕಪಡುತ್ತಾಳೆ. ಆಕೆಯ ಗೋಳಿಗೆ ಕಾರಣರಾದ ಅವಳ ಅತ್ತೆ, ಗಂಡನನ್ನು ಶಪಿಸುತ್ತಾಳೆ. ಉತ್ತರದೇವಿಯ ನೋವನ್ನು ದೂರಮಾಡಲು ಪ್ರಯತ್ನಿಸುತ್ತಾಳೆ.

ಗೆಳತಿ ನಿನ್ನ ಬೈದೋರ ಕಣ್ಣೆರಡು ಇಂಗಾಲಿ
ಸುಣ್ಣ ಕುದ್ದಂತೆ ಕುದಿಯಾಲಿ । ಎಲೆ ಗೆಳತಿ
ದಾಳಿಂಬ್ರೆ ಬಿರಿದಂತೆ ಬಿರಿಯಾಲಿ । (ಎಸ್. ಕೆ. ಕರೀಂಖಾನ್, ೧೯೫೫, ಪು–೩೫)

'ಉತ್ತರದೇವಿ ಬಯ್ಯದವರ ಕಣ್ಣುಗಳು ಇಂಗಿ ಹೋಗಲಿ, ಅವರು ಸುಣ್ಣ ಕುದಿದಂತೆ ಕುದಿಯಲಿ, ದಾಳಿಂಬ್ರೆ ಬಿರಿದಂತೆ ಬಿರಿದು ಹೋಗಲಿ' ಎಂದು ಗೆಳತಿ ಶಪಿಸುತ್ತಾಳೆ. ಲೋಕದಲ್ಲಿ ಜೀವನವೆಂಬುದು ಕಷ್ಟವಾದಾಗ ಉತ್ತರದೇವಿಯೊಂದಿಗೆ ತಾನೂ ಸಾಯುತ್ತಾಳೆ. ಬಾಲ್ಯದಿಂದ ಕೂಡಿದ ಗೆಳೆತನ ಸಾವು–ನೋವುಗಳಲ್ಲಿ ಒಂದಾಗುತ್ತದೆ. ಉತ್ತಮ ಗೆಳೆತನಕ್ಕೆ ಉತ್ತರದೇವಿಯ ಕಥೆಯೊಂದು ನಿದರ್ಶನ. ಸ್ನೇಹ ಸಂಬಂಧವನ್ನು ಕಾಪಾಡಿಕೊಳ್ಳುವಲ್ಲಿ ಜನಪದರು ವಿವಿಧ ತ್ಯಾಗ, ಬಲಿದಾನ, ಸೇವೆಗಳನ್ನು ಮಾಡಿದ್ದಾರೆ. ಸ್ನೇಹದ್ಯೋತಕವಾಗಿ ಅವುಗಳನ್ನು ಸ್ಮರಿಸಿ ಇಂದಿನ ಜೀವನಕ್ಕೆ ಆದರ್ಶವಾಗಿ ಬಳಸಿಕೊಂಡರೆ ಅದು ಉತ್ತಮ ಸ್ನೇಹದ ಬುನಾದಿಯಾಗುತ್ತದೆ.

**೪.೩.೪ ಗೆಳೆಯ–ಗೆಳೆಯರು**

ಗೆಳೆತನ ಜಗತ್ತಿನ ಮಾನವರಲ್ಲಿ ಕಂಡುಬರುವ ಅತಿ ಸುಂದರವಾದ ಸಂಬಂಧ. ಇದು ಯಾವುದೇ ಲಾಭ ಸ್ವಾರ್ಥವನ್ನು ಬಯಸದೇ ಇರುವ ಸಂಬಂಧ. ನಿಜವಾದ ಗೆಳೆತನವೆಂದರೆ ಸುಖ–ದುಃಖಗಳಲ್ಲಿ ಭಾಗವಹಿಸಿ ಗೆಳೆಯರ ಶ್ರೇಯಸ್ಸನ್ನು ಬಯಸುವುದಾಗಿದೆ. ಹಲವಾರು ವ್ಯಕ್ತಿಗಳು ಗೆಳೆಯರ ಮುಂದೆ ತಮ್ಮ ಕಷ್ಟ–ಕಾರ್ಪಣ್ಯಗಳ ಬಗ್ಗೆ ಮನಬಿಚ್ಚಿ ಮಾತನಾಡುತ್ತಾರೆ. ಅದಕ್ಕಾಗಿ ಸ್ನೇಹ ಸಂಬಂಧವು ಮನುಕುಲಕ್ಕೆ ವರವಾಗಿದೆ. ಸದ್ಗುಣ, ಸಚ್ಚಾರಿತ್ರ್ಯಗಳನ್ನು ಹೊಂದಿದವರು ಉತ್ತಮ ಸ್ನೇಹಿತರೆನಿಸುತ್ತಾರೆ. 'ಗುಣ ನೋಡಿ ಗೆಳೆತನ ಮಾಡು' ಎಂಬ ಜನಪದರ ಗಾದೆಯಂತೆಯೇ ಒಳ್ಳೆಯ ಗೆಳತನಕ್ಕಾಗಿ ಹಾತೊರೆಯುತ್ತಾರೆ. ಗೆಳೆತನವು ಲಿಂಗ, ವಯಸ್ಸು, ಪದವಿ, ವಿದ್ಯೆ, ಹಣ, ಆಸ್ತಿ, ಕುಲ, ಬಲಗಳನ್ನು ಮೀರಿ ಸಮಾನ ಅಭಿರುಚಿ, ಆಸಕ್ತಿಗಳು ಇರುವವರಲ್ಲಿ ಹುಟ್ಟುತ್ತದೆ. ಗೆಳೆಯರೇ ನಿಜವಾದ ನೋವು–ನಲಿವುಗಳಿಗೆ ಸ್ಪಂದಿಸುತ್ತಾರೆ. ಬಾಲ್ಯದಿಂದ ಉಂಟಾದ ಸ್ನೇಹವು ಮರಣಕಾಲದವರೆಗೂ ಜೊತೆಯಲ್ಲಿರುತ್ತದೆ. ಅದಕ್ಕಾಗಿ ಜನಪದರು ಉತ್ತಮರ ಗೆಳೆತನ ಮಾಡು ಎಂದಿದ್ದಾರೆ. ಉತ್ತಮರ ಗೆಳೆತನವನ್ನು ಅವರು ಎಂದಿಗೂ ಕಡಿದುಕೊಳ್ಳಲು ಬಯಸುವುದಿಲ್ಲ.

ಉತ್ತಮರ ಗೆಳೆತನ ಮುತ್ಥಳಿ ಬಂಗಾರ
ಮತ್ತೆ ಹೀನರ ಗೆಳೆತನ । ಮಾಡಿದರ
ಹಿತ್ತಾಳಿಗಿಂತ ಬಲುಹೀನ । (ಹಲಸಂಗಿ ಗೆಳೆಯರು, ೧೯೩೧, ಪು-೧೦೨)

ಕೇವಲ ಒಳ್ಳೆಯ ಮಾತುಗಳನ್ನಾಡಿ ಅನಂತರ ಹಿಂದಿನಿಂದ ಕೇಡನ್ನು ಬಯಸುವವರು ಹಿತಶತ್ರುಗಳೆನಿಸುತ್ತಾರೆ. ಉತ್ತಮ ಗೆಳೆತನವು ಫಲಾಪೇಕ್ಷೆಯನ್ನು ಹೊಂದಿರುವುದಿಲ್ಲ. ಉತ್ತಮ ಗುಣವುಳ್ಳವರೊಡನೆ ಗೆಳೆತನ ಮಾಡಬೇಕು. ಅದು ಅಪ್ಪಟ ಚಿನ್ನದಂತೆ, ಶುದ್ಧ ಬಂಗಾರದಿಂದ ಮಾಡಿದ ಬೊಂಬೆಯಿದ್ದಂತೆ. ದುರ್ಗುಣಗಳನ್ನು ಹೊಂದಿದವರ ಸ್ನೇಹವು ಹಿತ್ತಾಳೆಗಿಂತಲೂ ಕಡೆಯಾಗಿರುತ್ತದೆ ಎಂದು ಜನಪದ ಗರತಿಯೊಬ್ಬಳು ಗೆಳೆತನದ ಬಗ್ಗೆ ಹಾಡಿದ್ದಾಳೆ.

'ಕೂಡಿ ಕೆಟ್ಟ ಆಡಿ ಕೆಟ್ಟ' ಎಂಬ ಗಾದೆಯಂತೆ ಕೆಲವು ಸಂದರ್ಭಗಳಲ್ಲಿ ಗೆಳೆತನ ಕೆಟ್ಟದ್ದನ್ನು ಕಲಿಸಿಕೊಡುತ್ತದೆ. ದುರ್ಬುದ್ಧಿಯ ಗೆಳೆಯರು ದುರ್ಗುಣಗಳನ್ನು, ದುಶ್ಚಟಗಳನ್ನು ಕಲಿಸಿಕೊಡಬಲ್ಲರು. 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ. ದುರ್ಜನರ ಸಂಗವದು ಹೆಜ್ಜೇನು ಕಡಿದಂತೆ' ಎಂದು ಸರ್ವಜ್ಞ ಕವಿ ಹೇಳಿರುವಂತೆ ಸಾಧು ಸ್ವಭಾವದ ಸಜ್ಜನರ ಸಂಗದಿಂದ ಉತ್ತಮ ವಿಚಾರಗಳು ಹೊರಹೊಮ್ಮುತ್ತವೆ. ಆದರೆ ದುರ್ಜನರ ಸಹವಾಸವು ಕೊಚ್ಚೆ ನೀರಿಗೆಳೆಯುತ್ತದೆ. ಅದಕ್ಕಾಗಿ ಜನಪದರು ಉತ್ತಮ ಸ್ನೇಹಕ್ಕೆ ಬೆಲೆ ಕೊಡುತ್ತಾರೆ. ಹೀನರ ಗೆಳೆತನವನ್ನು ಅವರು ಹಣ ಕೊಟ್ಟರೂ ಬೇಡವೆಂದು ನಯವಾಗಿ ತಿರಸ್ಕರಿಸುತ್ತಾರೆ.

ಗುಣ ಹೀನರ ಗೆಳೆತನ ಹಣ ಕೊಟ್ಟರೂ ಬ್ಯಾಡ
ಗುಣ ದೊಡ್ಡದೊಂದು ಸಮುದ್ರ । ಸಂಗಾಟ
ಮುಣಗಿ ಹೋದರೂ ಮೋಕ್ಷವು । (ಶಾಂತಕುಮಾರಿ ಪಾಟೀಲ, ೧೯೭೯, ಪು-೮೫)

ಉತ್ತಮ ಗೆಳೆಯರು ಇತರರ ಏಳಿಗೆಗೆ ಸದಾಕಾಲ ಶ್ರಮಿಸುತ್ತಾರೆ. ಶ್ರೇಯಸ್ಸು, ಯಶಸ್ಸು ಸಿಗಲೆಂದು ಆಶಿಸುತ್ತಾರೆ. ನಿಜವಾಗಿಯೂ ಸ್ನೇಹ ಬಯಸುವುದಿಷ್ಟೇ. ಆದರೆ ಕೆಟ್ಟವರ ಸಂಗವನ್ನು ಕೋಟಿ ಹಣ ಕೊಟ್ಟರೂ ಬೇಡವೆಂದು ಜನಪದರು ನಿರಾಕರಿಸುತ್ತಾರೆ. ಏಕೆಂದರೆ ಸದ್ಗುಣಗಳ ಸ್ನೇಹವೆಂಬುದು ಸಾಗರವಿದ್ದಂತೆ. ಆ ಸ್ನೇಹದಲ್ಲಿ ಮುಳುಗಿಹೋದರೂ ಮೋಕ್ಷ ಸಿಗುತ್ತದೆ ಎಂಬ ನಂಬಿಕೆ ಜನಪದರಲ್ಲಿದೆ. ಸೇವೆ, ತ್ಯಾಗ, ಪ್ರಾಮಾಣಿಕತೆಗಳೆಂಬ ಗುಣಗಳು ಗೆಳೆತನವನ್ನು ಕಾಪಾಡುವುದರೊಂದಿಗೆ ಮೋಕ್ಷಕ್ಕೆ ಕಾರಣವಾಗುತ್ತವೆ.

ಎರಡು ಕೈಗಳು ಕಲೆತಾಗ ಮಾತ್ರ ಚಪ್ಪಾಳೆಯ ನಾದ ಹೊರಹೊಮ್ಮಲು ಸಾಧ್ಯ. ಗೆಳೆಯರಲ್ಲಿಯೂ ಸಮಾನ ಮನೋಭಾವಗಳಿದ್ದಾಗ ಗೆಳೆತನ ಉಳಿಯುತ್ತದೆ. ಆದರೆ ಒಬ್ಬರು ನಿರ್ಲಕ್ಷ್ಯ ತೋರಿದರೂ ಗೆಳೆತನಕ್ಕೆ ತೊಂದರೆಯುಂಟಾಗುತ್ತದೆ. ತಾನು ಎಲ್ಲರಿಗೂ ಬೇಕಾದವನಾಗಿ ವರ್ತಿಸಬೇಕಾಗುತ್ತದೆ. ಸನ್ನಡತೆಗಳಿಂದ ಎಲ್ಲರ ಸ್ನೇಹ ಸಂಪಾದಿಸಬೇಕಾಗುತ್ತದೆ. ಇದಲ್ಲವಾದರೆ

ಸಮಾಜದಿಂದ ಏಕಾಂಗಿಯಾಗಿ ಬದುಕು ನಡೆಸಬೇಕಾಗುತ್ತದೆ. ಅದರಿಂದ ಮನೋಬೇನೆಗಳು ಬರಬಹುದು. ಆದ್ದರಿಂದ ಮಂದಿ-ಮಕ್ಕಳೊಳಗೆ ಹೊಂದಿಕೊಂಡು ಇರುವ ಸ್ವಭಾವ ಇರಬೇಕು.

ಮಡದಿ ಮನಿಗ್ಹೋಗದಕ ದಡಿಯ ದೋತರ ಬೇಕ
ಮ್ಯಾಲ ಸುವರದ ಕೊಡಿ ಬೇಕ । ಏ ಗೆಣೆಯ
ಜೋತೀಲೆ ಬೇಕೋ ಗೆಣೆಯರ । (ಆರ್. ಎಸ್. ಪಂಚಮುಖಿ, ೧೯೫೩, ಪು-೯)

ಜನರೊಳಗೆ, ಸಮವಯಸ್ಕರೊಡನೆ ಒಳ್ಳೆಯ ಬಾಂಧವ್ಯ ಬೆಳೆಸಿಕೊಳ್ಳಬೇಕು. ಅಂದಾಗ ಸಮಾಜದಲ್ಲಿ ಉನ್ನತ, ಉತ್ತಮ ಸ್ಥಾನ ಸಿಗುತ್ತದೆ. ಅಲ್ಲದೇ ಒಳ್ಳೆಯ ಭಾವನೆಗಳೊಂದಿಗೆ, ಸುಗಮ ಸಂಪರ್ಕದೊಂದಿಗೆ ಎಲ್ಲರೊಂದಿಗೂ ಹೊಂದಿಕೊಂಡು ಹೋಗುವ ಸ್ವಭಾವ ಇರಬೇಕು. ಅಂದಾಗ ಮಾತ್ರ ಎಲ್ಲರೂ ನಿಮ್ಮನ್ನು ಹೊಗಳುತ್ತಾರೆ. ನೀವು ಮರಣ ಹೊಂದಿದಾಗ, ನಿಮ್ಮ ಸ್ನೇಹಗುಣಗಳನ್ನು ಮೆಚ್ಚಿ ಸ್ಮರಿಸುತ್ತಾರೆ. ಅಕ್ಕಮಹಾದೇವಿ ಹೇಳಿದಂತೆ 'ಕಲ್ಲರಳಿ ಹೂವಾಗಿ, ಎಲ್ಲರಿಗೂ ಬೇಕಾಗಿ' ಅಂದರೆ ಎಲ್ಲರಿಗೂ ಬೇಕಾಗಿರುವ ವ್ಯಕ್ತಿಯಾಗಬೇಕಾಗುತ್ತದೆ. ಅದು ಉತ್ತಮ ಗೆಳೆತನವನ್ನು ನಿಭಾಯಿಸುತ್ತದೆ.

ಗೆಳೆತನವೆಂಬುದು ನಿರಂತರ ಪ್ರಕ್ರಿಯೆ. ಇದು ಯಾವ ಸಮಯದಲ್ಲಾದರೂ ಉಂಟಾಗಬಹುದು. ಆಡುವಾಗ, ಓದುವಾಗ, ಸಂಚರಿಸುವಾಗ, ಮದುವೆಯಲ್ಲಿ, ಸಭೆ ಸಮಾರಂಭಗಳಲ್ಲಿ, ವೃತ್ತಿ ಮಾಡುವಾಗ ಹೀಗೆಯೇ ಸುಮಧುರ ಮಾತುಗಳ ಮೂಲಕ ಸ್ನೇಹಸಂಬಂಧ ಹುಟ್ಟಿಕೊಳ್ಳುತ್ತದೆ. ಅನಿವಾರ್ಯ ಕಾರಣಗಳಿಂದಾಗಿ ಕೆಲ ಸ್ನೇಹಿತರು ನಮ್ಮಿಂದ ದೂರವಾದರೆ ಇನ್ನೂ ಕೆಲವರು ಆಪ್ತರೆನಿಸುತ್ತಾರೆ. ಇದಕ್ಕೆ ಬಡವ-ಬಲ್ಲಿದನೆಂಬ ಭೇದವಿಲ್ಲ. ಕೃಷ್ಣ-ಅರ್ಜುನ, ಕೃಷ್ಣ-ಕುಚೇಲರ ಸ್ನೇಹವನ್ನು ನಾವಿಲ್ಲಿ ಸ್ಮರಿಸಬಹುದು. ಸ್ನೇಹಸಂಬಂಧಕ್ಕೆ ಯಾವುದೇ ಮಿತಿಯಿಲ್ಲ. ಬಲ್ಲವರು ಗೆಳೆತನವನ್ನು ಲೋಕದಲ್ಲಿ ಸಿಗುವ ಅಮೃತವೆಂದಿದ್ದಾರೆ. ತಂದೆ-ತಾಯಿಯೂ ಸಹ ತಮ್ಮ ಹದಿಹರೆಯದ ಮಕ್ಕಳನ್ನು ಸ್ನೇಹದಿಂದ ಕಾಣುತ್ತಾರೆ. ಮದುವೆಯಾದ ಸತಿಪತಿಯೂ ಸ್ನೇಹಿತರಂತೆ ವರ್ತಿಸುತ್ತಾರೆ. ಕಾರಣ ಸ್ನೇಹದಲ್ಲಿನ ಅಮೃತವು ಜೀವನದ ಸಂತೋಷಗಳಿಗೆ ಅಮರತ್ವವನ್ನು ಕೊಡುತ್ತದೆ.

ಲೋಕದಾಗಿರುವ ತನಕ ಬೇಕಾಗಿ ಇರಬೇಕು
ಸಾಕಾಗಿ ಶಿವನ ಸದರೀಗಿ । ಹೋದಾಗ
ಎಲ್ಲಾರು ಬರುತಾರೆ ಕಳಿಸಾಕ । (ಹಲಸಂಗಿ ಗೆಳೆಯರು, ೧೯೩೧, ಪು-೧೦೩)

ಮಾನವನಿಗೆ ಹೊಂದಾಣಿಕೆ ಸ್ವಭಾವ ಇರಬೇಕು. ಏಕೆಂದರೆ ಮಾನವ ಸಮಾಜ ಜೀವಿ. ಇಂದಿಗೂ ಆತ ಸಮಾಜದಲ್ಲಿ ಒಬ್ಬನಾಗಿ ಬದುಕು ನಡೆಸುತ್ತಿದ್ದಾನೆ. ಸಮಾಜದಲ್ಲಿ ಇತರರೊಂದಿಗೆ ಸಹಬಾಳ್ವೆ ಜೀವನ ನಡೆಸುತ್ತಾನೆ. ಬದುಕನ್ನು ಸಾರ್ಥಕಪಡಿಸಿಕೊಂಡು ಜನ ಮೆಚ್ಚುವ ಕೆಲಸವನ್ನು ಮಾಡಬೇಕು. ಆದಷ್ಟು ಬಂಧುಬಳಗದವರ ಪ್ರೀತಿಗೆ ಒಳಗಾಗಿರಬೇಕು. ಸಮಾಜದ ದೀನರಿಗೆ ಸಹಾಯ

ಮಾಡಿರಬೇಕು. ಮುಂದೊಂದು ದಿನ ಸಾವು ಬಂದೇ ಬರುತ್ತದೆ. ನಿಮ್ಮ ಜೀವನದ ಅಂತಿಮಯಾತ್ರೆಯಲ್ಲಿ ನಿಮ್ಮನ್ನು ಬೀಳ್ಕೊಡುವುದಕ್ಕೆ ಊರಿಗೆ ಊರೇ ಸೇರುತ್ತದೆ. ಇದು ಸ್ನೇಹ ಬಾಂಧವ್ಯಕ್ಕೆ ಸಾಕ್ಷಿ. ನಿಮ್ಮ ಉಸಿರು ಮಣ್ಣಲ್ಲಿ ಮಣ್ಣಾದರೂ ಹೆಸರು ಮಾತ್ರ ಹಾಗೆ ಉಳಿಯುತ್ತದೆ. ಅದು ಸ್ನೇಹ ಬಾಂಧವ್ಯದ ಸಂಕೇತವಾಗಿ ಗೆಳೆಯರ ಹೃದಯದಲ್ಲಿ ಅಚ್ಚೊತ್ತಿದೆ. ಆದ್ದರಿಂದ ಸಾಧ್ಯವಾದಷ್ಟು ಎಲ್ಲರಿಗೂ ಬೇಕಾಗುವ ಕೆಲಸವನ್ನೇ ಮಾಡೆಂಬುದು ಜನಪದರ ಸಮಾಜಮುಖಿ ಬದುಕಿನ ಆಶಯ.

ಜನಪದರಲ್ಲಿನ ಗೆಳೆಯರ ನಡುವಿನ ಉತ್ತಮ ಬಾಂಧವ್ಯ ಲೋಕದೊಳಿತಿಗೆ ಕಾರಣವಾಗುತ್ತದೆ. ಯಾವುದೇ ವೃತ್ತಿಯಿರಲಿ, ಪ್ರವೃತ್ತಿಯಿರಲಿ ಅಲ್ಲಿ ಉಂಟಾಗುವ ಗೆಳೆತನಕ್ಕೆ ಹೃದಯ ವೈಶಾಲ್ಯತೆಯೇ ಕಾರಣವಾಗಿರುತ್ತದೆ. ಕುರಿ ಕಾಯುವ ವೃತ್ತಿಯಲ್ಲಿರುವ ಗೊಲ್ಲಾಳನು ನಿತ್ಯ ತಾನು ಗೆಳೆಯರೊಡನೆ ಕುರಿಕಾಯುತ್ತಿದ್ದ. ಅಲ್ಲಿ ಗೆಳೆಯರೆಲ್ಲ ಸೇರಿಕೊಂಡು ಕೂಡಿ ಹಾಡುವಾಗ ಯಾವುದೇ ಜಾತಿ, ಮತ, ಪಂಥಗಳ ಎಲ್ಲೆಯನ್ನು ಗಮನಿಸಲಿಲ್ಲ.

ಸರಿಗೆಳೆಯರೊಡಗೂಡಿ, ಕುರಿಹಿಂಡ ತೀರಿಕೊಂಡು
ತರುಬುತಲಿ ಅಡವಿಬೈಲೊಳಗೆ । ನಿತ್ಯದಲಿ
ಹರಲೀಲೆ ಹಾಡಿ ಆಡುತಲಿ । (ಬಿ. ಎಸ್. ಗದ್ದಗಿಮಠ, ೧೯೫೨, ಪು–೫೫)

ಕುರುಬ ಗೊಲ್ಲಾಳನ ಪದದಲ್ಲಿ ಗೆಳೆತನದ ವಿವಿಧ ಸನ್ನಿವೇಶಗಳಿವೆ. ಅವನು ನಿತ್ಯ ತನ್ನ ಕುರಿಗಳನ್ನು ಗೆಳೆಯರೊಂದಿಗೆ ಸೇರಿಕೊಂಡು ಅಡವಿಗೆ ಮೇಯಿಸಲು ಹೊಡೆದುಕೊಂಡು ಹೋಗುತ್ತಿದ್ದನು. ಅಂತೆಯೇ ಅಡವಿಯಲ್ಲಿ ಗೆಳೆಯರೊಂದಿಗೆ ಶಿವಲೀಲೆಯನ್ನು ಕೊಂಡಾಡಿ, ಹಾಡಿ, ಕುಣಿಯುತ್ತಿದ್ದರು. ಹೀಗೆ ಕಷ್ಟವಿರಲಿ ಸುಖವಿರಲಿ ಎಲ್ಲರೊಂದಾಗಿ ಹಂಚಿಕೊಳ್ಳುವ ಗೆಳೆತನ ಮಾನವೀಯ ಸಂಬಂಧಗಳಲ್ಲಿಯೇ ಶ್ರೇಷ್ಠವಾದದ್ದು. ತಾವು ಒಯ್ದ ಬುತ್ತಿ ಗಂಟನು ಬಿಚ್ಚಿ ಪರಸ್ಪರ ಹಂಚಿ ತಿನ್ನುತ್ತಾರೆ. ಮನೆಯಲ್ಲಿ ಏನಾದರೂ ಕಷ್ಟವಿದ್ದರೆ ಎಲ್ಲರೂ ಕೂಡಿಕೊಂಡು ಪರಿಹರಿಸುತ್ತಾರೆ. ಇಂತಹ ಗುಣ–ಔದಾರ್ಯಗಳಿಗೆ ಬೆಲೆ ಕಟ್ಟಲಾಗದು.

ಹಂತಿಯ ಹೊಡಿಯಾಗ ಹಾಡಾಕ ಬಂದೀದಿ
ಹಾಡೋ ನನ್ನ ಗೆಳೆಯಾ ದನಿಗೂಡಿ । ಹಾಡಿದರ
ಜೋಡಕ್ಕಿ ನುಡಿತಾ ನುಡಿದಾಂಗ । (ಶಾಂತಕುಮಾರಿ ಪಾಟೀಲ, ೧೯೭೯, ಪು–೬೫)

ಹೊಲದಲ್ಲಿ ಹಂತಿಯನ್ನು ಹೊಡೆಯುವಾಗ ಎತ್ತುಗಳೇ ರೈತನಿಗೆ ಆಪ್ತ ಗೆಳೆಯ. ಅವುಗಳೊಂದಿಗೆ ಸಂಭಾಷಿಸುತ್ತ ಭೂಮಿತಾಯಿಯ ವರ್ಣನೆ ಮಾಡುತ್ತ ಹಂತಿ ಹೊಡೆಯುವಾಗ ಗೆಳೆಯನೊಬ್ಬ ಬರುತ್ತಾನೆ. ಆ ಸಂದರ್ಭದಲ್ಲಿ ಅಭಿವ್ಯಕ್ತವಾದ ಗೀತೆಯಿದು. ನೋವು–ನಲಿವು ಯಾವುದೇ ಇರಲಿ ಎಲ್ಲದರಲ್ಲೂ ತಮ್ಮ ಪಾಲ್ಗೊಳ್ಳುವಿಕೆಯನ್ನು ಬಯಸುವ ಜನಪದರು ಸಕಾರಾತ್ಮಕ ಮನೋಧೋರಣೆ ಹೊಂದಿರುತ್ತಾರೆ. ಹಾಡಿ ಬೇಸತ್ತ ಗೆಳೆಯನಿಗೆ ವಿಶ್ರಾಂತಿ ನೀಡಲು ಬಂದ

ಗೆಳೆಯನಿಗೆ ಹೇಳಿದ ಮಾತುಗಳು ಇಲ್ಲಿವೆ. ನಾವಿಬ್ಬರೂ ಧ್ವನಿಗೂಡಿಸಿ ಹಾಡಿದರೆ ಜೋಡಿ ಹಕ್ಕಿಗಳು ಕೂಗಿದ ಹಾಗೆಯೇ ಇರಬೇಕೆಂದು ಬಯಸುತ್ತಾರೆ. ಇಲ್ಲಿ ಧ್ವನಿಯಷ್ಟೇ ಸಮನಾಗಿಲ್ಲ ಬದಲಾಗಿ ಮನಸ್ಸು ಕೂಡ ಒಂದೇ ರೀತಿಯ ಮನೋಭಾವನೆಗಳನ್ನು ಹೊಂದಿದೆ. ಜನಪದರ ಸ್ನೇಹಗುಣಕ್ಕೆ ಹಿಡಿದ ಕನ್ನಡಿಯಂತೆಯೇ ಹಲವಾರು ಗೀತೆಗಳು ಅಭಿವ್ಯಕ್ತಗೊಂಡಿವೆ.

### ೪.೩.೫ ನೆರೆಹೊರೆಯ ಬಾಂಧವ್ಯ

'ಎಲ್ಲರೂ ಒಬ್ಬನಿಗಾಗಿ, ಒಬ್ಬನು ಎಲ್ಲರಿಗಾಗಿ' ಎಂಬ ಸಹಬಾಳ್ವೆಯ ಆಶಯದಂತೆ ಜನಪದರ ಬದುಕು. ವ್ಯಕ್ತಿಯು ತನ್ನ ಕುಟುಂಬದೊಳಗಿನ ಭಾವನಾತ್ಮಕ ಸಂಬಂಧವನ್ನು ಸಮಾಜದಲ್ಲಿಯೂ ಇರಿಸಿಕೊಂಡಿದ್ದಾನೆ. ಕೂಡಿ ಕಲೆತು ಬಾಳುವುದೇ ಸಂಘ ಜೀವನವೆಂದು ಮಾನವೀಯ ಗುಣ ನಡುವಳಿಕೆಗಳಿಂದ ಎಲ್ಲರಿಗೂ ಆಪ್ತನೆನಿಸಿಕೊಳ್ಳುತ್ತಾನೆ. ಸಂಬಂಧಗಳನ್ನು ಬೆಸೆಯುವಲ್ಲಿ ಜನಪದರು ಯಾವುದೇ ಮಡಿವಂತಿಕೆ ನಿರ್ಮಿಸಿಕೊಂಡಿಲ್ಲ. ಬಂದ ಹಾಗೆ ಬದುಕನ್ನು ಸ್ವೀಕರಿಸುವ ಮನೋಭಾವ ಹೊಂದಿದವರಾಗಿದ್ದಾರೆ.

ಸಮಾಜವನ್ನು ಆರಂಭದ ಹಂತದಲ್ಲಿ ನಿರ್ಮಿಸುವ ಇಟ್ಟಿಗೆಗಳಂತೆ ನೆರೆಹೊರೆಯ ಸಂಬಂಧಗಳು ಜನಪದರಲ್ಲಿ ಕಂಡು ಬರುತ್ತವೆ. ಒಂದು ಉತ್ತಮ ಸಮಾಜವನ್ನು ಕಟ್ಟುವಲ್ಲಿ ನೆರೆಹೊರೆಯ ಸಹಕಾರ ಅತ್ಯಗತ್ಯ. ಸಾಮಾಜಿಕ ಸಂಬಂಧಗಳಲ್ಲಿ ಅತಿಮುಖ್ಯವಾದದ್ದು ನೆರೆಹೊರೆಯ ಸಂಬಂಧ. ಹಲವು ಕುಟುಂಬಗಳ ನಡುವಿನ ಸಹಚರ್ಯವೇ ನೆರೆಹೊರೆ. ಅದೇ ಒಂದು ಗುರಿಯಾಗಿ, ಸಮುದಾಯವಾಗಿ ಸಮಾಜವನ್ನು ನಿರ್ಮಿಸುತ್ತದೆ. ಸಮಾಜದ ಸದಸ್ಯರ ಸಹಕಾರದಿಂದ ನೆರೆಹೊರೆಯ ಸಂಬಂಧಗಳು ರೂಪುಗೊಳ್ಳುತ್ತವೆ.

ಸಮಾಜವು ಕುಟುಂಬದ ಹೊರಗೆ ಇತರರ ಒಡನಾಟದಿಂದ ಏರ್ಪಡುವ ಒಂದು ಸಮುದಾಯ ವ್ಯವಸ್ಥೆ. ಕುಲಗೋತ್ರ, ಬಡವ-ಬಲ್ಲಿದರೆನ್ನದೇ ನಮ್ಮ ಊರು. ನನ್ನ ಕೇರಿ, ನನ್ನ ನಾಡು ಎಂತಲೇ ಹೊಸ ಬಾಂಧವ್ಯಕ್ಕೆ ನಾಂದಿಯಾಗುತ್ತದೆ. ಬದುಕಿನಲ್ಲಿ ಏನೇ ಇರಲಿ ನಗುಮೊಗದ ಜೀವನ ಜನಪದರಿಗೆ ಮುಖ್ಯ. ಸಿರಿತನ ಬರಲಿ, ಬಡತನ ಇರಲಿ ಎಲ್ಲರೂ ಒಂದಾಗಿರಬೇಕೆಂಬುದೇ ಜನಪದರ ಬಾಂಧವ್ಯದ ಮೂಲಮಂತ್ರ.

> ನೆರೆಹೊರೆ ಜನರನು ಪ್ರೀತಿಯಿಂದ ಕಂಡು
> ಹೊಂದಿಕೊಂಡು ನೀ ಹೋಗಬೇಕ । ಏನೇ ಇರಲಿ
> ಎಲ್ಲರೂ ಒಂದಾಗಿ ನಡೆಯಬೇಕ ।
> (ಕೋಡಿರಾಂಪುರ ರಂಗಾರೆಡ್ಡಿ, ೧೯೯೩, ಪು-೧೫೪)

ನೆರೆಹೊರೆ ಎಂದರೆ ಅಕ್ಕಪಕ್ಕ ಎಂದರ್ಥ. ಅಕ್ಕಪಕ್ಕದ ಮನೆಗಳಲ್ಲಿ ವಾಸಿಸುವ ಜನರನ್ನು ನೆರೆಹೊರೆಯೆಂದು ಕರೆಯಲಾಗುತ್ತದೆ. ಅಕ್ಕಪಕ್ಕದ ಮನೆಗಳಲ್ಲಿ ವಾಸಿಸುವ ನೆರೆಹೊರೆಯವರು ನಮ್ಮ ಸಮೀಪದಲ್ಲಿದ್ದುಕೊಂಡು ನೆರವನ್ನು ನೀಡುತ್ತಾರೆ. ಸಂಕಷ್ಟಗಳು ಬಂದಾಗ ಊರುಗೋಲಾಗಿ ಸಹಾಯ ಮಾಡುತ್ತಾರೆ. 'ಅರಮನೆ ಇಲ್ಲದಿದ್ದರೂ ನೆರೆಮನೆ ಇರಬೇಕು' ಎಂಬ ಜನಪದರ ಅನುಭವವೇ ನೆರೆಮನೆಯ ಬಾಂಧವ್ಯದ ಕುರಿತಾಗಿ ಇರುವಂತಹದ್ದು. ನೆರೆಹೊರೆಯಲ್ಲಿ ಯಾರೇ ವಾಸಿಸಲಿ ಅವರೊಂದಿಗೆ ಸೌಹಾರ್ದಯುತವಾಗಿ ವರ್ತಿಸಬೇಕು. ಸಾಧ್ಯವಾದಷ್ಟು ಹೊಂದಿಕೊಂಡಿದ್ದರೆ, ಎಲ್ಲರೂ ಒಂದಾಗಿದ್ದರೆ ಬದುಕಿನ ಸವಿ ಹೆಚ್ಚುತ್ತದೆ.

ನಿತ್ಯದ ಬದುಕಿನ ಪಯಣದಲ್ಲಿ ಒಬ್ಬರಿಗೊಬ್ಬರು ಆಸರೆಯಾಗಿ ಕೊಟ್ಟು ತೆಗೆದುಕೊಳ್ಳುವ **'ಕೊಡು-ಕೊಳು'** ಸಂಪ್ರದಾಯವನ್ನು ಇಟ್ಟುಕೊಂಡಿದ್ದಾರೆ. ಸಮಾಜದಲ್ಲಿ ಪರಸ್ಪರ ಸಹಕಾರದಿಂದ ಇಲ್ಲವೇ ಅವಲಂಬಿತರಾಗಿ ಬದುಕು ನಡೆಸುವ ಜನಪದರಿಗೆ ನೆರೆಹೊರೆ ಬೇಕು. ಜನಪದರ ದೈನಂದಿನ ಚಟುವಟಿಕೆಗಳು ನೆರೆಹೊರೆಯನ್ನು ಆಶ್ರಯಿಸಿದ್ದವು. ಇಂತಹ ಚಟುವಟಿಕೆಗಳು ಕೇವಲ ವ್ಯವಹಾರಿಕವಾಗಿರದೆ ಅವರ ಬಾಂಧವ್ಯ ಆಧಾರಿತವಾಗಿದ್ದವು.

ಇದ್ದರ ಇರಬೇಕು ಬುದ್ಧಿವಂತ ನೆರೆಯ
ಖುದ್ದರಗೇಡಿ ಕುಲಗೇಡಿ । ನೆರೆಯಿದ್ದು
ಇದ್ದಟ್ಟು ಬುದ್ಧಿ ಕಳಕೊಂಡ । (ಹಲಸಂಗಿ ಗೆಳೆಯರು, ೧೯೩೧, ಪು-೧೦೨)

ಜನಪದರು ತಮ್ಮ ಬದುಕಿನಲ್ಲಿ ನೆರೆಮನೆಯ ಬಾಂಧವ್ಯದ ಅಗತ್ಯತೆಯನ್ನು ಗೀತೆಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಆದರೆ ಅಂತಹ ನೆರೆಮನೆಯ ಸದಸ್ಯರು ಬುದ್ಧಿವಂತರಾಗಿದ್ದು, ತಮ್ಮಂತೆ ಮಾನವೀಯತೆಯನ್ನು ಹೊಂದಿದವರಾಗಿರಬೇಕೆಂದು ಬಯಸುತ್ತಾರೆ. ತಮ್ಮ ಅನುದಿನದ ಜೀವನದಲ್ಲಿ ಇತರರ ನೆರವಿನೊಂದಿಗೆ ಕೊಡುಕೊಳುವ ಸಹಕಾರಿ ಮನೋಭಾವನೆಯಿಂದಲೇ ನೆರೆಹೊರೆ ನಿರಂತರಗೊಂಡಿತ್ತು. ಮನೆಯೊಳಗಿನ ನೋವು ನೆರೆಮನೆಯವರಿಗೂ ನೋವಾಗುವ, ಮನೆಯೊಳಗಿನ ನಲಿವು ನೆರೆಮನೆಯವರಿಗೂ ನಲಿವಾಗಿ ಕಂಡು ಬರುವ ಬಾಂಧವ್ಯಗಳಲ್ಲಿ ಜನಪದರ ಸಾಮಾಜಿಕ ಬಂಧುರತೆಯ ಗಟ್ಟಿತನವನ್ನು ಎತ್ತಿ ಹಿಡಿಯುತ್ತದೆ.

ಮಂದಿ ಮಕ್ಕಳೊಳಗ ಛಂದಾಗ್ಯೊಂದಿರಬೇಕ
ನಂದಿಯ ಶಿವನ ದಯದಿಂದ । ಹೋಗಾಗ
ಮಂದಿ ಬಾಯಾಗ ಇರಬೇಕ । (ಹಲಸಂಗಿ ಗೆಳೆಯರು, ೧೯೩೧, ಪು-೧೦೫)

ಬದುಕಿನಲ್ಲಿ ಅನುಭವಕ್ಕಿಂತ ದೊಡ್ಡ ಪಾಠ ಇನ್ನೊಂದಿಲ್ಲ. ಅಂತಹ ಅನುಭವ ಕಟ್ಟಿಕೊಟ್ಟ ಬುತ್ತಿಯನ್ನು ಹಲವರು ಎಲ್ಲರಿಗೂ ಹಂಚುವ ಕಾರ್ಯ ಮಾಡುತ್ತಾರೆ. ಅವರನ್ನು ಹಿರಿಯ ತಲೆಮಾರಿನವರು ಎನ್ನಬಹುದು. ಬದುಕಿನ ಓರೆಕೋರೆಗಳನ್ನು ದಾಟಿದ ಅವರಿಗೆ ತಮ್ಮಂತೆಯೇ

ಕಿರಿಯರು ಕಷ್ಟಪಡಬಾರದೆಂದು ತಿಳಿಹೇಳುವ ಪದ್ಧತಿ ಜನಪದರಲ್ಲಿ ರೂಢಿಯಲ್ಲಿತ್ತು. ಬಡವ-ಬಲ್ಲಿದ, ಮೇಲು-ಕೀಳೆನ್ನದೆ ಎಲ್ಲರೊಂದಿಗೆ ಚೆನ್ನಾಗಿ ಹೊಂದಿಕೊಂಡು ಬದುಕುವ ಕಲೆ ಪಡೆದಿರಬೇಕೆಂಬುದು ಹಿರಿಯರ ಮಹದಾಸೆ. ನೆರೆಹೊರೆಯವರೊಂದಿಗೆ ಸಹಕಾರ ಮನೋಭಾವದಿಂದ ಬೆರೆತು ಸಮನ್ವಯತೆ ಸಾಧಿಸಬೇಕೆಂಬ ನಿಲುವು ಜನಪದರಲ್ಲಿನ ವಿಶಾಲ ಮನೋಭಾವಕ್ಕೆ ಹಿಡಿದ ಕನ್ನಡಿಯಂತಿದೆ.

ಜನಪದರು ತಾವು ವಾಸಿಸುವ ಮನೆಯ ಸುತ್ತಮುತ್ತಲಿರುವ ಜನರೆಲ್ಲ ಒಳ್ಳೆಯವರಾಗಿರಬೇಕೆಂದು ಆಶಿಸುತ್ತಾರೆ. ಒಳ್ಳೆಯವರ ನಡುವೆ ಬದುಕಿದರೆ ತಮ್ಮಲ್ಲಿನ ಕೆಟ್ಟಗುಣಗಳು ನಶಿಸಬಹುದೆಂಬ ಆಶಾಭಾವ. ಅದಕ್ಕಾಗಿ ಬುದ್ಧಿವಂತ, ಮತಿವಂತ ನೆರೆಯನ್ನು ಜನಪದರು ಬಯಸುತ್ತಾರೆ. 'ಹೂವಿನೊಂದಿಗೆ ನಾರು ಸ್ವರ್ಗ ಸೇರದೆ?' ಕುಲವನ್ನು ಹಾಳುಮಾಡುವ ವ್ಯಕ್ತಿಗಳ ನಡುವೆ ಬದುಕಿದರೆ ಇರುವಷ್ಟು ಬುದ್ಧಿಯೂ ಹಾಳಾಗುತ್ತದೆ ಎಂಬ ಅಭಿಪ್ರಾಯವನ್ನು ಗೀತೆಯಲ್ಲಿ ಅಭಿವ್ಯಕ್ತಿಸಿದ್ದಾರೆ.

ಸಮಾಜದಲ್ಲಿ ಎಲ್ಲ ಬಗೆಯ ವ್ಯಕ್ತಿತ್ವದವರು ಇರುತ್ತಾರೆ. ಸುಳ್ಳು, ಕಳ್ಳ, ಮೃದುಹೃದಯಿ, ತ್ಯಾಗಿ, ಭೋಗಿ, ಸ್ವಾರ್ಥಿ, ನಿಸ್ವಾರ್ಥಿ ಹೀಗೆ ವ್ಯಕ್ತಿತ್ವಗಳ ಪಟ್ಟಿ ಬೆಳೆಯುತ್ತದೆ. ತಾವಿರುವ ತಾಣವು ಉತ್ತಮ ಸಂಸ್ಕೃತಿಯನ್ನು ಹೊಂದಿರಬೇಕೆಂದು ಬಯಸುವ ಜನಪದರು ಎಲ್ಲ ಬಗೆಯ ವ್ಯಕ್ತಿಗಳನ್ನು ಎದುರಿಸಿ ಬದುಕನ್ನು ಸರಾಗವಾಗಿ ನಡೆಸಿಕೊಂಡು ಹೋಗಬೇಕೆಂದು ಮರೆಯಲಾರರು.

ಭಾಗಾದಿ ಬಲಕಿರಲಿ ವೈರಿ ತಾ ಎಡಕಿರಲಿ
ಛಾಡಿ ನಿನ್ನ ಮನೆಯು ಇದಿರಿರಲಿ । ಬಲಭೀಮ
ದೇವ ನನ್ನ ಮೇಲೆ ದಯವಿರಲಿ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೧೦೬)

ಬಾಗಾದಿ, ವೈರಿ, ಛಾಡಿ – ಹೀಗೆ ಹಲವು ಸ್ವಭಾವಗಳನ್ನು ಹೊಂದಿರುವ ವ್ಯಕ್ತಿಗಳನ್ನು ಮನೆಯ ನೆರೆಯಲ್ಲಿಯೇ ಇರಿಸಿಕೊಳ್ಳಬೇಕೆಂದು ಬಯಸುತ್ತಾರೆ. 'ನಿಂದಕರಿರಬೇಕು ಊರೊಳಗೆ ಹಂದಿಗಳಿದ್ದಂತೆ'. ಆಗ ಊರು ಸ್ವಚ್ಛವಾಗಿರುತ್ತದೆ ಅಂತೆಯೇ ತಮ್ಮ ವ್ಯಕ್ತಿತ್ವ ರೂಪುಗೊಳ್ಳಲು ಎಲ್ಲ ಬಗೆಯ ಸ್ವಭಾವದ ವ್ಯಕ್ತಿಗಳು ಅವಶ್ಯಕ ಎಂದಿದ್ದಾರೆ. ಎಡ, ಬಲ, ಎದುರೆನ್ನುವ ದಿಕ್ಕಿನಲ್ಲಿಯೂ ಜನಪದರು ಯಾವ ಸ್ವಭಾವದವರಿದ್ದರೆ ಉತ್ತಮವೆಂದು ಭಾವಿಸಿ ಮೇಲಿನ ಗೀತೆಯಲ್ಲಿ ಅಭಿವ್ಯಕ್ತಿಸಿದ್ದಾರೆ.

ಊರಹಿರಿಯರು ಕೂಡಿ ತೇರನಿಂದೆಳೆಯುವೆವು
ಭೂರಿಜಂಗಮರ ಉಣಿಸುವೆವು । ಶಿವಲಿಂಗ
ಸೋರ್ವ ನೆತ್ತರಕೆ ತಡೆಹಾಕು । (ಬಿ. ಎಸ್. ಗದ್ದಗಿಮಠ, ೧೯೬೨, ಪು-೩೧)

ಬೇಡರ ಕನ್ನಯ್ಯನ ಪದದಲ್ಲಿ ಶಿವಲಿಂಗದ ಕಣ್ಣಿನಲ್ಲಿ ಸೋರುವ ರಕ್ತವನ್ನು ಕಂಡ ಜನರು ನಾನಾ ರೀತಿಯ ಬೇಡಿಕೆಗಳಿಂದ ನಿಲ್ಲಿಸಲು ನೋಡುತ್ತಾರೆ. ಜನಾರ್ಧನನ ಕಷ್ಟಕ್ಕೆ ಕರುಗುವ ಜನಪದರು ನೆರೆಹೊರೆಯ ಜನರ ಕಷ್ಟಗಳಿಗೆ ಕರಗದಿರುತ್ತಾರೆಯೇ? ಗ್ರಾಮೀಣ ಜನರು ಅಕ್ಕಪಕ್ಕದಲ್ಲಿ ವಾಸಿಸುವ ಒಬ್ಬರು ಇನ್ನೊಬ್ಬರೊಂದಿಗೆ ಅರ್ಥಮಾಡಿಕೊಂಡು ಸುಖ-ದುಃಖಗಳಿಗೆ ಸ್ಪಂದಿಸುವ ಮೂಲಕ ಬಾಂಧವ್ಯ ಮೆರೆಯುತ್ತಿದ್ದರು. ಜನರು ಜನರೊಂದಿಗೆ ನಿತ್ಯನಿರಂತರ ಸ್ಪಂದಿಸಿ ಜೀವಿಸುವುದೆ ನೆರೆಹೊರೆಯ ಅರ್ಥ. ಇತರರ ಅಗತ್ಯಗಳಿಗೆ ಸ್ಪಂದಿಸುವ, ಕೊಟ್ಟು ತೆಗೆದುಕೊಳ್ಳುವ, ನೆರೆಯವರ ಹಿತಕಾಯುವ ಮನೋಭಾವ ಜನಪದರಲ್ಲಿದೆ.

ತನ್ನಂತೆಯೇ ಪರರನ್ನು ಕಾಣುವ ಸಾಮಾಜಿಕ ಬಾಂಧವ್ಯದ ಎಳೆಯು ನೆರೆಹೊರೆಯ ಸಂಬಂಧದ ಮೂಲಕ ತೆರೆದುಕೊಳ್ಳುತ್ತಿತ್ತು. ಅಂತಹ ಸಂಬಂಧಗಳು ಪ್ರಸ್ತುತ ಕ್ಷೀಣಗೊಂಡಿವೆ. ಆಧುನಿಕ ಸಂದರ್ಭದಲ್ಲಿ ನಗರೀಕರಣದಿಂದಾಗಿ ಪರಸ್ಪರರು ದೂರವಾಗುತ್ತಿದ್ದಾರೆ. ಸುಖದುಃಖ, ಸಾವುನೋವುಗಳಿಗೆ ಸ್ಪಂದಿಸದೇ ಮೂಕ ಪ್ರೇಕ್ಷಕರಂತೆ ಬದುಕುತ್ತಿದ್ದಾರೆ. ಇಂತಹ ಸಂದರ್ಭಗಳಲ್ಲಿ ಜನಪದರ ನಡುವಿನ ನೆರೆಹೊರೆಯ ಬಾಂಧವ್ಯ ನೆರವಿಗೆ ಬರುತ್ತವೆ. ಜನಪದರ ಜೀವನದ ಒಟ್ಟಾರೆ ಆಶಯವೆಂದರೆ ಶಾಂತಿ, ಸೌಹಾರ್ದ, ಸಹಕಾರ ಗುಣಗಳನ್ನು ಬೆಳೆಸಿಕೊಳ್ಳುವುದಾಗಿದೆ. ಇದ್ದಷ್ಟು ದಿನ ನೆರೆಹೊರೆಯವರೊಂದಿಗೆ ನೆಮ್ಮದಿಯ ಬದುಕು ನಡೆಸುವುದಾಗಿದೆ.

ಅಧ್ಯಾಯ – ೫

# ಜನಪದರ ಮಾನವೇತರ ಸಂಬಂಧಗಳು

ಪರಿಸರದಲ್ಲಿ ಸಾವಿರಾರು ಪ್ರಭೇದದ ಸಸ್ಯ ಮತ್ತು ಜೀವಿಗಳು ವಾಸಿಸುತ್ತವೆ. ಇವುಗಳಲ್ಲಿ ಹೆಚ್ಚಾಗಿ ಜನಪದರ ಬಳಕೆಯಲ್ಲಿರುವ ಜೀವಿ ಮತ್ತು ಸಸ್ಯಗಳು ಜನಪದರೊಂದಿಗೆ ಸಂಬಂಧ ಹೊಂದಿವೆ. ಜನಪದರು ಕೇವಲ ಮಾನವೀಯ ಸಂಬಂಧಗಳನ್ನು ಮಾತ್ರ ಹೊಂದಿಲ್ಲ. ಅವರು ಪ್ರಕೃತಿ, ಭೂಮಿ, ಬಸವ, ದೈವ, ನದಿ, ಮಳೆ, ಪ್ರಾಣಿ, ಪಕ್ಷಿ ಮುಂತಾದವುಗಳೊಂದಿಗೆ ಭಾವನಾತ್ಮಕ ಸಂಬಂಧವನ್ನು ಹೊಂದಿದ್ದಾರೆ. ಏಕೆಂದರೆ ತನ್ನ ದಿನನಿತ್ಯದ ಬದುಕಿನಲ್ಲಿ ಅವು ನೀಡುವ ಕಾಣಿಕೆಯನ್ನು ಮರೆಯದೆ ತಮ್ಮಂತೆಯೇ ಅವುಗಳಿಗೆ ಜೀವನವಿದೆ ಎಂದು ಕೃತಜ್ಞತಾ ಭಾವದಲ್ಲಿ ಸ್ಮರಿಸುತ್ತಾರೆ. ಪೋಷಿಸುತ್ತಾರೆ. ಸಾಕುತ್ತಾರೆ. ನಮಿಸುತ್ತಾರೆ. ಬಹುಪಾಲು ಜನಪದರು ಕೃಷಿಕರಾಗಿರುವುದರಿಂದ ಕೃಷಿಗೆ ನೆರವಾಗುವ ಬಸವ(ಎತ್ತು)ನೊಂದಿಗೆ ವಿಶೇಷವಾಗಿ ತಮ್ಮದೇ ಆದ ಭಾವಲೋಕವನ್ನು ಜನಪದರು ಸೃಜಿಸಿದ್ದಾರೆ.

ಪ್ರಕೃತಿ, ಭೂಮಿ, ಮಳೆ, ದೇವರು, ಪ್ರಾಣಿ ಪಕ್ಷಿ ಮುಂತಾದವುಗಳು ಜನಪದರ ಗ್ರಹಿಕೆಗೆ ಬರುವುದಾದರೆ ಅವು ಮನುಷ್ಯನ ಪ್ರಜ್ಞಾವಲಯವನ್ನು ಪ್ರವೇಶಿಸುವುದು ಎಂದರ್ಥ. ಹಾಗೆಂದರೆ ಇವು ತಮ್ಮದೇ ಸಮೂಹದಲ್ಲಿ ಸಾಧ್ಯವಿಲ್ಲದ, ಮಾನವ ಸಂಸ್ಕೃತಿಯಲ್ಲಿ ಸಾಧ್ಯವಿರುವ ವ್ಯಕ್ತಿತ್ವವನ್ನು ಪಡೆಯುವುದು ಜೊತೆಗೆ ಭಿನ್ನ ಸಂಸ್ಕೃತಿಯಾಗುವುದು. ಹೊರಗೆ ಸಾಮಗ್ರಿ ಸ್ವರೂಪ ಮಾತ್ರವಾಗಿದ್ದ ಮಳೆ, ಪ್ರಕೃತಿ, ಭೂಮಿ, ದೇವರು, ಪ್ರಾಣಿಪಕ್ಷಿ ಇವು ಮಾನವ ಪ್ರಜ್ಞೆಯಲ್ಲಿ ದಾಖಲಾಗುತ್ತವೆ. ಅದು ಯಾವಾಗ ಅಂದರೆ, "ಮಾನವನ ಸಾಂಸ್ಕೃತಿಕ ದಾಖಲೆಗಳಾದ ಹುಟ್ಟು, ನಾಮಕರಣ, ಸಂಬಂಧ, ಸಾವು ಮುಂತಾದ ಆಚರಣೆಗಳಲ್ಲಿ ಆಶಯವಾಗಿ ಬರುವುದು. ಇವು ಆಶಯವಾಗುವುದನ್ನೇ ಅಭಿವ್ಯಕ್ತಿ ಎಂದು ಕರೆಯುವುದು". (ಹಿ. ಶಿ. ರಾಮಚಂದ್ರೇಗೌಡ (ಲೇ.) ಜನವರಿ ೨೦೦೧, ಪು–೬೪) ಜನಪದ ನಂಬಿಕೆ, ನಡವಳಿಕೆ, ಆಚಾರ–ವಿಚಾರ, ಸಾಹಿತ್ಯ, ಭಾಷೆ ಇವೆಲ್ಲ ಜನಪದರ ಆಶಯಗಳ ಅಭಿವ್ಯಕ್ತಿಗಳು ಆದುದರಿಂದ ಜನಪದರು ಹೊಂದಿರುವ ಮಾನವೇತರ ಸಂಬಂಧಗಳನ್ನು ಅಲ್ಲಗಳೆಯುವಂತಿಲ್ಲ.

ಜನಪದರು ನಿಸರ್ಗ ಮತ್ತು ಜೀವ ಜಗತ್ತಿನೊಂದಿಗೆ ಅಚಲ ನಂಬಿಕೆ ಇಟ್ಟುಕೊಂಡಿದ್ದಾರೆ. ಅವರಿಗೆ ಮಳೆ, ಭೂಮಿ, ಎತ್ತು, ಬೆಳೆ, ಗಾಳಿ ಮೊದಲಾದವುಗಳಲ್ಲಿ ನಂಬಿಕೆ. ನೆಲ ಸಲಹುವ ತಾಯಿ, ಜಲ ಜೀವದಾಯಿ ಎಂಬ ನಂಬಿಕೆಯಿಂದಲೇ ತಮ್ಮ ದೈನಂದಿನ ಜೀವನಕ್ಕೆ ಬೇಕಾದ ವಸ್ತುಗಳನ್ನು, ಪ್ರಾಣಿಗಳನ್ನು ಬಳಸುತ್ತ ಬಂದಿದ್ದಾರೆ. ಅಂತೆಯೇ ಅವುಗಳನ್ನು ತಮ್ಮ ಜೀವನದ ಅವಿಭಾಜ್ಯ ಅಂಗಗಳೆಂದು ನಂಬಿದ್ದಾರೆ. ಪ್ರಕೃತಿಯಲ್ಲಿನ ಮರ, ಕಂಬ, ಕಲ್ಲುಗಳನ್ನು ಬದುಕಿಗೆ ನೆರವಾಗುವ ಎತ್ತು, ಪಶು, ಸಾಕುಪ್ರಾಣಿಗಳನ್ನು, ಸೃಷ್ಟಿಕಾರ್ಯಕ್ಕೆ ನೆರವಾದ ನೀರು, ಮಳೆ, ಭೂಮಿಯನ್ನು ಹೆಣ್ಣುಮಕ್ಕಳ

ನಿತ್ಯ ಜೀವನದಲ್ಲಿ ಉಪಯೋಗವಾಗುವ ಮೊರ, ಒನಕೆ, ಬೀಸುವಕಲ್ಲುಗಳನ್ನು ಗಂಡಸರ ನಿತ್ಯ ಜೀವನದಲ್ಲಿ ಒಕ್ಕಲುತನಕ್ಕೆ ನೆರವು ನೀಡುವ ರಂಟೆ, ಕುಂಟೆ, ಕೂರಿಗೆ, ಬಂಡಿಗಳನ್ನು ಒಂದಲ್ಲ ಒಂದು ಕಾರಣದಿಂದ ಸ್ಮರಿಸಿ ಕೃತಜ್ಞತೆಯನ್ನು ಅರ್ಪಿಸುತ್ತಾರೆ. ಜನಪದರು ಅವುಗಳೊಂದಿಗೆ ಒಂದು ವಿಶೇಷ ಬಾಂಧವ್ಯವನ್ನು ಹೊಂದಿದ್ದಾರೆ.

ಪಂಚಭೂತಗಳಾದ ಅಗ್ನಿ, ವಾಯು, ವರುಣ, ಭೂಮಿ ಮತ್ತು ಆಕಾಶಗಳನ್ನು ಸಾಕಷ್ಟು ಹಿಂದಿನಿಂದಲೂ ಮಾನವರು ಗುರುತಿಸುತ್ತ ಬಂದಿದ್ದಾರೆ. ಪಂಚಭೂತಗಳನ್ನು ಸಹ ಜನಪದರು ತಮ್ಮ ಬದುಕಿನ ಮೂಲ ನೆಲೆ ಸೆಲೆಯೆಂದು ಪೂಜ್ಯ ಭಾವನೆಯಿಂದ ಕಾಣುತ್ತಾರೆ. ಹಬ್ಬ-ಹರಿದಿನಗಳಲ್ಲಿ ಇಲ್ಲವೇ ಯಾವುದಾದರೊಂದು ನೆಪದಲ್ಲಿ ಪಂಚಭೂತಗಳನ್ನು ಸ್ಮರಿಸಿ ಪೂಜಿಸುತ್ತಾರೆ. ಅಗ್ನಿ, ವಾಯು, ವರುಣ, ಭೂಮಿ ಮತ್ತು ಆಕಾಶ ಇವು ಪುರಾಣದಲ್ಲಿ ದಾಖಲಾಗಿರುವ ಪಂಚಭೂತಗಳಾಗಿವೆ. ಇವು ಇಂದ್ರನ ಒಡ್ಡೋಲಗದ ದೇವತೆಗಳಾದ್ದರಿಂದ ನಾವು ಸ್ಮರಿಸಬೇಕೆಂಬ ಕಲ್ಪನೆ ಜನಪದರಲ್ಲಿ ಇಲ್ಲ. ತಮಗೆ ನೆರವಾದ ಸಕಲ ಚರಾಚರಗಳನ್ನು ಗೌರವಿಸುವುದು ಜನಪದರ ಸಂಸ್ಕೃತಿ. ಆದ್ದರಿಂದ ಸ್ಮರಣೆ, ಪೂಜೆಯು ಸಂಪ್ರದಾಯವಾಗಿ ಬಂದಿರಬಹುದು.

ಆಧುನಿಕತೆ ಇಂದು ಜನಜೀವನದ ಮೇಲೆ ಹೆಚ್ಚು ಪ್ರಭಾವ ಬೀರಿದೆ. ಪ್ರಕೃತಿಯಿಂದ ಬೇರ್ಪಟ್ಟ ಮಾನವನ ಬದುಕು ರೂಪುಗೊಳ್ಳುತ್ತದೆ. ಕೃತಕ ವಾತಾವರಣ ಉಂಟಾಗುತ್ತಿದೆ. ಪ್ರಾಣಿ, ಪಕ್ಷಿ, ಪರಿಸರದೊಂದಿಗಿನ ಒಡನಾಟದಿಂದ ಜನರು ದೂರವಾಗುತ್ತಿದ್ದಾರೆ. ಕಾಡಿನ ನಾಶದಿಂದ, ನಗರೀಕರಣದಿಂದ ಅಪೂರ್ವ ಸಂಸ್ಕೃತಿಯ ಮೇಲೆ ಸಾಕಷ್ಟು ಪರಿಣಾಮ ಬೀರುತ್ತಲಿವೆ. ಅದನ್ನು ಬಳಸಿಕೊಳ್ಳುವ ಪ್ರಯತ್ನವನ್ನು ಯಾರೂ ಮಾಡಿದಂತೆ ತೋರುತ್ತಿಲ್ಲ. ನಗರಾಕರ್ಷಣೆಯತ್ತ ಚಿತ್ತ ಹರಿದು ಗ್ರಾಮೀಣ ಸಂಸ್ಕೃತಿ ಇಲ್ಲವಾಗುತ್ತಿದೆ. ಕೋಗಿಲೆಯ ದನಿ, ಗುಬ್ಬಿಯ ಗೂಡು, ಹಸು ಕರುವಿನ ಕರೆ, ಎತ್ತಿನ ಗಂಟೆಯನಾದ, ಚಿಲಿಪಿಲಿ ಹಕ್ಕಿಗಳ ಕಲರವ, ಮಾರ್ದನಿಸುವ ಕಾಡುಮೃಗಗಳ ಘರ್ಜನೆ ಇವುಗಳೊಂದಿಗೆ ಮಾನವನ ಬೆಸೆದುಕೊಂಡಿದ್ದ ಬದುಕು ಆಧುನಿಕತೆಯ ನೆಪದಲ್ಲಿ ಅವುಗಳೊಂದಿಗೆ ಸಂಬಂಧವನ್ನು ಕಡಿದುಕೊಂಡಿದೆ. ಅಲ್ಲದೇ ಪ್ರಾಣಿ ಸಾಕುವ, ಪಕ್ಷಿ ಸಾಕುವ, ಸಸಿ ನೆಡುವ ಮತ್ತು ಬೆಳೆಸುವ ಸುಂದರ ಸಂಸ್ಕೃತಿಯ ಅಂತ್ಯಕ್ಕೆ ಮಾನವಕುಲವೇ ಕಾರಣವೆನಿಸಿದೆ. ಒಂದು ವೇಳೆ ಜನ-ಜಾನುವಾರು, ಪ್ರಕೃತಿಯೊಂದಿಗೆ ಒಡನಾಟ ಶುರುವಾದಲ್ಲಿ ಜನಪದರ ಬದುಕಿನ ಆದರ್ಶಗಳನ್ನು ಉಳಿಸಿಕೊಂಡಂತೆ ಜೊತೆಗೆ ಪ್ರಕೃತಿಯನ್ನು ಉಳಿಸಿ ಬೆಳೆಸಿದಂತಾಗುತ್ತದೆ.

ಮಾನವನಿಗೆ ಹಿತಕಾರಿ ಆಗಿರುವ ಪ್ರಾಣಿ, ಪಕ್ಷಿಗಳು ಜನಪದರೊಂದಿಗೆ ವಿಶೇಷ ಸಂಬಂಧ ಹೊಂದಿರುತ್ತವೆ. ನಾಯಿ, ಬೆಕ್ಕು, ಮೊಲ, ಕುದುರೆ, ಎಮ್ಮೆ ಎತ್ತು, ಹಸು, ಆನೆ, ಕುರಿ, ಗಿಳಿ, ಪಾರಿವಾಳ ಮುಂತಾದವು ಸಾಕಿದವರ ಮೇಲೆ ಬಹಳ ಪ್ರೀತಿಯಿಟ್ಟು ಕೂಗಿ ಕರೆಯುತ್ತವೆ. ಇಲ್ಲಿ ತಾವು ಸಾಕಿದ ಪ್ರಾಣಿ, ಪಕ್ಷಿಗಳೆಂಬ ಮಧುರತೆ ಮಾನವರಲ್ಲಿರುತ್ತದೆ. ಅದೇ ರೀತಿ ಪ್ರಾಣಿ ಪಕ್ಷಿಗಳು ಪ್ರೀತಿಯಿಂದ ವರ್ತಿಸಿ, ಪ್ರತಿಕ್ರಿಯಿಸಿ ಸಂತೋಷಪಡಿಸುತ್ತವೆ. ತಾವೂ ಸಂತೋಷವನ್ನು ಅನುಭವಿಸುತ್ತವೆ. ತಮ್ಮ

ದಿನನಿತ್ಯದ ಬದುಕಿಗೆ ನೆರವಾದ ಭೌತಿಕ ವಸ್ತುಗಳು ಮತ್ತು ಪ್ರಾಣಿಪಕ್ಷಿಗಳ ಜೊತೆಗೆ ಜನಪದರು ಹೊಂದಿರುವ ಸಂಬಂಧವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಮಾನವೀಯ ಸಂಬಂಧಗಳ ಹೊರತಾಗಿ ಮಾನವೇತರ ಸಂಬಂಧಗಳು ಕಂಡುಬರುತ್ತವೆ. ಮಾನವನು ಕೇವಲ ಮಾನವರೊಂದಿಗೆ ಬಾಂಧವ್ಯ ಬೆಳೆಸಿಲ್ಲ. ತನ್ನ ದಿನನಿತ್ಯದ ಬದುಕಿಗೆ ಸಹಾಯವಾಗುವ ಭೌತಿಕ ವಸ್ತುಗಳೊಡನೆ ಭಾವನಾತ್ಮಕ ಸಂಬಂಧ ಹೊಂದಿದ್ದಾನೆ. ಇರುವರೆಗೆ ಹಲವು ವಿದ್ವಾಂಸರು ಕಂಡಿಕೊಂಡಿರವ ನೆಲೆಯಲ್ಲಿ ಚಿಂತಿಸುವ ಪ್ರಯತ್ನ ಇದಾಗಿದೆ. ಗ್ರಾಮೀಣ ಪರಂಪರೆಯಲ್ಲಿ ಜನರು ದೇವರು, ಭೂಮಿ, ಮಳೆ, ಎತ್ತುಗಳೊಂದಿಗೆ ಭಾವನಾತ್ಮಕ ಸಂಬಂಧವನ್ನು ಹೊಂದಿದ್ದಾರೆ ಎಂಬುದನ್ನು ಪರಿಚಯಿಸುವ ಪ್ರಯತ್ನವೆಲ್ಲ ನಡೆದಿದೆ. ಹಾಗಾಗಿ ಮಾನವೇತರ ಸಂಬಂಧಗಳಲ್ಲಿ ಭೂಮಿ, ಎತ್ತು, ಮಳೆ, ದೈವ ಹಾಗೂ ಪಶುಪಕ್ಷಿಗಳೊಂದಿಗೆ ಜನಪದರು ಹೊಂದಿರುವ ಸಂಬಂಧಗಳನ್ನು ವಿಶ್ಲೇಷಿಸಲಾಗಿದೆ.

### ೫.೧ ಎತ್ತು ಮತ್ತು ಜನಪದರ ಸಂಬಂಧ

ಭಾರತವು ಹಳ್ಳಿಗಳಿಂದ ಕೂಡಿದ ದೇಶ. ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ರೈತರಿದ್ದಾರೆ. ನಮ್ಮ ದೇಶದ ರೈತರು ಇಂದಿನವರಲ್ಲ. ಅನೇಕ ಶತಮಾನಗಳಿಂದ ಬೆಳೆಗಳನ್ನು ಬೆಳೆದು ಗಟ್ಟಿನೆಲೆಯನ್ನು ಕಂಡುಕೊಂಡವರು. ಬಹುತೇಕ ರೈತರು ಜನಪದ ಸಂಸ್ಕೃತಿಯ ಪ್ರತೀಕ. ರೈತರೆಂದು ಹೇಳುವಲ್ಲಿ ಯಾವುದೇ ಜಾತಿಭೇದವಿಲ್ಲ. ರೈತರ ಜೀವನದಲ್ಲಿ ತಿರುಳಿದೆ. ಸಾಕಷ್ಟು ಸಂಸ್ಕೃತಿ ಆಚರಣೆಗಳಿವೆ. ಅವರದು ಬೆವರಿನ ಕೆಲಸ. ನಿತ್ಯದ ಕಾಯಕದಲ್ಲಿ ಹಾಡುವುದೆಂದರೆ ಬಲು ಇಷ್ಟ. ಜನಪದ ಕವಿಗಳಿಗೆ ಬರವಣಿಗೆ ಕೌಶಲ್ಯ ಇಲ್ಲದಿದ್ದರೂ ಸಂಸ್ಕೃತಿಯ ಸಾರವನ್ನುಂಡು ಹಾಡುಗಳನ್ನು ರಚಿಸಿದ್ದಾರೆ.

ಒಕ್ಕಲುತನವೇ ಮೂಲ ಕಾಯಕವಾದ ದೇಶದ ಆಧಾರಸ್ತಂಭವೇ ರೈತ. ಅವನ ಜೀವನದ ಸೊಗಡು ಹಳ್ಳಿಯ ಸಂಸ್ಕೃತಿಯ ಪ್ರತೀಕ. ಕಾಯಕದಲ್ಲಿ ಶ್ರದ್ಧೆಯಿಟ್ಟು ದುಡಿಯುವ ರೈತರಾದ ಜನಪದರಿಗೆ ಊಳುವ ಎತ್ತುಗಳೂ ನಿಜವಾದ ಗೆಳೆಯರು. ಕಾಯಕದೊಡಗೂಡಿ ಅವರು ಎತ್ತುಗಳೊಂದಿಗೆ ಸುಖ–ದುಃಖ, ನೋವು–ನಲಿವುಗಳನ್ನು ಹಂಚಿಕೊಳ್ಳುತ್ತಾರೆ. ಬದುಕಿನ ಬವಣೆಗಳನ್ನು ಎತ್ತುಗಳೊಂದಿಗೆ ಕಳೆಯುತ್ತಾರೆ. ಕೆಲವೊಂದು ಸಂದರ್ಭದಲ್ಲಿ ತಮಗೊದಗಿದ ಕಷ್ಟವನ್ನು ಯಾರೊಂದಿಗೂ ಹಂಚಿಕೊಳ್ಳದ ರೈತ ಬಸವನೊಂದಿಗೆ ಹಂಚಿಕೊಳ್ಳುತ್ತಾರೆ.

ಜನಪದ ಸಂಸ್ಕೃತಿ ಮೂಲತಃ ಕೃಷಿ ಪ್ರಧಾನವಾದುದು. ಕೃಷಿಗೆ ಸಹಕಾರಿಯಾಗಿದ್ದ ಮೂಕಪ್ರಾಣಿಗಳು ಜನಪದರ ಸಹಜೀವನದ ಸಂಗಾತಿಗಳಾಗಿದ್ದವು. ಎತ್ತುಗಳೆಂದರೆ ಜನಪದರಿಗೆ ಕೇವಲ ಪ್ರಾಣಿಗಳಲ್ಲ. ಕಾಯಕದ ಬದುಕಿನ ಸಂಗಾತಿಗಳು. ಎತ್ತು ಬಸವನ ಸಂಕೇತ. ರೈತನಿಗೆ ಅನುಕೂಲವಾಗಲೆಂದೇ ಕೈಲಾಸದಿಂದ ಬಂದಿಳಿದ ಶಿವಗಣಕ್ಕೆ ಸೇರಿದ ನಂದಿಯೇ ಎತ್ತು ಎಂದು ಜನಪದರ ನಂಬಿಕೆ. ನಂದಿ ಶಿವನ ವಾಹನನೆಂದು ಪುರಾಣಗಳಿಂದ ತಿಳಿದುಕೊಂಡ ಜನಪದರಿಗೆ ಎತ್ತು ಗೆಳೆಯನಷ್ಟೇ ಅಲ್ಲ. ಸಾಕ್ಷಾತ್ ದೈವವೂ ಕೂಡ. ಇಂದಿಗೂ ಹಬ್ಬಹರಿದಿನಗಳಲ್ಲಿ ಎತ್ತುಗಳನ್ನು ರೈತರು

ಪೂಜಿಸುತ್ತಾರೆ. ಕಾಯಕದ ಬದುಕಿಗೆ ಬೆನ್ನೆಲುಬಾಗಿರುವ ಎತ್ತನ್ನು ಬಸವಣ್ಣ ಎಂದು ಕರೆಯುತ್ತಾರೆ. ಗುಡಿ-ಗುಂಡಾರಗಳನ್ನು ನಿರ್ಮಿಸಿ ಜಾತ್ರೆ ಉತ್ಸವಗಳನ್ನು ಮಾಡಿ ಬಸವನನ್ನು ಆರಾಧಿಸುತ್ತಾರೆ.

ಎತ್ತು ಎನಬಹುದೇ ಎಡೆಜೋರಿ ಬಸವಾನ
ಸುತ್ತೇಳು ಲೋಕ ಸಲುಹೋ । ಬಸವಾನ
ಸತ್ವ ಮರೆಯುವುದು ಧರೆಯಲ್ಲಿ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೪೩, ಪು-೩೪)

ಇಡೀ ಭೂಮಂಡಲದಲ್ಲಿಯೇ ಬಸವನ ಸತ್ಯವುಳ್ಳ ಮಹಿಮೆ ಹೆಸರಾಗಿದೆ. ಭೂಮಿಯನ್ನಷ್ಟೇ ಅಲ್ಲ ಸುತ್ತಲೂ ಇರುವ ಏಳು ಲೋಕವನ್ನು ಸಾಕುವ, ಸಲುಹುವ ಶಕ್ತಿ ಪಡೆದಿದ್ದಾನೆ. ಇಂತವನನ್ನು ಎತ್ತು ಎಂದು ಕರೆಯಬಹುದೇ? ಆಗದು ಬದಲಾಗಿ ಬಸವನೆಂದು ಕರೆದರೆ ಉತ್ತಮವೆಂಬುದು. ಜನಪದ ರೈತನೊಬ್ಬನ ಅಭಿವ್ಯಕ್ತಿಯಿಲ್ಲಿ ಕಾಣುತ್ತದೆ. ಸಹಜವೂ ಸುಂದರವೂ ಆಗಿರುವ ಜನಪದ ಗೀತೆಗಳಲ್ಲಿ ಇಂತಹ ಸಾಕಷ್ಟು ಬಾಂಧವ್ಯಗಳ ಉದಾಹರಣೆಗಳಿವೆ. ನಿತ್ಯ ಜೀವನದಲ್ಲಿ ಕಣ್ಣಿಗೆ ಕಾಣುವುದನ್ನು ಪದಗಳಲ್ಲಿ ಕಟ್ಟುವ ಕಲೆ ಜನಪದರಿಗೆ ಇದೆ. ಹೊಲದಲ್ಲಿ ಉಳುಮೆ ಮಾಡುವಾಗ, ಕಣದಲ್ಲಿ ಹಂತಿ ಕಟ್ಟಿದಾಗ, ಬಂಡಿ ಹೊಡೆಯುವಾಗ ಜನಪದರು ಎತ್ತುಗಳೊಂದಿಗೆ ಮಾತನಾಡುತ್ತಾರೆ.

ಬೆವರಿನ ಆಳಾಗಿ ದುಡಿಯುವ ಎತ್ತು ಒಕ್ಕಲಿಗರ ಸರ್ವಸ್ವ. ಎತ್ತಿನ ಸಹಾಯದೊಂದಿಗೆ ಜನಪದರು ಕಾಡು-ಮೇಡುಗಳನ್ನು ಒಂದು ಮಾಡಿ, ಭೂಮಿಯನ್ನು ಹಸನಗೊಳಿಸಿ ಫಸಲನ್ನು ಪಡೆದು ಬೀಗುತ್ತಾರೆ. ಈ ಎಲ್ಲ ಸಂದರ್ಭಗಳಲ್ಲೂ ತಮಗೆ ಹೆಗಲುಕೊಟ್ಟು ದುಡಿದ ಬಸವನಿಗೆ ಕೃತಜ್ಞನಾಗಿರುತ್ತಾರೆ. ಸುಗ್ಗಿಯು ಬಂದಾಗ ತಾವು ಹಿಗ್ಗನು ಅನುಭವಿಸಿ, ಎತ್ತುಗಳಿಗೆ ಪೂಜೆಯಿಂದ ಸ್ಮರಿಸುತ್ತಾರೆ. ಎಲ್ಲ ಕಾರ್ಯಗಳಲ್ಲಿಯೂ ಭಾಗಿಯಾಗುವ ಎತ್ತುಗಳು ಯಾವಾಗಲೂ ರೈತನಿಗೆ ಕಣ್ಮುಂದೆಯೇ ಇರಬೇಕು. ಆದ್ದರಿಂದಲೇ ಹಳ್ಳಿಗಳಲ್ಲಿ ದನದ ಕೊಟ್ಟಿಗೆಗಳು ಮನೆ ಮುಂಭಾಗದಲ್ಲಿಯೇ ಇರುತ್ತವೆ. ಇಲ್ಲವೇ ತಾವು ಮಲಗುವ ಪಡಸಾಲೆಯೆದುರೇ ಕೊಟ್ಟಿಗೆಯನ್ನು ಮಾಡಿರುತ್ತಾರೆ. ಕಾಲಕಾಲಕ್ಕೆ ಮೇವನ್ನು ಹಾಕುವುದು, ಸಗಣಿಯನ್ನು ತೆಗೆಯುವುದು ಹಾಗೂ ಮೈ ತಿಕ್ಕುವುದರ ಮೂಲಕ ಎತ್ತುಗಳನ್ನು ಜತನದಿಂದ ನೋಡಿಕೊಳ್ಳುತ್ತಾರೆ. ಏಕೆಂದರೆ ಒಕ್ಕಲುತನದಲ್ಲಿ ಎತ್ತು ತಮಗಿಂತಲೂ ಹೆಚ್ಚು ಶ್ರಮದಿಂದ ದುಡಿಯುವುದೆಂಬುದು ಜನಪದರಿಗೆ ತಿಳಿದಿದೆ.

ಭೂಮಿ ಹುಟ್ಟದ ಮೊದಲು ಭೂಮಿ ಕಟ್ಟದ ಮೊದಲು
ಭೂಪ ಹುಟ್ಟೀದ ಬಸವಯ್ಯ । ಮ್ಯಾಗೀನ
ಶಿವಗೇಳು ದಿನಕ ಹಿರಿಯಾನ। (ವಿನೀತ ರಾಮಚಂದ್ರರಾಯ, ೧೯೬೦, ಪು-೧೩೫)

ಜನಪದರು ತಮ್ಮ ಎತ್ತುಗಳನ್ನು ಬಸವಣ್ಣ ಎಂದು ಕರೆದಿದ್ದಾರೆ. ಬಸವಣ್ಣ ಶಿವಗಿಂತಲೂ ಹಿರಿಯನಾದವನು ಎಂದು ಸಾರಿದ್ದಾರೆ. ಭೂಮಿ ಸೃಜಿಸಿದ ಮೇಲೆ ಬಸವಭೂಪ ಹುಟ್ಟಿದ. ಶಿವಗಿಂತಲೂ ಆತ ಏಳು ದಿನಕ್ಕೆ ಹಿರಿಯನಾದನೆಂದು ಹಾಡಿನಲ್ಲಿ ತಿಳಿಸಿದ್ದಾರೆ. ಅವಿದ್ಯಾವಂತರಾದ ಜನಪದರು ಪುರಾಣ ಕಥೆಗಳನ್ನು ತಿಳಿದವರು. ಹಾಗಾಗಿ ಸಮಾಜದಲ್ಲಿ ರಚನೆಯಾದ ಗೀತೆಗಳಲ್ಲಿ

ಹೆಚ್ಚಿನದಾಗಿ ಸತ್ಯವೇ ಕಂಡುಬರುತ್ತದೆ. ರೈತ ದೇವರಿಗಿಂತಲೂ ಎತ್ತಿನ ಮೇಲೆ ಸಾಕಷ್ಟು ಭಕ್ತಿ, ಪ್ರೀತಿಗಳನ್ನು ಹೊಂದಿದವನು. "ಜೀವನದ ಮೂಲಮಂತ್ರವೇ ಸರ್ವಸುಖ-ಸಂತೋಷ ಆನಂದ. ಇವುಗಳನ್ನು ಅರ್ಪಿತ ಭಾವದಿಂದ ಮನಸೋ ಧಾರೆ ಎರೆದವರು ಇಬ್ಬರು. ಒಂದು ಬಸವಣ್ಣ. ಇನ್ನೊಂದು ಬಸವ (ನಂದಿ). ಎತ್ತು ಎಂಬ ಪರಿಕಲ್ಪನೆಯೇ ಜನಪದರಲ್ಲಿ. ಎತ್ತಿನಲ್ಲಿಯೂ ಬಸವಣ್ಣನ ಗುಣ ಕಂಡು ಎತ್ತನ್ನು ಬಸವನಾಗಿ ಕಂಡರು. ಎತ್ತು ಹಾಗೂ ಬಸವ ಇವು ಕೇವಲ ಹೆಸರುಗಳಲ್ಲ, ಪದಗಳಲ್ಲ. ಇವುಗಳು ಮಂತ್ರವೆಂದರಿತರು. ಮಂತ್ರದಲ್ಲಿರುವುದು ಒಂದೇ ಶಕ್ತಿ ಅದು ಸರ್ವರ ಉನ್ನತಿ ಬಯಸುವುದು." (ರಾಜೇಂದ್ರ ಯರನಾಳೆ, ೨೦೦೬, ಪ್ರಸ್ತಾವನೆ) 'ಎತ್ತಿಲ್ಲದವನಿಗೆ ಎದೆ ಇಲ್ಲ' ಎಂಬ ಗಾದೆಯಂತೆ ಎತ್ತನ್ನು ಹೊಂದದವರು ಬಡವರೆಂದೇ ಪರಿಗಣಿಸಲಾಗುತ್ತಿತ್ತು. ಒಂದು ವೇಳೆ ಮನೆಯಲ್ಲಿ ಎತ್ತುಗಳಿದ್ದರೆ ಅವುಗಳಿಂದ ಬೇಸಾಯ ಮಾಡಿ, ಆಹಾರಧಾನ್ಯಗಳನ್ನು ಪಡೆಯಬಹುದೆಂಬುದು ಜನಪದರ ನಂಬಿಕೆ.

ತುಂಬೀದ ಹೊಳಿಯಾಗ ಕೊಂಬ ಕಾಣಿಸತಾವ
ಬಂಗಾರದಿನಿಯ ಬಸವಣ್ಣ । ಬರುವಾಗ
ತುಂಬಿದ ಗಂಗೆ ತುಳಿಕ್ಯಾಳ । (ವಿನೀತ ರಾಮಚಂದ್ರರಾಯ, ೧೯೬೦, ಪು-೧೩೫)

ಮೇಲಿನ ಹಾಡಿನಲ್ಲಿ ಬಸವಣ್ಣನನ್ನು ಮನದುಂಬಿ ಹಾಡಿದ ಪ್ರಸಂಗವಿದೆ. ಎತ್ತೆಂದರೆ ಜನಪದರಿಗೆ ಎಲ್ಲಿಲ್ಲದ ಖುಷಿ. ಹಬ್ಬಹರಿದಿನಗಳಲ್ಲಿ ರೈತನು ಎತ್ತುಗಳಿಗೆ ವಿಶೇಷ ಪೂಜೆ ಸಲ್ಲಿಸುತ್ತಾನೆ. ಕಾರಹುಣ್ಣಿಮೆ, ದೀಪಾವಳಿ ಪಾಡ್ಯದಂದು ಕರ್ನಾಟಕದ ಕೆಲವೊಂದು ಭಾಗಗಳಲ್ಲಿ ಎತ್ತುಗಳ ಮೆರವಣಿಗೆ ಮಾಡುತ್ತಾರೆ. ಎತ್ತುಗಳಿಗೆ ಕೊಡೆಣಸು, ಝೂಲಾ, ಗಂಟೆಸರಗಳನ್ನು ಹಾಕಿ ಕೊಂಬುಗಳಿಗೆ ಬಣ್ಣ ಹಚ್ಚಿ, ನೊಗಗಳನ್ನು ಸಿಂಗರಿಸಿ ಮೆರವಣಿಗೆ ಮಾಡುವುದು ಇಂದಿಗೂ ಹಳ್ಳಿಗಳಲ್ಲಿದೆ. ಮೂಕಪ್ರಾಣಿಗಳಾದರೂ ಎತ್ತುಗಳಲ್ಲಿಯೂ ಸಾಕಿದೊಡೆಯನಿಗೆ ನಮ್ರತೆ ಕಂಡುಬರುತ್ತದೆ. ಸುಗ್ಗಿಯಲ್ಲಿಯೂ ಕಣದಲ್ಲಿ ರಾಶಿ ಮಾಡಿ, ಎತ್ತಿಗೆ ಸಿಂಗಾರ ಮಾಡಿ ಕಣಜಕ್ಕೆ ಧಾನ್ಯ ತುಂಬಿಸಿಕೊಳ್ಳುತ್ತಾನೆ. ಹೀಗೆಯೇ ಉತ್ತುವುದು, ಬಿತ್ತುವುದು, ಒಕ್ಕುವುದು ಈ ಮೂರು ಕಾರ್ಯಗಳಲ್ಲಿ ನೆರವು ನೀಡಿರುವ ಬಸವಣ್ಣಗೆ ಏನಾದರೂ ತೊಂದರೆಯಾದರೆ ಆತ ಸಹಿಸಿಕೊಳ್ಳಲಾರ. ಒಂದೊಮ್ಮೆ ಸಾಕಿದೆತ್ತು ಸತ್ತರೆ, ಮನುಷ್ಯರಂತೆಯೇ ಎತ್ತಿಗೂ ಸಹ ಕ್ರಿಯಾಕರ್ಮಗಳನ್ನು ಮಾಡಿದ ಸಂಗತಿಗಳು ಇವೆ.

ಹುಟ್ಟಿನಿಂದ ಸಾವಿನವರೆಗೂ ಜನಪದರ ಬದುಕಿನ ಜೀವಾಳವೆಂಬಂತೆ ಎತ್ತುಗಳು ಕಾರ್ಯನಿರ್ವಹಿಸುತ್ತವೆ. 'ಕರಿಯೆತ್ತ ಕಾಮಣ್ಣ ಬಿಳಿಯೆತ್ತ ಭೀಮಣ್ಣ'ನೆಂದು ಹೆಸರಿಟ್ಟು ಬೆಳೆಸುವಷ್ಟು ಭಾವಜೀವಿ ರೈತ. ಶಿವರಾಮ ಕಾರಂತರ ಚೋಮನ ದುಡಿ ಕಾದಂಬರಿಯ ನಾಯಕ ಚೋಮನಿಗೆ ಅಡವಿಯಲ್ಲಿ ಸಿಗುವ ಎರಡು ಹೋರಿಗಳು ಆತನಿಗೆ ರೈತನಾಗುವ ಬಯಕೆಯನ್ನು ಹುಟ್ಟಿಹಾಕುತ್ತವೆ. ಆತನು ಬಹುಪ್ರೀತಿಯಿಂದ ತನ್ನ ಕನಸಿಗೆ ನೀರೆರೆಯುವಂತೆ ಅವುಗಳನ್ನು ಸಾಕುತ್ತಾನೆ. ಮುಂದೆ ತನ್ನಾಸೆ ಈಡೇರದಿದ್ದಾಗ ಒಡೆಯನ ದುಷ್ಟ ಆಸೆಯು ಎತ್ತುಗಳ ಮೇಲೆ ಇರುವುದರಿಂದ ತನ್ನ ಎತ್ತುಗಳು ಒಡೆಯನಲ್ಲಿ ಕಷ್ಟಪಡುವುದನ್ನು ನೋಡುವುದು ಬೇಡವೆಂದು ಅವುಗಳನ್ನು ಕಾಡಿಗಟ್ಟುತ್ತಾನೆ. ಹೀಗೆ

ಸಾಕಿದೆತ್ತಿನ ಮೇಲೆ ಇಟ್ಟ ಪ್ರೀತಿ, ಕಾಳಜಿ ಜನಪದರಲ್ಲಿಯೂ ವ್ಯಕ್ತವಾಗುತ್ತವೆ. ಇಂತಹ ಅನೇಕ ಸಂಗತಿಗಳನ್ನು ಜನಪದರಲ್ಲಿ ಕಾಣುತ್ತೇವೆ.

ಕಸವು ಹೊಡೆದ ಕೈಯು ಕಸ್ತೂರಿ ನಾತಾವ
ಬಸವಣ್ಣ ನಿನ್ನ ಸಗಣೀಯ । ಬಳೆದ ಕೈ
ಎಸಳ ಯಾಲಕ್ಕಿ ಗೊನಿನಾತ । (ವಿನೀತ ರಾಮಚಂದ್ರರಾಯ, ೧೯೬೦, ಪು-೩೬)

ಇಲ್ಲಿ ಉತ್ತಿ ಬಿತ್ತುವ ಮಂತ್ರ, ಬಿತ್ತಿ ಬೆಳೆಯುವ ಮಂತ್ರ ಒಂದು ಒಕ್ಕಲುತನಕ್ಕೆ ಸಂಬಂಧಿಸಿ ನೆಲ ಉತ್ತಿ-ಬಿತ್ತಿ ಬೆಳೆಯುವುದೊಂದಾದರೆ, ಮನವೆಂಬ ಭಾವನೆಗೆ ಉತ್ತಿ ಬಿತ್ತಿ ಸರ್ವರೇಳಿಗೆಯ ಬೆಳೆಯುವ ಶಿವಮಂತ್ರ ಮತ್ತೊಂದಾಗಿದೆ. ಮೊದಲನೆಯದಕ್ಕೆ ಮೂಲ ಎತ್ತಾದರೆ ಎರಡನೆಯದಕ್ಕೆ ಮೂಲ ಬಸವಣ್ಣನಾಗಿದ್ದಾನೆ. ಹೀಗಾಗಿ ಜನಪದರು ಇವರೀರ್ವರನ್ನು ಬೇರೆ, ಬೇರೆಯಾಗಿ ಕಾಣದೇ ೧೨ನೇ ಶತಮಾನದಲ್ಲಿ ಸರ್ವರೇಳಿಗೆಗಾಗಿ ದುಡಿದ ಬಸವನೆ ಇಂದು ಎತ್ತಿನ ರೂಪದಲ್ಲಿ ದುಡಿಯುವನೆಂಬ ಭಕ್ತಿಭಾವ ತುಂಬಿಕೊಂಡಿದ್ದಾರೆ. ಬಸವಣ್ಣ ಹೆಸರು ಕೇವಲ ಮಾನವ ಪ್ರಾಣಿಯಾಗಿರದೆ ಆ ವ್ಯಕ್ತಿಯ ಸಂಪೂರ್ಣ ಕ್ರಿಯಾ ಕಾರ್ಯವನ್ನೊಳಗೊಂಡ ಸಾರ 'ಬಸವ' ಎಂಬ ಹೆಸರಿನಲ್ಲಿ ಕಾಣುತ್ತಾರೆ. "ಶಿವನೆ ಬಸವ, ಬಸವ ಶಿವನೇ ಎಂದು ಹಾಡುವಲ್ಲಿಯೂ ಈ ಎರಡೂ ಭಾವಗಳು ಮಂತ್ರಗಳಾಗಿ ತಾನೇ ತಾನಾಗಿ ಶಿವ-ಭಾವ ಮೇಳೈಸಿಕೊಂಡು 'ಶಿವನೆ ಬಸವ, ಬಸವ ಶಿವನೆ' ಆಗುವಂತೆ ಎತ್ತು (ನಂದಿ) ಬಸವ, ಬಸವ ಎತ್ತು(ನಂದಿ)ಯಾಗಿ ಸಮೀಕರಣಗೊಂಡಿದ್ದಾರೆ." (ರಾಜೇಂದ್ರ ಯರನಾಳೆ, ೨೦೦೬, ಪ್ರಸ್ತಾವನೆ)

ಬಸವಣ್ಣ ಬರುವಾಗ ದೆಸೆಯು ತಲ್ಲಣಿಸಿತು
ಹಸಿಯ ಕಲ್ಲೊಡೆದು ಸಿಗುರೆದ್ದು । ಇದು ನಮ್ಮ
ಬಸವಣ್ಣ ಬರುವ ಸಡಗರ । (ಎಲ್. ಗುಂಡಪ್ಪ, ೧೯೪೭, ಪು-೨೨೦)

ಬಸವನೆಂದರೆ ಎಲ್ಲಿಲ್ಲದ ಹಿಗ್ಗು ಜನಪದರಿಗೆ ಎತ್ತುಗಳನ್ನು ತಮ್ಮ ಮನೆಯ ಸದಸ್ಯನಂತೆಯೇ ಭಾವಿಸುತ್ತಾರೆ. ಮನೆಯ ಸದಸ್ಯರಿಗೆ ತೋರಿಸುವ ಪ್ರೀತಿ, ಕಾಳಜಿ ಅವುಗಳ ಮೇಲೆಯೂ ಇರುತ್ತದೆ. ಹೊಲಕ್ಕೆ ಹೊಡೆದುಕೊಂಡ ಬಂದ ಎತ್ತು ಹೊಲದಲ್ಲಿ ಸ್ವಚ್ಛಂದವಾಗಿ ಮೇವು ತಿನ್ನುತ್ತಿದೆ. ಅದನ್ನು ಗಮನಿಸಿದ ರೈತನ ವರ್ಣನೆ ಗೀತೆಯಲ್ಲಿ ಭಾವನಾತ್ಮಕವಾಗಿ ಮೂಡಿಬಂದಿದೆ. ತಮ್ಮ ಮನೆಯಲ್ಲಿನ ಆಕಳ ಕರುವಾಗಿರುವ ಬಸವನಿಗೆ ಪ್ರೀತಿಯಿಂದ ಮನೆಗೆ ಬಂದಾಗ ನಿಮ್ಮವನಾದ ಆಕಳು ಹರುಷದಿಂದ ಹಾಲು ಕುಡಿಸುತ್ತದೆಂದು ಪ್ರೀತಿಯಿಂದ ನುಡಿಯುತ್ತಾರೆ. ಮಾನವನಲ್ಲಿರುವ ತಾಯಿ-ಮಕ್ಕಳ ಪ್ರೀತಿಯೂ ದನಕರುಗಳಲ್ಲಿಯೂ ಇದೆಯೆಂದು ಜನಪದರು ಭಾವಿಸಿದ್ದಾರೆ.

ಮುಂದೆ ಹೋರಿ ಕರುವು ಬೆಳೆದು ದೊಡ್ಡದಾದ ಮೇಲೆ ಹೊಲಕ್ಕೆ ಹೂಡಲು ತರುವಾಗ ಅದರ ಅವ್ವನಾದ ಆಕಳು 'ಹೂಡಿದಾಗ ಹೊಡೆಯಬೇಡ, ಸೋಮವಾರದಂದು ಹಸುಮಗನಾಗಿ ತಿರುಗಲಿ' ಎಂದು ಹೇಳಿ ಕಳುಹಿದೆ. ಆದಕಾರಣ ಮನೆ ಹಿರಿಯನೊಬ್ಬನು ತನಗಿಂತ ಕಿರಿಯರಾದವರಿಗೆ ಬುದ್ಧಿವಾದ ಹೇಳುವಾಗ ಗೀತೆಯಲ್ಲಿ ಕಥೆಯೊಂದನ್ನು ಸೃಷ್ಟಿಸಿ ಹೇಳುವ ಪರಿ ವಿಶಿಷ್ಟವಾದದು.

ಇಂದಿಗೂ ಸಹಿತ ಸೋಮವಾರದಂದು ಜನಪದರು ಯಾವುದೇ ಕೃಷಿ ಚಟುವಟಿಕೆಗಳನ್ನು ಎತ್ತುಗಳಿಂದ ಮಾಡಿಸುವುದಿಲ್ಲ. ಸೋಮವಾರವನ್ನು ಬಸವಣ್ಣನ ದಿನವೆಂದು ಆಚರಿಸುವ ರೂಢಿ ಜನಪದರಲ್ಲಿದೆ.

ಅಡವಿಯೊಳಗೆ ಮೇಯಲು ಹೋದ ಎತ್ತು ಮನೆಗೆ ಎಂದಿನಂತೆಯೇ ಬಂದಿಲ್ಲ. ಆಗ ರೈತನ ಸಂಕಟ ಹೇಳತೀರದು. ಎಲ್ಲರಲ್ಲೂ ಆತ ಬಗೆಬಗೆಯಾಗಿ ಕೇಳುತ್ತಾನೆ. ಎತ್ತಿನ ಗುರುತುಗಳನ್ನು ಎಲ್ಲರಲ್ಲೂ ಹೇಳುತ್ತಾನೆ. ಪ್ರತಿದಿನವು ಕಾಡಿನಲ್ಲಿ ಮೇವನ್ನು ತಿಂದು ಮನೆಗೆ ಬರುತ್ತಿದ್ದ ಎತ್ತು ಬಂದಿಲ್ಲ. ಅದಕ್ಕೆ ಕೂಡುಕೊಡಿನ ಬಸವ ನನ್ನೆತ್ತು. ಅದನ್ನ ಹೂಡಿದರೂ ಬಹಳ ಚೆಂದ. ನೋಡಿದರೂ ಬಹಳ ಚೆಂದ. ಎಲ್ಲೆಗೆ ಹೋದರೂ ಎತ್ತು ಮನೆಗೆ ಬಂದೇ ಬರುತ್ತದೆ. ಜನಪದ ಕವಿಯೊಬ್ಬ ತನ್ನ ಎತ್ತಿನ ಮೇಲಿನ ಪ್ರೀತಿಯನ್ನು ಅಭಿವ್ಯಕ್ತಿಸಿದ್ದಾನೆ.

ಹತ್ತು ಸಾವಿರ್ಹದವ ಎತ್ತಿನ್ಮೇಲ್ಹೇರ್ಕೊಂಡು
ಮತ್ತೆ ಸಾವಿರ ಕೈಲಿ ಹಿಡಕೊಂಡು । ಬಂದಿವ್ನಿ
ಬಾರೋ ಬಸವಣ್ಣ ಬಯಲಿಗೆ । (ಎಸ್. ಕೆ. ಕರೀಂಖಾನ್, ೧೯೫೫, ಪು-೯೦)

ರೈತನಿಗೆ ಪ್ರತಿಯೊಂದು ಸಮಯದಲ್ಲಿ ಹೆಗಲುಕೊಟ್ಟು ದುಡಿಯುವ ಸಹಾಯಕನೆಂದರೆ ಎತ್ತು, ಒಕ್ಕಲುತನದಲ್ಲಿ ಎತ್ತುಗಳ ಪಾತ್ರ, ಒಕ್ಕಲುತನದಲ್ಲಿ ಎತ್ತುಗಳ ಪಾತ್ರ ಮಹತ್ವದ್ದು ಅದನ್ನರಿತ ಜನಪದರು ಎತ್ತುಗಳಿಗೆ ಪೂಜ್ಯಸ್ಥಾನವನ್ನು ನೀಡಿದ್ದಾರೆ. ಹಬ್ಬಹರಿದಿನಗಳಲ್ಲಿ ಎತ್ತುಗಳ ಮೈತೊಳೆದು ಸಿಂಗರಿಸಿ ಸಂತೋಷಪಡುತ್ತಾನೆ. ದೀಪಾವಳಿ, ಕಾರಹುಣ್ಣಿಮೆ, ಯುಗಾದಿಯ ಸಂದರ್ಭಗಳಲ್ಲಿ ಎತ್ತುಗಳನ್ನು ಸಿಂಗರಿಸಿ, ಪೂಜಿಸಿ ಧನ್ಯತಾಭಾವವನ್ನು ತೋರ್ಪಡಿಸುತ್ತಾನೆ.

ಎತ್ತುಗಳಿಗೆ ಕೊಡೆಣೆಸು, ಕೊರಳಗೆಜ್ಜೆ, ಕಾಲ್ಗೆಜ್ಜೆ, ಭಾಸಿಂಗ, ಹಣೆಪಟ್ಟಿ, ರೇಷ್ಮೆ ಝೂಲಾ, ಗೊಂಡೆ, ಗಲ್ಲೀಪ ಮುಂತಾದವುಗಳಿಂದ ಸಿಂಗರಿಸುತ್ತಾನೆ. ಬಸವಣ್ಣನೆಂದು ಕರೆಯುವ ಎತ್ತುಗಳನ್ನು ವರ್ಷದಲ್ಲಿ ಒವ್ಮೆಯಾದರೂ ಮೆರವಣಿಗೆ ಮಾಡುತ್ತಾನೆ. ಎತ್ತುಗಳನ್ನು ಉತ್ತಮವಾಗಿ ಸಾಕವಲ್ಲಿ ಜನಪದರಿಗೆ ಪ್ರತಿಷ್ಠೆಯ ವಿಷಯವಾಗಿದೆ. ಹಳ್ಳಿಗಳಲ್ಲಿ ನಮ್ಮ ಎತ್ತುಗಳೇ ಉತ್ತಮವಾಗಿರಬೇಕೆಂದು ಮೇವು, ಹಿಂಡಿ ಮುಂತಾದವುಗಳನ್ನು ನೀಡಿ ದಷ್ಟಪುಷ್ಟವಾಗಿ ಬೆಳೆಸುತ್ತಾರೆ.

ಸತ್ತರ ತೊಗಲಾದೆನ ಮೆಟ್ಟಿದರ ಕೆರವಾದೆನ
ಹೆಗಲ ಮ್ಯಾಲಾಡಂತ ಬಾರಕೋಲ ನಾ ಆದೆ
ಮತ್ತ್ಯಾತಕಾದೇನ ನಮ್ಮ ಜೀವ
ಕೈಲಾಸಕ (ಕಾಪಸೆ ರೇವಪ್ಪ, ೧೯೩೫, ಪು-೪೫)

ಜನಪದರಿಗೆ ಎತ್ತುಗಳು ಬದುಕಿರುವಾಗ ಮಾತ್ರ ಸಹಾಯಕ್ಕೆ ಬರುತ್ತವೆಂದು ತಿಳಿದರೆ ಅದು ಮೂರ್ಖತನದ ವಿಷಯವಾಗುತ್ತದೆ. ಸ್ವತಃ ಜನಪದರೇ ಹೇಳುವ ಹಾಗೆ 'ಬಸವನಿದ್ದರೂ ದುಡಿಮೆ, ಸತ್ತರೂ ದುಡಿಮೆ' ಸತ್ಯದ ಮಹಿಮೆಯುಳ್ಳ ಬಸವನೆಂದು ಎತ್ತಿಗೆ ಕರೆಯುವ ಜನಪದರ ಮಾತಿನಲ್ಲಿ ಸತ್ಯವಿದೆ. ಏಕೆಂದರೆ ಎತ್ತಿಗೆ ದುಡಿಯುವ ಕಾಯಕವೊಂದನ್ನು ಬಿಟ್ಟರೆ ಮತ್ತೆ ಯಾವುದು ಗೊತ್ತಿಲ್ಲ. ಆದ್ದರಿಂದ ಸತ್ಯದ ಬಸವನೆಂದು ಕರೆಯುತ್ತಾರೆ. ಎತ್ತುಗಳು ಇರುವಾಗ ನೊಗಕ್ಕೆ ಹೆಗಲುಕೊಟ್ಟು

ದುಡಿಯುತ್ತವೆ. ಅವು ಸತ್ತರೆ ಮಾದಿಗರ ಮನೆಯ ಬೆಳಕಾಗಿ ಬರುತ್ತವೆ. ಅವುಗಳ ಚರ್ಮವನ್ನು ಬೇರ್ಪಡಿಸಿ ಮಿಣಿ, ಹಗ್ಗ, ಬಾರಕೋಲು, ಪಾದರಕ್ಷೆ, ವಾದ್ಯ, ಜತ್ತಿಗೆ ಹೀಗೆ ಹಲವಾರು ರೂಪಗಳನ್ನು ಪಡೆಯುತ್ತವೆ. ಆದ್ದರಿಂದ ಇರುವಾಗಲೂ ಎತ್ತುಗಳಿಂದ ಉಪಯೋಗವಿದೆ. ಅವು ತೀರಿದ ಬಳಿಕ ಕೈಲಾಸಕ್ಕೆ ಹೋಗುತ್ತವೆ. ಅವುಗಳಿಂದ ಸಾಕಷ್ಟು ಉಪಯೋಗವಿದೆಯೆಂದು ಜನಪದರು ಎತ್ತುಗಳ ಮೇಲೆ ಇಟ್ಟ ಪ್ರೀತಿ ಅಭಿವ್ಯಕ್ತವಾಗುತ್ತದೆ.

### ೫.೨ ಭೂಮಿ ಮತ್ತು ಜನಪದರ ಸಂಬಂಧ

ಜನಪದರ ಸ್ತುತಿಯಲ್ಲಿ ಮೊದಲ ಪ್ರಾಶಸ್ತ್ಯ ಭೂದೇವಿಗೆ ಸಲ್ಲುತ್ತದೆ. ಬೇಟೆ ವೃತ್ತಿಯಿಂದ ಕೃಷಿಗೆ ಬಂದ ಮೇಲೆ ಸಂಪೂರ್ಣವಾಗಿ ಭೂಮಿಯನ್ನು ಅವಲಂಬಿಸುವುದು ಅನಿವಾರ್ಯವಾಯಿತು. ಭೂಮಿಯಿಂದಲೇ ಮಾನವನ ಬದುಕು. ಬದುಕಿನ ಸರ್ವಸ್ವವೂ ಆದ ಭೂಮಿ ತಾಯಿಗೆ ಮೊದಲ ಸ್ಥಾನ ಕೊಡುವುದು ಅರ್ಥಪೂರ್ಣವೂ ಕೂಡ.

ಹಾಸಿಗೆಯಿಂದ ಎದ್ದು ಹಿಟ್ಟು ಬೀಸುವ ಕಾಯಕಕ್ಕೆ ತೊಡಗುವ ಮೊದಲು ಜನಪದ ಮಹಿಳೆಗೆ ಥಟ್ಟನೆ ನೆನಪಾಗುವುದು ಭೂಮಿತಾಯಿ. ಭೂಮಿತಾಯಿಯನ್ನು ಅನೇಕ ಕಾರಣಗಳಿಗಾಗಿ ಸ್ಮರಣೆ ಮಾಡಬಹುದು. ಜನಪದ ಮಹಿಳೆಗೆ ಅದು ಮುಖ್ಯವಲ್ಲ. ಅವಳಿಗೆ ಭೂಮಿ ತಾಯಿ ಮುಖ್ಯವೆನಿಸುವುದು ಎಳ್ಳು ಜೀರಿಗೆಯನ್ನು ಬೆಳೆಯುವುದರಿಂದ. ಎಳ್ಳು ಜೀರಿಗೆ ಎಂತಹ ಅತಿ ಸಣ್ಣ ವಸ್ತುಗಳನ್ನು ಬೆಳೆಯಲು ಸಾಧ್ಯವಾಗುವುದು ಭೂಮಿಯಿಂದಲೇ. ಅಂತಹ ವಿಶಿಷ್ಟ ಶಕ್ತಿ ಇರುವುದು ಭೂಮಿಗೆ ಮಾತ್ರ. ಭೂಮಿಯ ಆ ಶಕ್ತಿಗೆ ಜನಪದ ಮಹಿಳೆ ಮೂಕ ವಿಸ್ಮಿತಳಾಗಿ ಮೊದಲ ನಮನವನ್ನು ಸಲ್ಲಿಸುತ್ತಾಳೆ. ತಾಯಿಯು ತನ್ನ ಗರ್ಭದಲ್ಲಿ ಮಗುವೊಂದನ್ನು ಒಂಬತ್ತು ತಿಂಗಳಿಟ್ಟುಕೊಂಡು ಹೆತ್ತು ಹೊತ್ತು ಸಾಕುತ್ತಾಳೆ. ಆ ತಾಯಿಗೆ ಗೊತ್ತು ಮಗುವಿನ ಪಾಲನೆ ಪೋಷಣೆಯ ಶ್ರಮ. ಸಮಸ್ತ ಮಾನವ ಕುಲವನ್ನೇ ತನ್ನ ಗರ್ಭದಲ್ಲಿಟ್ಟುಕೊಂಡು ಸಾಕುತ್ತಿರುವ ಭೂದೇವಿ ಶ್ರಮ ಅನಂತವಾದುದು ಎಂದು ನಂಬಿದ ಜನಪದರಿಗೆ ಅವಳಿಗೆ ಮೊದಲ ನಮನವನ್ನು ಸಲ್ಲಿಸುತ್ತಾರೆ.

ಸಂಬಂಧಗಳ ಮೂಲನೆಲೆ ಮಾನವನ ಹೃದಯ. ಅವನು ತನ್ನಲ್ಲಿಯ ಸ್ವಾರ್ಥ ಅಹಂಕಾರವನ್ನು ತೊರೆದಾಗ ಮಾತ್ರ ಇತರರಿಗೆ ಪ್ರಿಯನಾಗುತ್ತಾನೆ. ತನ್ನನ್ನು ಪೋಷಿಸುವ, ಪ್ರೀತಿಸುವ ಪ್ರತಿಯೊಂದು ವಸ್ತುವಿನೊಡನೆ ಅವಿನಾಭಾವ ಸಂಬಂಧವಿಟ್ಟುಕೊಂಡಿದ್ದಾನೆ. ಅಂತೆಯೇ ಜನಪದರು ತಮಗೆ ನೆಲೆ ನೀಡಿದ, ಬದುಕಿಗೆ ಮಾರ್ಗ ತೋರಿದ ಭೂಮಿಯೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿದ್ದಾರೆ. ರೈತರಾದ ಜನಪದರಿಗೆ ಬೆಳಗು-ಬೈಗುಗಳಾಗುವುದು ಹೊಲದಲ್ಲಿಯೇ ಸೂರ್ಯೋದಯಕ್ಕೂ ಮುನ್ನ ಹೊಲಕ್ಕೆ ತೆರಳಿದ ರೈತರು ಮತ್ತೆ ಮನೆಗೆ ಬರುವುದು ಸೂರ್ಯಾಸ್ತವಾದ ಮೇಲೆಯೇ. ಇದು ಅವರ ನಿತ್ಯದ ಕಾಯಕ. ಯಾವಾಗಲೂ ಪರಿಶ್ರಮದಿಂದ ದುಡಿಯುವ ರೈತನಿಗೆ ನೆಲವೇ ಸರ್ವಸ್ವ. ಒಕ್ಕಲುತನದ ಪ್ರತಿಯೊಂದು ಚಟುವಟಿಕೆಗಳಲ್ಲೂ ಆತನಿಗೆ ಭೂಮಿಯೇ ಆಸರೆ.

ಆತನ ಪ್ರತಿಯೊಂದು ಉದಯವು ಭೂಮಿಯೊಂದಿಗೆ ಬೆಸೆದಿದೆ. ಭೂಮಿಯನ್ನು ದೇವರಾಗಿಯೂ, ಹೊತ್ತ ತಾಯಿಯಾಗಿಯೂ ಕಂಡವನು ರೈತ. ಆತನಿಗೆ ಭೂಮಿಗಿಂತ ದೊಡ್ಡ ದೇವರಿಲ್ಲ. ಪ್ರತಿ ಉದಯ, ಪ್ರತಿ ಗಳಿಗೆಯೂ ಭೂತಾಯಿಯ ಸ್ಮರಣೆಯೇ ಆತನ ಉಸಿರಾಗಿದೆ. ರೈತನ ಮೊದಲ ಸ್ತುತಿಯೂ ಕೂಡ ಭೂತಾಯಿಯ ಕುರಿತಾಗಿದೆ.

ಏಳುತಲೆದ್ದು ಯಾರ್‍ಯಾರ ನೆನೆದ್ಹೇವು
ಎಳ್ಳು ಜೀರಿಗೆಯ ನೆನೆದ್ಹೇವು । ಭೂಮಿತಾಯೀಯ
ಎದ್ದೊಂದರ ಘಳಿಗೆ ನೆನೆದ್ಹೇವು । (ಕರಾಕ್ಯ, ೧೯೫೮, ಪು-೩೫)

ಮೇಲ್ಕಂಡ ತ್ರಿಪದಿಯು ಭೂದೇವಿಯ ನಿತ್ಯ ಸ್ಮರಣೆಗೆ ಸಾಕ್ಷಿ. ರೈತನು ಮುಂಜಾನೆದ್ದು ತನಗೆ ಅನ್ನ-ಆಶ್ರಯ ನೀಡಿರುವ ಭೂಮಿಯನ್ನು ನೆನೆಯುವ ಕಾರ್ಯ ಮಾಡುತ್ತಿದ್ದಾನೆ. ಆತನಿಗೆ ಭೂಮಿ ಕೇವಲ ಭೂಮಿಯಲ್ಲ, ಬದಲಾಗಿ ಭೂದೇವಿ, ಭೂತಾಯಿಯಾಗಿದ್ದಾಳೆ. ಭೂತಾಯಿ ಬಿಟ್ಟು ಆತನಿಗೆ ಅನ್ಯದೈವವೇ ಇಲ್ಲ. ಸಕಲ ಜೀವಾತ್ಮಕೂ, ಗಿಡಮರ ಬಳ್ಳಿಗಳಿಗೂ ಉಸಿರಾಗಿರುವ ಭೂಮಿಯೇ ಆತನ ದೈವ. ವರ್ಷದುದ್ದಕ್ಕೂ ಉತ್ತುವ, ಬಿತ್ತುವ, ಬೆಳೆಯುವ ಹಾಗೂ ಒಕ್ಕಲುಮಾಡುವ ಕಾರ್ಯದಲ್ಲಿ ನಿರತನಾದ ಆತನಿಗೆ ಭೂಮಿ ಬದುಕನ್ನು ಕಲ್ಪಿಸಿಕೊಟ್ಟಿದೆ. "ಜಾನಪದ ಕವಿಗಳು ಅಥವಾ ಕವಯಿತ್ರಿಯರು ದೃಗ್ಗೋಚರವಲ್ಲದ ದೂರದ ದೇವತೆಗಳನ್ನು ನೆನೆಯದೆ ಕಣ್ಣಿಗೆ ಕಾಣುವ ಎಲ್ಲರ ಇರುವಿಗೂ ಆಶ್ರಯ ಭೂತಳದ ಭೂದೇವಿಯನ್ನು ಮೊದಲು ಸ್ಮರಿಸಿಕೊಳ್ಳುತ್ತಾರೆ." ಎಂಬುದಾಗಿ ಸಿ.ಪಿ.ಕೆ.ಯವರು ಭೂದೇವಿಯ ಸ್ಮರಣೆ ಉದ್ದೇಶವನ್ನು ಸ್ಪಷ್ಟಪಡಿಸುತ್ತಾರೆ.

ಕಲ್ಲು ಹಿಡೆದೆವು ಕಲ್ಯಾಣಿ ನೆನೆದೇವು
ಕಲ್ಲೀಗೆ ರಾಗಿ ಕೊಡುವಾಳ । ಭೂಮಿ ತಾಯೀಯ
ನಾವು ಎದ್ದೊಂದರ ಘಳಿಗೆ ನೆನೆದ್ಹೇವು । (ಕರಾಕ್ಯ, ೧೯೫೮, ಪು-೩೫)

ರೈತನ ಬದುಕು ಕ್ಷೇಮದಿಂದ ಇರಬೇಕಾದರೆ ಕಾಲಕಾಲಕ್ಕೆ ಉತ್ತಮ ಮಳೆಯೂ ಆಗಬೇಕು. ಏಕೆಂದರೆ ಮಳೆಯಿಲ್ಲದೆ ಬೆಳೆಯಿಲ್ಲ. ಭೂಮಿಗೆ ಮಳೆ ಬೀಳದೆ ಹೊರತು ಕ್ಷೇಮವಿಲ್ಲ. ಮಳೆಯಿಂದ ರೈತನ ಮೊಗದ ಕಳೆ ಹೆಚ್ಚುತ್ತದೆ. ಬಿತ್ತಿದ ಹೊಲಗಳಿಗೆ ಮಳೆ ಹುಯ್ಯದಿದ್ದರೆ ರೈತನ ಬದುಕಿನ ಮಾರ್ಗ ಕೆಟ್ಟುಬಿಡುತ್ತದೆ. "ಜಾನಪದರಿಗೆ ಆಕಾಶವೇ ತಂದೆ. ಭೂಮಿಯೇ ತಾಯಿ. ಈ ತಾಯಿ ಸಹನಶೀಲಳು. ಏನೆಲ್ಲವನ್ನು ಬೆಳೆದುಕೊಟ್ಟು ನಮ್ಮನ್ನೆಲ್ಲ ಸಂರಕ್ಷಿಸುವಳೆಂದು ಭೂಮಿ ತಾಯಿಯ ಬಗ್ಗೆ ಅಪಾರ ಭಯ ಭಕ್ತಿಯಿದೆ." (ರಾಮು ಮೂಲಗಿ (ಲೇ.) ದಿನಾಂಕ ೨೯-೧೦-೨೦೧೨) ಭೂಮಿತಾಯಿ ಬರಡಲ್ಲ ಎನ್ನುತ್ತ ಮಳೆಯಾದ ಸಂದರ್ಭದಲ್ಲಿ ಹರ್ಷಗೊಳ್ಳುತ್ತಾನೆ. ಬಿತ್ತಿದ ಬೆಳೆಯು ಹುಲಸಾಗಿ ಬೆಳೆದು ಕಣ ತುಂಬಿ ಬರಬೇಕೆಂಬುದು ಆತನ ಹಾರೈಕೆ. ಕಷ್ಟಜೀವಿಯಾದ ರೈತ ಯಾವುದೇ ಕೆಲಸವಾದರೂ ಸರಿಯೇ ಅಚ್ಚುಕಟ್ಟಾಗಿ ಉತ್ಸಾಹದಿಂದ ಮಾಡುತ್ತಾನೆ. ಅವನು ಬಯಸುವುದು ಕಷ್ಟಕ್ಕೆ ತಕ್ಕ ಪ್ರತಿಫಲ. ಪೈರು ಚೆನ್ನಾಗಿ ಬೆಳೆದುಬಿಟ್ಟರೆ ಸಾಕು ಆತನ ಆನಂದಕ್ಕೆ ಪಾರವೇ ಇಲ್ಲ.

ಪ್ರತಿಯೊಂದು ಸಂದರ್ಭದಲ್ಲಿಯೂ ಜನಪದರು ಭೂಮಿಯ ಪೂಜೆ ಮಾಡುತ್ತಾ ಬಂದಿದ್ದಾರೆ. ಪ್ರತಿ ಕಾರ್ಯದಲ್ಲಿಯೂ ಅಗ್ರಪೂಜೆ ಭೂಮಿಗೆ. ರೈತ ಮೊದಲು ಉಳುಮೆ ಮಾಡುವಾಗ, ಬಿತ್ತನೆ ಮಾಡುವಾಗ, ಭೂಮಿ ಹಸಿರಾದಾಗ, ಬೆಳೆದ ಫಸಲನ್ನು ಕಟಾವು ಮಾಡುವಾಗ, ಒಕ್ಕಲು ಮಾಡುವಾಗ, ಕಣ ಮಾಡುವಾಗ ರಾಶಿ ಮಾಡುವಾಗ ಮುಂತಾದ ಸಂದರ್ಭಗಳಲ್ಲಿ ಭೂಮಿಯನ್ನು ಪೂಜಿಸಿಯೇ ಮುಂದುವರೆಯುತ್ತಾನೆ. ಹಬ್ಬಹರಿದಿನಗಳಲ್ಲಿಯೂ ಅಮವಾಸ್ಯೆ-ಹುಣ್ಣಿಮೆಗಳಲ್ಲಿಯೂ ಆತ ಭೂದೇವಿಯನ್ನು ಮರೆಯುವುದಿಲ್ಲ. ಜನಪದರಿಗೆ ಭೂಮಿಯೆಂದರೆ ವರಕೊಡುವ ದೈವ. ಬದುಕನ್ನು ಬಂಗಾರವಾಗಿಸುವ ಸಿರಿದೇವಿ. ಆದ್ದರಿಂದ ಬಡತವನ್ನು ಹೋಗಲಾಡಿಸಿ ಎಂದು ಅಂಗಲಾಚುತ್ತಾರೆ. ಭೂಮಿಯ ಬದಲಾಗಿ ಮಣ್ಣನ್ನು ಪೂಜಿಸುತ್ತಾರೆ.

ಮಣ್ಣನ್ನು ನಂಬಿ ಮಣ್ಣಿಂದ ಬದುಕೇನು
ಮಣ್ಣೆನಗೆ ಮುಂದೆ ಹೊನ್ನು । ಅಣ್ಣಯ್ಯ
ಮಣ್ಣೆ ಲೋಕದಲಿ ಬೆಲೆಯಾದ್ದು ।
(ವಿನೀತ ರಾಮಚಂದ್ರರಾಯ, ೧೯೬೦, ಪು-೧೪೩)

ಮಣ್ಣಿನ ಮಕ್ಕಳಾದ ಜನಪದರಿಗೆ ಮಣ್ಣಿಗಿಂತ ಬೆಲೆಯಾದ ಹೊನ್ನು ಬೇರೊಂದಿಲ್ಲ. ಮಣ್ಣಿನೆಂದರೆ ಅವರಿಗೆ ದೈವಸ್ವರೂಪ. "ಜನಪದರಿಗೆ ಭೂಮಿ ದೈವಕ್ಕೆ ಸಮ ಅಂತೆಯೇ ಹಲವು ಹಬ್ಬಗಳಲ್ಲಿ ಭೂಮಿ (ಮಣ್ಣು) ಪೂಜೆ ಮಾಡುತ್ತಾರೆ. ಅದಕ್ಕಾಗಿಯೇ ಮಣ್ಣಿನಿಂದ ಮಾಡಿದ ನಾಗಪ್ಪ, ಗಣಪ, ಗುಳ್ಳವ್ವ, ಬಸವ, ಗೌರಿ ಮತ್ತು ಕಾಮನ ಮೂರ್ತಿಗಳನ್ನು ಹಬ್ಬಗಳಲ್ಲಿ ಪೂಜಿಸುತ್ತಾರೆ." (ಶಿವಾನಂದ ಟವಳಿ(ಲೇ.), ೧೦-೮-೨೦೧೩) ಹೀಗೆಯೇ ಮಣ್ಣೆತ್ತಿನ ಅಮವಾಸ್ಯೆಯ ದಿನದಂದು ಮಣ್ಣಿನ ಎತ್ತುಗಳ ಪೂಜೆ, ನಾಗರ ಪಂಚಮಿಯಂದು ನಾಗಮೂರ್ತಿ ಪೂಜೆ, ಚೌತಿಯಂದು ಗಣೇಶ ಪೂಜೆ, ವಿಜಯದಶಮಿಯಂದು ಭೂಮಿಯ ಪೂಜೆ, ಸೀಗೆ ಹುಣ್ಣಿಮೆಯಂದು ಸೀಗವ್ವ (ಭೂಮಿ)ನ ಪೂಜೆ ವಿಧ ವಿಧ ರೀತಿಯಲ್ಲಿ ಮಣ್ಣನ್ನು ಶ್ರದ್ಧೆ ಭಕ್ತಿಯಿಂದ ಜನಪದ ರೈತರು ಪೂಜಿಸುತ್ತ ಬಂದಿದ್ದಾರೆ. ಎಲ್ಲ ಹಬ್ಬಗಳಲ್ಲೂ ಮಣ್ಣನ್ನು ಮರೆಯದೇ ಪೂಜಿಸುವ ಸಂಪ್ರದಾಯ ಜನಪದರಲ್ಲಿದೆ. ಅಲ್ಲದೇ ಭೂದೇವಿಗೆ ನಾನಾ ರೀತಿಯ ಅಡುಗೆಗಳನ್ನು ಮಾಡಿ ನೈವಿದ್ಯ ಮಾಡುವ ರೈತನು ಹೊಲಗಳಿಗೆ 'ಚರಗ' ಚೆಲ್ಲುತ್ತಾನೆ. ಒಂದು ಬೆಳೆಯ ಫಸಲು ಮನೆಗೆ ಬರುವಷ್ಟರಲ್ಲಿಯೇ ಮೂರು ಸಲ ಚರಗವನ್ನು ಭೂಮಿಗೆ ಚೆಲ್ಲುತ್ತಾನೆ.

ನಾಗರಪಂಚಮಿಯಂದು ಮಣ್ಣೆತ್ತಿನ ಅಮವಾಸ್ಯೆಯಂದು ಪೂಜಿಸುವ ಎತ್ತುಗಳನ್ನು ಹೊಲದಲ್ಲಿಟ್ಟು ಪೂಜಿಸಿ, ಮೊದಲ ಚರಗ ಭೂಮಿಗೆ ಅರ್ಪಿಸುತ್ತಾನೆ. ಎರಡನೆಯದಾಗಿ ಸೀಗೆ ಹುಣ್ಣಿಮೆಯ ದಿನದಂದು ಸೀಗವ್ವ ಅಂದರೆ ಭೂಮಿಯನ್ನು ಪೂಜಿಸಿ, ನಂತರ ತೆನೆಗಳು ತುಂಬಿಕೊಂಡಿರುವ ಭೂಮಿಗೆ ಚರಗ ಚೆಲ್ಲುತ್ತಾನೆ. ಮೂರನೆಯದಾಗಿ ಒಕ್ಕಲು ಮಾಡಿ ಕಣದಲ್ಲಿ ರಾಶಿಯನ್ನು ಮಾಡಿದಾಗ ಕಣದ ಹಬ್ಬ ಮಾಡಿ ಚರಗವನ್ನು ಭೂಮಿಗೆ ಚೆಲ್ಲುತ್ತಾನೆ. ತನಗೆ ಸಿರಿನೀಡಿದ ಭೂದೇವಿಗೆ ತಾನು ಪ್ರತಿಯಾಗಿ ಭಕ್ತಿಯನ್ನು ತೋರ್ಪಡಿಸುತ್ತಾನೆ.

ಬದುಕುವ ಭರವಸೆಯೇ ಭೂತಾಯಿ ಎಂದು ನಂಬಿದ ಜನಪದರಿಗೆ ಧನ್ಯತೆಯ ಭಾವ. ನೋವಿರಲಿ, ನಲಿವಿರಲಿ ಭೂದೇವಿಯ ಕುರಿತು, ಹಾಡುವ ಮೂಲಕ ಭಕ್ತಿಯನ್ನು ತೋರ್ಪಡಿಸಿದ್ದಾರೆ.

ಹೊಸಬಂಡಿ ಮೇಲೆ ಹಸುವಿನ ಗೊಬ್ರತಂದೆ
ಹಸಿರ ಭೂದೇವಿ ಹಾಕ್ತೇನೆ । ನನ ತಾಯವ್ವ
ಹಸಿದ ಕಂದಯ್ನ ಕಾಯವ್ವ । (ಜಿ. ಆರ್.ತಿಪ್ಪೇಸ್ವಾಮಿ, ೨೦೦೯, ಪು-೧)

ಹಗಲಿರುಳೆನ್ನದೆ ಹೊಲದಲ್ಲಿಯೇ ದುಡಿಯುವ ರೈತನಿಗೆ ಉತ್ತಮ ಬೆಳೆಯ ನಿರೀಕ್ಷೆ. ಆತನಿಗೆ ಅತಿಯಾಸೆಯಿಲ್ಲ. ಬದಲಾಗಿ ಹೊಟ್ಟೆ ತುಂಬುವಷ್ಟು ಬೆಳೆಯನ್ನಾದರೂ ಕರುಣಿಸೆಂಬುದು ಆತನ ಬಯಕೆ. ಸಾಮಾನ್ಯವಾಗಿ ಸಾವಯವ ಕೃಷಿಯನ್ನೇ ಮಾಡುವ ರೈತನು ಹಸಿದಿರುವ ನನ್ನ ಮಕ್ಕಳನ್ನು ಸಲಹೆಂದು ಬೇಡಿಕೊಳ್ಳುತ್ತಿದ್ದಾನೆ. ಆತನ ಭೂದೇವಿಯನ್ನು ನೆನೆಯದ ಕ್ಷಣಗಳು ತೀರ ಕಡಿಮೆ. ಅಷ್ಟರಮಟ್ಟಿಗೆ ಭೂಮಿಯೊಂದಿಗೆ ಜನಪದರು ಬೆಸೆದುಕೊಂಡಿದ್ದಾರೆ.

**೫.೩. ಗ್ರಾಮ ದೇವತೆ ಮತ್ತು ಜನಪದರ ಸಂಬಂಧ**

ಮೂಲದಲ್ಲಿ ಅಲೆಮಾರಿಯಾಗಿದ್ದ ಮನುಷ್ಯ ಕೃಷಿ ಪ್ರಾರಂಭಿಸಿದ ಮೇಲೆ ಒಂದೆಡೆ ನೆಲೆ ನಿಂತ. ಫಲವತ್ತಾದ ಸ್ಥಳಗಳಲ್ಲಿ ನೆಲೆ ನಿಂತು ಗುಡಿಸಲು ಕಟ್ಟಿ ವಾಸಿಸಲು ಪ್ರಾರಂಭಿಸಿದ. ಮೊದಮೊದಲು ಒಂದೆರಡಿದ್ದ ಗುಡಿಸಲುಗಳು ಹತ್ತಾರಾಗಿ ಗ್ರಾಮಗಳು ಹುಟ್ಟಿಕೊಂಡವು ಮಾನವನೊಂದಿಗೆ ಉಗಮಗೊಂಡಿದ್ದ ನಂಬಿಕೆಗಳು ಆ ಕಾಲದಲ್ಲಿ ಸಾಕಾರಗೊಂಡವು. ದೇವರುಗಳಿಗೆ ಮೂರ್ತ ರೂಪವನ್ನು ಕಲ್ಪಿಸಿ ಗುಡಿಯನ್ನು ಕಟ್ಟಿದ. ಗ್ರಾಮಗಳು ಪ್ರಾರಂಭವಾದಾಗ ನೆಲೆ ಪಡೆದುಕೊಂಡ ದೇವತೆಗಳು ಗ್ರಾಮದೇವತೆಗಳು ಎನಿಸಿಕೊಂಡವು. ಗ್ರಾಮ ದೇವತೆಗಳು ಗ್ರಾಮದ ವ್ಯಾಪ್ತಿಯಲ್ಲಿ ಉತ್ಸವಗೊಳ್ಳುತ್ತವೆ.

ಗ್ರಾಮ ದೇವತೆಗಳು ತಮ್ಮ ಗ್ರಾಮದ ಜನರನ್ನು ದನಕರುಗಳನ್ನು ರಕ್ಷಣೆ ಮಾಡಿ, ಕಾಲಕಾಲಕ್ಕೆ ಮಳೆಬೆಳೆಯಾಗುವಂತೆ ಮಾಡುತ್ತವೆಂದು ಜನಪದರು ನಂಬುತ್ತಾರೆ. ಗ್ರಾಮದೇವತೆಯು ತಮ್ಮ ಗ್ರಾಮ ರಕ್ಷಣೆ ಮಾಡಿದ ಕಥೆ, ಗೀತೆ, ಕಾವ್ಯ, ಲಾವಣಿಗಳನ್ನು ಕಟ್ಟಿ ಹಾಡುತ್ತಾರೆ. ದೇವತೆಯ ಸುತ್ತಲೂ ಪವಾಡಗಳು ಬೆಳೆದು ಜನರಲ್ಲಿ ದೈವದ ಬಗೆಗಿನ ನಂಬಿಕೆ ಗಟ್ಟಿಯಾಗುತ್ತದೆ. ಜನಪದ ಗೀತೆಗಳಲ್ಲಿ ದುರುಗವ್ವ, ಅಣ್ಣಮ್ಮ, ದೇವಮ್ಮ, ಕರೆಮ್ಮ, ಕೆಂಚಮ್ಮ, ಚೌಡಮ್ಮ, ಮಾರಮ್ಮ, ದ್ಯಾಮವ್ವ, ಗಿಡ್ಡಮ್ಮ, ಕೆಂಪಮ್ಮ, ಎಲ್ಲವ್ವ ಮುಂತಾದ ಗ್ರಾಮದೇವತೆಗಳನ್ನು ಸ್ತುತಿಸಿದ ಬಿಡಿ ಗೀತೆಗಳಿವೆ. ಕರ್ನಾಟಕದಲ್ಲಿ ಗ್ರಾಮಗಳನ್ನು ಹೆಸರಿಸಿ ದೈವವನ್ನು ಗುರುತಿಸುವ ಪದ್ಧತಿ ಇದೆ. ಮಳಲಿ ಗಿಡ್ಡಮ್ಮ, ಸವದತ್ತಿ ಎಲ್ಲಮ್ಮ, ಶಿರಸಿ ಮಾರಮ್ಮ ಹೀಗೆ ಗ್ರಾಮದೇವತೆಯ ಹೆಸರಿನಿಂದ ಗ್ರಾಮವನ್ನು ಉಲ್ಲೇಖಿಸುವುದು ರೂಢಿಯಲ್ಲಿದೆ.

ಬಡಿಗೇರ ಮನಿಮುಂದ ಶಡಗರದ ಗಿಡಹುಟ್ಟಿ
ಕೊರದೆರಡು ಗಾಲಿ ಸವಮಾಡಿ । ದ್ಯಾಮವ್ವ
ಜಡದು ಏರ್‍ಯಾಳ ಹೊಸತೇರು । (ರಾಜೇಂದ್ರ ಯರನಾಳೆ, ೨೦೦೬, ಪು-೧೨)

ದ್ಯಾಮವ್ವ ಗ್ರಾಮದ ದೇವತೆ. ಸಾಮಾನ್ಯವಾಗಿ ಶಿವನನ್ನು ಈಶ್ವರನೆಂದು, ಪಾರ್ವತಿಯನ್ನು ದ್ಯಾಮವ್ವಳೆಂದು ಜನಪದರು ಪೂಜಿಸುತ್ತಾರೆ. ಗ್ರಾಮದೇವತೆಯನ್ನು ಬಡಿಗೇರ ಕುಟುಂಬದವರೇ ಪೂಜಿಸುವುದು ರೂಢಿ. ಅಲ್ಲದೇ ಕಟ್ಟಿಗೆಯಿಂದ ದ್ಯಾಮವ್ವಳ ಮೂರ್ತಿ ಮಾಡಿ ಅವಳ ತೇರನ್ನು ಮಾಡಿ, ವಿಜಯದಶಮಿಯ ಸಂದರ್ಭದಲ್ಲಿ ಬಹು ಸಡಗರದಿಂದ ಪೂಜಿಸುತ್ತಾರೆ. ಬೆಳೆಗಳಿಗೆ, ದನಗಳಿಗೆ ರೋಗ ಬಂದರೆ ಎಣ್ಣೆದೀಪ ಹಚ್ಚುವುದು, ಗಣಜಲಿಯಾದರೆ ನೀರು ಎರೆಯುವುದು, ಸೀರೆ-ಕುಪ್ಪಸಗಳನ್ನು ನೀಡಿ ಉಡಿ ತುಂಬುವುದರ ಮೂಲಕ ಜನಪದರು ತಮಗೆ ಬಂದಿರುವ ಕಷ್ಟಗಳನ್ನು ನಿವಾರಿಸಲು ಗ್ರಾಮದೇವತೆಯನ್ನು ಬೇಡಿಕೊಳ್ಳುತ್ತಾರೆ. ದೇವರು ಜನಪದರ ಪಾಲಿಗೆ ಆತ್ಮೀಯ ಬಂಧುವಿದ್ದಂತೆ. ತಮ್ಮ ಕಷ್ಟ-ಸುಖಗಳನ್ನು ಜನಪದರು ದೇವರಲ್ಲಿ ಹೇಳಿಕೊಳ್ಳುತ್ತಾರೆ. ತಮ್ಮ ಕುಟುಂಬದಲ್ಲಿ ಮದುವೆ, ಸೀಮಂತ, ಮಗುವಿನ ಜನನ ಹೀಗೆ ಯಾವುದೇ ಶುಭಕಾರ್ಯಗಳು ಜರುಗಿದರೆ ತಾಯಿ ದ್ಯಾಮವ್ವಗೆ ಉಡಿ ತುಂಬಿ ಸಂತೈಸುವ ಮೂಲಕ ನೆಮ್ಮದಿಯ ಬದುಕನ್ನು ನಡೆಸುತ್ತಾರೆ. ಒಂದು ವೇಳೆ ಹಾಗೆ ಮಾಡದಿದ್ದರೆ ತಮ್ಮ ಮೇಲೆ ದ್ಯಾಮವ್ವ ಮುನಿದುಕೊಂಡಾಳೆಂಬ ಭಯ ಜನಪದರಲ್ಲಿದೆ. ಗ್ರಾಮದೇವತೆಗಳನ್ನು ಸಂತೈಸುವ ಕಾರ್ಯವು ಜನಪದರಿಂದ ನಿತ್ಯಯೂ ನಡೆಯುತ್ತದೆ.

ಗದ್ದುಗೆ ಮೇಲಿಂದ ಎದ್ದು ಬಾರೆ ಕೆಂಪವ್ವ
ಇದ್ದಾರೆ ನಿನಗೆ ಶಿವನಾಣೆ । ಶಿರೇವ್ದ ಕೆಂಪವ್ವ
ನಿನಗೆ ಮೊಗ್ಗು ತಂದಿವ್ನಿ ಮುಡಿಬಾರೆ । (ಕರಾಕೃ, ೧೯೫೮, ಪು-೨೦)

ಜನಪದರು ತಮ್ಮ ಗ್ರಾಮದೇವತೆಗಳ ಪೂಜೆ, ಆರಾಧನೆಯ ವಿಧಿ-ವಿಧಾನಗಳನ್ನು ಗೀತೆಯ ರೂಪದಲ್ಲಿ ಹಾಡುತ್ತಾರೆ. ಕೆಂಪವ್ವನನ್ನು ಪೂಜೆ ಮಾಡುವಾಗ ಕೆರೆಯಲ್ಲಿ ಸ್ನಾನ ಮಾಡಿಕೊಂಡು ಕಣಗಾಲ ಹೂವಿನಿಂದ ಪೂಜೆ ಮಾಡುತ್ತಾರೆ. ಪೂಜೆ ಮಾಡುವಾಗ 'ಕೈಲಾಸದಿಂದ ಕರ್ಪೂರ ಬರಣಿ ಬಂದೊ' ಎಂದು ದೇವಿಯ ಪೂಜೆಯ ವೈಭವವನ್ನು ವರ್ಣಿಸುತ್ತಾರೆ. ನಿನಗಾಗಿ ಮೊಗ್ಗು ತಂದಿರುವೆ ಮುಡಿಬಾರೆ ನನ್ನವ್ವ ಎಂಬ ಕಕ್ಕುಲಾತಿ. ಜನಪದರು ತಮ್ಮ ದೈವದ ಪೂಜೆ ಅಸಾಮಾನ್ಯವಾದುದೆಂದು ಭಾವಿಸಿದಂತೆ ತೋರುತ್ತದೆ.

ಹರಗೀದ ಹೊಲದಾಗ ಮರುಗ ಎತ್ತವಳ್ಯಾರೇ
ಹರಳ ಹಚ್ಚಿದ ವಾಲೆ ಕಿವಿಯೊಳು । ದೇವೆಮ್ಮ
ನಿತ್ಯ ನಮ್ಮ ಮ್ಯಾಲೆ ದಯವಿರಲೇ । (ಹಲಸಂಗಿ ಗೆಳೆಯರು, ೧೯೩೧, ಪು-೯)

ಓಲೆ, ಬುಗುಡಿ, ಕಿರಿಪಿಲ್ಲಿ, ಮೂಗುತಿ, ಮುತ್ತಿನ ಸರ, ಡಾಬು ಮುಂತಾದವು ಜನಪದ ಮಹಿಳೆಯರು ತೊಡುವ ಆಭರಣಗಳಾಗಿವೆ. ತಮ್ಮ ದೇವರುಗಳಿಗೆ ತಾವು ಉಡುವ-ತೊಡುವ ಉಡುಗೆ-ತೊಡುಗೆಯನ್ನೇ ಮಾಡಿಸಿ, ಸಂಭ್ರಮಿಸಿ ಗೀತೆಯಲ್ಲಿ ಹಾಡಿ ಹೊಗಳಿದ್ದಾರೆ. ತನ್ನಂತೆಯೇ ಗ್ರಾಮ ದೇವತೆಯೂ ಆಭರಣಗಳನ್ನು ಧರಿಸಿಕೊಂಡಿದ್ದಾಳೆಂಬ ಜನಪದ ಕವಯಿತ್ರಿಯ ಕಲ್ಪನೆ ಗಮನಾರ್ಹವಾಗಿದೆ.

ಗ್ರಾಮದೇವತೆಗಳ ಹರಕೆಯ ಸ್ವರೂಪಗಳು ವಿಭಿನ್ನವಾಗಿರುತ್ತವೆ. ದೇವರಿಗೆ ಹರಕೆ ಸಲ್ಲಿಸಿ ತಮ್ಮ ಇಷ್ಟಾರ್ಥವನ್ನು ಈಡೇರಿಸುವಂತೆ ಬೇಡಿಕೊಳ್ಳುವುದು ಅನಾದಿಕಾಲದಿಂದಲೂ ನಡೆದುಕೊಂಡು ಬರುತ್ತಿದೆ. ಗ್ರಾಮ ದೇವತೆಯ ಭಕ್ತರು ನಾನಾ ಬಗೆಯ ಹರಕೆಗಳನ್ನು ಸಲ್ಲಿಸಿ ಗ್ರಾಮದೇವತೆಯ ಕೃಪೆಗೆ ಪಾತ್ರರಾಗಲು ಪ್ರಯತ್ನಿಸುತ್ತಾರೆ. ಅವಳನ್ನು ಕುರಿತು ಹಾಡುವುದರ ಮೂಲಕ ಕೃಪೆಯನ್ನು ಪಡೆಯುತ್ತಾರೆ.

ಹೆಣ್ಣುಮಕ್ಕಳ ಕಂಡರೆ ಹೆಚ್ಚಳ ಲಕ್ಕಮ್ಮಗೆ
ಹಣ್ಣಿನ ಗೂಡೆ ಬರುವಾಗ । ನೋಡಿಕೊಂಡು
ಗುಡುಗನಾಡಾಳೆ ಗುಡಿಯಲ್ಲಿ । (ಜಿ. ಶಂ. ಪರಮಶಿವಯ್ಯ, ೧೯೬೦, ಪು–೪೯)

ಬಾಯಿಗೆ ಬೀಗವನ್ನು ಜಡಿದುಕೊಳ್ಳುವವರು. ಬೇವಿನ ಉಡುಗೆಯಲ್ಲಿ ಪೂಜೆಯ ಹರಕೆ ಸಲ್ಲಿಸುವರು. ಸಿಡಿಯ ಸೇವೆಯ ಮಾಡುವವರು, ಬಲಿ ನೀಡುವವರು ದೇವತೆಗೆ ಇದ್ದರೆಂಬುದು ಜನಪದ ಗೀತೆಗಳಿಂದ ತಿಳಿದುಬರುತ್ತದೆ. ಕರ್ನಾಟಕದ ಗ್ರಾಮದೇವತೆಗಳ ಹರಕೆಗಳಲ್ಲಿ ಸಿಡಿಯ ಆಚರಣೆಯು ಪ್ರಸಿದ್ಧವಾಗಿತ್ತು. ಇತ್ತೀಚಿನ ದಿನಗಳಲ್ಲಿ ಕೆಲವು ಆಚರಣೆಗಳು ನಿಂತಿವೆ. ಗ್ರಾಮದೇವತೆಗೆ ಸಲ್ಲುವ ಹರಕೆಗಳೆಲ್ಲವೂ ಪ್ರಸ್ತುತ ಗೀತೆಯಲ್ಲಿ ದಾಖಲುಗೊಂಡಿದೆ.

ಹೆಡ್ಗೇಲ್ಹಣ್ಣು ಬಂದೊ ಗಡಿಗೇಲ್ತುಪ್ಪಾ ಬಂದೊ
ಇಟ್ಟಾಡಿ ಬಂದೊ ಇಡಿಗಾಯಿ । ದೊಡ್ಡಮ್ಗೆ
ಒತ್ತಲಿಸಿ ಬಂದೊ ಕುರಿಗೋಳು ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೪೩, ಪು–೧೧)

ಶಿವನ ಸತಿಯಾದ ಪಾರ್ವತಿಯ ಅವತಾರಗಳೇ ಗ್ರಾಮದ ದೇವತೆಗಳು ಜನಪದರು ನಂಬುತ್ತಾರೆ. ಪಾರ್ವತಿಯ ಉಗ್ರ ರೂಪಗಳೇ ಮಾರಿ ದೇವತೆಗಳು. ಹರಕೆ ಸಲ್ಲಿಸುವ ಭಕ್ತರನ್ನು ಕರುಣೆಯಿಂದ ರಕ್ಷಿಸುತ್ತವೆ. ಹರಕೆ ತಪ್ಪುವವರೆಗೆ ಉಗ್ರವಾದ ಶಿಕ್ಷೆಯನ್ನು ಕೊಡುತ್ತವೆ. ಆದ್ದರಿಂದ ದೇವಿಯ ಆರಾಧನೆ ಮಾಡಿ ಹರಕೆ ಸಲ್ಲಿಸಿ ದೇವಿಯ ಕೃಪೆಗೆ ಪಾತ್ರರಾಗಲು ಜನಪದರು ಸದಾ ಬಯಸುತ್ತಾರೆ. ನಡೆನುಡಿಗಳಲ್ಲಿ ಪ್ರಮಾಣಬದ್ಧರಾಗಿ ಬದುಕಬೇಕೆಂದು ನಂಬಿದ ಜನಪದರು. ನಡೆನುಡಿಗಳಲ್ಲಿ ತಪ್ಪಿದಾಗ ದೈವ ಶಿಕ್ಷಿಸುತ್ತದೆಂಬ ಬಯದಲ್ಲಿ ಬದುಕುತ್ತಿದ್ದರು. ಇಂತಹ ದೈವ ಭಯವು ಅವರನ್ನು ಸನ್ಮಾರ್ಗದಲ್ಲಿ ನಡೆಸುತ್ತಿತ್ತು. ದೈವಿಕ ಆಚರಣೆಗಳಲ್ಲಿ ಮೌಢ್ಯಗಳು ಕಂಡುಬಂದರೂ ಸನ್ನಡತೆಯ ಕಾರಣಕ್ಕಾಗಿ ಸರ್ವರಿಂದಲೂ ಒಪ್ಪಿತವಾಗಿದ್ದವು.

ಹಟ್ಟಿ ಚೆಂದಾಕೆ ತುಪ್ಪಾದ ಘಮನಾಕೆ
ಇಪ್ಪೇಯ ಮರದ ನೆರಳೀಗೆ । ಮಾರವ್ವ
ವರವಾದೆ ತಾಯಿ ಹೆಣ್ಣು ಮಕ್ಕಳಿಗೆ । (ಕರಾಕೃ, ೧೯೫೮, ಪು–೨೧)

ಇಲ್ಲಿ ಮಾರಮ್ಮ ಗ್ರಾಮದೇವತೆ. ಆಯಾ ಗ್ರಾಮಗಳ ಸ್ಥಳ ಪುರಾಣಗಳಿಗೆ ಅನುಗುಣವಾಗಿ ಗ್ರಾಮದೇವತೆಯ ಹೆಸರಲ್ಲಿ ಭಿನ್ನತೆಗಳಿವೆ. ಉಗ್ರವಾದ ಮಾರಿಯು ಮುನಿದರೆ ಮರಣ ನಿಶ್ಚಯ. ಇಲ್ಲಿ

ಮನುಷ್ಯನನ್ನು ನುಗ್ಗೆಯ ಟೊಂಗೆಗೆ ಹೋಲಿಸಿರುವುದು ಔಚಿತ್ಯವಾಗಿದೆ. ನುಗ್ಗೆ ತುಂಬ ಹಗುರಾದ ಮರ. ನುಗ್ಗೆ ಮರದ ಟೊಂಗೆಗಳು ಸ್ವಲ್ಪವೂ ಭಾರವನ್ನು ತಡೆಯದೆ ಲಟ್ಟನೆ ಮುರಿಯುತ್ತವೆ. ದೈವದ ಹರಕೆ ಸಲ್ಲಿಸದ ಮನುಷ್ಯನನ್ನು ನುಗ್ಗೆಯ ಟೊಂಗೆ ಮುರಿಯುವಷ್ಟು ಸಲೀಸಾಗಿ ಮುರಿದುಹಾಕುತ್ತವೆ. ಬದುಕಿನ ತುಂಬ ಜಾಗರೂಕರಾಗಿ ಬದುಕಬೇಕು ತಪ್ಪಿ ನಡೆದರೆ ಶಿಕ್ಷೆಯು ಕಟ್ಟಿಟ್ಟ ಬುತ್ತಿ ಎಂಬ ನಂಬಿಕೆ ಜನಪದರಲ್ಲಿದೆ.

ಉತ್ತರ ಕರ್ನಾಟಕದ ಸವದತ್ತಿ ಗ್ರಾಮದ ಪ್ರಸಿದ್ಧ ದೇವತೆ ಎಲ್ಲವ್ವ. ಈ ದೇವತೆಯನ್ನು ಕುರಿತು ಪುರಾಣಗಳು, ಹಾಡುಗಳು, ಕಥೆಗಳು, ಲಾವಣಿಗಳು ಹೇರಳವಾಗಿವೆ. ಎಲ್ಲಮ್ಮನನ್ನು ಕುರಿತು ಅಸಂಖ್ಯಾತ ಹಾಡುಗಳು ಜನಪದ ಗೀತೆಗಳು ಹಾಗೂ ಕಥೆಗಳನ್ನು ಜನಪದರು ಕಟ್ಟಿದ್ದಾರೆ. ಭಕ್ತಿಯಿಂದ ಎಲ್ಲವ್ವನನ್ನು ಪೂಜಿಸುವ ಅನೇಕ ಸ್ತುತಿ ಗೀತೆಗಳನ್ನು ಅಭಿವ್ಯಕ್ತಿಸಿದ್ದಾರೆ.

ಎಳ ಎಲ್ಲವ್ವ ತಾಯಿ, ಏಟ್ಹೊತ್ತ ಮಲಗೀದೆ
ಹೂವೆಂಜಲಾಗಿ ಹುಳಮುಟ್ಟಿ । ಕೊಳ್ಳದ
ನೀರೆಂಜಲಾಗಿ ಗಿಳಿ ಕುಡಿದು । (ವಿನೀತ ರಾಮಚಂದ್ರರಾಯ, ೧೯೬೦, ಪು–೧೩೪)

ದೇವರ ಭಕ್ತರು ಸೂರ್ಯೋದಯಕ್ಕೆ ಮೊದಲು ಎದ್ದು ಸ್ನಾನವನ್ನು ಮಾಡಿ, ಕೊಳದಿಂದ ನೀರು ತುಂಬಿಕೊಂಡು ಹೂವನ್ನು ಕಿತ್ತುತಂದು ದೇವಿಗರ್ಪಿಸಿ ಮಡಿಯಿಂದ ಪೂಜೆ ಮಾಡುತ್ತಾರೆ. ಹೊಳೆ, ಕೆರೆ, ಕೊಳ್ಳದ ನೀರು ಪಶುಪಕ್ಷಿಗಳು ಕುಡಿದು ಎಂಜಲಾಗುವ ಮುನ್ನ, ಹೂವು ದುಂಬಿಯಿಂದ ಎಂಜಲಾಗುವ ಮುನ್ನ ದೇವರಿಗರ್ಪಿಸಬೇಕು. ಎಂಜಲಾದ ನೀರು, ಹೂವುಗಳನ್ನು ಪೂಜೆಗೆ ಬಳಸಿದರೆ ಪೂಜೆ ಸಾರ್ಥಕವಾಗುವುದಿಲ್ಲ. ಆದರೆ ವಾಸ್ತವದಲ್ಲಿ ಸೃಷ್ಟಿಯಲ್ಲಿನ ಎಲ್ಲ ಪದಾರ್ಥಗಳು ಎಂಜಲೇ ಎಂದು ಅದೇ ಜನಪದರು ಹಾಡಿದ್ದಾರೆ. ಅವರದು ನಂಬಿಕೆ ಇರಲಿ ಆದರೆ ಮೌಢ್ಯಗಳು ಬೇಡವೆಂಬುದು ಆಶಯವಾಗಿದೆ.

ಗ್ರಾಮದೇವತೆಗಳ ಸ್ತುತಿ ಗೀತೆಗಳು ಆಯಾ ದೇವತೆಗಳ ಆರಾಧನೆ, ಹರಕೆ, ಆಚಾರ, ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತವೆ. ಶತಶತಮಾನಗಳಿಂದ ಪಾಲಿಸಿಕೊಂಡು ಬಂದ ಪದ್ಧತಿಗಳು ಗೀತೆಗಳ ರೂಪದಲ್ಲಿ ಅಭಿವ್ಯಕ್ತವಾಗಿವೆ. ಇವುಗಳ ಅಧ್ಯಯನದಿಂದ ಜನಪದರ ದೈವದ ಸ್ವರೂಪ, ದೈವದ ಬಗೆಗಿನ ಕಲ್ಪನೆಗಳನ್ನು ಅರಿತುಕೊಳ್ಳುತ್ತೇವೆ.

ಜನಪದರ ದೃಷ್ಟಿಯಲ್ಲಿ ದೇವತೆ ಸರ್ವಶಕ್ತೆಯಾದರೂ ಮಾನವ ಗುಣಗಳಿಂದ ಮುಕ್ತಳಾಗಿಲ್ಲ. ಜನಪದರ ದೇವತೆಯು ಅವರಂತೆ ಸಂಸಾರಿಗಳು. ದೇವತೆಗೂ ಮದುವೆ ನಡೆಯುತ್ತದೆ. ಮಕ್ಕಳೂ ಆಗುತ್ತವೆ. ದೇವತೆಗೆ ಮಾನವ ಸಹಜ ಗುಣಗಳಿವೆ ಎಂಬುದಾಗಿ ಜನಪದರು ನಂಬಿದ್ದಾರೆ. ಈ ಲೋಕದ ಜಂಜಾಟಗಳು ಈ ಲೋಕದ ಜೀವಿಗಳಿಗೆ ಮಾತ್ರವಲ್ಲ ಸರ್ವಶಕ್ತಳಾದ ದೇವತೆಗೂ ತಪ್ಪಿದ್ದಲ್ಲ ಎಂದುಕೊಂಡಾಗ ಮನಸ್ಸಿಗೆ ಸಮಾಧಾನವೆನಿಸುತ್ತದೆ. ಕಷ್ಟವನ್ನು ಎದುರಿಸುವ ಧೈರ್ಯ ಬರುತ್ತದೆ. ಆದ್ದರಿಂದಲೇ ಏನೋ ಜನಪದರು ತಮ್ಮ ದೇವರಿಗೂ ಲೋಕದ ವ್ಯಾಪಾರವನ್ನು ಅಂಟಿಸಿರುವಂತೆ ತೋರುತ್ತದೆ. ಜನಪದ ಗೀತೆಗಳಲ್ಲಿ ಜನಪದರ ಮನಸ್ಸಿನಾಳದ ಭಾವನೆಗಳು, ಸಂಪ್ರದಾಯ, ಆಚರಣೆ,

ನೋವು–ನಲಿವುಗಳನ್ನು ಗುರುತಿಸುತ್ತೇವೆ. ಗೌರಮ್ಮನ ಮದುವೆ, ಗೌರಿಯ ಕಲ್ಯಾಣ, ಗೌರಮ್ಮನನ್ನು ಗಂಡನ ಮನೆಗೆ ಕಳುಹಿಸಿದ್ದು, ಗೌರಾದೇವಿ ತವರಿಗೆ ಹೋಗಿಬಂದದ್ದು ಹಲವು ಗೀತೆಗಳಲ್ಲಿ ಅಭಿವ್ಯಕ್ತಗೊಂಡಿವೆ. ಜನಪದ ಗೀತೆಗಳು ಪೌರಾಣಿಕ ಸನ್ನಿವೇಶದ ಕತೆಗಳನ್ನು ಪ್ರತಿನಿಧಿಸಿದರೂ ಮಾನವೀಯ ಗುಣಗಳಿಂದ ಕೂಡಿರುವುದರಿಂದ ಇಂದಿಗೂ ಪ್ರಸ್ತುತವಾಗಿವೆ.

ಶಿವಪುರಾಣದಲ್ಲಿ ಶಿವ–ಪಾರ್ವತಿಯರ ಮದುವೆಯ ಪ್ರಸಂಗ ಸುಪ್ರಸಿದ್ಧವಾಗಿದೆ. ಜನಪದ ಗೀತೆಗಳಲ್ಲಿ ಶಿವ–ಪಾರ್ವತಿಯರ ಮದುವೆಯ ಭಾಗವು ತುಂಬಾ ಸ್ವಾರಸ್ಯಕರವಾಗಿ ಮೂಡಿ ಬಂದಿದೆ. ಭೂಲೋಕಕ್ಕೂ –ಕೈಲಾಸಕ್ಕೂ ಸೇತುವಾದ ಗಿರಿಜಾ ಕಲ್ಯಾಣವು ಜನಪದರ ಜಾಣ್ಮೆಯ ಅಭಿವ್ಯಕ್ತಿಯಲ್ಲಿ ಬೆಳಗಿದೆ. ಮಗಳು ಹುಟ್ಟಿ ಪ್ರಾಯಕ್ಕೆ ಬಂದಾಗ ಪರ್ವತ ರಾಜ ಮಗಳ ಮದುವೆ ಮಾಡಲು ಚಿಂತಿತನಾಗುತ್ತಾನೆ. ಲೋಕ ಸಹಜವಾದ ರೀತಿಯಲ್ಲಿ ಗೀತೆಯ ಬೆಳವಣಿಗೆಯಾಗುತ್ತದೆ. ಗೌರಿಯ ಹುಟ್ಟು ಬೆಳವಣಿಗೆಯನ್ನು ಕೇವಲ ಒಂದೇ ಗೀತೆಯಲ್ಲಿ ಕಟ್ಟಿರುವ ರೀತಿ ಸೊಗಸಾಗಿದೆ. ಜನಪದರ ಸಂಗ್ರಹ ಚಾತುರ್ಯವನ್ನು ಮೆಚ್ಚಲೇಬೇಕು.

ದೇವರಿಗೆ ಅಗಾಧ ಶಕ್ತಿ ಇದೆಯೆಂದು ಜನಪದರು ನಂಬುತ್ತಾರೆ. ದೇವರ ದಯದಿಂದ ತಮಗೆ ಒಳ್ಳೆಯ ಬದುಕು ಪ್ರಾಪ್ತವಾಗಿದೆ. ದೇವರ ದಯೆ ಇಲ್ಲದಿದ್ದರೆ ಬದುಕು ದುಸ್ಸಾಧ್ಯವಾಗುತ್ತದೆ. ಅದಕ್ಕಾಗಿ ಹರಕೆ, ಆರಾಧನೆ, ಪ್ರಾರ್ಥನೆ, ವೃತ ಪೂಜೆಗಳಿಂದ ದೇವರನ್ನು ಒಲಿಸಿಕೊಳ್ಳಲು, ಆತನ ಕೃಪೆಗೆ ಪಾತ್ರರಾಗಲು ನಿರಂತರ ಪ್ರಯತ್ನಿಸುತ್ತಾರೆ. ಈ ಹಿಂದೆ ಪ್ರಸ್ತಾಪಿಸಿದಂತೆ ಬಾಯಿಗೆ ಬೀಗ ಜಡಿದುಕೊಳ್ಳುವುದು, ಉರುಳು ಸೇವೆ ಸಲ್ಲಿಸುವುದು, ಸಿಡಿಯಾಡುವುದು, ಬೇವಿನ ಉಡುಗೆ ಇತ್ಯಾದಿ ಹರಕೆಗಳನ್ನು ಸಲ್ಲಿಸುತ್ತಾರೆ. ಬೆಳಕಾಗುವ ಮೊದಲು ಎದ್ದು ಪಶು–ಪಕ್ಷಿಗಳಿಂದ ಎಂಜಲಾಗದ ನೀರಿನಿಂದ, ದುಂಬಿ ಮುಟ್ಟದ ಹೂವಿನಿಂದ ಪೂಜೆ ಸಲ್ಲಿಸುವುದನ್ನು ಅನಾದಿ ಕಾಲದಿಂದಲೂ ಪಾಲಿಸಿಕೊಂಡು ಬಂದಿದ್ದಾರೆ. ದೈವದ ಸಿಟ್ಟಿನಿಂದ ಮಾನವನಿಗೆ ಉಳಿಗಾಲವಿಲ್ಲ. ಗ್ರಾಮದೇವತೆಗಳನ್ನು ಕುರಿತ ಅನೇಕ ನಂಬಿಕೆಗಳು, ಕಲ್ಪನೆಗಳು ಜನಪದ ಗೀತೆಗಳಲ್ಲಿ ಮೂಡಿಬಂದಿರುವುದನ್ನು ಕಾಣಬಹುದಾಗಿದೆ.

### ೫.೪ ದೇವರು ಮತ್ತು ಜನಪದರ ಸಂಬಂಧ

ಅನಾದಿ ಕಾಲದಿಂದಲೂ ಮಾನವ ದೇವರನ್ನು ಆರಾಧಿಸುತ್ತಾ ಬಂದಿದ್ದಾನೆ. ಆದಿ ಮಾನವ ಪ್ರಕೃತಿ ಒಡ್ಡಿದ ಸಮಸ್ಯೆಗಳಿಗೆ ಕಂಡುಕೊಂಡ ಉತ್ತರಗಳಲ್ಲಿ ದೈವಾರಾಧನೆಯೂ ಒಂದು. ಅಲೆಮಾರಿಯಾಗಿದ್ದ ಮಾನವ ಕೃಷಿಯನ್ನು ಕಲಿತು ಒಂದೆಡೆ ನೆಲೆ ನಿಂತು ಬದುಕಲು ಪ್ರಾರಂಭಿಸಿದ ಮೇಲೆ ದೈವಾರಾಧನೆಯು ಗಟ್ಟಿಯಾಗಿ ನೆಲೆಯೂರಿತು. ವೈಜ್ಞಾನಿಕ ದೃಷ್ಟಿ, ವೈಚಾರಿಕ ಪ್ರಜ್ಞೆ ಪ್ರಖರವಾಗಿರುವ ಈ ಕಾಲದಲ್ಲಿಯೂ ದೈವಾರಾಧನೆ ಕಡಿಮೆಯಾಗದಿರುವುದು ಬೆರಗನ್ನುಂಟು ಮಾಡುತ್ತದೆ. ಆದಿಮಾನವನ ಕಾಲದಲ್ಲಿ ಹುಟ್ಟಿಕೊಂಡ ದೈವದ ಕಲ್ಪನೆ ಹೆಚ್ಚು ವ್ಯಾಪಕವಾಗಿ ಬೆಳೆದು ನಿಂತಿದೆ. ಅದು ಜನಪದರಲ್ಲಿಯೂ ವ್ಯಾಪಕವಾಗಿದೆ.

ಬದುಕಿನಲ್ಲಿ ಅನೇಕ ಕಷ್ಟ ಕಾರ್ಪಣ್ಯಗಳು ಬರುವುದು ಸ್ವಾಭಾವಿಕ. ಇಂತಹ ಸಂದರ್ಭಗಳಲ್ಲಿ ಪರರಿಂದ ಸಹಾಯ ಬಯಸುವುದು ಜನಪದರಿಗೆ ಕಷ್ಟದ ಮಾತು. ಒಂದು ವೇಳೆ ಸಹಾಯ ಪಡೆದರೂ ಸಾಕೆನಿಸುವುದಿಲ್ಲ. ಕೆಲವೊಮ್ಮೆ ಸ್ವಾಭಿಮಾನವೂ ಅಡ್ಡಿಯಾಗುತ್ತದೆ. ಮನುಷ್ಯನಿಗೆ ಬೇಕಾಗುವ ಮೂಲಭೂತ ಅವಶ್ಯಕತೆಗಳೆಂದರೆ ಆಹಾರ, ಬಟ್ಟೆ ಹಾಗೂ ವಸತಿ. ಇವುಗಳನ್ನು ಪಡೆಯುವುದಕ್ಕೆ ಆತ ಶಕ್ತಿಮೀರಿ ಪ್ರಯತ್ನಿಸುತ್ತಾನೆ. ಏಕೆಂದರೆ ಅವನ ಪ್ರಯತ್ನಕ್ಕೆ ಸಿಗುವ ಫಲವಾಗಿವೆ. ಆದರೆ ಆರೋಗ್ಯ, ಆಯುಷ್ಯ, ಕುಟುಂಬ, ಮಕ್ಕಳು, ಗೆಲುವು, ಗೌರವ, ಮರ್ಯಾದೆ ಯಶಸ್ಸುಗಳಿಗಾಗಿ ದೇವರ ಮೊರೆ ಹೋಗುತ್ತಾನೆ. ದೇವರ ಕೃಪೆಯನ್ನು ಸಂಪಾದಿಸುವುದಕ್ಕೆ ಜನಪದರು ಭಕ್ತಿಯೆಂಬ ಬೆಳೆ ಬೆಳೆಯಬೇಕಾಗುತ್ತದೆ. ಯಾವಾಗಲೂ ಜನಪದರಿಗೆ ತಾವು ವಾಸಿಸುವ ಸಮಾಜ ಸ್ವಾಸ್ಥ್ಯವಾಗಿರಬೇಕೆಂದು ಆಸೆ. ಎದೆಗುಂದುವ ಸಂದರ್ಭದಲ್ಲೂ ಕಠಿಣ ನಿಲುವುಗಳನ್ನು ಹೊಂದಿ ದೇವರನ್ನು ಸ್ಮರಿಸುತ್ತಾ ಬಂದಿದ್ದಾರೆ.

"ನಮ್ಮ ಒಕ್ಕಲಿಗನಿಗೆ ಧರ್ಮಕ್ಕಿಂತ ದೇವರ ಭಾವನೆಯೇ ದೊಡ್ಡದು. ಅವನಿಗೆ ಊರ ಮುಂದಿನ ಪಾದಗಟ್ಟೆಯ ಬಸವನೂ ಬೇಕು, ಊರಹೊರಗಿನ ಗರುಡಗಂಬದೆದುರಿನ ಹನುಮನೂ ಬೇಕು; ರೋಗಾದಿಗಳ ಪೀಡೆಯಾದರೆ ಮಾರಿ, ಮಸಣಿ ಮೊದಲಾದ ದೇವತೆಗಳೂ ಬೇಕು. ಭೂ ಪಿಶಾಚಿಗಳ ಕಾಟ, ಉಪಟಳವಾದರೆ ನವಗ್ರಹಾದಿಗಳ ಬಲವೂ ಬೇಕು."(ಬಿ. ಎಸ್. ಗದ್ದಗಿಮಠ, ೧೯೬೨, ಪು-೯) ಜನಪದರ ಜೀವನವೇ ಒಂದು ವಿಧವಾದ ದೈವಭಕ್ತಿಯಿಂದ ಕೂಡಿದೆ. ದೇವರು ಮನುಷ್ಯರಂತೆಯೇ ಗೆಳೆಯನಾಗಿ, ಹಿತೈಷಿಯಾಗಿ ಹತ್ತಿರದವನಾಗಿ ಕಾಣುತ್ತಾನೆ. ವಿವಿಧ ದೇವರನ್ನು ಪೂಜಿಸುವ ಆತನಿಗೆ ಅಪನಂಬಿಕೆ ಬಂದರೆ ತತ್‌ಕ್ಷಣ ದೇವರನ್ನೇ ಬದಲಾಯಿಸುತ್ತಾನೆ. ಆದರೆ ಹಳೆಯ ದೇವರ ಸ್ಮರಣೆಯನ್ನು ಮರೆಯುವುದಿಲ್ಲ. ಭಕ್ತಿಯಿಂದ ಬದುಕು ನಡೆಸುತ್ತ, ಉತ್ಸಾಹ, ಸಂತೋಷದಿಂದ ಇದ್ದಾಗ ದೇವರನ್ನು ಮನದುಂಬಿ ಹಾಡುತ್ತಾನೆ. ಕಷ್ಟಗಳು ಬಂದಾಗ ದೇವರ ಮೇಲೆಯೇ ಭಾರ ಹಾಕುತ್ತಾನೆ. ದೇವರಿಲ್ಲದೆ ಜನಪದರ ಬದುಕಿಲ್ಲ. ಅವರಿಗೆ ದೇವರ ಬಗೆಗಿನ ನಂಬಿಕೆ ಅಪಾರ. ನಿತ್ಯ ಬದುಕಿನಲ್ಲಿ ದೇವರ ಪೂಜಿಸುತ್ತ, ಹಬ್ಬ, ಜಾತ್ರೆ, ಉತ್ಸವಗಳಲ್ಲಿ ದೇವರನ್ನು ಆರಾಧಿಸುತ್ತಾ ಬಂದವರು. ಧರ್ಮದ ನೆರಳಿನಲ್ಲಿ ದೇವರನ್ನು ಕಾಣುತ್ತ ನೈತಿಕ ಮೌಲ್ಯಗಳನ್ನು ಅಳವಡಿಕೊಂಡು ಸುಖಿ ಬದುಕು ನಡೆಸಿದವರು.

ದೇವರ ನೆನೆದಾರೆ ಸಾವ್ಹುಟ್ಟು ನಮಗಿಲ್ಲ
ಹಾವು ಕಚ್ಚಿದರೂ ವಿಷವಿಲ್ಲ । ಸರ್ಪಾನ
ಹೆಡೆಯ ದಾಟಿದರೂ ಭಯವಿಲ್ಲ ।
(ವಿನೀತ ರಾಮಚಂದ್ರರಾಯ, ೧೯೬೦, ಪು-೩೪)

ಕಷ್ಟ-ಸುಖ, ನೋವು-ನಲಿವು ಎಲ್ಲ ಕಾಲದಲ್ಲಿ ಶಿವಧ್ಯಾನ ಮಾಡಬೇಕು. 'ಸಂಕಟ ಬಂದಾಗ ವೆಂಕಟರಮಣ' ಎನ್ನುವಂತೆ ಜನಪದರ ನಂಬಿಕೆ ಇಲ್ಲ. ಕಷ್ಟದಲ್ಲಿ ಶಿವಧ್ಯಾನ ಮಾಡುವವರು ನಿಜವಾದ ಶಿವಭಕ್ತರಾಗುವುದಿಲ್ಲ ಎಂಬುದು ಅವರ ಭಾವನೆ. ಜನಪದರ ಮುಗ್ಧ ಭಕ್ತಿಯ ವ್ಯಾಪಕತೆಯನ್ನು ಇಲ್ಲಿ

ಗುರುತಿಸುತ್ತೇವೆ. "ಒಕ್ಕಲಿಗೆ ದೇವರು ಅನಂತಕೋಟಿ ಅವುಗಳಲ್ಲಿ ಅವನಿಗೆ ಹೆಚ್ಚಿನ ದೇವರೆಂದರೆ ಮಹಾದೇವ; ಮೆಚ್ಚಿನ ದೇವರೆಂದರೆ ಬಸವಣ್ಣ. ಮಹಾದೇವನಿಗೆ ಶಿವನೆಂದೂ ಮುಕ್ಕಣ್ಣನೆಂದೂ ಶಿವಲಿಂಗವೆಂದೂ ಬೇರೆ ಬೇರೆ ಹೆಸರಿಟ್ಟು ಭಕ್ತಿಯಿಂದ ಸ್ತುತಿಸಿದ್ದಾನೆ" (ಬಿ. ಎಸ್. ಗದ್ದಗಿಮಠ, ೧೯೫೬, ಪು-೧೮)

ಎದ್ದೋನೆ ನಿಮಗ್ಯಾನ ಎಳುತಲೆ ನಿಮಗ್ಯಾನ
ಸಿದ್ಧರ ಜ್ಞಾನ ಶಿವಜ್ಞಾನ । ಮಾಶಿವನೆ
ನಿದ್ದೆಗಣ್ಣಾಗೆ ನಿಮಗ್ಯಾನ ।

(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೯)

ಉದಯಕಾಲದಲ್ಲಿ ಏಳುವ ಜನಪದರಿಗೆ ಹಾಸಿಗೆಯಲ್ಲಿಯೇ ಶಿವನನ್ನು ಸ್ಮರಣೆ ರೂಢಿಗತ, ಆಚಾರಗಳು ಸಾಕಷ್ಟಿದ್ದರೂ ಕೆಲಸದ ಮಧ್ಯೆ ಅವುಗಳನ್ನು ಪೂರೈಸಲು ಸಮಯದ ಅಭಾವ. ನಿತ್ಯ ತಾಸೆರೆಡು ತಾಸು ಪೂಜೆಗೆಂದೇ ಪ್ರತ್ಯೇಕವಾಗಿ ಕಾಲಹರಣ ಮಾಡದ ಜನಪದರು ಪ್ರತಿ ಗಳಿಗೆಯೂ ದೇವರ ನಾಮಸ್ಮರಣೆ ಮಾಡುತ್ತಾರೆ. ಏಳುತ್ತಲೇ ಶಿವನ, ಸಿದ್ಧಲಿಂಗಯತಿಗಳ ಧ್ಯಾನಿಸುವ ಜನಪದರಿಗೆ ಬೆಳಗಿನಿಂದ ಬೈಗಿನವರೆಗೆ, 'ಶಿವಶಿವ' ಎಂಬ ಪದವನ್ನು ಬಿಡಲೊಲ್ಲರು. ದೇವರ ನಾಮಬಲದಿಂದ ಪಾಪ ಪರಿಹಾರವಾಗುತ್ತದೆ ಎಂಬುದನ್ನು ನಂಬಿದ್ದಾರೆ. ನಿತ್ಯದ ಕಾಯಕದಲ್ಲಿ ಭಕ್ತಿಯನ್ನು ಅಳವಡಿಸಿಕೊಂಡಿದ್ದಾರೆ. ಊಳುವಾಗ, ಕುಟ್ಟುವಾಗ, ಬೀಸುವಾಗಲೂ ಜನಪದರು ದೇವರ ಧ್ಯಾನಿಸದೇ ಇರಲಾರರು. ನಾರಾಯಣನೇ ನಿನ್ನ ಹೆಸರುಳ್ಳ ಬೀಜಗಳನ್ನು ನಾನೆಲ್ಲಿ ಬಿತ್ತಲಿ? ಎಂದು ಪ್ರಶ್ನಿಸಿಕೊಂಡ ಜನಪದರು. ಹೊಲವೆಂಬ ನಾಲಗೆಯೊಳಗೆ ನಿನ್ನ ನಾಮದ ಬೀಜಗಳನ್ನು ಬಿತ್ತಿ ಅದ್ಭುತವಾದ ಫಸಲನ್ನು ಪಡೆಯುತ್ತೇನೆಂದು ಭಕ್ತಿ ವ್ಯಕ್ತಪಡಿಸಿದ್ದಾರೆ.

ನಾರಾಯಣ ನಿನ್ನ ನಾಮದ ಬೀಜವ
ನಾನೆಲ್ಲಿ ಬಿತ್ತಿ ಬೆಳೆಯಲಿ । ನಿನ ನಾಮ
ನಾಲೀಗೆ ಮೇಲೆ ಬೆಳೆದೇನೊ ।

(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೧)

ಜನಪದರು ಮನೆದೇವರು, ಕುಲದೇವತೆ ಹಾಗೂ ಗ್ರಾಮದೇವತೆಗಳೆಂದು ವಿಭಜಿಸಿ ದೇವರನ್ನು ಬೇರೆಬೇರೆಯಾಗಿ ಪೂಜಿಸುತ್ತಾರೆ. ಒಮ್ಮೊಮ್ಮೆ ಆತ್ಮತೃಪ್ತಿಗಾಗಿ ಅನ್ಯ ಧರ್ಮದ ದೇವರನ್ನು ಆರಾಧಿಸುವುದುಂಟು. ಜೊತೆಗೆ ಮಹಿಮಾಪುರುಷರನ್ನು, ಸಾಧು ಸಂತರನ್ನು ಹಾಗೂ ಶರಣರನ್ನು ಪೂಜಿಸುವರು. ಅವರ ಆದರ್ಶಗಳನ್ನು ಪಾಲಿಸುವರು.

ಹಳ್ಳಿಗಳಲ್ಲಿ ರೈತನು ಮಠಗಳಿಗೆ, ಪವಿತ್ರ ಕ್ಷೇತ್ರಗಳಿಗೆ ನಡೆದುಕೊಳ್ಳುತ್ತಾನೆ. ದಾಸೋಹಕ್ಕೆ ದಾನವನ್ನು ನೀಡುತ್ತಾನೆ. ಕಾಟಪೀಡೆಗಳನ್ನು ದೂರ ಮಾಡಲು ಊರಹೊರಗಿನ ಹನುಮಪ್ಪನನ್ನು ನೆನೆಯುತ್ತಾನೆ. ಗ್ರಾಮದೇವತೆಗಳಾದ ದ್ಯಾಮವ್ವ, ದುರಗವ್ವನಿಗೆ ರೋಗಾದಿಗಳು ಹಬ್ಬಿದಾಗ ನೀರೆರೆದು ಭಕ್ತಿಯಿಂದ ದೀಪ ಕೊಡುತ್ತಾನೆ. ದೇವರು ಜನಜೀವನದಲ್ಲಿ ಬೆರೆತು ಹೋಗಿದ್ದಾನೆ. ಹತ್ತಾರು ಧರ್ಮ

ದೇವತೆಗಳ ಸಂದಿಗ್ಧತೆಯನ್ನು ತಿರಸ್ಕರಿಸಿ, ತಾಯಂತೆ ಹೊತ್ತು, ಸಾಕಿಸಲಹುವ ಭೂಮಿಯನ್ನು ನೆನೆಯುವ ಸ್ಪಷ್ಟ ನಿಲುವು ಇಲ್ಲಿದೆ. ಶಿಷ್ಟರ ಮೂರ್ತಿ ಪೂಜೆ ಇಲ್ಲಿಲ್ಲ. ಪ್ರಕೃತಿ ಆರಾಧನೆ ಇಲ್ಲಿದೆ. ಗಾಳಿ, ನೀರು, ಬೆಳಕು, ಮಳೆ, ಗಿಡಮರಗಳೆಲ್ಲವೂ ಜನಪದರಿಗೆ ಪೂಜ್ಯನೀಯ.

ಜನಪದ ಮಹಿಳೆ ಶ್ರಮಜೀವಿ. ದುಡಿದು ಉಣ್ಣಬೇಕೆಂಬ ಮನೋಭಾವವುಳ್ಳವಳು. ಸೋಮಾರಿಯಾಗಿ ಕಾಲ ಕಳೆಯುವುದನ್ನು ಎಂದಿಗೂ ಇಚ್ಛೆಪಡುವುದಿಲ್ಲ. ತನಗೆ ಸಹಕರಿಸಿದವರ ಬಗ್ಗೆ ಅಷ್ಟೆ ಕೃತಜ್ಞತೆಯುಳ್ಳವಳು. ತನಗೆ ಆಹಾರವನ್ನು ಕೊಟ್ಟು ಬದುಕಲು ದಾರಿ ತೋರಿದ ಭೂದೇವಿಯನ್ನು, ಜ್ಞಾನ ಕೊಟ್ಟ ಸರಸ್ವತಿಯನ್ನು ಸ್ತುತಿಸಿದ್ದಾಳೆ. ಬೀಸಲು ಕಲಿಸಿದ ಮಹಾ ತಾಯಿಯ ಸ್ಮರಿಸುವುದನ್ನು ಮರೆಯುವುದಿಲ್ಲ.

ಕಲ್ಲು ಕೊಟ್ಟಮ್ಮಗೆ ಎಲ್ಲಾ ಭಾಗ್ಯವು ಬರಲಿ
ಪಲ್ಲಕ್ಕಿ ಮೇಲೆ ಮಗ ಬರಲಿ । ಆ ಮನೆಗೆ
ಮಲ್ಲೀಗೆ ಮುಡಿಯೋ ಸೊಸೆ ಬರಲಿ ।
(ವಿನೀತ ರಾಮಚಂದ್ರರಾಯ, ೧೯೬೦, ಪು-೪೦)

ಬಿತ್ತುವ, ಬೀಸುವ ಪರಿಕರಗಳನ್ನು ಸಿದ್ಧಪಡಿಸಿಕೊಂಡವಳು, ಕೃಷಿ ಮಾಡುವುದನ್ನು ಮಾನವನ ಲೋಕಕ್ಕೆ ಪರಿಚಯಿಸಿದವಳು, ಕಾಳು ಬೀಸಿ, ಹಿಟ್ಟು ಮಾಡಿ ಆಹಾರ ತಯಾರಿಸಿದ ಕ್ರಮವನ್ನು ಕಂಡುಕೊಂಡವಳು ಮಹಿಳೆಯಾಗಿರಬೇಕು ಎಂಬುದನ್ನು ಅನೇಕ ವಿದ್ವಾಂಸರು ಒಪ್ಪಿಕೊಂಡಿದ್ದಾರೆ.

ಜನಪದರಿಗೆ ದೈವದ ಬಗೆಗಿನ ತಾತ್ವಿಕತೆಯಾಗಲೀ, ದಾರ್ಶನಿಕತೆಯಾಗಲೀ ಅವರ ಅರಿವಿನ ಆಚೆಯ ಪ್ರಪಂಚ. ಅದು ಅವರಿಗೆ ಬೇಕಾಗಿಲ್ಲ. ಅವರದು ಮುಗ್ಧ ಭಕ್ತಿ. ತನ್ನ ಕಣ್ಣು ಮುಂದಿರುವ ರೂಪದಲ್ಲಿ ದೈವವನ್ನು ಕಲ್ಪಿಸುವುದಕ್ಕೆ ಮಾತ್ರ ಅವರ ಬುದ್ಧಿ ಸಮರ್ಥವಾದುದು. ಅಮೂರ್ತವಾದುದು ಅವರ ಕಲ್ಪನೆಗೆ ನಿಲುಕದು. ಜನಪದರ ಭಾವನೆಯಲ್ಲಿ ದೇವರು ಜಡವಸ್ತುವಲ್ಲ. ತಮ್ಮಂತೆ ಸಜೀವನೆಂದೇ ಭಾವಿಸುತ್ತಾರೆ. ಮನುಷ್ಯನ ಗುಣಗಳು ಅವನಿಗೂ ಇವೆ ಎಂದು ತಿಳಿಯುತ್ತಾರೆ. ಆದ್ದರಿಂದಲೇ ಜನಪದರ ದೇವರು ಉಣ್ಣುತ್ತಾನೆ. ತಮ್ಮಂತೆಯೇ ಆಡುತ್ತಾನೆ. ಪ್ರಣಯಲೀಲೆಯಲ್ಲಿ ತೊಡಗುತ್ತಾನೆ. ಅದಕ್ಕೇ ಜನಪದರು ದೇವರೊಂದಿಗೆ ಸಲುಗೆಯಿಂದ ಮಾತನಾಡುತ್ತಾರೆ. ಅವನ ಕಷ್ಟ ಸುಖಗಳನ್ನು ವಿಚಾರಿಸುತ್ತಾರೆ. ತಮ್ಮ ಕಷ್ಟಸುಖಗಳನ್ನು ಹೇಳಿಕೊಳ್ಳುತ್ತಾರೆ. ಬಿಳಿಗಿರಿರಂಗಯ್ಯನನ್ನು ಕುರಿತು 'ಎತ್ಲಾಗೆ ಹೊರಟೀರಿ ಹೊರ ಪಯಣ' ಎಂದು ಅವನನ್ನು ತಡೆದು ಕೇಳುತ್ತಾರೆ. 'ಏಳೀರಿ ನಂಜುಂಡ ಎಟ್ಟೊತ್ತು ಸುಖನಿದ್ದೆ' ಎಂದು ಪ್ರೀತಿಯಿಂದ ಎಬ್ಬಿಸುತ್ತಾರೆ. ಜನಪದರಿಗೆ ದೇವರು ತಂದೆ-ತಾಯಿ, ಬಂಧು-ಬಳಗ, ಮಾರ್ಗದರ್ಶಿ, ಕಂಟಕಹರ ಎಲ್ಲವೂ ದೇವರೇ ಆಗಿದ್ದಾನೆ.

ಜನಪದರದ್ದು ಶುದ್ಧ ಭಕ್ತಿ. ಕಪಟ, ಮೋಸ, ಡಾಂಭಿಕ ಭಕ್ತಿಯನ್ನು ಅರಿಯದವರು. ಹಾಸಿಗೆಯಿಂದ ಏಳುತ್ತಲೇ ದೇವರನ್ನು ಹೃದಯ ತುಂಬಿ ಸ್ಮರಿಸುತ್ತಾರೆ. ದಿನವೆಲ್ಲ ದುಡಿದು ರಾತ್ರಿ ಮಲಗುವಾಗ ದೇವರನ್ನು ಸ್ಮರಿಸಿ ನಿದ್ರೆ ಹೋಗುತ್ತಾರೆ. ಅವರು ನೆನೆಯುವ ದೇವರು ಎಂತೋ ಏನೋ ಎಂಬ ಅನುಮಾನ ಅವರಿಗಿಲ್ಲ. ಯಾವ ದೇವರನ್ನೇ ನೆನೆಯಲಿ, ಆ ದೇವರೇ ಅವರಿಗೆ ಸರ್ವಶಕ್ತ.

ಅದು ಊರ ಮುಂದಿನ ಹುಣಿಸೇ ಮರದಡಿಯ ಚೌಡಮ್ಮನೇ ಆಗಿರಬಹುದೂ ಇಲ್ಲವೇ ಊರ ಹೊರಗಿನ ಹನುಮಪ್ಪನಾಗಿರಬಹುದು. ಅವರಿಗೆ ಎಲ್ಲ ದೇವರೂ ಒಂದೇ. ಜನಪದರ ಭಕ್ತಿ ನಿಷ್ಕಳಂಕವಾದುದು. ಚರಾಚರವಸ್ತುಗಳು ಅವರಿಗೆ ದೈವ ಸಮಾನ. ನಿತ್ಯವೂ ಬಳಸುವ ಬಂಡಿ, ಹಗ್ಗ, ರಂಟೆ, ಕುಂಟೆ, ನೇಗಿಲು, ನೊಗ, ಕೂರಿಗೆ ಅವರಿಗೆ ಪೂಜೆಯ ವಸ್ತುಗಳು. ಅವರು ಪೂಜಿಸುವ ವಸ್ತುಗಳನ್ನು ಕುರಿತು ಗೀತೆಗಳು ಹೇರಳವಾಗಿವೆ. ದೈವದ ಪ್ರಜ್ಞೆ ಜನಪದರಲ್ಲಿ ಸದಾ ಜಾಗೃತವಾಗಿರುತ್ತದೆ. ಜನಪದರಲ್ಲಿನ ಶಿವಪ್ರಜ್ಞೆಯನ್ನು ವಚನಕಾರರ ಪ್ರಜ್ಞೆಯೊಂದಿಗೆ ಸಿ.ಪಿ.ಕೆಯವರು ಸಮೀಕರಿಸುತ್ತಾರೆ. "ಈ ಶಿವಪ್ರಜ್ಞೆ ಜೀವನದ ಪ್ರಮುಖ ಬೆಲೆಯಾಗಿ ಮಾತ್ರವಲ್ಲದೆ ಉತ್ಕೃಷ್ಟವಾದ ಕಲೆಯಾಗಿ ಅಭಿವ್ಯಕ್ತಗೊಂಡಿರುವುದು ಮಹತ್ವದ ಸಂಗತಿ. ಜೀವನದ ಮೌಲ್ಯ ಮತ್ತು ಕಲಾ ಮೌಲ್ಯಗಳ ಸಾಮರಸ್ಯ ವಚನಕಾರರಲ್ಲಿ ಮತ್ತು ಜನಪದ ಕವಿಗಳಲ್ಲಿ ಸಿದ್ಧಿಸಿರುವಂತೆ ಪ್ರಾಯಶಃ ಮತ್ತಾವ ಕವಿತೆಗಳಲ್ಲಿಯೂ ಸಿದ್ಧಿಸಿರುವುದಿಲ್ಲ." ಅವರ ಈ ಮಾತು ಜನಪದ ಕವಿಗಳ ದೈವದ ಬಗೆಗಿನ ಕಲ್ಪನೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ. ಒಟ್ಟಿನಲ್ಲಿ ದೇವರ ಕರುಣೆಯಿಂದಲೇ ಹುಟ್ಟು, ಬದುಕು, ಸಾವು ಎಂದು ಜನಪದರು ನಂಬಿದ್ದಾರೆ.

> ಕರುಣ ಬಂದರೆ ಕಾಯೊ, ಮರಣ ಬಂದರೆ ಒಯ್ಯೊ
> ಕರುಣಿ ಕಲ್ಯಾಣ ಬಸವಣ್ಣ । ಕಾಸಿಲಿಂಗ
> ಕಡೆತನಕ ಕಾಯೊ ಅಭಿಮಾನ । (ಹಲಸಂಗಿ ಗೆಳೆಯರು, ೧೯೩೧, ಪು-೨೮)

ದೇವರು ಕೊಡುವವನಿದ್ದಾನೆಂದು ಬಯಸಿದ್ದನೆಲ್ಲ ಕೇಳುವಷ್ಟು ಸ್ವಾಭಿಮಾನ ಹೀನರಲ್ಲ ಜನಪದರು. ಇವರ ದೇವರ ಆರಾಧನೆಯೂ ಸರಳವಾದುದು. ಜನಪದರ ದೇವರು ಕಣ್ಣಿಗೆ ಕಾಣದ, ನಮ್ಮಿಂದ ದೂರವಿರುವ ಯಾವುದೋ ಒಂದು ಅಪರಿಚಿತ, ಅದೃಶ್ಯ ಶಕ್ತಿಯಿಲ್ಲ. ಮಾನವ ಸ್ವಭಾವಗಳಿಂದ ಕೂಡಿದ ಚೇತನ. ಆದ್ದರಿಂದಲೇ ದೇವರ ಜೊತೆ ಮನೆಯ ಸದಸ್ಯನೊಡನೆ ಮಾತನಾಡುವ ರೀತಿಯಲ್ಲಿ ಸಲುಗೆ, ದೇವರನ್ನು ಸಂಭೋದಿಸುವಾಗಲೂ ಶಿವ, ಬೆನಕ, ಬಸವ, ಮಲ್ಲಯ್ಯ, ಲಕುಮಿ, ಲಿಂಗಯ್ಯ, ಸರಸೋತಿ, ಪಾರೋತಿ ಎಂದು ಏಕವಚನದ ಬಳಕೆಯಿದೆ. ಇಲ್ಲಿ ಜನಪದರ ಪ್ರೀತಿ, ಸಲುಗೆಯನ್ನು ಗಮನಿಸಿದರೆ ದೇವರು ಮತ್ತು ಮನುಷ್ಯರ ನಡುವೆ ಜನಪದರು ಯಾವ ಮಧ್ಯಸ್ತಿಕೆಯು ಅಂತರವನ್ನು ಕಲ್ಪಿಸದಿರುವುದು ಗೊತ್ತಾಗುತ್ತದೆ. ದೇವರನ್ನು ತನ್ನ ಮನೆಯ ಸದಸ್ಯನಂತೆ ಸಂಭಾಷಿಸುತ್ತಾರೆ.

ಜನಪದರು ದೈವವನ್ನು ನಂಬಿ ಬದುಕಿದವರು. ತಾವು ನಂಬಿದ ದೇವರನ್ನು ಒಲಿಸಿಕೊಳ್ಳಲು ದೈವದ ನಾನಾ ಬಗೆಯ ರೂಪಗಳನ್ನು ಆರಾಧಿಸುತ್ತಾರೆ. ದೇವರನ್ನು ತಮ್ಮಂತೆ ಬಗೆದು ಮೂರ್ತಿಯನ್ನು ಮಾಡಿ ಗುಡಿಕಟ್ಟಿದರು. ದೇವರ ರೂಪ, ಗುಣ, ಆಕಾರಗಳನ್ನು ಕಲ್ಪಿಸಿಕೊಂಡು ಅಂತೆಯೇ ವೇಷ ಧರಿಸಿಕೊಂಡು ಭಾವಾವೇಶದಿಂದ ಹಾಡಿ ಕುಣಿದರು. ಅದು ಆರಾಧನೆಯಾಗಿ ರೂಢಿಗೆ ಬಂದಿತು. ಹಾಡುವುದರ ಮೂಲಕ ದೇವರನ್ನು ಒಲಿಸಿಕೊಳ್ಳಬಹುದೆಂದು ಭಾವಿಸಿದರು. ಅದು ಕಲೆ ಸಂಗೀತಗಳ ಉಗಮಕ್ಕೆ ನಾಂದಿಯಾಯಿತು. ಜನಪದರು ದೈವದಲ್ಲಿ ಅಪಾರ ಭಕ್ತಿಯುಳ್ಳವರು.

ದೇವರ ಸಂಕಲ್ಪವಿಲ್ಲದೆ ಒಂದು ಹುಲ್ಲು ಕಡ್ಡಿಯೂ ಅಲ್ಲಾಡುವುದಿಲ್ಲವೆಂದು ಭಾವಿಸುತ್ತಾರೆ. ಬದುಕಿನ ಸಂತೋಷಕ್ಕೆ ದೇವರ ಅನುಗ್ರಹಬೇಕೆಂದು ನಂಬುತ್ತಾರೆ. ಬದುಕಿನಲ್ಲಿ ದುಃಖ, ನೋವುಗಳು ಎದುರಾದಾಗ ದೈವದ ಅನುಗ್ರಹ ತಪ್ಪಿದೆ ಎಂದು ಭಾವಿಸಿ ಆ ಅನುಗ್ರಹ ಸಂಪಾದಿಸಲು ಹರಕೆ ಕಟ್ಟಿಕೊಳ್ಳುತ್ತಾರೆ. ಕಾಣಿಕೆಗಳನ್ನು ಸಲ್ಲಿಸುತ್ತಾರೆ. ಶುದ್ಧ ಭಕ್ತಿಯಿಂದ ದೇವರನ್ನು ಆರಾಧಿಸಿದವರೇ ದೇವರು ಒಲಿಯುತ್ತಾನೆ, ಬೇರೆ ಬೇರೆ ರೂಪದಲ್ಲಿ ಬಂದು ದರ್ಶನವನ್ನು ಕೊಟ್ಟು ತಮ್ಮ ಕಷ್ಟಗಳನ್ನು ಪರಿಹರಿಸುತ್ತಾನೆಂದು ನಂಬಿ ಅಂತೆ ಬದುಕಲು ಪ್ರಯತ್ನಿಸುತ್ತಾರೆ. ಅವರ ಮುಗ್ಧ ಭಕ್ತಿಯಲ್ಲಿ ಲವಲೇಶವೂ ಕಲ್ಮಶವಿಲ್ಲ. ಯಾವುದೇ ಕೆಲಸಕ್ಕೆ ತೊಡಗಲಿ ಮೊದಲು ದೈವಸ್ತುತಿಯನ್ನು ಮಾಡಿದ ನಂತರವೇ ಆ ಕೆಲಸವನ್ನು ಪ್ರಾರಂಭಿಸುತ್ತಾರೆ.

'ದೇವನೊಬ್ಬ ನಾಮ ಹಲವು' ಎಂಬ ಸತ್ಯವನ್ನು ಅರಿತ ಜನಪದರು ಕಷ್ಟ ಬಂದಾಗ ಎಲ್ಲ ದೇವರಿಗೂ ಕೈ ಮುಗಿಯುತ್ತಾರೆ. ಶಿವ, ಸರಸ್ವತಿ, ಪಾರ್ವತಿ, ವಿಷ್ಣು, ವಿನಾಯಕರಲ್ಲದೇ ಬಸವಣ್ಣ, ಹನುಮಂತ ಮುಂತಾದ ದೇವರನ್ನು ಸ್ಮರಿಸುತ್ತಾರೆ. ಜನಪದರು ಜ್ಞಾನದ ಅಧಿದೇವತೆಯಾದ ಸರಸ್ವತಿಯನ್ನು ಪರಿಪರಿಯಲ್ಲಿ ಸ್ತುತಿಸಿದ್ದಾರೆ. ಮನುಷ್ಯನಿಗೆ ಭೋಗ ಭಾಗ್ಯಗಳೆಷ್ಟೇ ಇರಲಿ ಅವೆಲ್ಲಕ್ಕಿಂತ ಜ್ಞಾನ ಅಮೂಲ್ಯವಾದುದು. ಜ್ಞಾನವನ್ನು ಪಡೆದುಕೊಳ್ಳಲು ಜನಪದರು ಹಲವು ತ್ಯಾಗಗಳಿಗೂ ಸಿದ್ಧರಾಗಿರುತ್ತಾರೆ.

ನಗ್ಗಾಲ ಮರದಡಿಯ ನಿದ್ರೆಮಾಡೋದ ಬಿಟ್ಟು
ಎಗ್ಗಿಲ್ದೆ ಬಂದೆ ನಿನ ಬಳಿಗೆ । ಸರಸ್ವತಿಯೆ
ನೀನು ಚೆಂದುಳ್ಳಿ ಹಾಡ ಕಲಿಸಮ್ಮ । (ಕರಾಕೃ, ೧೯೫೮, ಪು-೩)

ಮೇಲ್ಕಂಡ ಗೀತೆಯು ಜನಪದರ ಜ್ಞಾನ ದಾಹದ ಮೇಲೆ ಬೆಳಕು ಚೆಲ್ಲುತ್ತದೆ. ನಿದ್ರೆ, ಅಜ್ಞಾನ, ಜಾಡ್ಯಕ್ಕೆ ಸಂಕೇತವಾದುದು. ತಣ್ಣನೆಯ ನೆರಳು ನೀಡುವ ನಗ್ಗಾಲದ ಮರದ ಕೆಳಗೆ ಸುಖವಾಗಿ ನಿದ್ರೆ ಮಾಡಬಹುದಿತ್ತು. ಅದರಿಂದ ವಿಶ್ರಾಂತಿ ಸಿಗುತ್ತಿತ್ತು. ಆದರೆ ಜನಪದರಿಗೆ ಸುಖನಿದ್ರೆ ಬೇಕಾಗಿಲ್ಲ. ಅವರಿಗೆ ಬೇಕಿರುವುದು ಹಾಡು, ಅಂದರೆ, ಜ್ಞಾನ ಸರಸ್ವತಿಯ ಬಳಿಯಲ್ಲಿದೆ. ಅದನ್ನು ಹುಡುಕುತ್ತ ಬಂದಿದ್ದಾರೆ. ಜ್ಞಾನ ನಿಂತ ನೆಲೆಯಲ್ಲಿ ಸಿಗುವುದಿಲ್ಲ. ಜ್ಞಾನಕ್ಕಾಗಿ ಹುಡುಕಬೇಕು. ಅದಕ್ಕಾಗಿ ಪರಿಶ್ರಮಪಡಬೇಕು. ಜ್ಞಾನವೇ ಆಗಲೀ ಕಲೆಯೇ ಆಗಿರಲಿ ಅದರಲ್ಲಿ ಸ್ವಂತ ಇಚ್ಛೆಯಿಂದ ಕಲಿತರೆ ಮಾತ್ರ ಬೇಕಾದ್ದನ್ನು ಪಡೆಯುವುದಕ್ಕೆ ಸಾಧ್ಯ. ವಿದ್ಯೆಯ ಅದಿದೇವತೆಯಾದ ಸರಸ್ವತಿಯೇ ಹಾಡನ್ನು ಕಲಿಸಲು ಬಂದಿದ್ದಾಳೆಂದು ಅವಳ ರೂಪ ಸೌಂದರ್ಯವನ್ನು ಹೊಗಳಿದ ಜನಪದರು ಚಂದದ ಒಂದು ಹಾಡ ಕಲಿಸೆಂದು ಭಿನ್ನವಿಸಿಕೊಳ್ಳುವ ರೀತಿ ಸೊಗಸಾಗಿದೆ.

ಉಂಟೇಲೆ ಮಾವಿನ ದಂಟಿನಲ್ಲಿರುವೋಳೆ
ಘಂಟೇಯ ಗತಿಗೆ ನಲಿಯೋಳೆ । ಸರಸ್ವತಿಯೇ
ನೀನು ಗಂಟಲಿಗಕ್ಷರವ ನಿಲಿಸವ್ವ । (ಕರಾಕೃ, ೧೯೫೮, ಪು-೫)

ಪರಂಪರಾಗತ ದೇವರನ್ನು ಮಾತ್ರವಲ್ಲದೇ ಅಸಂಖ್ಯ ಸ್ಥಳೀಯ ದೇವದೇವತೆಯರನ್ನು ಹೆಸರಿಸಿ ಕಳಕಳಿಯಿಂದ ಹಾಡಿದ್ದಾರೆ; ಪೂಜಿಸಿದ್ದಾರೆ. ಜನಪದ ಗೀತೆಗಳು ಕಾಯಕದಿಂದಲೇ ಹುಟ್ಟಿರುವಂತಹವು. ಯಾವುದೇ ಕಾಯಕದಲ್ಲಿ ತೊಡಗಿದಾಗ ಇಲ್ಲವೇ ಮುಗಿಸಿದಾಗ ಜನಪದರು ದೇವರನ್ನು ನೆನೆಯುತ್ತಾರೆ. ಜನಪದರ ದೈವಸ್ತುತಿ ಕಾಟಾಚಾರದ್ದಲ್ಲ. ಕೇವಲ ಸಂಪ್ರದಾಯ ಪಾಲನೆಗೆ ಮೀಸಲಾಗಿಲ್ಲ. ಹೃದಯಾಂತರಾಳದಿಂದ ಹೊರಹೊಮ್ಮಿದ ಔಚಿತ್ಯಪೂರ್ಣ ನುಡಿಗಳಾಗಿವೆ.

ಜನರು ಯಾವುದೇ ಕಾರ್ಯವನ್ನು ಪ್ರಾರಂಭಿಸುವ ಮುನ್ನ ಗಣಪತಿಯನ್ನು ಆರಾಧಿಸುತ್ತಾರೆ. ಗಣಪತಿ ಸರ್ವ ವಿಘ್ನ ನಿವಾರಕನೆಂದು ನಂಬಿಕೆ ಜನರಲ್ಲಿದೆ. ತಾವು ತೊಡಗುವ ಕಾರ್ಯ ಅಡೆ ತಡೆಯಿಲ್ಲದೆ ನಿರ್ವಿಘ್ನವಾಗಿ ಸಾಂಗವಾಗಿ ನಡೆಯಲೆಂದು ಜನರು ಗಣಪತಿಯನ್ನು ಆರಾಧಿಸುತ್ತಾರೆ. ಜನಪದರಲ್ಲಿಯೂ ಗಣಪತಿಯನ್ನು ಕುರಿತು ಇದೇ ಭಾವನೆಗಳಿವೆ. ಗಣಪತಿ ವಿಘ್ನನಿವಾರಕ, ಕಷ್ಟಹರ, ಶಿಷ್ಟ ಪರಿಪಾಲಕ ಎಂಬ ನಂಬಿಕೆಗಳನ್ನು ಗಟ್ಟಿಗೊಳಿಸುವ ದೃಷ್ಟಾಂತ ಪುರಾಣಗಳು ಜನಪದರಲ್ಲಿ ಇಂದಿಗೂ ಪ್ರಚಲಿತದಲ್ಲಿವೆ. ಜನಪದ ಗೀತೆಗಳಲ್ಲಿ ಗಣಪತಿಯ ಸ್ತುತಿಗೀತೆಗಳು ಸಾಕಷ್ಟಿವೆ. ಹುವರು ಗೀತೆಗಳು ಗಣಪತಿಯ ಸ್ತುತಿಯೊಂದಿಗೆ ಪ್ರಾರಂಭವಾಗುತ್ತದೆ. 'ಶರಣು ಶರಣುವಯ್ಯ ಗಣನಾಯ್ಕ ನಮ್ಮ ಕರುಣದಿಂದಲೇ ಕಾಯೊ ಗಣನಾಯ್ಕ' ಎಂದು ಚೌತಿ ಹಬ್ಬದಲ್ಲಿ ಗಣಪತಿಯನ್ನು ಆರಾಧಿಸುತ್ತಾರೆ. ವಿಗ್ರಹವನ್ನು ಕೂರಿಸುವಷ್ಟೂ ದಿನ ಪ್ರತಿನಿತ್ಯ ಎಳ್ಳುಂಡೆ, ಜೇನುತುಪ್ಪ, ಹೋಳಿಗೆ, ತುಪ್ಪ ಇವು ಗಣಪತಿಗೆ ಅತಿ ಪ್ರಿಯವಾದ ತಿನಿಸುಗಳಿಂದ ನೈವೇದ್ಯ ಮಾಡುತ್ತಾರೆ. ಗಣಪತಿಯನ್ನು ಕುರಿತಂತೆ ಅನೇಕ ಕಥೆಗಳು ಪುರಾಣಗಳು ಪ್ರಚಲಿತದಲ್ಲಿವೆ. ಪುರಾಣಗಳ ಮುಖ್ಯ ಘಟನೆಗಳು ಸ್ತುತಿಗೀತೆಗಳಲ್ಲಿ ಹಾಡಲ್ಪಟ್ಟಿರುವುದನ್ನು ಕಾಣಬಹುದು. ಪುರಾಣದಲ್ಲಿ ಹೇಳಿರುವಂತೆ ಪಾರ್ವತಿಯ ದೇಹದ ಮಣ್ಣಿನಿಂದ ಗಣಪತಿ ಹುಟ್ಟಿದ. ಆತ ಶಿವನ ಕುಮಾರ. ಬ್ರಹ್ಮಚಾರಿ. ಮೂಷಕ ವಾಹನ. ಸರ್ವರಿಗೂ ಸಿದ್ಧಿಯನ್ನು ದಯಪಾಲಿಸುವ ಗಣನಾಯಕ ಎಂದು ಜಜಪದರು ನಂಬಿದ್ದಾರೆ.

ಸುರುವಿಗಿ ನೆನಿಬೇಕ ಪಾರ್ವತಿಪತಿಯನ್ನ
ಮಗರಾಮನಾದ ಗಣಪನ್ನ । ನೆನಿದರ
ಬರುವಂಥ ವಿಘ್ನ ಬಟಬಯಲ । (ಹಲಸಂಗಿ ಗೆಳೆಯರು, ೧೯೩೧, ಪು-೩೦)

ಗಣಪತಿ ಸ್ತುತಿಯ ಬಹುಭಾಗ ಗಣಪತಿ ಪುರಾಣವನ್ನು ನೆನಪು ಮಾಡಿಕೊಡುವಂತಿದೆ. ಜನಪದರ ಸಹಜ ಗುಣಗಳಾದ ನೇರ ಮಾತಿನ, ಸರಳ ನಿರೂಪಣೆ ತಿಳಿಹಾಸ್ಯದಿಂದ ಕೂಡಿದೆ. ಜನಪದರ ಸರಸ ಭಾವನೆಗೆ ಕನ್ನಡಿ ಹಿಡಿಯುವಂತಿದೆ. 'ಕಂಟಕ ಹರ ನೀನು ಗಣನಾಯಕ, ನಮಗೂ ವರವನ್ನು ದಯ ಪಾಲಿಸಯ್ಯ ಗಣನಾಯ್ಕ' ಎಂದು ಭಕ್ತಿಯಿಂದ ಬೇಡಿದ್ದಾರೆ. ಗಣಪತಿ ಕಂಟಕಹರನೂ ಹೌದು ವಿದ್ಯೆ, ಬುದ್ಧಿಯನ್ನು ದಯಪಾಲಿಸುವನೂ ಹೌದು. ಅದಕ್ಕಾಗಿ ಗಣದೇವನ ಪೂಜೆಯನ್ನು ಜನಪದರು ರೂಢಿಸಿಕೊಂಡು ಬಂದಿದ್ದಾರೆ.

ಅವನು ತಮ್ಮಂತೆ ಲೋಕದ ವಾಸಿಯಾಗಿರುವನೆಂದು ತಿಳಿಯುತ್ತಲೇ ಅವನ ಸರ್ವವ್ಯಾಪಿ ಗುಣವನ್ನು ಕೊಂಡಾಡುತ್ತಾರೆ. ದೇವರು ಸರ್ವಶಕ್ತನೆಂಬುದನ್ನು ಜನಪದರು ಬಲ್ಲರು. ದೇವರನ್ನು

ಲೋಕದ ವ್ಯಕ್ತಿಯಾಗಿ ಅಲೌಕಿಕ ಶಕ್ತಿಯಾಗಿ ಏಕಕಾಲಕ್ಕೆ ಪರಿಗ್ರಹಿಸುವ ರೀತಿ ಜನಪದರದ್ದು. ಇತರರ ಪಾಲಿಗೆ ಅಸಾಧ್ಯವಾದ ಈ ಗ್ರಹಿಕೆ ಜನಪದರಿಗೆ ಬಹು ಸುಲಭ. ದೇವರ ಸರ್ವಾಂತರಯಾಮಿ ಗುಣವನ್ನು ಹೀಗೆ ವರ್ಣಿಸುತ್ತಾರೆ.

ಹೂವಿನಾಗ ಹುದಿಗ್ಯಾನ ಮಾಲ್ಯಾಗ ಮಲಗ್ಯಾನ
ಮೊಗ್ಗ್ಯಾಗ ಕಣ್ಣು ತೆರೆದಾನ । ಲಿಂಗಯ್ಯನ
ನೋಡಟಿಗೆ ನಿದ್ದಿ ಬಯಲಾಗಿ ।

(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೭, ಪು-೧)

ದೇವರು ಎಲ್ಲೆಲ್ಲಿಯೂ ಇದ್ದಾನೆ. ಚೆಲುವು ಎಲ್ಲಿದೆಯೋ ಅದೆಲ್ಲ ದೇವರ ಮಹಿಮೆ. ಸೃಷ್ಠಿಯ ಪತಿಕಣದಲ್ಲೂ ದೇವರಿದ್ದಾನೆ. ಹೂವು, ಹೂವಿನಿಂದ ಕಟ್ಟಿದ ಮಾಲೆ, ಸುಂದರವಾದ ಮೊಗ್ಗು ಎಲ್ಲೆಲ್ಲಿಯೂ ದೇವರಿದ್ದಾನೆ. 'ಮೊಗ್ಗಿನಲ್ಲಿ ಕಣ್ಣು ತೆರೆದಾನ'. ಎಂಬ ನುಡಿಯಲ್ಲಿ ಜನಪದರ ಸೌಂದರ್ಯದ ಗ್ರಹಿಕೆಯ ದ್ಯೋತಕವಾಗಿದೆ. ಯಾವುದೇ ಹೂವಿನ ಮೊಗ್ಗು ನೋಡಲು ತುಂಬಾ ಸುಂದರವಾಗಿರುತ್ತದೆ. ಹೂವಿನ ಮೊಗ್ಗು ಶಿವನ ಕಣ್ಣಿನಂತೆ ಹಾಡಿದ ಜನಪದರು ಸರ್ವಾಂತರಯಾಮಿಯಾದ ದೈವದ ದರ್ಶನದಿಂದ ನಿದ್ದೆ ಬಯಲಾಯಿತು ಎಂದಿದ್ದಾರೆ. ನಿದ್ದೆ ಜಡತೆಗೆ, ಅಜ್ಞಾನಕ್ಕೆ ಸಂಕೇತವಾಗಿದೆ. ಲಿಂಗಯ್ಯನ ದರ್ಶನದಿಂದ ದಿವ್ಯ ಜ್ಞಾನ ಪ್ರಾಪ್ತವಾಗುತ್ತದೆ. ಅಜ್ಞಾನ, ಜಡತ್ವದ ಮುದ್ದೆಯಾದ ಮಾನವ ಜ್ಞಾನದ ಬೆಳಕಾಗುತ್ತಾನೆ. ಮನುಷ್ಯನು ಪರಿಪೂರ್ಣತೆಯನ್ನು ಪಡೆಯಲು ಜ್ಞಾನದ ಸಾಕ್ಷಾತ್ಕಾರವಾಗಬೇಕು. ಆ ದಿವ್ಯ ಜ್ಞಾನದ ಸಾಕಾರಮೂರ್ತಿಯೇ ಲಿಂಗಯ್ಯನೆಂಬುದಾಗಿ ಜನಪದರು ಭಾವಿಸಿರುವುದು ಕಂಡುಬರುತ್ತದೆ.

"ನಮ್ಮ ನಾಡಿನ ಜನತೆಯಲ್ಲಿ ರಕ್ತಗತವಾಗಿ ಬಂದಿರುವ ಗುಣ ಭಗವದ್ಭಕ್ತಿ ಎಲ್ಲವೂ ದೈವೇಚ್ಛೆಯಿಂದಲೇ ನಡೆಯುತ್ತದೆ; ಪರಮಾತ್ಮನೊಬ್ಬನೇ ನಿತ್ಯ; ಈ ಬಾಳಿನ ಸುಖ ಶಾಶ್ವತವಲ್ಲ ಎಂಬ ಭಾವನೆ ಸಾಮಾನ್ಯ ಜನರಲ್ಲಿ ಬೇರೂರಿದೆ. ಎಂತಲೇ ಅವರು ತಮ್ಮ ನೋವುನಲಿವುಗಳನ್ನು ದೇವರಲ್ಲಿ ನಿವೇದಿಸಿಕೊಳ್ಳುತ್ತಾರೆ. ಪ್ರಾತಃಕಾಲ ಎದ್ದಕೂಡಲೇ ಭಗವಂತನ ಸ್ಮರಣೆಯೇ ಮೊದಲ ಕರ್ತವ್ಯ". (ಸಿ. ಪಿ. ಕೆ., ೨೦೦೪, ಪು-೧೯೮)

ನಿತ್ಯ ಪ್ರಕೃತಿಯ ಮಡಿಲಲ್ಲಿರುವ ಜನಪದರು ಗುಡಿ ಗುಂಡಾರದಲ್ಲಿರುವ ದೇವರನ್ನು ನೋಡುವ ದೃಷ್ಟಿ ತೀರಾ ಭಿನ್ನ. ಅವರಿಗೆ ದೇವರು ಸ್ವರ್ಗಾಧಿಪತಿಯಲ್ಲ, ಕೈಲಾಸವಾಸಿಯಲ್ಲ. ದೇವರನ್ನು ಕಾಣುವುದಕ್ಕೆ ಪುಣ್ಯಕ್ಷೇತ್ರಗಳಿಗೆ ತೀರ್ಥಯಾತ್ರೆ ಹೋಗಬೇಕಾಗಿಲ್ಲ. ಕಾಯಕವೇ ಕೈಲಾಸವೆನ್ನುವ ಜನಪದರು ಗುಡಿಗೆ ಹೋಗಲು ಸಮಯ ನಿರ್ಧರಿಸಲಾರರು. ತಾವು ಇದ್ದಲ್ಲಿಯೇ ನಾಮಸ್ಮರಣೆ ಮೂಲಕ ದೇವರನ್ನು ಸ್ತುತಿಸುತ್ತಾರೆ. ದೇವರ ಕುರಿತು ಹಾಡುಗಳನ್ನು ಹಾಡುತ್ತಾರೆ. ದೇವರನ್ನು ಮನುಷ್ಯರಂತೆಯೇ ಕಂಡರೂ ಜನಪದರು ಆತನಲ್ಲಿ ವಿಶಿಷ್ಠ ಶಕ್ತಿಯನ್ನು ಗುರುತಿಸುತ್ತಾರೆ. 'ಜನ ಕೈಬಿಟ್ಟರೂ ಜನಾರ್ಧನ ಕೈ ಬಿಡಲಾರ' ಎಂಬುದನ್ನು ಅರಿತ ಜನಪದರು ದೇವರಿಗೂ,

ಮನುಷ್ಯರಿಗೂ ಇರುವ ವಾಸ್ತವ ವ್ಯತ್ಯಾಸವನ್ನು ಗುರುತಿಸುತ್ತಾರೆ. ದೇವರೊಂದಿಗಿನ ತಮ್ಮ ಬಾಂಧವ್ಯವನ್ನು ಗಟ್ಟಿಗೊಳಿಸಲು ಪ್ರಯತ್ನಿಸುತ್ತಾರೆ.

ದೇವರು ಸರ್ವಾಂತರಯಾಮಿ ಎಂಬುದನ್ನು ಜನಪದರು ಅರಿತವರು. ದೇವರಿಲ್ಲದೆ ಅಣುರೇಣುತೃಣಕಾಷ್ಟಗಳು ಚಲಿಸುವುದಿಲ್ಲವೆಂಬುದು ಅವರ ನಂಬಿಕೆ. ಲೋಕದ ಚರಾಚರ ಜೀವಿಗಳಲ್ಲಿ ದೇವರಿದ್ದಾನೆ. ಹೂವಿನಲ್ಲಿ ತುಂಬಿದ್ದಾನೆ. ಮಾಲೆಯಲ್ಲಿ ಮಲಗಿದ್ದಾನೆ. ಮೊಗ್ಗಿನಲ್ಲಿ ಕಣ್ಣು ತೆರೆದಿರುವ ಸರ್ವಾಂತರಯಾಮಿ ಎಂದು ಅವನ ಗುಣಗಳನ್ನು ಕೊಂಡಾಡಿದ್ದಾರೆ. ಜನಪದರು ದೇವರನ್ನು ಲೋಕದ ವ್ಯಕ್ತಿಯಾಗಿ, ಅಲೌಕಿಕ ಶಕ್ತಿಯಾಗಿ ಏಕಕಾಲಕ್ಕೆ ಪರಿಭಾವಿಸಿದ್ದಾರೆ. ಈ ಬಗೆಯ ಭಾವನೆಗಳು ಇತರರಿಗೆ ಕಷ್ಟ. ಜನಪದರಿಗೆ ಅದು ಸುಲಭ. ಜನಪದರ ಸಮಸ್ತ ದೈವಿಕ ಭಾವನೆಗಳನ್ನು ಜನಪದ ಸ್ತುತಿ ಗೀತೆಗಳು ಹಾಗೂ ಪೌರಾಣಿಕ ಗೀತೆಗಳಲ್ಲಿ ಮೂಡಿ ನಿಂತಿದೆ. ಅವರ ಆಚರಣೆ, ನಂಬಿಕೆ, ಕಲ್ಪನೆ ಮುಂತಾದ ವಿಷಯಗಳಿಗೆ ಜನಪದ ಗೀತೆಗಳು ಕನ್ನಡಿ ಹಿಡಿಯುತ್ತವೆ.

### ೫.೫ ಪ್ರಕೃತಿ ಮತ್ತು ಜನಪದರ ಸಂಬಂಧ

ಜನಪದರು ಪ್ರಕೃತಿ ಪ್ರಿಯರು. ಪ್ರಕೃತಿ ಆರಾಧಕರು. ಪ್ರಕೃತಿ ಪಾಲಕರು ನಿಸರ್ಗದ ಮಡಿಲಲ್ಲಿನ ಪ್ರತಿಯೊಂದು ವಸ್ತುವೂ ಕೂಡ ಅವರಿಗೆ ಚಿರಪರಿಚಿತ. ಗಿಡಮರಬಳ್ಳಿಗಳು, ಕೆರೆಹಳ್ಳಕೊಳ್ಳಗಳು, ಕಲ್ಲುಮಣ್ಣಿನೊಂದಿಗೆ ಆತ ಅವರು ನಿಕಟ ಸಂಪರ್ಕ ಹೊಂದಿದ್ದಾರೆ. ನಮ್ಮ ಜನಪದರು ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದವರು. ಪ್ರಕೃತಿಯ ಮಡಿಲಲ್ಲಿ ಗ್ರಾಮೀಣ ಬದುಕನ್ನು ಅನುಭವಿಸುತ್ತ, ಕವಿತೆಗಳನ್ನು ಕಟ್ಟಿದವರು ಕೃಷಿಯು ಜನಪದರ ಪ್ರಮುಖ ಉದ್ಯೋಗ. ಕೃಷಿಯಲ್ಲಿ ಕಾಲಮಾನಕ್ಕೆ ತಕ್ಕಂತೆ ಅನೇಕ ಸಂಪ್ರದಾಯಗಳ ಆಚರಣೆಯಿದೆ. ಉತ್ತುವುದು, ಬಿತ್ತುವುದು ಹಾಗೂ ಒಕ್ಕುವುದು ಹೀಗೆಯೇ ಯಾವುದೇ ಕೆಲಸ ಇರಲಿ. ನಿಯಮಗಳನ್ನು ಪಾಲಿಸುವುದು ರೂಢಿಯಲ್ಲಿದೆ. ಸರಳ ಸಾತ್ವಿಕ ಸ್ವಭಾವದ ಹಳ್ಳಿಗರ ಇಂತಹ ಸಂದರ್ಭಗಳಲ್ಲಿ ಹಾಡುಗಳನ್ನು ಹಾಡುವುದನ್ನು ಕೇಳಬಹುದು. ಇತ್ತೀಚಿನ ದಿನಗಳಲ್ಲಿ ಜಾಗತೀಕರಣಕ್ಕೆ ತಕ್ಕಂತೆ ಕೃಷಿ ಚಟುವಟಿಕೆಗಳ ಬದಲಾದರೂ, ಜನಪದರ ಚಟುವಟಿಕೆಗಳು ಬದಲಾಗಿಲ್ಲ.

ಜನಪದರ ಪ್ರಕೃತಿ ಪ್ರೀತಿ ದೊಡ್ಡದು. ಮಳೆಗೆ, ಇಳೆಗೆ ಹಾಗೂ ಬೆಳೆಗೆ ಸಂಬಂಧಿಸಿದ ಸಾಕಷ್ಟು ಆಚರಣೆಗಳಿವೆ. ಇವೆಲ್ಲವೂ ಪ್ರಕೃತಿಯ ಭಾಗಗಳಾಗಿವೆ. ಆದ್ದರಿಂದ ಪ್ರಕೃತಿಯೊಂದಿಗಿನ ಜನಪದರ ಬದುಕು ಸೇರಿಹೋಗಿದೆ. ಒಬ್ಬ ರೈತ ಬೆಳೆಯನ್ನು ಪಡೆಯುವ ಕಾರಣಕ್ಕಾಗಿ ಭೂಮಿಯನ್ನು ಪೂಜಿಸಿ ಹಸನುಗೊಳಿಸುತ್ತಾನೆ. ಮಳೆಯನ್ನೇ ದೈವವನ್ನಾಗಿ ಪೂಜಿಸುತ್ತಾನೆ. ಮಳೆಯೊಂದಿಗೆ ಜೊತೆಗಾರರಾಗಿರುವ ಗಾಳಿ, ಧೂಳು, ಸಿಡಿಲು, ಮಿಂಚುಗಳನ್ನು ನೆನೆದು ಅವರೆಲ್ಲ ಒಂದಾಗಿದ್ದರೆ ಹಳ್ಳಿಯ ಬದುಕು ಹಸನುಗೊಳ್ಳುವುದೆಂದು ಅಭಿವ್ಯಕ್ತಿಸಿದ್ದಾರೆ.

ಗಾಳೆಪ್ಪ, ಧೂಳೆಪ್ಪ, ಸಿಡ್ಲೆಪ್ಪ, ಮಿಂಚಪ್ಪ
ಇವರು ನಾಕು ಮಂದಿ ಅಣ್ಣತಮ್ಮರು । ಇದ್ದರ

ಸುತ್ತ ಹಳ್ಳಿಗೆ ದೊಡ್ಡವರು । (ಎಚ್.ಎಲ್.ನಾಗೇಗೌಡ, ೧೯೭೫, ಪು-೧೧೪)

ಗಾಳೆಪ್ಪ ಅಂದರೆ ಗಾಳಿ, ವಾಯು. ಧೂಳೆಪ್ಪ ಅಂದರೆ ಧೂಳು, ಸುಂಟರಗಾಳಿ, ಸಿಡ್ಲೆಪ್ಪ ಅಂದರೆ ಸಿಡಿಲು ಹಾಗೂ ಮಿಂಚಪ್ಪ ಅಂದರೆ ಮಿಂಚು ಇವರೆಲ್ಲ ಮಳೆಯಿಂದ ಹುಟ್ಟಿದ ಅಣ್ಣ-ತಮ್ಮಂದಿರು. ಇವರು ಯಾವಾಗಲೂ ಜೊತೆಯಾಗಿಯೇ ಇರುತ್ತಾರೆ. ಅವರಲ್ಲಿ ಒಗ್ಗಟ್ಟೇ ಅವರನ್ನು ಹಳ್ಳಿಯಲ್ಲಿ ಎಲ್ಲರೂ ಗೌರವಿಸುವಂತೆ ಮಾಡಿದೆ. ಊರಿನ ಹಿರಿಯರನ್ನಾಗಿ ಮಾಡಿದೆ ಎಂದು ಹೇಳುವ ಮೂಲಕ ಅವಿಭಕ್ತ ಕುಟುಂಬದ ಮಹತ್ವವನ್ನು ಜನಪದರು ಸಾರುತ್ತಾರೆ. ಜನಪದರು ಪ್ರಕೃತಿಯ ಅಂಗಗಳಾದ ಗಾಳಿ, ಸಿಡಿಲು, ಮಳೆ, ಧೂಳಿಗೂ ಹೆಸರಿಟ್ಟು ತಮ್ಮಲ್ಲಿಯೇ ಒಬ್ಬರೆಂದು ಭಾವಿಸುತ್ತಾರೆ. ಒಗ್ಗಟ್ಟಿನಲ್ಲಿ ಬಲವಿದೆ. ಸಾಕಷ್ಟು ಒಲವಿದೆ ಎಂಬ ಸಾಂಕೇತಿಕ ಅರ್ಥವನ್ನು ಪ್ರಕೃತಿಯ ಮೂಲಕ ತಿಳಿಸಿದ್ದಾರೆ.

ಬೊಬ್ಬೆಯ ಹೊಡೆದವು ಬಾಳೆಮಿನ್ ಕೆರೆಯಾಗೆ
ಗುಬ್ಬಿ ಸಾರಂಗ ನಗುತಾವೆ । ತಾನಂದನೋ
ಗುಬ್ಬಿ ಸಾರಂಗ ನಗುತಾವೆ । (ಎಲ್. ಗುಂಡಪ್ಪ, ೧೯೪೭, ಪು-೧೮)

ಇನ್ನೂ ನದಿ, ಕೆರೆ, ಹಳ್ಳ ಕೊಳ್ಳಗಳೂ ಸಹಿತ ಜನರಿಗೆ ಸ್ಮರಣೀಯ. ನೀರನ್ನು ಗಂಗೆಯೆಂದು ಭಾವಿಸಿ ಗಂಗಾಪೂಜೆ ಕೈಗೊಳ್ಳುವ ಸಂಪ್ರದಾಯ ಜನಪದರಲ್ಲಿದೆ. ನಾಡಿನ ಜೀವನದಿಗಳಾದ ಕೃಷ್ಣೆ, ಕಾವೇರಿ, ತುಂಗಾನದಿಗಳ ಪ್ರಸ್ತಾಪವೂ ಜನಪದ ಗೀತೆಗಳಲ್ಲಿದೆ. ಅವರ ದೃಷ್ಟಿಯಲ್ಲಿ ಅವು ಕೇವಲ ನದಿಗಲ್ಲ ಜೀವವಾಹಿನಿಗಳು. ಒಂದು ಕಾಲದಲ್ಲಿ ಮಳೆಯೂ ಜನಪದರಿಗೆ ಅನುಕೂಲವಾದರೆ, ಮತ್ತೊಂದು ಕಾಲದಲ್ಲಿ ಕೆರೆ, ಬಾವಿ, ನದಿಗಳು ಅವರಿಗೆ ನೀರುಣಿಸುತ್ತವೆ. ಇವುಗಳನ್ನು ಆಧಾರವಾಗಿಟ್ಟುಕೊಂಡು ಒಕ್ಕಲುತನದ ಚಟುವಟಿಕೆಗಳನ್ನು ಜನಪದರು ಮಾಡುತ್ತಾರೆ. ಉತ್ತಮ ಫಸಲನ್ನು ಪಡೆದಾದ ಮೇಲೆ ನೀರಿನ ಮೂಲವನ್ನು ಮರೆಯದೇ ಸ್ಮರಿಸುತ್ತಾರೆ.

"ಮಾನವನಿಗೆ ಪ್ರಕೃತಿಯೇ ಅತಿಶಯವಾದುದು. ಅವನ ಕುತೂಹಲವನ್ನು ಕೆರಳಿಸಿದ್ದು, ಆನಂದವನ್ನುಂಟು ಮಾಡಿದ್ದು, ಭೀತಿಯನ್ನು ತಂದದ್ದು, ವಿಸ್ಮಯ ಶಕ್ತಿಯನ್ನು ಕುದುರಿಸಿದ್ದು ಪ್ರಕೃತಿಯೇ. ಪ್ರಕೃತಿಯ ಅನಂತ ಶಕ್ತಿಯು ವಿವಿಧ ಬಗೆಯಲ್ಲಿ ಪ್ರಕಟಗೊಂಡು ಮಾನವನಲ್ಲಿ ಬಗೆಬಗೆಯ ಭಾವನೆಗಳನ್ನು ಉದ್ದಿಪಿಸಿತು. ಪ್ರಕೃತಿಯಲ್ಲಿನ ಮರಗಿಡ, ನೆಲಜಲ, ಹೂಫಲಗಳನ್ನು ಕಂಡ ಮಾನವ ಆ ವಸ್ತುವಿನ ವರ್ಣನೆ ಮಾಡಿ ಹೇಳುವ ಸಾಮರ್ಥ್ಯವನ್ನು ಸಂಪಾದಿಸಿದ. ಈ ಹಿಂದೆ ಅನುಭವಕ್ಕೆ ಬಾರದ ಸಂಗತಿಗಳು ಹೊಸದಾಗಿ ಕಾಣಿಸಿಕೊಂಡಾಗ ತನ್ನ ಬುದ್ಧಿಗೆಟಕುವ ತರ್ಕಬದ್ಧವಾದ ಕಾರಣ ಗೋಚರಿಸದಿದ್ದಾಗ ಊಹೆಯ ಮೂಲಕ ಕೆಲವು ಕಾರಣಗಳನ್ನು ಜೋಡಿಸಿದ ಮೋಡವಿಲ್ಲದೆ ಕತ್ತಲೆಗಪಿದಾಗ ಯಾವುದೋ ಶಕ್ತಿ ಸೂರ್ಯನನ್ನು ನುಂಗಿಕೊಂಡಿರಬೇಕೆಂದು ಕಲ್ಪಿಸಿಕೊಂಡ ಅಂತೆಯೇ ನಿಸರ್ಗದಲ್ಲಿ ನೂತನ ವೈಚಿತ್ರ್ಯಗಳು ತಲೆದೋರಿದಾಗ ಅವನು ಹೊಸ ಕತೆಗಳನ್ನು ಕಟ್ಟಿದ ಎರಡು ಘಟನೆಗಳು ಒಂದಾದ ಮೇಲೊಂದು ಅಥವಾ ಏಕಕಾಲದಲ್ಲಿ ನಡೆದಾಗ ಕಾಕತಾಳೀಯ ನ್ಯಾಯದಂತೆ ಅವುಗಳಿಗೆ ಪರಸ್ಪರ ಸಂಬಂಧವನ್ನು ಕಲ್ಪಿಸಿದ. ಭೂಕಂಪವಾದ ಕೆಲವು ದಿನಗಳಲ್ಲಿ ಅಲ್ಲಿನ

ನಾಯಕ ತೀರಿಕೊಂಡಿದ್ದಾದರೆ ಎರಡೂ ಘಟನೆಗಳಿಗೆ ನಂಟು ಗಂಟುಹಾಕಿ ಭೂಕಂಪದಂಥ ಘಟನೆ ಮುಂದಿನ ದುರ್ಘಟನೆಗಳಿಗೆ ಮುನ್ಸೂಚಿಯೆಂದು ಅವನು ಭಾವಿಸಿದ.” (ಟಿ. ಎಸ್. ರಾಜಪ್ಪ, ೧೯೭೬, ಪು–೯೫)

ಜನಪದರು ಭೂದೇವಿಯನ್ನು ಸ್ತುತಿಸಿದ ನಂತರ ಉಳಿದ ದೈವವನ್ನು ಸ್ಮರಿಸುತ್ತಾರೆ. ಅವರ ಸ್ತುತಿ ಮೂರ್ತಿರೂಪದ ದೈವವನ್ನಲ್ಲದೆ ತಮ್ಮ ಬದುಕನ್ನು ಪಾವನಗೊಳಿಸುತ್ತಿರುವ ಕಾವೇರಿ, ಕಬಿನಿಯಂತ ನದಿಗಳಿಗೂ ಸಲ್ಲುತ್ತದೆ. ‘ಕಾವೇರಿ ಕಪಿನಿಯ ನೆನೆದಾರೆ ಮೇಲಿದ್ದ ಪಾಪ ಪರಿಹಾರ’ ಎಂದಿದ್ದಾರೆ. ತಮ್ಮ ಬದುಕಿಗೆ ಸಹಕರಿಸುವ ವಸ್ತುಗಳಾದಿಗಳನ್ನು ಮರೆಯುವ ಸ್ವಭಾವದವರಲ್ಲ ಜನಪದರು. ತಮಗೆ ತಮ್ಮ ಹೊಲಗದ್ದೆ ದನಕರುಗಳಿಗೆ ನೀರನ್ನೊದಗಿಸಿ, ಸಾಕುವ ನದಿಗಳನ್ನು ಕೃತಜ್ಞತೆ ಸಲ್ಲಿಸುತ್ತಾರೆ.

ಹೊತ್ತಿನಂತೆ ಎದ್ದು ಯಾರ‍್ಯಾರ ನೆನೆದೇನು
ಕಲ್ಲು ಕಾವೇರಿ ಕಪನೀಯ । ನೆನೆದಾರೆ
ಮೈಲಿದ್ದ ಪಾಪ ಪರಿಹಾರ ।

(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು–೧)

ಇಲ್ಲಿ ಕಾವೇರಿಯನ್ನು ನೆನೆಯುವ ಜನಪದರು ಗಂಗೆಯಂತೆಯೆ ಪರಿಶುದ್ಧಳೆಂಬ ಭಾವನೆ ಹೊಂದಿದವರು. ಕಾವೇರಿಗೆ ಹೋಗಿ ಮಿಂದೇಳುವುದು ಬೇಡ ಬದಲಾಗಿ ನೆನೆದರೆ ಸಾಕು ಪಾಪ ಪರಿಹಾರವಾಗುತ್ತೆಂದು ನಂಬಿಕೆ ಹೊಂದಿದ್ದಾರೆ. ಪಾಪ ಪರಿಹಾರವಾಗಲು ಗಂಗೆಯಲ್ಲೇ ಮುಳುಗೇಳಬೇಕಿಲ್ಲ. ಮನಪರಿಶುದ್ಧವಾಗಿದ್ದರೆ ಸಾಕೆಂಬ ಭಾವನೆ ಜನಪದರದು. ‘ಹೀನ ಗುಣಗಳ ಹಿಂಗದೆ ಗಂಗೆಯ ಸ್ನಾನ ಮಾಡಿದರೇನು ಫಲ’ ಎಂಬ ದಾಸರ ನುಡಿಯಂತೆ ಜನಪದರ ಬದುಕಿನಲ್ಲಿ ಶುದ್ಧತೆಯನ್ನು ಕಾಪಾಡಿಕೊಳ್ಳುತ್ತಾರೆ. ಊರಿನ ಒಳಿತಿಗಾಗಿ ಬಾವಿ, ಕೆರೆಗಳನ್ನು ಕಟ್ಟಿಸಿದ. ಅವುಗಳಿಗಾಗಿಯೇ ಪ್ರಾಣವನ್ನೇ ಅರ್ಪಿಸಿದ ಸಂಗತಿಗಳು ಸಾಕಷ್ಟಿವೆ. ಭಾಗೀರಥಿಯೆಂಬ ದಿಟ್ಟ ಮಹಿಳೆಯೂ ಕೆರೆಗೆ ಗಂಗೆಯನ್ನು ಕರೆತರುವ ಸಲುವಾಗಿ ಕೆರೆಗೆ ಹಾರವಾದ ತ್ಯಾಗಜೀವಿ ಕಥೆಯೂ ಜನಪದ ಗೀತೆಗಳಲ್ಲಿದೆ.

ಹಳ್ಳಿಯ ಹಾಡುಗಳು ನೆಲೆಗೊಂಡಿರುವುದು ಹಳ್ಳಿಗಳಲ್ಲಿ. ಹಳ್ಳಿಗಳು ಇರುವುದು ಹಳ್ಳಕೊಳ್ಳಗಳ ವನಸಿರಿಯ ಪಕ್ಕದಲ್ಲಿ. ಹಳ್ಳಿಗಳಲ್ಲಿ ಪ್ರಕೃತಿ ಸೌಂದರ್ಯ ಹೆಚ್ಚಾಗಿರುತ್ತದೆ. ಜನಪದರೆಲ್ಲ ನಿಸರ್ಗದ ಮಕ್ಕಳೆಂದು ಅವರ ಬದುಕಿನಿಂದ ಕಂಡುಬರುತ್ತದೆ. ನಿಸರ್ಗದ ಅವಿಭಾಜ್ಯ ಅಂಗವಾಗಿ ಬೆರೆತು ಹೋದದ್ದನ್ನು ಗೀತೆಗಳು ಪ್ರತಿನಿಧಿಸುತ್ತವೆ. ಬೆಳಗು ಜಾವದಲ್ಲಿ ಎದ್ದು ಪ್ರಕೃತಿಯ ಮಡಿಲು ಸೇರುವ ಒಕ್ಕಲಿಗರ ಕಾವ್ಯಸೃಷ್ಟಿಗೆ ಸುತ್ತಮುತ್ತಲಿನ ಪ್ರಕೃತಿ ಸೌಂದರ್ಯವೇ ಸ್ಫೂರ್ತಿ.

ಅತ್ತ ಒತ್ತಟ್ಟು ಕಾಡು, ಇತ್ತ ಒತ್ತಟ್ಟು ಕಾಡು
ಸುತ್ತಮುತ್ತೈತೋ ಕಲ್ಲೆ ಕಾಡು । ಮುತ್ತಣ್ಣಾ
ಎತ್ತತ್ತ ತಿರುಗಿದರೂ ಕಾಡೇ ಕಾಡು । (ದೊಡ್ಡರಂಗೇಗೌಡ, ೨೦೦೦, ಪು–೩೮)

ಕಾಡು ಎಷ್ಟೇ ನಿಗೂಢವನ್ನು ಹೊಂದಿದ್ದರೂ, ಕಾಡಿನ ಸಂಪನ್ಮೂಲವನ್ನು ಬಳಕೆ ಮಾಡಿಕೊಳ್ಳುತ್ತಾನೆ. ಕಾಡಿಲ್ಲದಿದ್ದರೂ ನಾಡಿಲ್ಲವೆಂಬ ಅರಿವು ಆತನಿಗೆ ಇದೆ. ವನಪಾಲನೆಯ ಗುಣವೂ ಅವರಲ್ಲಿದೆ. ಬನ್ನಿ, ಬೇವು ಹಾಗೂ ಅರಳಿಮರಗಳೂ ಪೂಜ್ಯನೀಯ. ಫಲನೀಡುವ ಮರಗಳೆಲ್ಲವೂ ಪೋಷಕರೆಂಬ ಭಾವ. ಕಾಡು ಮರಗಳೂ ಸಹಿತ ಜನಪದರಿಗೆ ಪೂಜ್ಯನೀಯ. ಹಲವಾರು ಹಬ್ಬಗಳಲ್ಲಿ ನಾನಾ ರೀತಿಯ ಮರಗಳ ಪೂಜೆ ಜನಪದರಲ್ಲಿದೆ. ಮಾವಿನ ಎಲೆಗಳನ್ನು ತಳಿರುಗಳನ್ನಾಗಿ, ಬೇವು ಮುಂತಾದ ಗಿಡಮೂಲಿಕೆಗಳನ್ನು ಆರೋಗ್ಯ ಕಾಪಾಡಿಕೊಳ್ಳುವ ಸಲುವಾಗಿ ಬಳಕೆ ಮಾಡುತ್ತಾರೆ. ನಿಸರ್ಗದಲ್ಲಿನ ಮಳೆ, ಗುಡುಗು, ಮಿಂಚು, ಹಗಲು, ರಾತ್ರಿ, ಕಾಡು, ನದಿ, ಹಳ್ಳ, ಕೆರೆ, ಬಾವಿ ಪ್ರತಿಯೊಂದು ವಸ್ತುವಿನೊಂದಿಗೆ ಹೊಂದಿಕೊಂಡು ಆತ ಬದುಕನ್ನು ನಗುಮೊಗದೊಂದಿಗೆ ಸ್ವೀಕರಿಸುತ್ತಾನೆ.

ಜನಪದರು ಯಾವಾಗಲೂ ಪ್ರಕೃತಿಯ ಜೊತೆಗಾರರಾಗಿಯೇ ನಿತ್ಯ ಪ್ರಕೃತಿಯ ಮಡಿಲಲ್ಲಿ ಬದುಕು ನಡೆಸುತ್ತಾರೆ. ಬದುಕಿನ ಪ್ರತಿಕ್ಷಣವನ್ನು ಕಳೆಯುವಲ್ಲಿ ಪ್ರಕೃತಿಯ ಹೋಲಿಕೆಯನ್ನೇ ನೀಡುತ್ತಾರೆ. ಅವುಗಳ ಮೂಲಕ ರಸಾನಂದವನ್ನು ಪಡೆಯುತ್ತಾರೆ. 'ಕೋಗಿಲೆ ದನಿಯವಳು', 'ಮೊಗ್ಗಿನ ಜಡೆಯವಳು', 'ಸಂಗಾತಿ ಹೆಣ್ಣು ಜಂಬು ನೇರಿಲೆ ಹಣ್ಣು', 'ತಾವರಿಯ ಗಿಡಹುಟ್ಟಿ ದೇವರಿಗೆ ನೆರಳಾದಿ', ಬ್ಯಾಸಗಿ ದಿವಸಕ ಬೇವಿನ ಮರ ತಂಪ', 'ನೀರಿಲ್ಲ ಕೆರಿಗಿ ಬಂದು', 'ವರತಿಯ ನೀರ ಸೆಲಿ ಬಂತ', 'ಎಳಿಹುಲ್ಲು ಅಡವ್ಯಾಗ ತಿಳಿನೀರು ಕೊಳದಾಗ', 'ಅಕ್ಕರ ತಂಗೇರ ಬಣ್ಣ ಅವರಿಹೂವಿನ ಬಣ್ಣ', 'ಎಳ್ಳು ಹೂವಿನ ಸೀರಿ ಬೆಳ್ಳಿ ಕಾಲುಂಗುರ; ಹಣ್ಣು ಮೆಣಸಿನಕಾಯಿ ಕಣ್ಣೀಗಿ ಕೆಂಪಗ', 'ಶಿವರಾಯ್ನ ಮನೆಮುಂದ ಮಾವಿನ ಮರಹುಟ್ಟಿ' ಹೀಗೆ ಜನಪದರು ಇಡೀ ಪ್ರಕೃತಿಯನ್ನೇ ಹೋಲಿಕೆಯ ರೂಪದಲ್ಲಿ ಗೀತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಏಕೆಂದರೆ ಪ್ರಕೃತಿಯ ದಿನನಿತ್ಯದ ಚಟುವಟಿಕೆಗಳು ಜನಪದರಿಗೆ ಸ್ಫೂರ್ತಿಯಾಗಿವೆ.

ಜನಪದರು ಪ್ರಕೃತಿಯಲ್ಲಿನ ಸಹನೆ, ತಾಳ್ಮೆ, ಸಹಕಾರ ಸೌಹಾರ್ದ ಗುಣವನ್ನು ತಮ್ಮಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಬದುಕಿನ ಹೆಚ್ಚಿನ ಸಮಯವನ್ನು ಪ್ರಕೃತಿಯ ಜೊತೆಗೆ ಹಂಚಿಕೊಳ್ಳಲು ಇಷ್ಟಪಡುತ್ತಾರೆ. ಪ್ರಕೃತಿ ಮತ್ತು ಜನಪದರ ನಡುವಿನ ಬಾಂಧವ್ಯ ಹೋಲಿಕೆಯಲ್ಲಿ ಪ್ರಕಟವಾಗಿದೆ. ನಾವು ನೋಡಿದ, ನೋಡಿರದ ಅನೇಕ ಪ್ರಕೃತಿಯಲ್ಲಿನ ಗಿಡಮರಗಳನ್ನು, ಹೂಗಳನ್ನು, ಕೆರೆಕಟ್ಟೆಗಳನ್ನು, ಬೆಟ್ಟಗುಡ್ಡಗಳನ್ನು ಜನಪದರು ಹೆಸರಿಸಿದ್ದಾರೆ. ತೆಂಗು, ಹಲಸು, ಮಾವು, ಪೇರಲ, ನಿಂಬೆ, ನೇರಿಲೆ, ಬಾಳೆ, ದಾಳಿಂಬೆ ಹೀಗೆ ಫಲ ಕೊಡುವ ಮರಗಳಲ್ಲದೇ ತೇಗ, ಗಂಧ, ಹೊನ್ನೆ, ಬೀಟೆ, ಬೇವು, ಅಶೋಕ, ನಂದಿ, ಮತ್ತಿ, ಬೂರುಗ ಹೀಗೆ ಮುಂತಾದ ಮರಗಳ ಉಲ್ಲೇಖವಿದೆ. ಹೂವುಗಳಲ್ಲಿ ಸಂಪಿಗೆ, ಮಲ್ಲಿಗೆ, ನಾಗಸಂಪಿಗೆ, ಕೆಂಡಸಂಪಿಗೆ, ಪಾರಿಜಾತ, ದಾಸವಾಳ, ಜಾಜಿಮಲ್ಲಿಗೆ, ಶಾವಂತಿಗೆ, ಇರವಂತಿಗೆ, ಸೂಜಿಮಲ್ಲಿಗೆ, ಗುಲಾಬಿ ಹೀಗೆ ಅನೇಕ ಹೂವುಗಳನ್ನು ಪ್ರಸ್ತಾಪಿಸುವ ಮೂಲಕ ಪ್ರಕೃತಿಯ ಮೇಲಿನ ತಮ್ಮ ಪ್ರೀತಿಯನ್ನು ಜನಪದರು ತೋರಿದ್ದಾರೆ.

### ೫.೬ ಮಳೆ ಮತ್ತು ಜನಪದರ ಸಂಬಂಧ

ಮಳೆ ಎಲ್ಲೆಡೆ ನಮ್ಮ ಬದುಕನ್ನು ಪ್ರಭಾವಿಸಿರುವ ಒಂದು ಬಹುಮುಖ್ಯ ಪ್ರಾಕೃತಿಕ ಸಂಗತಿ. ಮಳೆಯಿಂದಲೇ ಇಳೆಯಲ್ಲಿ ನೀರು. ನೀರು ಭೂಮಿಯ ಎಲ್ಲ ಜೀವಿಗಳಿಗೂ ಅತಿ ಅವಶ್ಯಕ. ಭೂಮಿಯ ಮೇಲ್ಮೈನಲ್ಲಿ ಮುಕ್ಕಾಲು ಭಾಗ ನೀರಿದೆ. ಕಾಲುಭಾಗ ಮಾತ್ರ ನೆಲ. ಸಾಗರ, ಸಮುದ್ರ, ಸರೋವರ, ನದಿ, ಹಳ್ಳ, ತೊರೆ, ಕೆರೆ, ಬಾವಿ, ಕೊಳ್ಳಗಳೇ ನೀರಿನ ಆಕರಗಳು. ನೀರಿನ ಮೂಲವೇ ಮಳೆ. ಭೂಮಿಯ ಮೇಲಿನ ನೀರು ಆವಿಯಾಗಿ ಮೇಲೇರಿ, ಮೋಡಗಳಾಗಿ ಮತ್ತೆ ಮಳೆಯಾಗಿ ಹಳ್ಳ–ಕೊಳ್ಳವನ್ನು ತುಂಬಿಸುತ್ತದೆ. ಮಳೆಯಿಂದ ಕುಡಿಯುವುದಕ್ಕೆ ನೀರು, ತಿನ್ನುವುದಕ್ಕೆ ಆಹಾರ ಬೆಳೆಗಳಿಂದ ಸಿಗುತ್ತದೆ. ಇಲ್ಲವಾದರೆ ಬದುಕು ಬಲುಕಷ್ಟ. ಅಂತಹ “ಜಲ ಜಾನಪದವನ್ನು ನಾನು ಸಂಕ್ಷಿಪ್ತವಾಗಿ ‘ಜಲಪದ’ವೆಂದು ಕರೆಯ ಬಯಸುತ್ತೇನೆ. ಜಲಪದವಿಲ್ಲದೆ ಜನಪದವಿಲ್ಲ’, ಜನಜೀವನವಿಲ್ಲ. ಸಂಸ್ಕೃತದಲ್ಲಿ ‘ಜೀವನ’ವೆಂದರೆ ನೀರು ಎಂದೇ ಅರ್ಥ. ಉಣಿಸಿಲ್ಲದೆ ಕೆಲಕಾಲ ಬದುಕಬಹುದು; ನೀರಿನಲ್ಲದೇ ಬದುಕಲಾಗದು.” (ಸಿ. ಪಿ. ಕೆ., ೨೦೦೪, ಪುಟ–೭೯)

ಪುರಾಣಗಳನ್ನು ಗಮನಿಸಿದಾಗ ವರುಣ ನೀರಿನ ದೇವತೆ. ಅದಕ್ಕಾಗಿಯೇ ವರುಣ ಜಪಗಳನ್ನು ಹಿಂದೆ ಮಾಡುತ್ತಿದ್ದರು. ಅದಕ್ಕೆ ಸಂಬಂಧಿಸಿದ ಅನೇಕ ಮಂತ್ರಗಳು ವೇದಗಳಲ್ಲಿವೆ. ಜಲವನ್ನೇ ದೇವತೆಯೆಂದು ಪೂಜಿಸುತ್ತಿದ್ದರು. ಆದರೆ ಜನಪದರ ಪಾಲಿಗೆ ಮಳೆಯೇ ದೈವ. ಮಳೆಯನ್ನು ಮಳೆರಾಯನೆಂದು ಕರೆದಿದ್ದಾರೆ. ಮಳೆಯನ್ನು ಕುರಿತಂತೆ ಅನೇಕ ಗೀತೆ, ಗಾದೆ, ನಂಬಿಕೆ, ನಿದರ್ಶನಗಳು ಜನಪದರಲ್ಲಿ ಇಂದಿಗೂ ಕಂಡುಬರುತ್ತವೆ. “ಜನಪದರಿಗೆ ಮಳೆಯೆಂದರೆ ದೈವ. ಮಳೆ ಬಾರದೇ ಹೋದಾಗ ನಾನಾ ರೀತಿಯಲ್ಲಿ ಸ್ತುತಿಸುವುದರ ಮೂಲಕ ಮಳೆರಾಯನ ಮೊರೆ ಹೋಗುತ್ತಾರೆ. ಮಳೆರಾಯನನ್ನು ಕರೆತರುವುದಕ್ಕಾಗಿಯೇ ಜನಪದರಲ್ಲಿ ಹಲವು ನಂಬಿಕೆ, ಸಂಪ್ರದಾಯಗಳಿವೆ”. (ಶಿವಾನಂದ ಟವಳಿ, ೨೦೧೨, ಪು–೧೯) ಮಳೆಯು ಬಾರದೇ ಲೋಕ ತಲ್ಲಣಿಸಿದಾಗ ಭಕ್ತಿಯಿಂದ ಕೈಮುಗಿದು ಪ್ರೀತಿಯಿಂದ ಜನಪದರು ಮಳೆರಾಯನನ್ನು ಬರಮಾಡಿಕೊಳ್ಳುವ ಬಗೆ ಮೆಚ್ಚತಕ್ಕದ್ದು.

ಅಂಬ ಕೊಡುವವನೆ ಗೊಂಬೆ ಹಚ್ಚಡದವನೆ
ರಂಬೆ ತೊಡೆ ಮೇಲಿರುವ । ಮಳೆದೇವ
ಅಂಬರದಿಂದ ಕರುಣಿಸು । (ವಿನೀತ ರಾಮಚಂದ್ರರಾಯ, ೧೯೬೦, ಪು–೧೪೩)

ಮಳೆಗೂ ಜನಪದರ ಆಚರಣೆಗಳಿಗೂ ಸಂಬಂಧವಿದೆ. ನಾಗರಪಂಚಮಿ, ಜೋಕುಮಾರನ ಹಬ್ಬ, ಕುರುಡು ಚಿತ್ತೆಯ ಹಬ್ಬಗಳಲ್ಲಿ ಮಳೆರಾಯನನ್ನು ಪೂಜಿಸುತ್ತಾರೆ. ಗಂಗಾಪೂಜೆ ನೆಪದಲ್ಲಿ ನೀರಿರುವ ಕೆರೆ, ಬಾವಿಗಳನ್ನು ಪೂಜಿಸುತ್ತಾರೆ. “ಜನಪದರಲ್ಲಿ ಸಪ್ತಾಹ ಭಜನೆ, ಗುರ್ಜಿ, ಕಪ್ಪೆ ಮದುವೆ, ಕತ್ತೆ ಮೆರವಣಿಗೆ, ಪರೇವು ಹಾಗೂ ದೇವರ ಸ್ತುತಿ (ಪುರಾಣ) ಹೀಗೆ ಮಳೆರಾಯನನ್ನು ಕರೆತರುವ ಹಲವಾರು ಸಂಪ್ರದಾಯ, ಆಚರಣೆಗಳು ರೂಢಿಯಲ್ಲಿವೆ.” (ಶಿವಾನಂದ ಟವಳಿ, ೨೦೧೨, ಪು–೧೯)

ಬಾ ಬಾರೊ ಮಳಿರಾಜಾ ಹೊಲ ಬೆಳಿ ಕರಿದಾವೊ
ತೆನಿಯದ್ದ ಕೈಯ ಮುಗಿದಾವೊ । ಬೆಳವಲದ
ಜನ ಮುಗಿಲ ಮಾರಿ ನೋಡ್ಯಾರ । (ರಾಜೇಂದ್ರ ಯರನಾಳೆ, ೨೦೦೬, ಪು-೪೫೫)

ಹೀಗೆಯೇ ಬಾರದ ಮಳೆರಾಯನನ್ನು ಜನಪದರು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ರಾತ್ರಿ-ಹಗಲು ಭಜನೆಯನ್ನು ಮಾಡಿಯೋ, ಮನೆಮನೆಗೂ ಭಿಕ್ಷೆ ಬೇಡುವ ಗುರ್ಚಿ ಸಂಪ್ರದಾಯದಿಂದಲೂ ಕತ್ತೆಗಳ ಮೆರವಣಿಗೆ ಮಾಡಿಯೋ, ಕಪ್ಪೆಗಳ ಮದುವೆಯನ್ನು ಮಾಡಿಯೋ ಇಲ್ಲವೇ ಸ್ತುತಿ-ಪುರಾಣಗಳ ಮೂಲಕ ದೇವರನ್ನು ಸಂಪ್ರಸನ್ನಗೊಳಿಸಿ ಮಳೆಯನ್ನು ತರುತ್ತೇವೆ ಎಂಬ ನಂಬಿಕೆ ಜನಪದರಲ್ಲಿದೆ. ಮಳೆರಾಯನನ್ನು ತಮ್ಮಲ್ಲಿ ಒಬ್ಬನೆಂದು ತಿಳಿದು, ಆತನನ್ನು ಆತ್ಮೀಯತೆಯಿಂದ ಸಂಬೋಧಿಸುವ ರೂಢಿ ಜನಪದರಲ್ಲಿದೆ.

ಮಳೆ "ಜನಪದರ ಪಾಲಿಗೆ ಮಳೆಯೇ ಆದಿದೈವ ಅಥವಾ ಮಳೆರಾಯ ಮಳೆದೇವರು. ಅವನಿಗೆ ಬೇರೆ ಹೆಸರಿಲ್ಲ." (ಸಿ. ಪಿ. ಕೆ., ೨೦೦೪, ಪು-೮೧) ಬೆಳೆಯು ಹಸನಾಗಿ ಬೆಳೆಯುವ ಸಲುವಾಗಿ ಮಳೆಯ ಮೊರೆಹೋಗುತ್ತಾನೆ. ಮಳೆ ತರುವ ಹಾಗೂ ನಿಲ್ಲಿಸುವ ಸಲುವಾಗಿ ಜನಪದರಲ್ಲಿ ಹಲವಾರು ಆಚರಣೆಗಳಿವೆ. ಅತಿವೃಷ್ಟಿ ಹಾಗೂ ಅನಾವೃಷ್ಟಿಗಳಾದರೂ ಅದೂ ಒಕ್ಕಲಿಗರಿಗೆ ತೊಂದರೆ. "ಕರ್ನಾಟಕದಲ್ಲಿ ಮಳೆ ತರಿಸಲು ಮಳೆದೇವರ ಪೂಜೆಯಿದೆ. ಉತ್ತರ ಕರ್ನಾಟಕದ ಕೆಲವೆಡೆ ಗುರ್ಜಿ ಸಂಪ್ರದಾಯವಿದೆ. ಕೆಲವೆಡೆ 'ಕುರುಡು ಚಿತ್ತೆ' ಹಬ್ಬ ಮಾಡಿ, ಮಳೆಯನ್ನು ಪೂಜಿಸುತ್ತಾರೆ" (ಸಿ. ಪಿ. ಕೆ., ೨೦೦೪, ಪು-೮೧) ಇದಲ್ಲದೇ ಮಳೆ ಕರೆತರುವ ಸಲುವಾಗಿ ಕತ್ತೆಗಳ ಮದುವೆ, ಕಪ್ಪೆಗಳ ಮದುವೆಗಳು ನಡೆಯುತ್ತವೆ.

ಮಳೆಹೊಯ್ತು ಎಂತಾ ಮಳೆರಾಯನ ಬೈಬೇಡ
ಒಕ್ಕಾಳ ಹೊನ್ನ ಸೆರಗಲಿ । ಕಟ್ಕೊಂಡು
ಸಾಲಕ್ಕೆ ಹೋಗವ್ನೆ ಮಳೆರಾಯ । (ಜಿ. ಆರ್. ತಿಪ್ಪೇಸ್ವಾಮಿ, ೨೦೦೯, ಪು-೩೧)

ಮಳೆ ಬಂದರೆ ಉತ್ಸಾಹಪಡುವ ಜನಪದರು ಮಳೆ ಬರದಿದ್ದಾಗ ತೆಗಳುವ ಮಾತನ್ನು ಆಡುವುದಿಲ್ಲ. ಬದಲಾಗಿ ಮಳೆರಾಯನಿಗೆ ತೊಂದರೆಯಾಗಿರಬೇಕೆಂದು ಗ್ರಹಿಸಿ ಅವರು ಕಲ್ಪಿಸಿಕೊಂಡಿರುವ ಕಾರಣವೇ ಸೊಗಸಾಗಿದೆ. ಎಂತಹ ಪರಿಸ್ಥಿತಿಯಿಲ್ಲೂ ಮಳೆರಾಯನನ್ನು ಶಪಿಸುವುದಿಲ್ಲ. ಮಳೆ ಬಂದಾಗ ಆತ್ಮೀಯತೆಯ ಸ್ವಾಗತವನ್ನು ನೀಡುತ್ತಾರೆ.

ಗುಡುಗುಡು ಗುಟ್ಟೀತು ನಡುಬಾಣ ಮಿಂಚೀತು
ಮೂಡಾದ್ರಿ ಅಂಬು ದಂಡೀನ । ಕುದುರೆ ಮೇಲೆ
ಚೆಂಡಾಡಿ ಹುಯ್ಯೋ ಮಳೆದೇವ ।
(ವಿನೀತ ರಾಮಚಂದ್ರರಾಯ, ೧೯೬೦, ಪು-೧೪೩)

ಮಳೆಯು ಚೆನ್ನಾಗಿ ಬಂದು ಭೂಮಿಯ ಬೆಳೆಯು ಬಂದಾಗ ಮಳೆರಾಜನ ಸ್ಮರಿಸಿ, ಆತನ ಕೃಪೆಯಿಂದಲೇ ಹೊಲದೊಳಗಿನ ಬೆಳೆಯು ತೆನೆಯಾಗಿದೆಯೆಂದು ಕೃತಜ್ಞತಾ ಭಾವವನ್ನು ಜನಪದರು

ವ್ಯಕ್ತಪಡಿಸುತ್ತಾರೆ. ಮಳೆಯೊಂದಿಗೆ ಜನಪದರ ಜೀವನವು ಬೆಸೆದುಕೊಂಡಿದೆ. ಅತಿವೃಷ್ಟಿಯಾದರೂ ಹಾನಿ, ಅನಾವೃಷ್ಟಿಯಾದರೂ ಹಾನಿ. ಇವೆರಡೂ ಮಳೆಯಿಂದಾಗುವ ಪ್ರಕೃತಿ ವೈಪರಿತ್ಯಗಳು. ಇವುಗಳಿಂದಾಗುವ ಹಾನಿಯನ್ನು ಮನುಕುಲವು ಮಾಡಿದ ಅನ್ಯಾಯವೆಂದೇ ಜನಪದರು ಭಾವಿಸುತ್ತಾರೆ. ಹೀಗೆಯೇ ನಂಬಿಕೆಯಿಂದಲೇ ಬದುಕುವ ಜನಪದರ ಮನೋಭಾವಕ್ಕೆ ದಕ್ಕೆಯಾಗದಂತೆ ಕಾಲವು ಕೂಡ ಅವರ ಜೊತೆಯಾಗಿರುತ್ತದೆ. ಕಷ್ಟಗಳಿಗೆ ಒಗೊಟ್ಟು ಜನಪದರು ಮಳೆ ಬಾರದಿದ್ದಾಗ ಕೆಳಗಿನಂತೆ ಕಾರಣವನ್ನು ನೀಡುತ್ತಾರೆ. ಎಂಥ ಪರಿಸ್ಥಿತಿಯಲ್ಲೂ ಜನ ಮಳೆರಾಯನನ್ನು ದೂಷಿಸುವುದಿಲ್ಲ. ಏಕೆಂದರೆ ಆತನೇ ಅನ್ನದಾತ. ಅವನು ಬಂದಾಗ ಮತ್ತೆ ಆತ್ಮೀಯತೆಯಿಂದ ಬರಮಾಡಿಕೊಳ್ಳುತ್ತಾರೆ.

ಮಳೆ ಹೋಯ್ತು ಅಂತ ಮಳೆರಾಯನ ಬೈಬೇಡ
ಒಕ್ಕಾಳ ಹೊನ್ನ ಸೆರಗಲಿ । ಕಟ್ಕೊಂಡು
ಸಾಲಕ್ಕೆ ಹೋಗವ್ನೆ ಮಳೆರಾಯ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೨೦)

ಮಳೆಗಾಲ ಆರಂಭವಾಗುತ್ತಲೇ ರೈತನ ಕೃಷಿ ಚಟುವಟಿಕೆಗಳು ಆರಂಭವಾಗುತ್ತವೆ. ಮುಂಗಾರಿನ ಮಳೆಯ ಭೂವಿಗೆ ಬಿದ್ದರೆ ಸಾಕು ಮೂಲೆ ಸೇರಿದ ಕುಂಟೆ, ಕೂರಿಗೆ, ರಂಟೆ ಮುಂತಾದ ಕೃಷಿ ಉಪಕರಣಗಳು ಹೊರಬಂದು ಬಡಿಗೇರ ಮನೆಯನ್ನು ಸೇರುತ್ತವೆ. ಮುರಿದ ಉಪಕರಣಗಳನ್ನು ಸರಿಪಡಿಸಿಟ್ಟುಕೊಳ್ಳುತ್ತಾರೆ. ಕಾರಣ ಮಳೆ ಬಿಡುವು ಕೊಟ್ಟಾಗ ಬಿತ್ತಿ, ಬೆಳೆ ಪಡೆಯಬೇಕು. ಹದಕ್ಕಾಗಿ ಕಾಯುತ್ತಿರುತ್ತಾರೆ. ಬಾರದ ಮಳೆಗಾಗಿ ಪೂಜಿಸಿದ ರೈತರು ತಮ್ಮ ಪ್ರಾರ್ಥನೆಯ ಫಲವೆಂದು ನಂಬಿ ಮುಂದಿನ ಕೃಷಿ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಾರೆ.

ಗದ್ದರಿಸಿ ಮಳಿರಾಯ ಬಿದ್ದಾನ ಭೂಮಿಮ್ಯಾಲ
ಎದ್ದಾನ ಒಕ್ಕಲಿಗ ಬೆಳೆತಾನ । ಕೂರಿಗಿ ಕುಂಟಿ
ಬಿದ್ದಾವೊ ಬಡಿಗೇರ ಅರಮನಿಗೊ ।(ರಾಜೇಂದ್ರ ಯರನಾಳೆ, ೨೦೦೬, ಪು-೪೧೨)

ಮಳೆಯ ಜೊತೆಗೂಡಿ ಬರುವ ಸುಳಿಗಾಳಿ, ಸಿಡಿಲು ಹಾಗೂ ಮಿಂಚುಗಳನ್ನು ಜನಪದರು ಅಣ್ಣ-ತಮ್ಮರೆಂದು ಕರೆದಿದ್ದಾರೆ. ದಶದಿಕ್ಕುಗಳಿಗೂ ಅವರೇ ದೊಡ್ಡವರೆಂಬ ನಂಬಿಕೆ ಅವರಲ್ಲಿದೆ. ಈ ಒಂದೆ ಪ್ರಕೃತಿ ಮತ್ತು ಜನಪದರ ಸಂಬಂಧದಲ್ಲಿ ಇವುಗಳ ನಡುವಿನ ಬಾಂಧವ್ಯವನ್ನು ವಿಶ್ಲೇಷಿಸಲಾಗಿದೆ.

ಹಸನಾಗಿ ಹೊಡಿತಮ್ಮ ಸೋಸಿ ನೇಗಿಲ ಕುಂಟಿ
ಹಸನಿ ಭರಣಿ ಕೃತಿಕ ರೋಹಿಣಿಯ । ಹೊಸನೀರ
ಕುಡದಾಳ ಭೂಮಿತಾಯಿ । (ರಾಜೇಂದ್ರ ಯರನಾಳೆ, ೨೦೦೬, ಪು-೪೧೦)

ಮಳೆಯು ಭೂಮಿಗೆ ಬಿದ್ದ ಮೇಲೆ ರೈತನಿಗೆ ಬಿತ್ತನೆಯಾಗುವರೆಗೂ ನಿದ್ದೆಯೇ ಬಾರದು. ಭೂಮಿಯನ್ನು ಹಸನುಗೊಳಿಸುವ ಕಾರ್ಯದಲ್ಲಿ ಅನೇಕರ ನೆರವನ್ನು ಪಡೆಯುತ್ತಾರೆ. ಒಬ್ಬರಿಗಿಂತ

ಇಬ್ಬರು ಲೇಸೆಂದು ಬಗೆದು ಹಲವರ ಅಭಿಪ್ರಾಯದಂತೆ ಉತ್ತುವುದು, ಬಿತ್ತುವುದು ಮುಂತಾದ ಕಾರ್ಯಗಳನ್ನು ಕೈಗೊಳ್ಳುತ್ತಾನೆ. ಭರಣಿ, ಕೃತಿಕಾ, ರೋಹಿಣಿ ಮಳೆಗಳು ಭೂಮಿಗೆ ಹೊಸ ನೀರನ್ನು ಉಣಿಸುತ್ತವೆ. ಆದಕಾರಣ ಅನುಭವಿಕನೊಬ್ಬ ರೈತನಿಗೆ 'ಹಸನಾಗಿ ನೇಗಿಲನ್ನು ಹೊಡಿ' ಎಂದು ನಿರ್ದೇಶನ ನೀಡುತ್ತಾನೆ. ಯಾವ ಯಾವ ಮಳೆಗೆ ಏನೇನು ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಬೇಕೆಂದು ಜನಪದರು ಅರಿತಿದ್ದಾರೆ. ಮಳೆ ನಕ್ಷತ್ರಗಳ ಬಗೆಗೆ ಜನಪದರಿಗೆ ಸಂಪೂರ್ಣ ಅರಿವಿದೆ. ಕೃಷಿಯನ್ನೇ ನಂಬಿ ಬದುಕುವ ಜನಪದರಿಗೆ ಮಳೆಯೂ ಕೂಡ ಅತಿ ಮಹತ್ವದ್ದು. ಹಾಗಾಗಿ ಮಳೆಯನ್ನು ಕೂಡ ದೈವದ ಸ್ಥಾನದಲ್ಲಿರಿಸಿ ಪೂಜಿಸುತ್ತಾರೆ.

ಮಳೆಯಿಂದಲೇ ಇಳೆಯ ಬದುಕು ಎಂಬುದನ್ನು ಅರಿತ ಜನಪದರು ತಮ್ಮೊಳಗಿನ ಬಾಂಧವ್ಯವನ್ನು ರೂಢಿಸಿಕೊಳ್ಳುವುದು ಅವರ ಬದುಕಿನ ಲಕ್ಷಣ. ಗಾಳಿ, ಮಿಂಚು, ಸಿಡಿಲುಗಳೊಡಗೂಡಿಯೇ ಮಳೆ ಬರುವುದೆಂದು ತಿಳಿದ ಜನಪದರು ಬದುಕಿಗೆ ಒಗ್ಗಟ್ಟಿನ ಸೂತ್ರವನ್ನು ಮಳೆಯಿಂದ ತಿಳಿದುಕೊಳ್ಳುತ್ತಾರೆ. ಮಳೆಯು ಜನಪದರ ಜೀವಾಳ. ಮಳೆ ಬಾರದಿದ್ದರೆ ಬದುಕಿಲ್ಲ. ಮಳೆಯೊಂದಿಗೆ ಇಳೆಯೊಂದಿಗೆ ಜನಪದರು ಅವಿನಾಭಾವ ಸಂಬಂಧವನ್ನು ಹೊಂದಿದ್ದಾರೆ.

### ೫.೭ ಪಶುಪಕ್ಷಿ ಮತ್ತು ಜನಪದರ ಸಂಬಂಧ

ಬೆಂಕಿ, ಬೇಟೆ, ಬೇಸಾಯ, ವಸತಿ, ಕೈಗಾರಿಕೆ, ತಂತ್ರಜ್ಞಾನಗಳ ಜೊತೆಜೊತೆಯಲ್ಲಿಯೇ ಅನಾಗರಿಕನಾಗಿದ್ದ ಮಾನವ ನಾಗರಿಕತೆಯನ್ನು ಹಂತಹಂತವಾಗಿ ರೂಢಿಸಿಕೊಂಡು ಬಂದಿದ್ದಾನೆ. ಮಾನವ ಸಂಸ್ಕೃತಿಯ ನಿರ್ಮಾಣಕ್ಕೆ ಪೂರಕವಾಗಿ ಬಂದ ಮೊದಲ ಘಟಕ ಸಸ್ಯ ಜಗತ್ತು. ಈ ಘಟ್ಟದಲ್ಲಿ ಪ್ರಾಣಿಸಂಸ್ಕೃತಿ. ಮಾನವ ಸಂಸ್ಕೃತಿಗೆ ಪ್ರತಿ ಸಂಸ್ಕೃತಿಯಾಗಿತ್ತು. ಆರಂಭದಲ್ಲಿ ಇತರ ಪ್ರಾಣಿಗಳೊಂದಿಗೆ ಸೆಣಸಿ ಬದುಕನ್ನು ಮಾನವ ಕಂಡುಕೊಂಡ. ಏಕೆಂದರೆ ಮಾನವನು ಮೂಲತಃ ಪ್ರಾಣಿಯಲ್ಲವೇ. ಪರಸ್ಪರರ ಅಸ್ತಿತ್ವದ ಪ್ರಶ್ನೆ ಬಂದಾಗ ಮಾನವ ತನ್ನ ಬುದ್ಧಿವಂತಿಕೆಯಿಂದ ಬದುಕಿನ ಲಯ ಕಂಡುಕೊಂಡ. ಆರಂಭದಲ್ಲಿ ತನಗೆ ಆಹಾರವಾಗುವ ಮಟ್ಟಕ್ಕೆ ಪ್ರಾಣಿಗಳ ಸೋಲು ಕಾಣುವರೆಗಿನ ಮಾನವ–ಪ್ರಾಣಿ ಸಂಬಂಧ ತುಂಬಾ ವೈಶಿಷ್ಟ್ಯಪೂರ್ಣವಾಗಿದೆ.

ಅನಂತರದ ಕಾಲಘಟ್ಟದಲ್ಲಿ ಮಾನವ ನಿರ್ಮಾಣಶಕ್ತಿ ಹಾಗೂ ಪ್ರಾಣಿಗಳ ಚಟುವಟಿಕೆಯಿಂದ ಮಾನವ ಪ್ರಾಣಿ ಸಂಬಂಧದಲ್ಲಿ ರೂಪಾಂತರ ಕಾಣುತ್ತೇವೆ. ಕೆಲವು ಪ್ರಾಣಿಗಳು ಮಾನವನಿಗೆ ಸಹಾಯಕ ಸ್ನೇಹಿತನಂತೆ ಆಸರೆಯಾದರೆ, ಹುಲಿ, ಸಿಂಹ, ನವಿಲು, ಗರುಡ, ಆನೆ ಮುಂತಾದ ಪ್ರಾಣಿ ಪಕ್ಷಿಗಳು ಕುಲಚಿಹ್ನೆಗಳಾಗಿವೆ.

ಮಾನವ ಪ್ರಾಣಿ ಪಕ್ಷಿಗಳ ಜೀವಗಳು ಅಭಿನ್ನವಾದ ಸಂದರ್ಭಗಳು ಜನಪದ ಸಾಹಿತ್ಯದಲ್ಲಿವೆ. ಮಂತ್ರವಾದಿಯ ಪ್ರಾಣ ಯಾವುದೋ ಗಿಳಿಯಲ್ಲಿರುತ್ತದೆ. ಊರಿಗೆ ಕಾಟ ಕೊಡುವ ರಾಕ್ಷಸಿಯ ಪ್ರಾಣ ಕಾಡಿನ ಯಾವುದೋ ಪ್ರಾಣಿಯಲ್ಲಿರುತ್ತದೆ. ಹೀಗೆ ಪ್ರಾಣ ಪ್ರಜ್ಞೆಯ ಕುರಿತಾದ ಅನೇಕ ಅಂಶಗಳನ್ನು ಜನಪದ ಕಥೆಗಳಲ್ಲಿ, ಗೀತೆಗಳಲ್ಲಿ ಕಾಣುತ್ತೇವೆ. "ಮನುಷ್ಯ ಮತ್ತು ಪ್ರಾಣಿಗಳು ಒಂದೇ ಸಮಾಜದ

ಪ್ರಜೆಗಳೆಂಬ ಗ್ರಹಿಕೆ ಜನಪದ ಪ್ರಾಣಿ ಕಥಾ ಸಮಾಜದಲ್ಲಿ ಕಾಣುತ್ತಿದೆ. ಪ್ರಾಣಿಗೆ ಹೆಣ್ಣಿನ ಜೊತೆಗೆ ಲೈಂಗಿಕ ಸಂಬಂಧವೂ ಉಂಟು. ವಾಸದಲ್ಲಿ ಮಾತ್ರ ಇವು ಬೇರೆ ಬೇರೆಯಾಗುತ್ತವೆ. ಹಗಲಿನ ಚಟುವಟಿಕೆಗಳಲ್ಲಿ ವ್ಯತ್ಯಾಸವೇ ಕಾಣುವುದಿಲ್ಲ. ಒಂದೇ ಹಳ್ಳಿಯಲ್ಲಿ ಬದುಕುವ ಎರಡು ಓಣಿಯ ಜನರಂತೆ ಈ ಚಟುವಟಿಕೆ ನಮ್ಮ ಗಮನ ಸೆಳೆಯುತ್ತದೆ." (ಹಿ.ಶಿ. ರಾಮಚಂದ್ರೇಗೌಡ(ಲೇ.) ಜನವರಿ ೨೦೦೧, ಪು-೭೦ )

'ದಯವಿಲ್ಲದ ಧರ್ಮವದೇವುದಯ್ಯಾ, ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ' ಎಂಬ ಬಸವಣ್ಣನವರ ನುಡಿಯಂತೆ ಜನಪದರು ಸಕಲ ಪ್ರಾಣಿ-ಪಕ್ಷಿಗಳಲ್ಲಿ ದಯೆಯನ್ನು ಹೊಂದಿದ್ದರು. ಹಸು, ಎತ್ತು, ಆನೆಯಂತಹ ಪ್ರಾಣಿಗಳನ್ನು ಪೂಜ್ಯ ಭಾವನೆಯಿಂದ ನಾಯಿ, ಬೆಕ್ಕು, ಮೊಲ ಮುಂತಾದವುಗಳನ್ನು ಆತ್ಮೀಯ ಭಾವನೆಯಿಂದ ಪಾರಿವಾಳ, ಗಿಳಿ, ಗುಬ್ಬಿ, ಕೋಗಿಲೆ ಮುಂತಾದ ಪಕ್ಷಿಗಳಲ್ಲಿ ಪ್ರೀತಿಯ ಭಾವನೆ ಹೊಂದಿದ್ದರು.

ಹಳ್ಳದ ಹೊಲದಾಗ ಬೆಳ್ಳನ್ನ ಬಿಳಿಜೋಳ
ಮೆಲ್ಲಕ ಮೆಲಿಯೋ ಗಿಣಿರಾಮ । ನನ್ನಣ್ಣ
ಕಲ್ಲು ಬಂದಾವು ಕಡಿಗಾಗೋ । (ದೇ. ಜವರೇಗೌಡ, ೧೯೭೮, ಪು-೧೮೮)

ಜನಪದ ರೈತನೊಬ್ಬನು ಗಿಳಿಯನ್ನು ಅಣ್ಣನೆಂದು ಸಂಬೋಧಿಸಿರುವುದನ್ನು ಇಲ್ಲಿ ಗಮನಿಸುತ್ತೇವೆ. ಹಳ್ಳದ ಹೊಲದಲ್ಲಿ ಬಿಳಿಜೋಳವನ್ನು ಕುಕ್ಕಿ ತಿನ್ನುವುದಕ್ಕೆ ಗಿಳಿಗಳ ಹಿಂಡೇ ಬಂದಿರುತ್ತದೆ. ಅವುಗಳನ್ನು ನೋಯಿಸುವ ಮನಸ್ಸು ಇಲ್ಲಿ ಜನಪದರಿಗೆ ಇಲ್ಲ. ಆದ್ದರಿಂದ ಕೈತಪ್ಪಿನಿಂದಾಗಿ ಕಲ್ಲು ಎಸೆಯುವಾಗ ಗಿಳಿಗೆ ಬೀಳಬಹುದೆಂದು ಊಹಿಸಿ 'ಕಡೆಗಾಗೋ' ಎಂದು ಹಾಡಿನ ಮೂಲಕ ಪಕ್ಷಿಯ ಮೇಲಿನ ಪ್ರೀತಿಯನ್ನು ಅಭಿವ್ಯಕ್ತಿಸಿದ್ದಾರೆ.

'ತಿನ್ನುವ ಪ್ರತಿ ತುತ್ತಿನ ಮೇಲೂ ತಿನ್ನುವವರ ಹೆಸರು ಇರುತ್ತದೆ' ಎಂಬ ಉಕ್ತಿಯಂತೆ ಜನಪದರು ಬಿತ್ತಿ ಬೆಳೆಯುವಾಗ ಪ್ರಾಣಿ, ಪಕ್ಷಿ, ಭೂಮಿಯ ಪಾಲು ಎಂದೆಲ್ಲ ವಿಭಜಿಸಿ ಉದಾರತೆಯನ್ನು ತೋರಿಸುತ್ತಾರೆ. ಚಿಕ್ಕ ಚಿಕ್ಕ ಹಕ್ಕಿಗಳು, ಕೀಟಗಳು ಬದುಕಲೆಂದು ಅಂಗಳದ ರಂಗೋಲಿಯನ್ನು ಜೋಳದ ಅಥವಾ ಅಕ್ಕಿಯ ಹಿಟ್ಟಿನಿಂದ ಬಿಡಿಸುವುದು. ಮನೆಯಲ್ಲಿ ದೇವರಿಗೆಂದು ನೈವೇದ್ಯ ಮಾಡುವಾಗ ಪ್ರಾಣಿ-ಪಕ್ಷಿಗಳಿಗೆ ಒಂದು ಪಾಲನ್ನು ಇಡುವುದು. ನದಿಗಳಲ್ಲಿ ಮತ್ತು ಹೊಲಗಳಿಗೆ ಚರಗ ಚೆಲ್ಲುವುದರ ಹಿಂದಿನ ಉದ್ದೇಶ ತನ್ನೊಂದಿಗೆ ಇತರ ಪ್ರಾಣಿಗಳು ಬದುಕಬೇಕೆಂಬ ಆಶಯ ಇಲ್ಲಿದೆ.

ಕಡೆಯ ಬಲಕಿನ ತಾಳ ಎಡ ಆಯ್ತು ಅರಸಗ
ಎಡಗಡೆಯ ತಾಳ ಪಶುಪಕ್ಷಿ । ಜೀವನಕೆ
ನಡುವಿನ ತಾಳ ರೈತರಿಗೊ । (ರಾಜೇಂದ್ರ ಯರನಾಳೆ, ೨೦೦೬, ಪು-೧೮೮)

ಬಿತ್ತುವ ಕೂರಿಗೆಗೆ ಮೂರು ತಾಳಗಳು ಇರುತ್ತವೆ. ಮೂರು ತಾಳಗಳಲ್ಲಿ ಬೆಳೆಯುವ ಬೆಳೆಯನ್ನು ಜನಪದ ಕವಿಯೊಬ್ಬ ಮೇಲ್ಕಂಡಂತೆ ಹಂಚಿದ್ದಾನೆ. ಬಲಗಡೆಯ ಸಾಲಿನ ಬೆಳೆಯು

ಅರಸನಿಗೆ ಮುಡಿಪು, ನಡುವಿನ ತಾಳದ ಬೆಳೆಯು ತನ್ನ ಜೀವನಕ್ಕೆ ಹಾಗೂ ಎಡಗಡೆಯ ಸಾಲಿನಲ್ಲಿ ಬೆಳೆಯುವ ಬೆಳೆಯು ಪಶುಪಕ್ಷಿಗಳಿಗೆ ಆಹಾರವೆಂದು ತನ್ನ ಔದಾರ್ಯತೆಯನ್ನು ಜನಪದರು ಮೆರೆದಿದ್ದಾರೆ. ಅವುಗಳನ್ನು ತಮ್ಮಂತೆಯೇ ಎಂದು ಭಾವಿಸಿರುವುದು ಇಲ್ಲಿ ಶ್ಲಾಘನೀಯ.

ನಲ್ಮೆಯಿಂದ ಪ್ರಾಣಿಪಕ್ಷಿಗಳನ್ನು ಕಾಣುವುದಲ್ಲದೇ ಅವುಗಳ ಬದುಕನ್ನು ತಮಗೆ ಆದರ್ಶವೆಂದು ಸಾರುವ ಮೂಲಕ ಪ್ರಾಣಿಗಳೇ ಶ್ರೇಷ್ಠವೆಂದು ಹೇಳಿದ್ದಾರೆ. ಮೋಸ, ವಂಚನೆಗಳನ್ನು ತಿಳಿಯದ ಮುಗ್ದ ಪ್ರಾಣಿಪಕ್ಷಿಗಳ ಬದುಕನ್ನು ಜನಪದರು ಹಾಡಿಹೊಗಳಿದ್ದಾರೆ. ಜನಪದರಿಗೆ ಬೆಳಗಾಗುವುದು ಕೂಡ ಕೋಳಿ ಕೂಗುವುದರಿಂದ ಎಂಬ ನಂಬಿಕೆ ಕಾಲಕಳೆದಂತೆ ಬೆಳಗಿಗೆ ಕೋಳಿ ಕೂಗುವುದು ಎಂದು ಗ್ರಹಿಸಿಕೊಂಡ ಜನಪದರು ಕೋಳಿ ಕೂಗಿನಿಂದ ನಿತ್ಯ ಚಟುವಟಿಕೆಗಳನ್ನು ಆರಂಭಿಸುತ್ತಾರೆ. ಕಾಲಜ್ಞಾನದ ಅರಿವಿರದ ಬದಲಾವಣೆಯಿಂದ ಸಮಯವನ್ನು ಗುರುತಿಸುತ್ತಾರೆ.

ಮುಂಗೋಳಿ ಕೂಗ್ಯಾವು ಮೂಡು ಕೆಂಪರ್‍ಯಾವು
ನಾರಾಯಣ ಸ್ವಾಮಿ ರಥವೇರಿ । ಬರುವಾಗ
ನಾವೆದ್ದು ಕೈಯ ಮುಗಿದೇವು ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೪೩, ಪು-೧೯)

ಅಂಗಳದ ಗುಬ್ಬಿಯು ಚಿಲಿಪಿಲಿ ಗುಟ್ಟುತ್ತಿದ್ದರೆ ಮಕ್ಕಳ ಆನಂದಕ್ಕೆ ಪಾರವೇ ಇಲ್ಲ. ಒಂದೊಮ್ಮೆ ಮಕ್ಕಳ ಹಠವನ್ನು ಶಮನ ಮಾಡಲು ಪಕ್ಷಿಗಳು ನೆರವಾಗುತ್ತವೆ. ಅಂತಹ ಗುಬ್ಬಿಯನ್ನು ಕುರಿತಾಗಿ ಅಭಿವ್ಯಕ್ತಿಸಿದ್ದನ್ನು ಕಾಣುತ್ತೇವೆ. ಹಳ್ಳದ ದಂಡೆಯ ಮೇಲಿನ ಹಸಿರು ಬಣ್ಣದ ಗುಬ್ಬಿಯು ಬಿಸಿಲಿನಿಂದ ಬಸವಳಿದು ಬಾಯಿ ಬಿಡುತ್ತಲಿದೆ. ಆದರೂ ಆ ಬಸವಳಿಕೆಯಲ್ಲಿಯೇ ನಗುವನ್ನು ತೋರುತ್ತದೆ ಎಂದು ಹೇಳುವ ಮೂಲಕ ಮಾನವನಿಗೆ ಬುದ್ಧಿವಾದ ಹೇಳಿದ್ದಾರೆ. ತನ್ನಲ್ಲಿ ಎಷ್ಟೇ ಕಷ್ಟಗಳಿದ್ದರೂ ಅವುಗಳನ್ನು ತೋರಿಗೊಡದೆ ನಗುಮೊಗದ ಬದುಕನ್ನು ನಡೆಸುವುದೇ ಬದುಕು ಎಂಬುದನ್ನು ಜನಪದರು ಸಾಂಕೇತಿಕವಾಗಿ ತಿಳಿಸಿದ್ದಾರೆ.

ಅಡವಿಯನ್ನಿ ಮರನೆ
ಗಿಡವಬನ್ನಿ ಮರನೆ
ಅಡವ್ಯಾಗ ಇರುವಂಥ
ಸಾರಂಗ ಸರದೂಳಿ
ಹೆಬ್ಬುಲಿ ಹುಲಿಕರಡಿ
ಎಡಬಲ ಹಾವು ಚೇಳೋ ದೇವಾ
ಎನ್ನ ಮೇಲಾಡಿ ಶ್ರೀಗಂಗೀನ ತಂದಿ
ಎನ್ನ ತಪ್ಪೇನು ಕಂಡಿ । (ಕಾಪಸೆ ರೇವಪ್ಪ, ೧೯೩೫, ಪು-೩೯)

ಜನಪದರಿಗೆ ಪ್ರಾಣಿಪಕ್ಷಿಗಳ ಸಹಾಯಕ ಸ್ನೇಹಿತನಂತೆ ವರ್ತಿಸುತ್ತವೆ. ಇಲ್ಲಿ ಸೌಮ್ಯ ಪ್ರಾಣಿ-ಪಕ್ಷಿಗಳೂ ಇವೆ. ಕ್ರೂರ ಪ್ರಾಣಿ-ಪಕ್ಷಿಗಳೂ ಇವೆ. ಸೌಮ್ಯ ಪ್ರಾಣಿ-ಪಕ್ಷಿಗಳನ್ನು ಜನಪದರ ಹೆಚ್ಚಾಗಿ

ಸಹಾಯಕವೆಂದು ಪರಿಗಣಿಸಿ ಸಾಕುತ್ತಾರೆ. ಅವುಗಳಲ್ಲಿ ಹಸು, ಎತ್ತು, ನಾಯಿ, ಕುದುರೆ, ಬೆಕ್ಕು, ಗಿಳಿ, ಪಾರಿವಾಳ, ನವಿಲು, ಜಿಂಕೆ ಇತ್ಯಾದಿ. ಕೆಲವೊಮ್ಮೆ ಕ್ರೂರ ಸ್ವಭಾವದ ಹುಲಿ, ಕರಡಿ, ಸಿಂಹ, ಹಂದಿ, ಹದ್ದು, ಗಿಡುಗ, ಗೂಬೆ, ಕಾಗೆ ಹಾವುಗಳು ಮಾನವನ ಅಸ್ತಿತ್ವಕ್ಕೆ ನೆರವಾಗುತ್ತವೆ. ಜನಪದರು ಇಂತಹ ಪ್ರಾಣಿಪಕ್ಷಿಗಳನ್ನು ಗುರುತಿಸಲು ಅವುಗಳಿಗೂ ತಮ್ಮಂತೆಯೇ ಹೆಸರನ್ನಿಟ್ಟು ಕರೆಯುತ್ತಾರೆ.

ಕರಿ ಎತ್ತು ಕಾಳಿಂಗ ಬಿಳಿ ಎತ್ತು ಮಾಲಿಂಗ
ಸರದಾರ ನನ್ನೆತ್ತು ಸಾರಂಗ । ಬರುವಾಗ
ಸರಕಾರವೆಲ್ಲ ನಡಿಗೋತೋ । (ರಾಜೇಂದ್ರ ಯರನಾಳೆ, ೨೦೦೬, ಪು–೩೫೮)

ಹಸುವಿಗೆ ಗಂಗೆ, ಗೌರಿ ಎಂದೂ, ಬೆಕ್ಕಿಗೆ ರಾಣಿಯೆಂದು, ನಾಯಿಗೆ ರಾಜನೆಂದು ಹೀಗೆ ತಮಗಿಷ್ಟವಾದ ಹೆಸರಿಂದ ತಮ್ಮ ಸಾಕುಪ್ರಾಣಿಗಳ ಮೇಲಿನ ಮಮಕಾರವನ್ನು ಜನಪದರು ಬಹಿರಂಗ ಪಡಿಸಿದ್ದಾರೆ. ಕರಿ ಬಣ್ಣದ ಎತ್ತನ್ನು ಕಾಳಿಂಗನೆಂದು, ಬಿಳಿ ಬಣ್ಣದ ಎತ್ತನ್ನು ಮಾಲಿಂಗನೆಂದು ಕರೆದು ಅವುಗಳೊಂದಿಗೆ ಅನ್ಯೂನ್ಯ ಸಂಬಂಧ ಹೊಂದಿರುತ್ತಾರೆ. ಕೆಲವೊಮ್ಮೆ ಸಾಕುಪ್ರಾಣಿಗಳು ಸತ್ತಾಗ ತನ್ನ ಬಂಧುಗಳೇ ತೀರಿದಂತೆ ಅತ್ತಂತ ಪ್ರಸಂಗಗಳು ಸಾಕಷ್ಟಿವೆ. ಅಲ್ಲದೇ ಸಾಕುಪ್ರಾಣಿಗಳ ನೆನಪಿಗಾಗಿ ಸ್ಮಾರಕಗಳನ್ನು ಕಟ್ಟಿಸಿದ್ದಲ್ಲದೇ ಶಾಸನಗಳನ್ನು ಹೊರಡಿಸಿದ ದಾಖಲೆಗಳು ಇತಿಹಾಸದಲ್ಲಿವೆ. ಆದ್ದರಿಂದ ಜನಪದರು ಪ್ರಾಣಿಪಕ್ಷಿಗಳೊಂದಿಗೆ ಮಾನವೀಯ ಸಂಬಂಧಗಳಿಗಿಂತಲೂ ಮಿಗಿಲಾದ ವಿಶೇಷ ಸಂಬಂಧವನ್ನು ಹೊಂದಿದ್ದರು ಎಂಬುದನ್ನು ಅವರ ನಂಬಿಕೆ, ಗ್ರಹಿಕೆ ಮತ್ತು ಅಭಿವ್ಯಕ್ತಿಗಳಿಂದ ಗುರುತಿಸುತ್ತೇವೆ.

ಹಳ್ಳದ ದಂಡ್ಯಾನ ಹಸುರು ಬಣ್ಣದ ಗುಬ್ಬಿ
ಬಿಸಲೀಗಿ ಬಾಯ ಬಿಡತೈತಿ । ಆ ಗುಬ್ಬಿ
ಕುಸಲದ ನಗುವ ನಗತೈತಿ । (ದೇ. ಜವರೇಗೌಡ, ೧೯೭೮, ಪು–೧೮೮)

ಪ್ರಾಣಿಪಕ್ಷಿಗಳ ಬದುಕನ್ನು ಜನಪದರು ಅನುಕರಿಸುತ್ತಾರೆ. ತಾನೇ ಶ್ರೇಷ್ಠನೆಂಬ ಅಹಂಕಾರವನ್ನು ಮರೆತು ಬದುಕಿನಲ್ಲಿ ತನಗೆ ನೆರವಾಗುವ ಕ್ರಿಮಿ–ಕೀಟ, ಪ್ರಾಣಿಪಕ್ಷಿ, ಗಿಡಮರಗಳನ್ನೆಲ್ಲ ಕೃತಜ್ಞತಾ ಭಾವದಿಂದ ನೋಡುತ್ತಾರೆ. ಜನಪದರು ಮತ್ತು ಪಶು–ಪಕ್ಷಿಗಳ ನಡುವಿನ ಬಾಂಧವ್ಯದ ದೃಷ್ಟಾಂತವುಳ್ಳ ಗೀತೆಗಳಲ್ಲಿ ಅಭಿವ್ಯಕ್ತಗೊಂಡಿವೆ. ಅವುಗಳಲ್ಲಿ ಕೆಲವು ಮಾನವನಿಗೆ ಅತೀ ಹತ್ತಿರವಾದರೆ ಇನ್ನೂ ಕೆಲವು ಮಾನವನಿಂದ ದೂರ ಉಳಿಯುತ್ತವೆ. ಜನಪದರು ತಮ್ಮ ಕಣ್ಣಿಗೆ ಕಾಣುವ ಪಶು–ಪಕ್ಷಿಗಳ ಬಗ್ಗೆ ಸೊಗಸಾಗಿ ಹಾಡಿದ್ದಾರೆ ಹಾಗೂ ವರ್ಣನೆ ಕೂಡ ಮಾಡಿದ್ದಾರೆ.

ಪ್ರಾಣಿಪಕ್ಷಿಗಳ ದರ್ಶನದಿಂದ ಲಾಭನಷ್ಟ ಸೃಷ್ಟಿ, ವಿನಾಶ, ಅಪಘಾತ–ಅವಘಡಗಳು ಸಂಭವಿಸುತ್ತವೆ ಎಂಬ ನಂಬಿಕೆ ಜನಪದರಲ್ಲಿದೆ. ಯಾವುದೇ ವ್ಯಕ್ತಿಯನ್ನು ಕಾಗೆ ಮುಟ್ಟಿದರೆ ಆ ವ್ಯಕ್ತಿಯ ಸಾವು ಸಂಭವಿಸುತ್ತದೆ. ಹಾವುಗಳ ಸರಸವನ್ನು ಕಂಡರೆ ಮನೆಯಲ್ಲಿ ವಿರಸ ಉಂಟಾಗುತ್ತದೆ. ದಾರಿಗೆ ಬೆಕ್ಕು ಅಡ್ಡಲಾಗಿ ಬಂದರೆ ಅನಿಷ್ಟ ಕಾದಿದೆ. ಹಲ್ಲಿ ಲೋಚಗುಟ್ಟಿದರೆ ಶುಭ, ಮೈಮೇಲೆ ಬಿದ್ದರೆ ಅಶುಭ. ರತ್ನಪಕ್ಷಿಯು ಕಂಡುಬಂದರೆ ಹೋಗುವ ಕಾರ್ಯಗಳೆಲ್ಲವೂ ಶುಭ. ರಾತ್ರಿ ವೇಳೆ ನಾಯಿ ಅಳುವಂತೆ

ಶಬ್ದ ಮಾಡಿದರೆ ಕೆಟ್ಟ ಸುದ್ದಿ ಕೇಳುತ್ತೇವೆ. ನರಿ ಕಂಡರೆ ಲಾಭ ಜಾಸ್ತಿ, ಆಮೆಯನ್ನು ಮನೆಯಲ್ಲಿ ಸಾಕಿದರೆ ಶ್ರೀಮಂತಿಕೆ ಹೆಚ್ಚಾಗುವುದು. ರಾತ್ರಿಯ ವೇಳೆ ಗೂಬೆಗಳು ಬಿಡದೆ ಕೂಗಿದರೆ ಬೆಳಿಗ್ಗೆ ಸಾವಿನ ಸುದ್ದಿ ಕೇಳುತ್ತೇವೆ. ಹೀಗೆ ಜನಪದರಲ್ಲಿ ಪ್ರಾಣಿಪಕ್ಷಿಗಳ ದರ್ಶನವು ಬದುಕನ್ನು ಬದಲಾಯಿಸುತ್ತದೆ ಇಲ್ಲವೇ ಬಿಗಡಾಯಿಸುತ್ತದೆ ಎಂಬ ಬಲವಾದ ನಂಬಿಕೆ ಇಂದಿಗೂ ಉಳಿದಿದೆ. ಜನಪದರ ಬದುಕಿನಲ್ಲಿ ಪ್ರಾಣಿ-ಪಕ್ಷಿಗಳೂ ಪ್ರಮುಖ ಪಾತ್ರ ವಹಿಸಿವೆ.

ಅಧ್ಯಾಯ – ೬

# ಜನಪದರಲ್ಲಿನ ಅಲಕ್ಷಿತ ಸಂಬಂಧಗಳು

೧೮ನೇ ಶತಮಾನದಲ್ಲಿ ಆರಂಭಗೊಂಡ ಜಾನಪದ ಅಧ್ಯಯನವು ಇಂದು ಪ್ರಮುಖವಾದ ಜ್ಞಾನಶಿಸ್ತಾಗಿ ಮುಂದುವರೆಯುತ್ತಿದೆ. ಮೊದಲ ಕಾಲಘಟ್ಟದ ಅಧ್ಯಯನಗಳಲ್ಲಿ ಸಂಗ್ರಹಣೆಗೆ ಹೆಚ್ಚು ಒತ್ತು ಕೊಟ್ಟ ಅಧ್ಯಯನಕಾರರು ಇಂದು ವಿಮರ್ಶೆ, ವಿಶ್ಲೇಷಣೆ, ತಾತ್ವಿಕ-ಪರಿಕಲ್ಪನಾತ್ಮಕ ಚರ್ಚೆ ಇತ್ಯಾದಿಗಳ ಮೂಲಕ ಜಾನಪದದ ವಿವಿಧ ಪ್ರಕಾರಗಳನ್ನು ಅಧ್ಯಯನಕ್ಕೆ ಒಳಪಡಿಸುತ್ತಿದ್ದಾರೆ. ಈ ಹಿಂದೆ ಹೇಳಿರುವಂತೆಯೇ ಪ್ರಸ್ತುತ ಅಧ್ಯಯನದಲ್ಲಿ ಜನಪದರ ಸಂಬಂಧಗಳ ವಿಶ್ಲೇಷಣೆಗೆ ಪ್ರಾಶಸ್ತ್ಯ ನೀಡಲಾಗಿದೆ. ಜನಪದ ಗೀತೆಗಳಲ್ಲಿ ಅಭಿವ್ಯಕ್ತವಾದ ಸಂಬಂಧಗಳನ್ನು ಅವಲೋಕಿಸಿದಾಗ ಸಮಾಜ ಹಾಗೂ ಕುಟುಂಬದಲ್ಲಿ ಅಲಕ್ಷಿತ ಸಂಬಂಧಗಳು ಇರುವುದನ್ನು ಪ್ರಸ್ತುತ ಅಧ್ಯಯನದ ಮೂಲಕ ಗುರುತಿಸಲಾಗಿದೆ. ಅವು ವಿಶೇಷವಾಗಿ ಹೆಣ್ಣುಮಕ್ಕಳನ್ನು ಕೇಂದ್ರವಾಗಿಟ್ಟುಕೊಂಡು ರೂಪುಗೊಂಡಿವೆ ಎಂದೆನಿಸುತ್ತವೆ. ಆದಿಕಾಲದಿಂದಲೂ ಹೆಣ್ಣಿಗೆ ವಿಶೇಷವಾದ ಸ್ಥಾನವನ್ನು ಕಲ್ಪಿಸಿದ್ದನ್ನು ಅನೇಕ ಅಧ್ಯಯನಗಳು ಸಾಬೀತುಪಡಿಸಿವೆ. ಭಾರತೀಯ ಪ್ರಾಚೀನ ಸಂಸ್ಕೃತಿಯಲ್ಲಿ ಹೆಣ್ಣಿಗೆ ಪೂಜ್ಯನೀಯ ಸ್ಥಾನಮಾನಗಳಿದ್ದವು. ಆದರೆ ಕಾಲದ ಸ್ಥಿತ್ಯಂತರಗಳಿಗೆ ಅವಳ ಸ್ಥಾನಮಾನದಲ್ಲಿ ಅನೇಕ ಬದಲಾವಣೆಗಳು ಕಂಡುಬಂದವು.

- "ಮೂಲತಃ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಕಾಲಾಂತರದಲ್ಲಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಾಗಿ ಪಲ್ಲಟಗೊಂಡಾಗ ಮಹಿಳೆ ಕುಟುಂಬದಲ್ಲಿ, ಸಮಾಜದಲ್ಲಿ ಎರಡನೆಯ ದರ್ಜೆಗೆ ಇಳಿಯಲ್ಪಟ್ಟಳು. ನಮ್ಮ ದೇಶದ (ಮೇಲ್ನೋಟದ) ಸಂಸ್ಕೃತಿಯಲ್ಲಿ ಮಹಿಳೆಯನ್ನು ಮಾತೆ, ಭೂತಾಯಿ, ದೇವಿ ಎಂದೆಲ್ಲಾ ಬಣ್ಣಿಸುವುದರ ಜೊತೆಗೆ ತ್ಯಾಗ, ಬಲಿದಾನ, ಪಾತಿವ್ರತ್ಯ ಹೀಗೆ ಅನೇಕ ರೀತಿಯಲ್ಲಿ ಲಕ್ಷಣರೇಖೆಯೊಳಗೆ ಬಂದಿಯನ್ನಾಗಿಸಲಾಯಿತು." (ಜೋತ್ಸ್ನಾ ಚಂದ್ರಕಾಂತ(ಲೇ.), ೨೦೧೦, ಪು-೧೩೭) ಹೀಗೆ ಕುಟುಂಬ, ಸಮಾಜಗಳಲ್ಲಿ ವಿಧವೆ, ಬಂಜೆ, ಸವತಿ, ಮಲತಾಯಿ, ಮಲಮಕ್ಕಳು ಮತ್ತಿತರ ಬಾಂಧವ್ಯಗಳು ಅಲಕ್ಷ್ಯಕ್ಕೊಳಪಟ್ಟಿವೆ. ಇಂತಹ ಸಂಬಂಧಗಳಿಗೆ ಜನಪದರು ಯಾವುದೇ ಸ್ಥಾನಮಾನಗಳನ್ನು ನೀಡದಿರುವುದರಿಂದ ಇವು ತಾತ್ಸಾರಕ್ಕೊಳಗಾಗಿವೆ. ಜನಪದ ಕಥೆ, ಕಾವ್ಯಗಳಲ್ಲಿ ಕಂಡುಬರುವ ಸ್ವಗೋತ್ರ ವಿವಾಹ, ಸಹೋದರ-ಸಹೋದರಿಯರ ವಿವಾಹಗಳು ನಿಷೇಧಿತ ಸಂಬಂಧಗಳಿಗೆ ಸಾಕ್ಷಿಯಾಗಿವೆ. ಭಾರತೀಯ ಸಂಸ್ಕೃತಿಯಲ್ಲಿ ಕೆಲವೊಂದು ಆಯ್ದ ಬಾಂಧವ್ಯಗಳಲ್ಲಿ ಮಾತ್ರ ಮದುವೆಯಾಗಬೇಕೆಂಬ ನಿರ್ಬಂಧವಿದೆ. ಇಂತಹ ನಿರ್ಬಂಧದ ನಡುವೆಯೂ ಸಮಾಜದ ಕಟ್ಟಳೆಗಳನ್ನು ಮೀರಿ ನಿಷೇಧಿತ ಸಂಬಂಧಗಳು ಏರ್ಪಟ್ಟಿವೆ. ಇಂತಹ ಸಂಬಂಧಗಳಿಗೆ ಕಾರಣ ಯಾರು? ಮೂಲ ಯಾವುದು? ಎಂಬ ಮೂಲ ಶೋಧಿಸಲು ತೊಡಗಿದಾಗ ಪುರಾಣ, ಜನಪದ ಕಥೆ, ಚರಿತ್ರೆಗಳಲ್ಲಿ ಇವುಗಳ ಬಗ್ಗೆ ಉಲ್ಲೇಖ ಇರುವುದು

ಕಂಡುಬರುತ್ತದೆ. ಜನಪದರ ಜೀವನವು ಇದಕ್ಕೆ ಹೊರತಾಗಿಲ್ಲ. ಜನಪದ ಗೀತೆಗಳಲ್ಲಿ ಅಭಿವ್ಯಕ್ತಗೊಂಡ ಅಲಕ್ಷಿತ ಸಂಬಂಧಗಳನ್ನು ವಿವೇಚಿಸುವುದೇ ಒಟ್ಟಾರೆ ಇಲ್ಲಿನ ಆಶಯವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಜನಪದರ ಸಂಬಂಧಗಳ ವಿಶ್ಲೇಷಣೆಗೆ ಒಳಪಡಿಸುವುದು ಮುಖ್ಯವಾಗಿದೆ. ಕುಟುಂಬ ಹಾಗೂ ಸಮಾಜಗಳಲ್ಲಿ ವಿಧವೆ, ಬಂಜೆ, ಸವತಿ, ಮಲತಾಯಿ, ಮಲಮಕ್ಕಳು ಮತ್ತಿತರ ಬಾಂಧವ್ಯಗಳು ಅಲಕ್ಷ್ಯಕ್ಕೊಳಪಟ್ಟಿವೆ. ಜನಪದ ಗೀತೆಗಳಲ್ಲಿ ಅಭಿವ್ಯಕ್ತವಾದ ಸಂಬಂಧಗಳನ್ನು ಅವಲೋಕಿಸಿದಾಗ ಸಮಾಜ ಹಾಗೂ ಕುಟುಂಬದಲ್ಲಿ ಅಲಕ್ಷಿತ ಸಂಬಂಧಗಳು ಇರುವುದನ್ನು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

**೬.೧ ಬಂಜೆ ಮತ್ತು ಜನಪದರ ಸಂಬಂಧ**

ಗಂಡು–ಹೆಣ್ಣಿನ ಬದುಕು ಸಾರ್ಥಕತೆ ಪಡೆವುದು ಸಂತಾನದಲ್ಲಿ. ಸಂತಾನಾಭಿವೃದ್ಧಿ ಜೀವಿಗಳಿಗೆ ಪ್ರಕೃತಿದತ್ತ ಕೊಡುಗೆ. ಸಂತಾನದ ನಿಮಿತ್ತ ಒಂದಾಗುವ ಗಂಡು–ಹೆಣ್ಣು ಮಕ್ಕಳನ್ನು ಪಡೆದು ಪಾಲನೆ, ಪೋಷಣೆ ಮಾಡಿ ಮರಣದ ಪರ್ಯಂತ ಒಂದಾಗಿ ಬಾಳಿದಾಗ ಬದುಕು ಸಾರ್ಥಕವೆನಿಸುತ್ತದೆ. ಪ್ರತಿಯೊಬ್ಬ ಗಂಡು–ಹೆಣ್ಣು ಬದುಕಿನಲ್ಲಿ ಬಯಸುವುದು ಈ ಸಾರ್ಥಕತೆಯನ್ನೇ ಸಂತಾನವನ್ನು ರಕ್ಷಿಸಿ ಪೋಷಿಸಲು ದಂಪತಿಗಳು ಏನೆಲ್ಲ ಕಷ್ಟವನ್ನು ಸಹಿಸಲು ಸಿದ್ಧರಿರುತ್ತಾರೆ. ಮಕ್ಕಳಿಲ್ಲದ ದಂಪತಿಗಳನ್ನು ಸಮಾಜ ತಿರಸ್ಕಾರದಿಂದ ನೋಡುತ್ತದೆ. ಮಕ್ಕಳಾಗದಿರುವುದಕ್ಕೆ ಹೆಣ್ಣಿನಲ್ಲಿರುವ ಲೋಪದೋಷಗಳೇ ಕಾರಣವೆಂದು ನಮ್ಮ ಸಮಾಜದಲ್ಲಿ ತಪ್ಪುತಪ್ಪಾಗಿ ಭಾವಿಸಲಾಗುತ್ತದೆ. ಅಂತಹ ಹೆಣ್ಣನ್ನು ಬಂಜೆ, ಗೊಡ್ಡೆಂದು ಕರೆಯುತ್ತಾರೆ. ಗೊಡ್ಡು ಆಕಳಿಂದ, ಬಂಜೆ ಮರದಿಂದ ಏನು ಪ್ರಯೋಜನ? ಹಾಗೆಯೇ ಮಕ್ಕಳಿಲ್ಲದ ಹೆಣ್ಣೆಂದು ಜನಪದರು ಭಾವಿಸುತ್ತಾರೆ. ಮಕ್ಕಳಾಗದ ಹೆಣ್ಣನ್ನು ತೊರೆದು ಗಂಡ ಎರಡನೆಯ ಮದುವೆ ಆಗುತ್ತಾನೆ. ಸವತಿ ಬಂದರೆ ಅವಳ ಬಾಳು ನರಕ ಸದೃಶ್ಯವಾಗುತ್ತದೆ. ಅವಳಿಗೆ ಒಂದೆರಡು ಮಕ್ಕಳಾದರಂತೂ ಮಕ್ಕಳಿಲ್ಲದವಳ ಬಾಳು ಜೀತದಾಳಿಗೂ ಕಡೆಯಾಗುತ್ತದೆ. ಮೇಲ್ಕಂಡ ಮುಂತಾದ ಕಾರಣಗಳಿಂದಾಗಿ ಮದುವೆಯಾದ ಹೆಣ್ಣು ಮಕ್ಕಳಿಗಾಗಿ ಹಪಹಪಿಸುತ್ತಾಳೆ. ಮಕ್ಕಳಿಲ್ಲದ ಹೆಣ್ಣಿನ ಹಪಾಹಪಿ, ಯಾತನೆ, ಮಾನಸಿಕ ತುಮುಲಗಳನ್ನು ಜನಪದ ಗೀತೆಗಳು ತೆರೆದಿಟ್ಟಿವೆ.

ಹೆಣ್ಣಿಗೆ ಮಕ್ಕಳೇ ಸರ್ವಸ್ವ. ಮಕ್ಕಳಿಗಿಂತ ದೊಡ್ಡ ಸಂಪತ್ತು ಅವಳಿಗೆ ಬೇರೊಂದಿಲ್ಲ. ಮಕ್ಕಳನ್ನು ಪಡೆಯಲು ಅವಳು ಎಂತಹ ಕಠಿಣ ವ್ರತಗಳನ್ನೂ ಮಾಡಬಲ್ಲಳು. ದುರ್ಗಮ ದಾರಿಯನ್ನು ಸವೆಸಿ ದೇವಾಲಯ, ದೇವರ ದರ್ಶನ ಮಾಡಬಲ್ಲಳು. ದೇವರನ್ನು ಪ್ರಾರ್ಥಿಸುವುದು ಅವಳು ಸಂತಾನಕ್ಕಾಗಿ, ಸಿರಿಗಾಗಿ ಅಲ್ಲ. ಸಂಪತ್ತಿಗಾಗಿ ಮೊದಲೇ ಅಲ್ಲ.

ಮಕ್ಕಳ ಕುಡು ಶಿವನೆ ಮತ್ತೊಂದು ನಾ ಒಲ್ಲೆ
ಹತ್ತು ಮಂದ್ಯಾಗ ಹರುನೀರ । ತರುವಂಥ

ಮುತ್ತೈದೆತನವ ಕೊಡು ಶಿವನೆ । (ಹಲಸಂಗಿ ಗೆಳೆಯರು, ೧೯೩೧, ಪು-೯೯)

ಮಕ್ಕಳಿಲ್ಲದ ಹೆಣ್ಣಿನ ಪ್ರಾರ್ಥನೆ ಕರುಳಿರಿಯುವಂಥದ್ದು. ಮಕ್ಕಳಿರದ ಹೆಣ್ಣಿಗೆ ಶುಭ ಸಮಾರಂಭಗಳಲ್ಲಿ ಭಾಗವಹಿಸುವ ಅವಕಾಶಗಳಿರುವುದಿಲ್ಲ. ಮುತ್ತೈದೆತನ ಪೂರ್ಣಗೊಳ್ಳುವುದು ಕೂಡ ಸಂತಾನದಿಂದ ಎಂದು ಭಾವಿಸುತ್ತಾರೆ. ಮಕ್ಕಳಿಲ್ಲದ ಹೆಣ್ಣಿನ ಮನದ ನೋವನ್ನು ಪ್ರಸ್ತುತ ಗೀತೆಯು ತೆರೆದಿಡುತ್ತದೆ. ಮಕ್ಕಳಿಲ್ಲದ ಹೆಣ್ಣಿನ ಬಾಳು ಗೋಳುಗಳಿಂದ ಕೂಡಿರುತ್ತದೆ. ಅದೊಂದು ಜೀವಂತ ನರಕ ಎಂಬುದು ಜನಪದರ ನಂಬಿಕೆ. ಅದಕ್ಕಾಗಿ ಮಕ್ಕಳನ್ನು ಪಡೆದು ಎಲ್ಲರಂತೆ ಬದುಕಲು ಅವಳು ನಿರಂತರವಾಗಿ ತವಕಿಸುತ್ತಾಳೆ.

ಕಂದನ ಕುಡು ಶಿವನೆ ಬಂಧನ ಪಡಲಾರೆ
ಹಂಗೀನ ಬಾನ ಉಣಲಾರೆ । ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ ।(ಹಲಸಂಗಿ ಗೆಳೆಯರು, ೧೯೩೧, ಪು-೮೧)

ಮಕ್ಕಳಿಲ್ಲದ ಹೆಣ್ಣಿಗೆ ಬದುಕು ಒಂದು ಬಂಧನ. ಹುಟ್ಟು-ಸಾವು ಮನುಷ್ಯನಿಗೆ ಬಂಧನವಿದ್ದಂತೆ. ಹುಟ್ಟು-ಸಾವಿನ ಬಂಧನದಿಂದ ಬಿಡುಗಡೆಯಾಗಿ ಮೋಕ್ಷ ಪಡೆಯುವುದು ಮನುಷ್ಯನ ಬದುಕಿನ ಪರಮ ಉದ್ದೇಶ. ಹೆಣ್ಣಿಗೆ ಮೋಕ್ಷ ಪ್ರಾಪ್ತವಾಗುವುದು ಸಂತಾನದಿಂದ ಮಾತ್ರ ಎಂಬುದು ಜನಪದರ ನಂಬಿಕೆ. ಆದ್ದರಿಂದ ಹುಟ್ಟು ಸಾವಿನ ಬಂಧನದಿಂದ ಬಿಡುಗಡೆ ಮಾಡುವ ಸಂತಾನಕ್ಕಾಗಿ ಹೆಣ್ಣು ಹಾತೊರೆಯುತ್ತಾಳೆ. ಅವಳು ಉಣ್ಣುವ ಊಟವು ಹಂಗಿನದು ಅನಿಸುತ್ತದೆ. ಗಂಡ ದುಡಿದು ತಂದು ಹಾಕುವ ಅನ್ನದ ಋಣ ತೀರಿಸಬೇಕೆಂದರೆ ಗಂಡನ ವಂಶವನ್ನು ಬೆಳಸಬೇಕು. ಸಂತಾನವಿಲ್ಲವೆಂದರೆ ಅವಳು ಗಂಡನ ಅನ್ನದ ಋಣದಲ್ಲಿ ಸಾಯುವಂತಾಗುತ್ತದೆಂಬ ಯಾತನೇ ಅವಳನ್ನು ತೀವ್ರವಾಗಿ ಕಾಡುತ್ತದೆ. ಬದುಕಿನಲ್ಲಿ ಏನೆಲ್ಲ ಕಷ್ಟವನ್ನು ನೋವನ್ನು ಅವಳು ನುಂಗಬಲ್ಲಳು. ಆದರೆ ಸಮಾಜ ಅವಳನ್ನು 'ಬಂಜೆ' ಎಂದು ಕರೆಯುವುದನ್ನು ಮಾತ್ರ ಸಹಿಸಲಾರಳು. ಆದಕಾರಣ ನಿತ್ಯವೂ ಹತ್ತು ದೇವರಲ್ಲಿ ಹರಕೆಯ ಹೊತ್ತು ಮಕ್ಕಳನ್ನು ಪಡೆಯಬೇಕೆಂಬ ಆಸೆಯಿಂದ ಬೇಡುತ್ತಾಳೆ.

ಹೆಣ್ಣು ಗಂಡಿಗಿಂತಲೂ ಜೈವಿಕವಾಗಿ ಭಿನ್ನವೆಂದು ಗುರುತಿಸಲು ತಾಯ್ತನವನ್ನು ಪ್ರಮುಖವಾದ ಮಾನದಂಡವಾಗಿಟ್ಟುಕೊಳ್ಳಲಾಗಿದೆ. 'ತಾಯ್ತನವಿಲ್ಲದ ಹೆಣ್ಣು ಹೆಣ್ಣೇ?' ಎಂಬ ಉದ್ಗಾರವು ಅನೇಕ ಹಳ್ಳಿಗರಲ್ಲಿ ಒಡಮೂಡಿದ್ದುಂಟು. ತಾಯಿಯಾಗದ ಹೆಣ್ಣಿಗೆ 'ಬಂಜೆ' ಎಂದು ಕರೆಯಲಾಗುತ್ತದೆ. ಕುಟುಂಬ ಹಾಗೂ ಸಮಾಜದಲ್ಲಿ ಅವಳಿಗೆ ನಿರ್ಲಕ್ಷ್ಯ ತೋರಲಾಗುತ್ತದೆ. ಬಂಜೆ ಮಕ್ಕಳಿದ್ದವರ ಮನೆಗೆ ಹೋಗಕೂಡದು. ಮಕ್ಕಳನ್ನು ಎತ್ತಿ ಆಡಿಸಕೂಡದು. ಬಂಜೆಯು ಹೆರವರ ಮಕ್ಕಳನ್ನು ಮುಟ್ಟಕೂಡದು. ಮಕ್ಕಳನ್ನು ದಿಟ್ಟನೆ ನೋಡಕೂಡದು. ಮುಂತಾದ ನಿಷೇಧಗಳು ಬಂಜೆಗೆ ತನ್ನ ಹೆಣ್ಣಿನ ಬಳಗದಲ್ಲಿವೆ. ಹೆಣ್ಣಿಗೆ ಹೆಣ್ಣೆ ಬಂಜೆತನದ ಬಹಿಷ್ಕಾರ ಹಾಕಿಕೊಂಡಿರುವುದು ವಿಪರ್ಯಾಸದ ಸಂಗತಿ.

ಹಲವಾರು ಜನಪದ ಗೀತೆಗಳು ಜನಪದರು ಬಂಜೆಗೆ ನೀಡಿದ ಸ್ಥಾನಮಾನವನ್ನು ಗುರುತಿಸುತ್ತವೆ. ಮಕ್ಕಳನ್ನು ಪಡೆಯದ ಹೆಣ್ಣು ಗಂಡನ ಮನೆಯಲ್ಲಿ ಬಾಡಿಗೆ ಎತ್ತು. ಗಂಡನು ಹಾಸಿ

ಉಂಡು ಬೀಸಿ ಒಗೆದ ಬಾಳೆಯ ಎಲೆ. ಈ ತಾತ್ಸಾರದಿಂದ ಮಕ್ಕಳಾಗಲೆಂದು ಹಂಬಲಿಸಿ ಹರಕೆಯ ಹೊರುತ್ತಾಳೆ. ಶಿವನಿಗೆ ಸೆರಗೊಡ್ಡಿ 'ಬಂಜೆ' ಎಂಬ ಶಬ್ದದಿಂದ ಬಿಡುಗಡೆಗೆ ಬೇಡುತ್ತಾಳೆ. ಅವಳ ಕಲ್ಪನೆಯಲ್ಲಿ ಮಕ್ಕಳನ್ನು ಪಡೆಯದ ಹೆಣ್ಣು ಜನ್ಮ ಸಾರ್ಥಕವಾಗದೆಂಬ ಬೀಜ ಬಿತ್ತಲಾಗಿದೆ. ಅದಕ್ಕಾಗಿ ಮಕ್ಕಳಿಗಾಗಿ ಕಂಡಕಂಡ ದೇವರಿಗೆ ಕೈಮುಗಿಯುತ್ತಾಳೆ. ಸಂತಾನದ ಆಸೆ ಈಡೇರದಿದ್ದಾಗ ಹತಾಶೆಗೊಳ್ಳುತ್ತಾಳೆ. ಹೆಣ್ಣಾಗಿರುವುದಕ್ಕಿಂತ ಮಣ್ಣಾಗಿರುವುದು ಲೇಸೆಂದು ಹಾಡಿ ತನ್ನ ಮನದ ನೋವನ್ನು ತೋಡಿಕೊಳ್ಳುತ್ತಾಳೆ. ಶೈಲಜಾ ಹಿರೇಮಠ ಅವರ ಅಭಿಪ್ರಾಯದಂತೆ "ಬಂಜೆ ಎನ್ನುವ ಪದವು ಸ್ತ್ರೀ ಕೇಂದ್ರಿತವಾಗಿದೆ. ಭಾರತೀಯ ಪುರುಷ ಪ್ರಧಾನ ಸಂಸ್ಕೃತಿಗಳು ಹೆಣ್ಣನ್ನು ಕೊರತೆಯನ್ನಾಗಿ ಹಾಗೂ ಅಪರಿಪೂರ್ಣ ಜೀವಿಯನ್ನಾಗಿ ಮತ್ತು ಪುರುಷನನ್ನು ಪರಿಪೂರ್ಣ ವ್ಯಕ್ತಿಯನ್ನಾಗಿ ಪ್ರತಿನಿಧಿಕರಿಸಿವೆ. ಹೀಗಾಗಿ ಮಕ್ಕಳಾಗದಿದ್ದರೆ ಅದಕ್ಕೆ ಹೆಣ್ಣನ್ನೆ ಹೊಣೆಗಾರಳನ್ನಾಗಿಸಲಾಗುತ್ತಿದೆ. ಅದಕ್ಕಾಗಿ ಮಕ್ಕಳಾಗದ ಮಹಿಳೆಯನ್ನು 'ಬಂಜೆ' ಎಂದು ಗುರುತಿಸಲು ಸಾಧ್ಯವಾದಂತೆ ಫಲವಂತಿಕೆಯಿಲ್ಲದ ಪುರುಷನನ್ನು ಗುರುತಿಸಲು ಯಾವುದೇ ಪದವಿಲ್ಲ" (ಎಚ್. ಎಸ್. ಶ್ರೀಮತಿ, ೨೦೦೬, ಪುಟ-೬೦೦) ಏಕೆಂದರೆ ಸಮಾಜದಲ್ಲಿ ಪಿತೃ ಪ್ರಧಾನ ಅಂದರೆ ಪುರುಷ ಪ್ರಧಾನ ಸಂಸ್ಕೃತಿಯ ಮೌಲ್ಯಗಳ ಪ್ರಭಾವವಿರುವುದು ಕಂಡುಬರುತ್ತದೆ. ಏಕೆಂದರೆ ಮಕ್ಕಳಿಲ್ಲದ ಹೆಣ್ಣನ್ನು ಬಂಜೆಯೆಂದು ಸಂಭೋದಿಸುವ ಸಮಾಜವು ಮಕ್ಕಳನ್ನು ಪಡೆಯಲು ಶಕ್ತನಲ್ಲದ ಗಂಡಿಗೆ ಯಾವುದೇ ಸಂಬಂಧವಾಚಕವನ್ನು ಇದುವರೆಗೆ ಬಳಸಿಲ್ಲ. ಆರಂಭದ ಕಾಲದಿಂದಲೂ ಪುರುಷನ ವಿಚಾರದಲ್ಲಿ ಸಮಾಜವು ಜಾಣ ಕುರುಡನ್ನು ಪ್ರದರ್ಶಿಸುತ್ತದೆ.

ಹೆಣ್ಣಿಗೆ ಹೆಣ್ಣುಮಕ್ಕಳಿದ್ದರೆಯೇ ಅವಳು ಹೆತ್ತತಾಯಿ ಎಂಬ ಕಲ್ಪನೆ ಜನಪದರದು. ಗಂಡುಮಕ್ಕಳಿದ್ದರೂ ಹೆಣ್ಣು ಪೂರ್ಣವಾಗಿ ತಾಯಿ ಎನಿಸಿಕೊಳ್ಳಲಾರಳು. ಅವಳು 'ಹೆತ್ತತಾಯಿ' ಎಂದು ಕರೆಯಿಸಿಕೊಳ್ಳಬೇಕಾದರೆ ಅವಳಿಗೆ ಹೆಣ್ಣು ಮಕ್ಕಳಿರಲೇಬೇಕು ಎಂಬುದು ಜನಪದರ ಸಂಪ್ರದಾಯವಾಗಿದೆ.

ಹತ್ತು ಗಂಡ್ಹಡದರೂ ಮತ್ತೆ ಬಂಜೆಂಬೂರು
ದಟ್ಟೀಯ ಉಡುವ ಧರಣೀಯ । ಹಡೆದರ
ಹೆತ್ತಾಯಿಯೆಂದು ಕರೆದಾರ । (ಬಿ. ಎಸ್. ಗದ್ದಗಿಮಠ, ೧೯೫೬, ಪು-೬೦)

ಗಂಡು ಮಕ್ಕಳನ್ನು ಪಡೆದು ತಾಯಿಯೆನಿಸಿಕೊಂಡರೂ ಹೆಣ್ಣುಮಗಳನ್ನು ಪಡೆಯದ ತಾಯಿಯೂ ಜನಪದರಲ್ಲಿ 'ಬಂಜೆ' ಎಂದು ಕರೆಯಿಸಿಕೊಳ್ಳಬೇಕಾಗುತ್ತದೆ. ಹೆಣ್ಣು ಹತ್ತು ಗಂಡು ಮಕ್ಕಳನ್ನು ಹೆತ್ತರೂ ಮತ್ತೆ ಮೇಲೊಂದು ಹೆಣ್ಣು ಪಡೆಯದೇ ಹೋದರೆ ಬಂಜೆ ಎಂಬ ಶಬ್ದ ಹೊರಬೇಕಾಗುತ್ತದೆ. 'ಬಂಜೆ' ಎಂಬುದು ಹೆಣ್ಣಿಗೆ ಸಾಮಾಜಿಕ ಶಾಪವಾಗಿದೆ. ಹೆಣ್ಣುಮಕ್ಕಳು ತಾಯ್ತನವನ್ನು ಬಯಸುವುದು ಸಾಮಾಜಿಕ ಶಾಪದ ಭಯದಿಂದಾಗಿಯೇ. ಅವಳು ಚಾರಿತ್ರ್ಯ, ಪಾತಿವ್ರತ್ಯದ ಕುರಿತಾಗಿ ಅನೇಕ ಸಂಶಯಗಳನ್ನು ಎದುರಿಸುತ್ತಿರುವ ಸಂದರ್ಭದಲ್ಲಿ 'ಬಂಜೆ' ಎಂಬುದು ಅವಳನ್ನು ಕುಟುಂಬದಿಂದ ಸಮಾಜದಿಂದ ಹೊರಗಿಡುವ ಪ್ರಯತ್ನ ಮಾಡುತ್ತದೆ. ಮಕ್ಕಳನ್ನು

ಪಡೆಯದ ಹೆಣ್ಣು ಗಂಡನಿಂದ, ಕುಟುಂಬದಿಂದ ನಿರ್ಲಕ್ಷಕ್ಕೆ ಒಳಗಾಗುತ್ತಾಳೆ. ತಾಯ್ತನದಿಂದ ಸಿಗುವ ಕೌಟುಂಬಿಕ ಭದ್ರತೆ ಹಾಗು ಸಾಮಾಜಿಕ ಸ್ಥಾನಮಾನದಿಂದ 'ಬಂಜೆ'ಯೂ ವಂಚಿತಳಾಗಬೇಕಾಗುತ್ತದೆ. ತಾಯ್ತನ ಮತ್ತು ಬಂಜೆತನ ಇವೆರಡು ಪುರುಷ ಪ್ರಧಾನ ವ್ಯವಸ್ಥೆಯಿಂದಲೇ ರೂಪ ಪಡೆದು ತಾಯ್ತನವು ಶ್ರೇಷ್ಠ ನೆಲೆಯಲ್ಲಿ ಬಂಜೆತನವು ಕನಿಷ್ಠ ನೆಲೆಯಲ್ಲಿ ಗುರುತಿಸಲ್ಪಟ್ಟದ್ದರಿಂದ ಸಹಜವಾಗಿಯೇ 'ಬಂಜೆ'ಯಾದ ಹೆಣ್ಣುಮಕ್ಕಳು ನಿರ್ಲಕ್ಷಕ್ಕೊಳಗಾಗುತ್ತಾರೆ.

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡೀಗಿ ಎತ್ತು ದುಡದಂಗ । ಬಾಳೆಲೆಯ ।
ಹಾಸ್ಯುಂಡು ಬೀಸಿ ಒಗೆದಂಗ । (ಹಲಸಂಗಿ ಗೆಳೆಯರು, ೧೯೩೧, ಪು-೮೧)

'ತಾಯ್ತನ'ವನ್ನು ವೈಭವೀಕರಿಸಿರುವ ಜನಪದರು ಹೆಣ್ಣನ್ನು 'ಮಾತೆ' ಎಂತಲೇ ಕರೆದಿದ್ದಾರೆ. ಏಕೆಂದರೆ ಅವಳು ತಾಯಿಯಾದರೆ ಮಾತ್ರ ಪರಿಪೂರ್ಣವೆಂಬ ನಂಬಿಕೆ. ಇದೇ ಕಾರಣದಿಂದಲೇ ಹೆಣ್ಣು ತಾಯಿಯಾಗಲೇಬೇಕೆಂಬ ಒತ್ತಡಗಳನ್ನು ಆಕೆಯ ಮೇಲೆ ಹೇರಲಾಯಿತು. ಲಿಂಗ ಸಮಾನತೆಯ ನೆಲೆಯಲ್ಲಿ ಚಿಂತಿಸದೇ 'ತಾಯಿ' ಆಗದಿರುವುದಕ್ಕೆ ಹೆಣ್ಣೇ ಕಾರಣಳೆಂಬಂತೆ ದೂಷಿಸಲಾಗುತ್ತದೆ. ಮಕ್ಕಳಿಲ್ಲದ ಹೆಣ್ಣಿನ ಜನ್ಮ ವ್ಯರ್ಥವೆಂದು ಹಂಗಿಸುತ್ತದೆಯೇ ಹೊರತು ತಾಯಿ ಆಗದಿರುವುದಕ್ಕೆ ಕಾರಣಗಳನ್ನು ಹುಡುಕುವುದಿಲ್ಲ. ನೊಂದ ಹೆಣ್ಣುಮಗಳು ತನ್ನ ಸಂಕಟವನ್ನು ದೇವರಲ್ಲಿ ತೋಡಿಕೊಳ್ಳುವ ಪ್ರಸಂಗವೊಂದನ್ನು ಇಲ್ಲಿ ಗಮನಿಸಿಲಾಗಿದೆ.

ಕಂದನ ಕೊಡು ಶಿವನೆ ಬಂಧನ ಬಿಡಲಾರೆ
ಹಂಗಿನ ಬಾಣ ಉಣಲಾರೆ । ಮರ್ತ್ಯಾದಾಗ
ಬಂಜೆಂಬ ಶಬುದ ಹೊರಲಾರೆ ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೯೦)

'ಹೆಣ್ಣಾಗಲಿ-ಗಂಡಾಗಲಿ ಮಡಿಲಲ್ಲಿ ಮಗುವೊಂದಿರಲಿ' ಎಂಬ ಸಾಮಾಜಿಕ ಒತ್ತಡವು ಹೆಣ್ಣಿನ ಮೇಲಿದೆ. ಆ ಒತ್ತಡದಿಂದ ಪಾರಾಗಲು ಬಂಜೆಯೆಂಬ ಪದವನ್ನು ಹೊರಲಾಗದೆ ತಾಯಿಯಾಗಲೇಬೇಕು ಎಂಬ ಆಸೆಯಿಂದ ದೇವರಲ್ಲಿ ಮೊರೆಯಿಡುತ್ತಾಳೆ. ಸಂಕಟವನ್ನು ತೋಡಿಕೊಂಡು 'ಕಂದನನ್ನು ಕೊಡು' ಎಂದು ದೇವರಲ್ಲಿ ಬೇಡಿಕೊಳ್ಳುತ್ತಾಳೆ. ಸಮಾಜ, ಕುಟುಂಬವು ಬಂಜೆಯನ್ನು ನಿರ್ಲಕ್ಷಿಸುವುದಲ್ಲದೇ ಧಾರ್ಮಿಕ ಆಚರಣೆಗಳಲ್ಲಿ, ಹಬ್ಬಹರಿದಿನಗಳಲ್ಲಿ ಭಾಗವಹಿಸುವುದನ್ನು ನಿಷೇಧಿಸುತ್ತದೆ. ಆದ್ದರಿಂದ ಬಂಜೆಯ ಬದುಕು ವ್ಯರ್ಥವೆಂಬುದು ಜನಪದರ ಅಭಿಪ್ರಾಯವಾಗಿದೆ.

ಬಂಜೆ ಬಾಗಿಲ ಮುಂದ ಅಂಜೂರಿ ಗಿಡ ಹುಟ್ಟಿ
ಟೊಂಗಿಟೊಂಗೆಲ್ಲ ಗಿಣಿ ಕೂತು । ಹೇಳ್ಯಾವ
ಬಂಜಿ ನಿನ ಬದಕ ಹೆರವರಿಗೆ । (ವಿನೀತ ರಾಮಚಂದ್ರರಾಯ, ೧೯೬೦, ಪು-೫೭)

ಬಂಜೆಯ ಮನೆ ಮುಂದೆ ಅಂಜೂರಿ ಹಣ್ಣಿನ ಗಿಡಹುಟ್ಟಿದೆ. ಹುಟ್ಟಿದ ಗಿಡದ ಟೊಂಗೆ ಟೊಂಗೆಗೂ ಗಿಳಿ ಕುಳಿತು ಹೇಳುತ್ತವೆ. 'ಬಂಜೆ ನಿನ್ನ ಬದುಕು ಹೆರವರಿಗೆ ಮೀಸಲು; ಬಂಜೆಯ ಬಾಳು ಯಾರ ನೆರವಿಗಿಲ್ಲದ ಬಾಳು. ಅಂತಹ ಬಾಳು ಹೆರವರಿಗೆ ಮೀಸಲು' ಎಂದು ಜನಪದರು ನುಡಿಯುತ್ತಾರೆ. ಹೀಗೆ ಜನಪದರು ಬಂಜೆಯನ್ನು ನೋಡುವ ಕ್ರಮವೇ ಭಿನ್ನತೆಯಿಂದ ಕೂಡಿದೆ. ಇಲ್ಲಿ ನೇರವಾಗಿ ಹೇಳದೆ ಗಿಳಿಯ ಮೂಲಕ ಹೇಳಿಸಿದ್ದು ಔಚಿತ್ಯಪೂರ್ಣವಾಗಿದೆ.

ಹೆಣ್ಣು ಜನುಮಕೆ ಬಂದೆ ಮಣ್ಣು ಮಾಡಲಿಬ್ಯಾಡ
ಹೆಣ್ಣುತನ ಶಿವನೆ ಜಗದಾಗ । ಕೈ ಮುಗಿವೆ
ಕಂದಯ್ಯ ಕೊಟ್ಟು ಕಡಿಮಾಡು । (ಬಿ.ಎಸ್.ಗದ್ದಗೀಮಠ, ೧೯೫೬, ಪು-೫೯)

ಹೆಣ್ಣಾಗಿ ಜನಿಸಿದ ಬಳಿಕ ಹಾಗೆಯೇ ಮಣ್ಣು ಸೇರುವುದು ಬೇಡ. ಏಕೆಂದರೆ ಮದುವೆಯಾಗಿ ಗಂಡಸದ್ದು, ಮಕ್ಕಳ ಮುಂದೆ ಮುತ್ತೈದೆಯಾಗಿ ಸಾಯಬೇಕು. 'ಮುತ್ತೈದೆ' ಎಂಬ ಪದವನ್ನು ಜನಪದರ ಸಮಾಜವು ಬಹುವಾಗಿ ನಂಬುತ್ತದೆ. ಅದಕ್ಕಾಗಿ ಕಂದನನ್ನು ಕೊಟ್ಟು ಈ ಲೋಕದ ಪುಣ್ಯದ ಬಾಳಿಗೆ ಕೊನೆಹಾಡೆಂದು ದೇವರಲ್ಲಿ ವಿನಮ್ರ ಭಾವದಿಂದ ಪ್ರಾರ್ಥಿಸಿಕೊಳ್ಳುವ ಸನ್ನಿವೇಶವನ್ನು ಕಾಣುತ್ತೇವೆ.

### ೬.೨ ವಿಧವೆ ಮತ್ತು ಜನಪದರ ಸಂಬಂಧ

ಬಂಜೆತನದಂತೆಯೇ ವೈಧವ್ಯವೂ ಸಹ ಹೆಣ್ಣಿಗೆ ಶಾಪವಾಗಿದೆ. ಗಂಡನ ಮರಣದಿಂದ ತನಗೆ ಸಿಗುವ ವೈಧವ್ಯಕ್ಕೆ ನೊಂದಿದ್ದಾಳೆ. ಎಲ್ಲರಿದ್ದೂ ಅನಾಥಳಾಗಿರುವ, ದುಡಿದರೂ ನಿರುಪಯುಕ್ತ ಹೆಣ್ಣಾಗಿ ಪರಿಣಮಿಸುವ ವಿಧವೆಯ ಜೀವನದ ಸುತ್ತ ಅನೇಕ ಗೀತೆಗಳು ಅನಾವರಣಗೊಂಡಿವೆ. ಮುತ್ತೈದೆತನವನ್ನು ಬಿಟ್ಟುಕೊಡದ ವೈಧವ್ಯವನ್ನು ಒಪ್ಪಿಕೊಳ್ಳದ ಸ್ಥಿತಿಯಲ್ಲಿನ ಹೆಣ್ಣುಮಕ್ಕಳನ್ನು ಬಾಲ್ಯವನ್ನು ಕಳೆದುಕೊಂಡು ಯೌವನದಲ್ಲಿ ಗಂಡನನ್ನು ಕಳೆದುಕೊಂಡು ವೈಧವ್ಯದ ಕಷ್ಟಕೋಟಲೆಗಳಿಗೆ ತಳ್ಳಲ್ಪಡುತ್ತಾಳೆ. ಕುಟುಂಬ, ಸಮಾಜವು ತನ್ನನ್ನು ಅನಾಥೆಯಂತೆ, ಅಲಕ್ಷದಿಂದ ಕಾಣುವಲ್ಲಿ ಕಾರಣವಾದ ವೈಧವ್ಯದ ಸ್ಥಿತಿಗೆ ಮರುಗುವ ಅನೇಕ ಗೀತೆಗಳಿವೆ. ಜನಪದ ಗೀತೆಗಳು ಪುರುಷ ಪ್ರಧಾನ ವ್ಯವಸ್ಥೆಯು ಹೆಣ್ಣಿನ ಮೇಲೆ ವೈಧವ್ಯದ ಹೆಸರಿನಲ್ಲಿ ನಡೆಸಿದ ದೌರ್ಜನ್ಯಗಳ ಕುರುಹಾಗಿ ಕಂಡುಬರುತ್ತವೆ.

ಮುಗ್ಗ ಜ್ವಾಳದಂಗ ಕಗ್ಗ ಬೆಳಸಿನ ಹಂಗ
ಹಗ್ಗಿಲ್ದ ಬಾವಿ ಕೊಡದ್ಹಾಂಗ । ಪತಿರಾಯ
ನೀ ಹೋದಕ ಚಣಕ ಪತಿದೇವ ।(ವಿನೀತ ರಾಮಚಂದ್ರರಾಯ, ೧೯೬೦, ಪು-೫೮)

ಮುಗ್ಗ ಜೋಳ, ಕಗ್ಗ ಬೆಳೆಸು ಇವೆರಡೂ ಬಳಕೆಗೆ ಬಾರದ ಆಹಾರ ಧಾನ್ಯಗಳು, ಅಂತೆಯೇ ವಿಧವೆ ಕೂಡ ಪ್ರಯೋಜನಕ್ಕೆ ಬಾರಳೆಂಬ ನಿಲುವು ಜನಪದರಲ್ಲಿದೆ. ಭೋಗದ ವಸ್ತುವಾಗಿ ಗಂಡಿನ ಒಡಿತದಲ್ಲಿ ವಂಶೋದ್ಧಾರಕಿಯಾಗಿ ಗುರುತಿಸಲ್ಪಟ್ಟ ಹೆಣ್ಣು, ಆತನ ಮರಣದ ಬಳಿಕವೂ ಪತಿನಿಷ್ಠೆಯನ್ನು

ಕಾಯ್ದುಕೊಳ್ಳಬೇಕಾಗುತ್ತದೆ. ಹಗ್ಗವಿಲ್ಲದ ಬಾವಿಯ ಕೊಡದಂತೆ ವಿಧವೆಯ ಬದುಕು ನಿರುಪಯುಕ್ತ. ಹೆಣ್ಣಿಗೆ ಮುತ್ತೈದೆತನ ಬದುಕಿನ ಆಸರೆಯಾಗಿ ಹಾಗೂ ರಕ್ಷಣೆಯಾಗಿ ನಿಂತಿದೆ. ಆದರೆ ಗಂಡನಿಲ್ಲದ ಹೆಣ್ಣಿನ ಬದುಕು ಅಪ್ರಯೋಜಕವೆಂಬುದು ತಿಳಿಸುತ್ತದೆ. ವಿಧವೆಗೆ ಜನಪದ ಸಮಾಜದಲ್ಲಿದ್ದ ನಿಷೇಧಗಳ ಕುರಿತು ಈ ಕೆಳಗಿನ ಪದ್ಯ ತಿಳಿಸುತ್ತದೆ.

ಚಿಕ್ಕ ಚಿಲಕ ಬಟ್ಟು ಇಕ್ಕದಿರು ಎಲೆ ಹೆಣ್ಣೆ
ಚಿಕ್ಕ ಪ್ರಾಯದಲ್ಲಿ ನಿನಗಂಡ । ಹೋದ್ಮೇಲೆ
ಚಿಕ್ಕ ಬಟ್ಟಿಟ್ಟು ಫಲವೇನು । (ಎಸ್.ಕೆ. ಕರೀಂಖಾನ್, ೧೯೫೫, ಪು-೨೫)

ವಿಧವೆಯಾದ ಹೆಣ್ಣಿಗೆ ಕುಟುಂಬ, ಸಮಾಜದಲ್ಲಿ ಗೌರವ ಸಿಗದು. ಬಂಜೆಯಂತೆಯೇ ವಿಧವೆಯಾದ ಹೆಣ್ಣಿಗೂ ಸಮಾಜದಲ್ಲಿ ನಿಷೇಧಗಳಿದ್ದವು. ವಿಧವೆಯು ಮರುಮದುವೆಯಾಗುವಂತಿಲ್ಲ. ನಿತ್ಯವೂ ಪಥ್ಯಾಹಾರ ಮಾಡಬೇಕು. ಪೂಜೆ, ಜಪ-ತಪಗಳಲ್ಲಿಯೇ ಕಾಲ ಕಳೆಯಬೇಕು, ಪರಪುರುಷನ ಸಾಮೀಪ್ಯ ಬಯಸುವಂತಿಲ್ಲ. ಯಾವುದೇ ಸತ್ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ. ಏಕೆಂದರೆ ಆಕೆ ಸುಮಂಗಲೆಯಲ್ಲ ಅಮಂಗಲೆಯೆಂಬ ನಂಬಿಕೆ ಗಾಢವಾಗಿ ಜನಪದರಲ್ಲಿ ಬೇರೂರಿದೆ.

"ಗಾದೆ ಮಾತುಗಳಲ್ಲಿ ವಿಧವೆ ಪದಕ್ಕೆ ಪರ್ಯಾಯವಾಗಿ ಬಳಕೆಗೊಂಡ ಮುಂಡೆ, ಬೋಳಿ ಪದಗಳು ಬೈಗುಳಗಳಾಗಿ ಪ್ರಚಲಿತದಲ್ಲಿವೆ. ವಿಧವೆಯಾದವಳಿಗೆ ತಲೆ ಬೋಳಿಸುವ ಸಂಸ್ಕಾರ ವೈದಿಕರಲ್ಲಿ ಇದೆ. ಈ ಸಂಸ್ಕಾರದಲ್ಲಿ ಪುರೋಹಿತಶಾಹಿಯ ವಿಕೃತ ಮನಸ್ಸಿನ ಪ್ರತಿಬಿಂಬವಿದೆ. ಹೆಣ್ಣಿನ ಸೌಂದರ್ಯವನ್ನು ಗುರುತಿಸುವಲ್ಲಿ ಕೇಶಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕಲ್ಪಿಸಲಾಗಿದೆ. ಅಂತಹ ಕೇಶವನ್ನು ತೆಗೆಯುವುದರ ಹಿಂದಿನ ಉದ್ದೇಶ ಅವಳನ್ನು ವಿರೂಪಗೊಳಿಸುವುದೇ ಆಗಿದೆ. ಅನ್ಯ ಪುರುಷನ ಆಕರ್ಷಣೆಗೆ ಒಳಗಾಗದಂತೆ ನೋಡಿಕೊಳ್ಳಲು ರೂಪಿಸಿದ ಪೂರ್ವನಿಯೋಜಿತ ಸಂಪ್ರದಾಯ. ಅವಳಿಗೆ ಮರುಮದುವೆ ಅವಕಾಶವನ್ನು ಕಲ್ಪಿಸಬಹುದು. ಇಂತಹ ಸನ್ನಿವೇಶ ಸೃಷ್ಠಿಯಾಗದಂತೆ ನೋಡಿಕೊಳ್ಳುವ ಮುಂಜಾಗೃತ ಕ್ರಮವಾಗಿ ವಿಧವೆಯರಿಗೆ ಕೇಶಮುಂಡನ ಮಾಡಿಸಲಾಗುತ್ತದೆ. ಅವಳು ವಿವಾಹಕ್ಕೆ ಅಯೋಗ್ಯಳು. ಅವಳನ್ನು ಪುರುಷರಾರೂ ಬಯಸಕೂಡದು ಎನ್ನುವ ಸಾಮಾಜಿಕ ನಿಷೇಧವನ್ನು ಅವಳಿಗೆ ಮಾಡಿದ ಕೇಶಮುಂಡನದ ಮೂಲಕವೇ ಸಾರಲಾಗುತ್ತದೆ. ಯಾವ ತಪ್ಪು ಮಾಡದೆಯಾ ಸಮಾಜದ ಉಗ್ರ ಶಿಕ್ಷೆಗೆ ಬಲಿಯಾದವಳೆಂದರೆ ತಿರಸ್ಕಾರಗೊಳಗಾದವಳೆಂದರೆ ವಿಧವೆ ಮಾತ್ರ." (ಎಚ್. ಎಸ್. ಶ್ರೀಮತಿ, ೨೦೦೬, ಪು-೬೩೩)

ವಿಧವೆಗಿರುವ ಕಟ್ಟಳೆಗಳಲ್ಲಿ ಸತಿ ಪದ್ಧತಿಯೂ ಒಂದಾಗಿದೆ. ತ್ಯಾಗದ ಹೆಸರಿನಲ್ಲಿ ಹೆಣ್ಣಿನ ಜೀವ ತೆಗೆದು ಸಾವನ್ನು ವೈಭವೀಕರಿಸುವ ಸತಿಗೀತೆಗಳನ್ನು ಮಹಿಳೆಯರಿಂದಲೇ ಹಾಡಿಸಿದ್ದು ವಿಪರ್ಯಾಸ. ತನ್ನ ಒಡಲಿನ ನೋವು, ಹತಾಶೆ, ಸಿಟ್ಟು, ಅಸಹಾಯಕತೆ, ತಿರಸ್ಕಾರ ಎಲ್ಲವನ್ನು ಹುದುಗಿಸಿಟ್ಟು ಜೀವನದೊಂದಿಗೆ ರಾಜಿ ಮಾಡಿಕೊಂಡು ಬದುಕುವ ಸ್ಥಿತಿಗೆ ಹೆಣ್ಣು ತಲುಪಿದ್ದಳು. ಸತಿಹೋದ ವಿಧವೆ ಹೆಣ್ಣನ್ನು ತ್ಯಾಗದ ಪ್ರತೀಕವೆಂದು ಪೂಜಿಸುವ ಆಚರಣೆಯೂ ಅಮಾನವೀಯವೆನಿಸಿದೆ. ಬದುಕಿದ್ದಾಗ ತಿರಸ್ಕಾರದಿಂದ ನೋಡುವ ಸಮಾಜ ಸತ್ತ ಮೇಲೆ ಸಮಾಧಿ ಕಟ್ಟಿ, ಕಲ್ಲನ್ನು ಇಟ್ಟು ವೈಭವದಿಂದ

ಪೂಜಿಸುವುದೆಷ್ಟು ಸಮಂಜಸ. ವಿಧವೆಯು ವೈಧವ್ಯದ ಕಟ್ಟುಪಾಡುಗಳನ್ನು ಸ್ವಇಚ್ಛೆಯಿಂದ ಪಾಲಿಸುತ್ತಿರುವಂತೆ ಮೇಲ್ನೋಟಕ್ಕೆ ಕಂಡುಬರುತ್ತದೆ. ಗಂಡ ತೀರಿದ ಬಳಿಕ ಅವಳ ಹಕ್ಕನ್ನು ಕಸಿದುಕೊಳ್ಳುತ್ತದೆ. ಇದಕ್ಕೆ ಕೆಳಗಿನ ದೃಷ್ಟಾಂತವೇ ಸಾಕ್ಷಿಯಾಗಿದೆ.

ಗಂಡ ಸತ್ತರಿನ್ನ ಗಂಧ ಕುಂಕುಮವ್ಯಾಕೆ
ಬಂಗಾರವ್ಯಾಕ ಬಳಿಯಾಕ । ಕೊರಳೀನ
ಸಿಂಗಾರ ಶಿವನೆ ಕಸಗೊಂಡ । (ವಿನೀತ ರಾಮಚಂದ್ರರಾಯ, ೧೯೬೦ ಪು-೫೮)

ಗಂಡನು ಸತ್ತ ಹೆಣ್ಣನ್ನು ಸಮಾಜವು ನೋಡುವ ದೃಷ್ಟಿಕೋನವೇ ಬೇರೆ. ಅವಳು ಎಂದಿಗೂ ಸಂಪ್ರದಾಯವನ್ನು ಮೀರಬಾರದು. ಬಿಳಿ ಸೀರೆ, ಬೋಳು ತಲೆ, ಬೋಳು ಕೈ, ಹಣೆಗೆ ಕುಂಕುಮವಿಲ್ಲದೆ ಇರಬೇಕು. ಹೆಣ್ಣಿನ ಶೃಂಗಾರವೇ ಸೀರೆ, ಒಡವೆ, ಬಳೆ, ಕುಂಕುಮ. ಇವು ಅವಳ ಸೌಂದರ್ಯವನ್ನು ಇನ್ನಷ್ಟು ಹೆಚ್ಚಿಸುತ್ತವೆ. ಆದರೆ ಅವಳಿಗೆ ಇವೆಲ್ಲವೂಗಳಿಗಿಂತ ಶ್ರೇಷ್ಠ ಶೃಂಗಾರವೆಂದರೆ ಗಂಡ ಕಟ್ಟಿದ ತಾಳಿ. ಅವನಿಲ್ಲದ ಮೇಲೆ ತಾಳಿಯನ್ನು ಕಟ್ಟಿಕೊಳ್ಳಬಾರದೆಂಬ ಸಂಪ್ರದಾಯದ ಜೊತೆಗೆ ಅವಳಿಗೆ ಗಂಧ-ಕುಂಕುಮದ ಮೇಲೆಯೂ ನಿರ್ಬಂಧ ಹೇರಲಾಗುತ್ತದೆ.

ಈ ಸಂಪ್ರದಾಯದ ಹಿಂದಿರುವ ಕೆಲವು ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸುತ್ತೇನೆ. ಒಂದನೆಯದು ಸೌಂದರ್ಯವು ಆಕೆಯ ಮನಸ್ಸನ್ನು ಚಂಚಲಗೊಳಿಸಬಹುದು. ಎರಡನೆಯದು ಆಕೆಯ ಸೌಂದರ್ಯವು ಇತರರ ಮನಸ್ಸನ್ನು ಸೆಳೆದುಬಿಡಬಹುದು. ಆದ್ದರಿಂದ ಅವಳನ್ನೇ ಸೌಂದರ್ಯಹೀನಳನ್ನಾಗಿಸಿದರೆ ಈ ಎರಡು ಕಾರ್ಯಗಳನ್ನು ತಡೆಬಹುದೆಂಬ ಉದ್ದೇಶದಿಂದ ಗಂಧ, ಕುಂಕಮ, ಬಳೆ, ಬಣ್ಣದ ಸೀರೆಯಿಂದ ಆಕೆಯನ್ನು ದೂರವಿಡುವ ಸಂಪ್ರದಾಯವಿದೆ.

ಒಕ್ಕಲಗಿತ್ತಿಗ್ಯಾಕೆ ನೆತ್ತಿ ಮೇಗಲ ತುರುಬು
ಬಿಚ್ಚಾಲೆಗ್ಯಾಕೆ ಬಿಡಿಮುತ್ತು । ಒಕ್ಕಲಿಗನ
ಬುಟ್ಟೋದ ಒಡಬೆ ನಿನಗ್ಯಾಕೆ । (ಕರಾಕೃ, ೧೯೫೭, ಪು-೯೩)

ಗಂಡ ತೀರಿದ ಬಳಿಕ ಹೆಣ್ಣಿನ ಬದುಕು ಸಂಕಷ್ಟದಿಂದ ಕೂಡಿರುತ್ತದೆ. ನಡುಮನೆಯಲ್ಲಿ ಎಡೆ ತಪ್ಪಿದರೂ ಸಂಶಯಪಡುವ ಮನೋಭಾವವು ಸೃಷ್ಟಿಯಾಗುತ್ತದೆ. ಹರೆಯದ ಮಗಳೊಬ್ಬಳು ಕುಂಕುಮಕ್ಕೆ ಆಸೆಪಟ್ಟು ಇಟ್ಟುಕೊಂಡಾಗ ಅವಳಿಗೆ ಬುದ್ದಿವಾದ ಹೇಳುವ ಪರಿಯು ಇಲ್ಲಿದೆ.

ಗಂಡನು ತೀರಿದ ಬಳಿಕ ವಿಧವೆಗೆ ಪುನರ್‌ವಿವಾಹವಾಗುವ ಅರ್ಹತೆಯಿಲ್ಲ. ಅವಳು ಎರಡನೆಯ ಮದುವೆಗೆ ಯೋಗ್ಯಳಲ್ಲ ಎಂಬುದು. ಇದೇ ಸಮಾಜವು ಪುರುಷನಿಗೆ ಹಲವಾರು ಮದುವೆಗಳನ್ನು ಆಗುವ ಸ್ವಾತಂತ್ರ ನೀಡಿದ್ದು, ಹೆಣ್ಣಿನಿಂದ ಮಾತ್ರ ಕಸಿದುಕೊಂಡಿದೆ. ಆದರೆ ಹಿಂದಿರುವ ಪುರುಷ ಪ್ರಧಾನ ವ್ಯವಸ್ಥೆಯ ಒತ್ತಡವನ್ನು ಮರೆಯುವಂತಿಲ್ಲ. ಪುರೋಹಿತಶಾಹಿ ಸಾಮಾಜಿಕ ವ್ಯವಸ್ಥೆ ತನ್ನ ಬಾಹುಗಳನ್ನು ಜನಪದ ಸಂಸ್ಕೃತಿಯನ್ನು ಆಕ್ರಮಿಸಿದೆ. ಇಷ್ಟೆಲ್ಲ ಕಟ್ಟುಪಾಡುಗಳ ನಡುವೆಯೂ ಜನಪದರು ವೈಧವ್ಯವನ್ನು ಅನುಕಂಪದಿಂದ ಸ್ವೀಕರಿಸಿರುವುದಕ್ಕೆ ಉದಾಹರಣೆಗಳಿವೆ. ವಿಧವೆಯನ್ನು

ರಂಡೆ, ಮುಂಡೆ ಎಂದು ಹೀಯಾಳಿಸದೇ ಗಂಗೆಯಂತೆಯೇ ಪರಿಶುದ್ಧಳೆಂದು ಭಾವಿಸಿ ಎನ್ನುವಲ್ಲಿ ಜನಪದರ ಪ್ರಗತಿಪರ ಚಿಂತನೆಗಳಿಗೆ ಸಾಕ್ಷಿಯೆನಿಸಿವೆ.

ಗಂಡ ಸತ್ತವ್ವಗ ರಂಡಿ ಮುಂಡಿಯನಬೇಡ
ಕಂದನ ಹಿಡಿದು ತಪಹಾಳ । ಅವಳೀಗಿ
ಗಂಗಾದೇವೆಂದು ಕರಿಬೇಕ । (ಹಲಸಂಗಿ ಗೆಳೆಯರು, ೧೯೩೧, ಪು-೧೦೨)

ವೈಧವ್ಯ ಆಕಸ್ಮಿಕವೇ ಹೊರತು ಅನಿವಾರ್ಯವಲ್ಲ. ಅದಕ್ಕಾಗಿ ಮರುಗುವ ಜನಪದರಲ್ಲಿ ವಿಧವೆಯ ಬಗೆಗೆ ಔದಾರ್ಯವಿದೆ. ತಾಯಿಯಾದ ಅವಳಿಗೆ ಹೀಯಾಳಿಕೆ ಸಲ್ಲದೆಂದು 'ಮಾತೃತ್ವ'ವನ್ನು ಎತ್ತಿಹಿಡಿಯಲಾಗಿದೆ. ಏಕೆಂದರೆ ವಿಧವೆಯಾದರೂ ಮರುಮದುವೆಯಾಗದೆ ತನ್ನ ಮಕ್ಕಳನ್ನು ಸಾಕಿಸಲುಹಿದ್ದಾಳೆ. 'ವೈಧವ್ಯ' ಎಂಬ ಸಾಮಾಜಿಕ ಅಪಮಾನದ ನಡುವೆಯೂ ಮಾತೃತ್ವವನ್ನು ನಿಭಾಯಿಸಿದ್ದಾಳೆ. ಆದ್ದರಿಂದ ಆಕೆಯನ್ನು 'ಗಂಗಾದೇವಿ'ಗೆ ಹೋಲಿಸಿ ಅವಳಲ್ಲಿ ಅಪಾವಿತ್ರ್ಯತೆ, ಮೈಲಿಗೆಗಳು ಇರುವುದಿಲ್ಲವೆಂದು ವೈಭವೀಕರಿಸುವ ಮೂಲಕ ಪುರುಷ ಪ್ರಧಾನ ಮೌಲ್ಯಗಳನ್ನು ಹೇರಲಾಗಿದೆ. ವಿಧವೆಯಾದ ಮಾತ್ರಕ್ಕೆ ಹೆಣ್ಣನ್ನು ಅಪವಿತ್ರ, ಮೈಲಿಗೆ, ಅಶುದ್ಧ, ಅಶುಭ ಎಂದು ಭಾವಿಸುವುದು ತಪ್ಪೆಂದು ಮೇಲಿನ ಗೀತೆ ತಿಳಿಸುತ್ತದೆ. ಆದರೂ ತಿರಸ್ಕಾರವೇ ಅಧಿಕವಾಗಿರುವ ಲೋಕದ ಬದುಕು ಸಾಕೆನ್ನುವ ನಿರ್ಧಾರಕ್ಕೆ ಬರುವುದಿಲ್ಲ. ಬದಲಾಗಿ ತಾನು ಕಷ್ಟವನ್ನು ಅನುಭವಿಸಿಯಾದರೂ ಇತರರ ಬಾಳಿಗೆ ಬೆಳಕಾಗಬೇಕೆಂಬ ಭಾವನೆ ಜನಪದರಲ್ಲಿ ನೆಲೆಯೂರಿದೆ.

ಸಮಾಜದ ತಿರಸ್ಕಾರಕ್ಕೆ ಒಳಗಾಗಿ, ಸಂಪ್ರದಾಯದ ಹೆಸರಿನಲ್ಲಿ ಸತಿ ಪದ್ಧತಿಗೆ ಬಲಿಯಾದ ಹೆಣ್ಣು ಮಕ್ಕಳು ಸಾಕಷ್ಟಿದ್ದಾರೆ. ವೈದಿಕ ಧರ್ಮದ ಪ್ರಭಾವದಿಂದ ಅನೇಕ ತಳಸಮುದಾಯಗಳಲ್ಲೂ ಬದಲಾವಣೆಗಳು ಕಂಡುಬಂದವು. ಸತಿಪದ್ಧತಿಯಂತಹ ಮೌಢ್ಯಗಳು ಎಲ್ಲೆಡೆ ಬೇರೂರುವ ಕಾಲಘಟ್ಟದಲ್ಲಿಯೇ ವಿಧವಾ ಮರುವಿವಾಹಕ್ಕೆ ಉತ್ತೇಜನ ದೊರೆಯಿತು. ವಿಧವೆಯನ್ನು ಪುನರ್ವಿವಾಹಕ್ಕೆ ಒಳಪಡಿಸುವುದನ್ನು 'ಕೂಡಾವಳಿ ಮದುವೆ' ಎಂದು ಕರೆಯಲಾಯಿತು. ಕೂಡಿಕೆಗೆ ವಿವಾಹಕ್ಕಿರುವ ಪಾವಿತ್ರ್ಯತೆ ಹಾಗೂ ಪ್ರಾಮುಖ್ಯತೆಯಿರಲಿಲ್ಲ. ಆದರೂ ಜನಪದರ ಪ್ರಗತಿಪರ ಧೋರಣೆಗೆ ಈ ಗೀತೆಗಳು ಸಾಕ್ಷಿಯೆನಿಸಿವೆ.

### ೬.೩ ಸವತಿ ಮತ್ತು ಜನಪದರ ಸಂಬಂಧ

'ಪತಿವೃತೆ' ಎಂಬ ಪದ ಬಳಕೆಯಲ್ಲಿದ್ದಂತೆ 'ಪತ್ನಿವೃತ' ಎಂಬ ಪದ ಬಳಕೆಯಲ್ಲಿಲ್ಲ. ಪತಿನಿಷ್ಠೆಯೆಂಬುದು ಕೇವಲ ಗಂಡನ ಸೇವೆಗೆ ಮೀಸಲಾಗಿಲ್ಲ. ಹೆಂಡತಿಯಾದವಳಿಗೆ ದೈಹಿಕ ಹಾಗೂ ಮಾನಸಿಕವಾಗಿ ಗಂಡನಿಗೆ ನಿಷ್ಠಳಾಗಿರಬೇಕು. ಪರಪುರುಷರ ಬಗೆಗಿನ ಮೋಹ ಸಲ್ಲದು. ಪುರುಷನಿಷ್ಠ ಸಮಾಜದಲ್ಲಿ ಇಂತಹ ಮೌಲ್ಯಗಳನ್ನು ಪರಿಪಾಲಿಸುವುದು ಹೆಣ್ಣಿಗೆ ಅನಿವಾರ್ಯ. ಗಂಡನಿಂದ ತಾಳಿ ಕಟ್ಟಿಸಿಕೊಂಡ ಮೇಲೆ ಆತನ ಗೌರವಕ್ಕೆ ದಕ್ಕೆ ಬಾರದಂತೆ ವರ್ತಿಸುವುದು ಹೆಂಡತಿಯ ಕರ್ತವ್ಯ. ಆತನ ಸುಖವನ್ನು ಈಡೇರಿಸುವುದು ಆಕೆಯ ಗುರಿಯಾಗಿಬಿಡುತ್ತದೆ. ಇಂತಹ ಸಂದರ್ಭದಲ್ಲಿ ತನಗಾಗುವ

ಕಷ್ಟ-ನೋವುಗಳನ್ನು ನುಂಗಿಕೊಂಡು ಸಹಜೀವನ ನಡೆಸುತ್ತಾಳೆ. ತನ್ನ ಕುಟುಂಬಕ್ಕೆ ತೊಂದರೆಯಾಗದಂತೆ ಬಾಂಧವ್ಯಗಳನ್ನು ಬೆಸೆಯುವ ಕಾರ್ಯಮಾಡುತ್ತಾಳೆ. ಆದರೆ ಕುಟುಂಬದ ಹದ್ದುಮೀರಿ ಗಂಡ ಇನ್ನೊಬ್ಬಳನ್ನು ಮದುವೆಯಾಗಿ ತನಗೆ 'ಸವತಿ'ಯನ್ನು ತಂದಾಗ ಮೌನವಾಗಿಯೇ ಪ್ರತಿಭಟಿಸುವ ಮತ್ತು ಒಪ್ಪಿಕೊಳ್ಳುವ ಅನೇಕ ಸಂದರ್ಭಗಳು ಗೀತೆಗಳಲ್ಲಿ ಅಭಿವ್ಯಕ್ತಗೊಂಡಿವೆ.

ರಾಯ ಬರತಾರಂತ ರಾತ್ರೀಲಿ ನೀರಿಟ್ಟ
ರನ್ನ ಬಚ್ಚಲಕ ಮಣಿಹಾಕಿ । ಕೇಳೇನ
ಸಣ್ಣವಳ ಮ್ಯಾಲ ಸಂವತ್ಯಾಕ । (ಹಲಸಂಗಿ ಗೆಳೆಯರು, ೧೯೩೧, ಪು-೫೮)

ಜಗತ್ತಿನಲ್ಲಿ ಹೆಣ್ಣಿಗೆ ಸವತಿ-ಮತ್ಸರಕ್ಕಿಂತ ದೊಡ್ಡದಾದ ನೋವು ಇನ್ನೊಂದಿಲ್ಲ. ಲೋಕದ ಕಷ್ಟಗಳನ್ನೆಲ್ಲ ಸವೆಸುವ ಹೆಣ್ಣಿಗೆ ಸವತಿಯೆಂದರೆ ಆರದ ಕಿಚ್ಚು. ಗಂಡಸರು ತಮ್ಮ ಕಾಮದಾಹ, ಗಂಡು ಮಗುವಿನ ಬಯಕೆ, ಇಲ್ಲವೇ ಮಕ್ಕಳನ್ನು ಹೊಂದುವ ಆಸೆಗೆ ಇನ್ನೊಂದು ಮದುವೆಯಾಗಲು ಹವಣಿಸುತ್ತಾರೆ. ಇದರಿಂದ ಮೊದಲ ಹೆಂಡತಿಗೆ ಆಘಾತವೂ ತೊಂದರೆಯೂ ಉಂಟಾಗುತ್ತದೆಂಬ ಯೋಚನೆಯೂ ಅವರಿಗೆ ಬಾರದು. ಕೋಪವನ್ನು ತಾಳದೇ ಹೆಂಡತಿ ತನ್ನ ಗಂಡನ ನಂಬಿಕೆಯನ್ನು ಉಳಿಸಿಕೊಳ್ಳಲು ನಯವಾಗಿ ಪ್ರಶ್ನಿಸುವ ಮನೋಭಾವ ಇಲ್ಲಿ ಅಭಿವ್ಯಕ್ತಿಗೊಂಡಿದೆ. ತಾನೇ ಸಣ್ಣವಳು; ಅವಕಾಶ ಮೀರಿಲ್ಲ. ನನ್ನ ಮೇಲೆ ಸವತಿಯನ್ನು ತರುವುದು ಉಚಿತವೇ? ಎಂದು ಪ್ರಶ್ನಿಸುತ್ತಾಳೆ. ಅವಳು ಗಂಡನನ್ನು ಬಾಂಧವ್ಯದ ಮೂಲಕ ಬಿಟ್ಟುಕೊಡದೇ ಜಾಗರೂಕತೆ ವಹಿಸುತ್ತಾಳೆ.

ಅಂಗೀಯ ಮ್ಯಾಲಂಗಿ ಛಂದೇನೊ ನನ ರಾಯ
ರಂಬಿ ಮ್ಯಾಲ ರಂಬಿ ಪ್ರತಿರಂಬಿ । ರಂಬರ
ಛಂದೇನೋ ರಾಯ ಮನಿಯಾಗ ।(ಹಲಸಂಗಿ ಗೆಳೆಯರು, ೧೯೩೧, ಪು-೫೮)

ಅಂಗಿಯ ಮೇಲೆ ಮತ್ತೊಂದು ಅಂಗಿ, ನನ್ನ ಮೇಲೆ ಮತ್ತೊಬ್ಬಳು ಬರುವುದು ಸೂಕ್ತವಲ್ಲ ಎಂದು ಉಭಯಸಂಕಟದಲ್ಲಿ ಸಿಲುಕಿ ತೊಳಲಾಡುತ್ತಿರುವ ಹೆಂಡತಿಯು ತನ್ನ ಗಂಡನನ್ನು ಒಪ್ಪಿಸಲು ಪ್ರಯತ್ನಿಸುತ್ತಾಳೆ. ಇಷ್ಟಾಗಿಯೂ ಗಂಡನಿಗೆ ಬೇರೊಬ್ಬ ಸ್ತ್ರೀಯ ಅವಶ್ಯಕತೆಯಿದ್ದರೆ ಅದನ್ನು ಒಪ್ಪಿಕೊಳ್ಳುವ ಮನೋಭಾವವನ್ನು ಇಲ್ಲಿ ಸೃಷ್ಟಿಸಲಾಗಿದೆ.

ಗಂಡ ಪಂಡಿತರಾಯ ರಂಡೀಯ ಮಾಡಿದರ
ಭಂಡ ಮಾಡವರ ಮಗಳಲ್ಲ । ಕೊರಳಾನ ।
ಗುಂಡು ಬೇಡಿದರ ಕೊಡುವೇನ । (ಹಲಸಂಗಿ ಗೆಳೆಯರು, ೧೯೩೧, ಪು-೬೦)

ಗಂಡನ ಬಗೆಗಿನ ಪ್ರೀತಿ, ಔದಾರ್ಯ, ಗೌರವದ ಸಂಕೇತವೆಂಬಂತೆ ಗೀತೆಯು ಅಭಿವ್ಯಕ್ತಗೊಂಡರೂ ಪುರುಷಾಧಿಕಾರ ತನಗೆ ತೋಚಿದಂತೆ ಸಂಪ್ರದಾಯಗಳನ್ನು ಕಟ್ಟಿರುವ ಪ್ರತೀಕವೆಂಬಂತೆ ಇದೆ. ಗಂಡನ ಮಾನ, ಮರ್ಯಾದೆ, ಘನತೆ, ಗೌರವಗಳಿಗೆ ದಕ್ಕೆ ಬಾರದಂತೆ ಎಚ್ಚರವಹಿಸುವ ಹೆಣ್ಣು ಗಂಡನ ಅನೈತಿಕ ಸಂಬಂಧವನ್ನು ಒಪ್ಪಿಕೊಳ್ಳುತ್ತಾಳೆ. ಸಂಯಮದಿಂದ ವರ್ತಿಸಿ ಜಾಣಾಕ್ಷತನದಿಂದ ಸಂಬಂಧಗಳನ್ನು ಸರಿಪಡಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಆರಂಭದಲ್ಲಿ

ಒಪ್ಪಿಕೊಂಡರೂ ಅಂತರಾಳದಲ್ಲಿರುವ ಸವತಿ ಮತ್ಸರವು ಹೋಗದು. ಮೊದಲ್ಲಿ ಖುಷಿ-ಮೋಜು ಕಂಡರೂ ಬರುಬರುತ್ತ ಕುಟುಂಬದೊಳಗೆ ಕಲಹ ಮನೆ ಮಾಡುತ್ತದೆ. ಹೂವಿನ ಹಾಸಿಗೆಯು ಮುಳ್ಳಾಗಿ ಪರಿಣಮಿಸುತ್ತದೆ. ಸವತಿ-ಸವತಿಯರ ನಿತ್ಯದ ಕಲಹದ ನಡುವೆ ಬದುಕು ಕುಂಠಿತಗೊಳ್ಳುತ್ತದೆ.

ಸವತಿ ಸವತೆರ ಜಗಳ, ಪಟ್ಟೆ ಮಂಚದ ಮ್ಯಾಲೆ
ಹೊನ್ನಸರ ಹರಿಸು ಬಳಿವೊಡೆದು । ನನ ಸವತಿ ।
ವಾಲಿ ಕಿತ್ತ್ಹೋಯ್ತು ಬಿಡ ಸೆರಗ । (ಬಿ. ಎಸ್. ಗದ್ದಗಿಮಠ, ೧೯೬೨, ಪು-೧೧೦)

'ಸಾಯುತನಕ ಬಿಡದು ಸವತಿ ಮಕ್ಕಳ ಜಗಳ' ಎಂಬಂತೆ ನಿತ್ಯವೂ ಗಂಡನೆದುರಲ್ಲಿಯೇ ಸವತಿ-ಸವತಿಯರು ಕಲಹವಾಡುತ್ತಾರೆ. ಸೆರಗು ಕೊಸರಾಡಿ, ಆಭರಣಗಳು ಮುರಿದು, ವಾಲಿ ಕಿತ್ತು ಬೀಳುವ ಹಾಗೆ ಒಬ್ಬರನ್ನೊಬ್ಬರು ಎಳೆದಾಡಿಕೊಳ್ಳುವರು. ಯಾರಿಗೂ ನೆಮ್ಮದಿಯಿಲ್ಲದೇ ನಿತ್ಯದ ಬದುಕು ದುಸ್ತರವಾಗಿಬಿಡುತ್ತದೆ. ಇಂತಹ ಕಲಹಗಳು ಉಂಟಾಗಬಾರದೆಂದೇ ಎರಡನೆಯ ಹೆಂಡತಿಯನ್ನು ಸಮಾಜವು ನಿರ್ಲಕ್ಷಿಸುತ್ತಿದೆ. ಆದರೂ ಪುರಾಣ, ಚರಿತ್ರೆಗಳ ಬೆನ್ನುಬಿದ್ದವರು ಮರುಮದುವೆಯಾಗಿ ಕಷ್ಟಗಳನ್ನು ಎದುರಿಸುತ್ತಾರೆ. ಗಂಡ ಮಾಡಿದ ತಪ್ಪಿನಿಂದಾಗಿ ಇಲ್ಲಿಯೂ ಸಹಿತ ಹೆಣ್ಣೇ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ.

ಹೆಣ್ಣೀನ ಜನ್ಮ ಸುಣ್ಣಾಗಿ ಕುದಿಯಾಲಿ
ಗಾಣದ್ಹಿಂಡಿಯಾಗಿ ನುರಿಯಾಲಿ । ಶಿವರಾಯ
ದೀಪದ್ಹೆಣ್ಣೆಯಾಗಿ ಉರಿಯಾಲಿ । (ಎಸ್. ಕೆ. ಕರೀಂಖಾನ್, ೧೯೫೫, ಪು-೨೫)

ಸಮಾಜದಲ್ಲಿ ಹೆಣ್ಣುಮಕ್ಕಳು ಹಲವಾರು ಕಷ್ಟಗಳನ್ನು ನಿವಾರಿಸಿಕೊಂಡು ಬದುಕಬೇಕಾಗುತ್ತದೆ. ಅರಿವು ಕಡಿಮೆಯಿರುವ ಸಮಾಜದಲ್ಲಿ ಹೆಣ್ಣಿನ ಬದುಕು ಘೋರವಾಗಿರುತ್ತದೆ. ಆಕೆಯ ಬದುಕನ್ನು ಸುಣ್ಣ ಕುದಿಯುವ, ಹಿಂಡಿ ನುರಿಯುವ, ಉರಿಯುವ ದೀಪಕ್ಕೆ ಹೋಲಿಸಲಾಗಿದೆ. ಪ್ರತಿಯೊಂದು ಕಾರ್ಯದಲ್ಲಿಯೂ ಪರರ ಹಿತಕ್ಕಾಗಿಯೇ ಬದುಕೆಂಬ ಸಂದೇಶವಿದೆ. ಅಂತೆಯೇ ಹೆಣ್ಣಿನ ಬದುಕು ಕೂಡ ಪರರ ಒಳಿತಿಗಾಗಿಯೇ ಎಂಬುದನ್ನು ಜನಪದರೂ ಕೂಡ ಮರೆತಿಲ್ಲ.

ಕುಟುಂಬ ಗೌರವದ ಹೊಣೆ ಹೊತ್ತಿರುವ ಹೆಣ್ಣಿಗೆ ತಾಳ್ಮೆಯ ಬದುಕು ಅನಿವಾರ್ಯವಾಗಿಬಿಡುತ್ತದೆ. ಬಾಂಧವ್ಯಗಳನ್ನು ಬಿಗಿಗೊಳಿಸುವ ಮೂಲಕ ತನ್ನ ಜವಾಬ್ದಾರಿ ನಿಭಾಯಿಸುತ್ತಾಳೆ. ಗಂಡ ಮದುವೆ ಮಾಡಿಕೊಂಡು ಬಂದ ಸವತಿಯನ್ನು ತನ್ನ ತಂಗಿಯಂತೆ ಭಾವಿಸಿ ನೆಮ್ಮದಿಯಿಂದ ಬದುಕಿದ ಉದಾಹರಣೆಗಳಿವೆ. ಪುರಾಣದಲ್ಲಿ ಉಲ್ಲೇಖಿತ ಗಂಗೆ-ಗೌರಿಯರ ಸವತಿ ಮತ್ಸರದ ಹಾಡುಗಳು ಜನಪದರಲ್ಲಿವೆ.

### ೬.೪ ಸೂಳೆ ಮತ್ತು ಜನಪದರ ಸಂಬಂಧ

ಜನಪದರು ಸಮಾಜದ ಕಟ್ಟಳೆಗಳಿಗೆ ಬದ್ಧರಾಗಿ ಬದುಕು ನಡೆಸಿದ್ದರೂ ಒಮ್ಮೊಮ್ಮೆ ಅವುಗಳನ್ನು ಮೀರಿದ್ದುಂಟು. ಗಂಡಾಗಲಿ ಹೆಣ್ಣಾಗಲಿ ಹರೆಯದ ವಯಸ್ಸಿನಲ್ಲಿ ಮನಸ್ಸನ್ನು ಅಡ್ಡಡ್ಡ ಹರಿಯಬಿಟ್ಟು

ಬದುಕನ್ನು ಮೂರಾಬಟ್ಟೆ ಮಾಡಿಕೊಳ್ಳುವುದುಂಟು. ಹರೆಯದ ಬಯಕೆಯಲ್ಲಿ ವಿವಾಹಪೂರ್ವ ಮತ್ತು ವಿವಾಹ ನಂತರದ ಅನೈತಿಕ ಸಂಬಂಧಗಳು ಕುಟುಂಬ ಹಾಗೂ ಸಮಾಜದ ಸ್ವಾಸ್ಥ್ಯವನ್ನು ಹಾಳುಮಾಡಿವೆ. ಮದುವೆಯಾಗಿ ಮನೆಯಲ್ಲಿ ಹೆಂಡತಿಯಿದ್ದರೂ ಇನ್ನೊಬ್ಬಳನ್ನು ಬಯಸುವ ಗಂಡು, ಮದುವೆಯಾದ ಗಂಡನಿದ್ದರೂ ಪರಪುರಷನನ್ನು ಬಯಸುವ ಹೆಣ್ಣು ಸಾಮಾಜಿಕ ಕಟ್ಟಳೆಗಳನ್ನು ಮುರಿಯುತ್ತಾರೆ. ಹೀಗೆ ಪರಸ್ಪರ ಆಕರ್ಷಿತರಾದ ಕೆಲವರು ಮದುವೆಯಾದರೆ, ಕೆಲವರು ಜೀವನಪರ್ಯಂತ ಹಾಗೆಯೇ ಅನೈತಿಕ ಸಂಬಂಧಗಳನ್ನು ಗುಪ್ತವಾಗಿ ಮುಂದುವರೆಸುತ್ತಾರೆ. ಪ್ರಣಯಕ್ಕೆ ವಿವಾಹವು ಸಮಾಜವು ನೀಡಿದ ಒಪ್ಪಂದವಾಗಿದೆ. ಗಂಡ-ಹೆಂಡಿರಾಗುವ ಮೂಲಕ ದಾಂಪತ್ಯವು ಪ್ರಣಯಕ್ಕೆ ಅವಕಾಶ ನೀಡುತ್ತದೆ. ಗಂಡು-ಹೆಣ್ಣು ಪರಸ್ಪರ ಅನೈತಿಕ ಸುಖವನ್ನು ಬಯಸಿದಾಗ ಇರುವ ದಾಂಪತ್ಯವು ಒಡೆದುಹೋಗುತ್ತದೆ. ಕೆಲವರು ಯಾರಿಗೂ ತಿಳಿಯದಂತೆ ಅನೈತಿಕ ಸಂಬಂಧಗಳನ್ನು ಗೌಪ್ಯವಾಗಿರಿಸಿ ಉದಾಹರಣೆಗಳಿವೆ.

ಪ್ರಾಚೀನ ಕಾಲದಲ್ಲಿ ಮೇಲ್ವರ್ಗದ ಪುರೋಹಿತಶಾಹಿ, ರಾಜಶಾಹಿ, ಊಳಿಗಶಾಹಿಗಳೂ ತಮ್ಮ ಅನುಕೂಲಕ್ಕಾಗಿ ಆರಂಭದಲ್ಲಿ ಕೆಳವರ್ಗದ ಹೆಣ್ಣುಮಕ್ಕಳನ್ನು 'ದಾಸಿ'ಯನ್ನಾಗಿ ಮಾಡಿಕೊಂಡರು. ಕ್ರಮೇಣ ಅವರನ್ನು ದೈಹಿಕ ವಾಂಛೆಗಳಿಗೆ ಬಳಸತೊಡಗಿದರು. ಹೀಗೆ ದೈಹಿಕ ವಾಂಛೆಗಳಿಗೆ ಬಳಸಿದ ಹೆಣ್ಣುಮಕ್ಕಳನ್ನು ಸೂಳೆ, ವೇಶ್ಯೆ ಎಂದು ಸಂಬೋಧಿಸಲಾಯಿತು. ಕ್ರಮೇಣ ಸೂಳೆಯರನ್ನು ಹೊಂದುವುದು ಪುರುಷರ ಪ್ರತಿಷ್ಠೆಯ ವಿಷಯವಾಗಿತ್ತು. ಸತ್ಯವನ್ನು ಮರೆಮಾಚಿಸುವಷ್ಟು ಉದಾಹರಣೆಗಳು ಜನಪದ ಸಾಹಿತ್ಯದಲ್ಲಿ ದೊರಕುತ್ತವೆ.

"ಪುರುಷರನ್ನು ಆರ್ಥಿಕವಾಗಿ ದಿವಾಳಿಯೆಬ್ಬಿಸುವ ದಿವಾಳಿಕೋರರಂತೆ, ಅವನ ಕುಟುಂಬದವರನ್ನು ಅನಾಥವನ್ನಾಗಿ ಮಾಡುವ ರಾಕ್ಷಸಿಯರಂತೆ, ಕರುಳ ಸಂಬಂಧವನ್ನು ಕಡಿದು ಹಾಕುವ ಕಟುಕಿಯರಂತೆ ಹಾಗೂ ಅವರ ಯೌವ್ವನ ಸಂಪತ್ತನ್ನು ಲೂಟಿ ಹೊಡೆಯುವ ಕಾಮುಕಿಯರಂತೆ 'ಸೂಳೆ'ಯರನ್ನು ಪ್ರತಿನಿಧೀಕರಿಸಲಾಗಿದೆ. ಅಪ್ಪನ ಹಚ್ಚಡಕ್ಕಾಗಿ, ಅವ್ವನ ಸೀರೆಗಾಗಿ, ಮಗಳ ಕುಂಚಿಗೆಗಾಗಿ ಅನ್ಯ ಪುರುಷರಿಗೆ ಸೆರಗು ಹಾಸುವಂತೆ ಮಾಡಿದ ಕ್ರೂರ ವ್ಯವಸ್ಥೆಯ ವಸ್ತುಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಯಾರೂ ಪ್ರಯತ್ನಿಸುವುದಿಲ್ಲ. ಅವ್ವನ ಮರ್ಯಾದೆಯನ್ನು ಮುಚ್ಚಲು ಅವಳೇಕೆ ತನ್ನ ಮರ್ಯಾದೆಯನ್ನು ಹರಾಜಿಗಿಡಬೇಕಾಯಿತು. ಅಪ್ಪನ ಆರೋಗ್ಯಕ್ಕಾಗಿ ತನ್ನ ಆರೋಗ್ಯವನ್ನೇಕೆ ಬಲಿಕೊಡಬೇಕಾಯಿತು. ಕೂಸಿನ ಆರೈಕೆಗಾಗಿ ತನ್ನ ಮೈಯನ್ನೇ ಮಾರಿಕೊಳ್ಳಬೇಕಾಯಿತು ಎನ್ನುವ ಪ್ರಶ್ನೆಗಳನ್ನು ಕೇಳಿದರೆ, ಭಿನ್ನ ಬಗೆಯ ಉತ್ತರಗಳು ದೊರೆಯುತ್ತವೆ. ಈ ಉತ್ತರಗಳು ಇದುವರೆಗಿನ ಸೂಳೆಯರ ಬಗೆಗಿನ ಗ್ರಹಿಕೆಗಳನ್ನು ಮುರಿದುಹಾಕುತ್ತವೆ. ಬದುಕಿನ ಮೂಲಭೂತ ಅಗತ್ಯಗಳಿಗಾಗಿ ದೇಹ ಮಾರಿಕೊಳ್ಳಬೇಕಾದ ಅವಳ ಪರಿಸ್ಥಿತಿಯ ಹಿಂದಿರುವ ಒತ್ತಡಗಳನ್ನು ಅರ್ಥಮಾಡಿಕೊಳ್ಳುವ ಜವಾಬ್ದಾರಿ ಪ್ರತಿಯೊಬ್ಬರ ಮೇಲಿದೆ" (ಎಚ್. ಎಸ್. ಶ್ರೀಮತಿ , ೨೦೦೬, ಪು-೬೩೬) ಜನಪದರು ಗೀತೆಗಳಲ್ಲಿ ಸೂಳೆ ಹಾಗೂ ಸೂಳೆಯ ಸಂಗ ಬಯಸುವವರ ಸ್ಥಾನ ಎಂತಹದು ಎಂಬುದನ್ನು ಅಭಿವ್ಯಕ್ತಿಸಿದ್ದಾರೆ.

ಸೂಳೀಗಿ ಹೋಗುವವನ ಸುಲಿದು ಮಟ್ಟಿಕಟ್ಟಿ
ಊರ ಹೊರಗವನ ಹೆಡಮುರಗಿ । ಕಟ್ಟಿದರ
ಸೂಳೆಂಬ ಶಬ್ದ ಬಿಡವಲ್ಲ । (ಹಲಸಂಗಿ ಗೆಳೆಯರು, ೧೯೩೧, ಪು-೧೦೪)

ಮೇಲಿನ ಗೀತೆಯಲ್ಲಿ ಪತಿಯೇ ಪರಮದೈವ ಎಂದು ನಂಬಿರುವ ಹೆಂಡತಿಗೆ ವಂಚನೆ ಮಾಡಿ, ಸೂಳೆಗೆ ಹೋಗುವ ಗಂಡನನ್ನು ಸಮಾಜವು ಪ್ರಶ್ನಿಸುತ್ತದೆ. ಅತಿಯಾದಾಗ ದಂಡಿಸುತ್ತದೆ. ಸೂಳೆಯ ಸಹವಾಸ ಬಿಡದವರ ಮೇಲೆ ನಿಷೇಧಗಳನ್ನು ಹಾಕಲಾಗುತ್ತದೆ. ಸೂಳೆಯ ಸಹವಾಸದಿಂದಾಗಿ ಆಸ್ತಿ-ಅಂತಸ್ತುಗಳನ್ನು ಕಳೆದುಕೊಂಡ ಬೀದಿಗೆ ಬರಬೇಕಾಗುತ್ತದೆ. ಅಂತಹ ಪ್ರಸಂಗಗಳನ್ನು ಜನಪದರು ಪದೇಪದೇ ನೆನಪಿಸುತ್ತಾರೆ. ಏಕೆಂದರೆ ಸಮಾಜದಲ್ಲಿರುವ ಪ್ರತಿಯೊಬ್ಬರೂ ತಪ್ಪು ಹಾದಿಯನ್ನು ಹಿಡಿಯಬಾರದೆಂಬುದು ಜನಪದರ ಉದ್ದೇಶವಾಗಿದೆ.

ಸೂಳೇಯ ಮನೆಗೆ ಹೋದವನು ಏನಾದ ಎಂತಾದ
ಕಾಡು ನಾಯಾದ ಕಪಿಯಾದ । ತಮ್ಮಯ್ಯ
ಸೂಳೆ ಕಾಲೀಗೆ ಕೆರವಾದ । (ಕರಾಕೃ, ೧೯೫೮, ಪು-೫೫)

ಸವಿಮಾತುಗಳ ಮೂಲಕ ಗಂಡಸರನ್ನು ಮರಳು ಮಾಡಿ, ಹಣ, ಒಡವೆ-ವಸ್ತ್ರಗಳನ್ನು ಸಂಪಾದಿಸುವಳು. ದೇಹಾಕರ್ಷಣೆಯ ಮೂಲಕ ಗಂಡಸರನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುತ್ತಾಳೆ. ಅವಳ ಸಹವಾಸದಿಂದ ಮಂಗನೂ, ನಾಯಿಯೂ ಕೊನೆಗೆ ಆಕೆಯ ಕಾಲಿನ ಚಪ್ಪಲಿಯೂ ಆಗಬೇಕಾಗುತ್ತದೆ ಎಂಬುದು ಜನಪದರು ಸೂಳೆಯ ಸಂಬಂಧದ ಕುರಿತು ಇಟ್ಟುಕೊಂಡ ಅಭಿಪ್ರಾಯವಾಗಿದೆ. ಸೂಳೆಯ ಕುರಿತು ಹಲವಾರು ಅಲಕ್ಷದ ನುಡಿಗಳು ಜನಪದರಲ್ಲಿವೆ.

ಗಾಳಿ ಗಾಳಿ ಕೇಳೆ ಮಂಕಾಳಿ ಕೇಳೆ
ಸೂಳೇರ ಕೇರಿಯ ಸುಡಬೇಕು । ಗಾಳಿಯೆ
ಜಾಣರ ಕೇರೀಲಿ ಇರಬೇಕು ।
(ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೩೮, ಪು-೯೩)

ಸಮಾಜದ ಸ್ವಾಸ್ಥ್ಯವನ್ನು ಹಾಳುಗೆಡುಹುತ್ತಾ, ಕೌಟುಂಬಿಕ ಸಂಬಂಧಗಳಲ್ಲಿ ಬಿರುಕು ತಂದೊಡ್ಡುವ ಸೂಳೆಯ ಸಹವಾಸ ಸಾಕೆಂದು ನುಡಿಯುತ್ತಾರೆ. ಸಮಾಜದಲ್ಲಿ ಸೂಳೆಯೇ ಇರಬಾರದೆಂದು ಸೂಳೆಕೇರಿಯನ್ನೇ ದಹಿಸೆಂದು ಗಾಳಿಯನ್ನು ಬೇಡಿಕೊಳ್ಳುವ ಪರಿ ಮೇಲಿನ ಪದ್ಯದಲ್ಲಿ ಅಭಿವ್ಯಕ್ತಗೊಂಡಿದೆ. ಏಕೆಂದರೆ ಸೂಳೆಯರ ಸಂಗದಿಂದ ಬಾಂಧವ್ಯಗಳಲ್ಲಿ ಬಿರುಕುಂಟಾಗುವುದಲ್ಲದೇ ಬದುಕನ್ನು ಕಳೆದುಕೊಳ್ಳಬೇಕಾಗುತ್ತದೆ. ಜೀವಕ್ಕೆ ಎರವಾಗುವ ಇಂತಹ ಸಂಬಂಧಗಳನ್ನು ಹೊಂದಬೇಕೇ? ಬೇಡವೇ? ಎಂಬುದರ ಬಗ್ಗೆ ಜನಪದರು ಬುದ್ಧಿವಾದ ಹೇಳುತ್ತಾರೆ. ಸೂಳೆಯ ಸಂಗ ಬಯಸಿ ಹೊರಗೆ ಮಲಗುವ ಗಂಡನ ಪ್ರಾಣಕ್ಕೆ ಸಂಚಕಾರವಿರುವುದನ್ನು ಗಮನಿಸಿದ ಪತ್ನಿಯೋರ್ವಳು ಈ ಕೆಳಗಿನ ಗೀತೆಯಲ್ಲಿ ಆತನಿಗೆ ಎಚ್ಚರಿಸುವುದನ್ನು ಕಾಣುತ್ತೇವೆ.

ಹೆರವರ್ಹೆಣ್ಣೀಗಾಗಿ ಹೊರಗ ಮಲಗುವ ಜಾಣ
ಗಿಡದ ಮ್ಯಾಲೆರಡು ಗಿಣಿ ಕೂತು । ನುಡಿದಾವ
ಎರವನ್ನೊ ರಾಯ ನಿನ ಜೀವ ।
(ಹಲಸಂಗಿ ಗೆಳೆಯರು, ೧೯೩೧, ಪುಟ-೧೦೬)

ಗಿಡದ ಮೇಲೆರಡು ಗಿಳಿ ಕೂತು ಮಾತನಾಡುವುದನ್ನು ಆಲಿಸಿದ ಪತ್ನಿಯೊಬ್ಬಳು ತನ್ನ ಗಂಡನಿಗೆ ಎಚ್ಚರಿಕೆ ನುಡಿಗಳನ್ನಾಡುತ್ತಾಳೆ. ಸೂಳೆಯ ಕುರಿತು ನಿರ್ಲಕ್ಷ್ಯದಿಂದ ಅಭಿವ್ಯಕ್ತಿಸುವ ಜನಪದರು ಹೆಣ್ಣೊಬ್ಬಳು ಸೂಳೆಯಾಗುವುದಕ್ಕೆ ಕಾರಣವೇನಿತ್ತೆಂಬುದನ್ನು ಮರೆಮಾಚುತ್ತಾರೆ. ಪುರುಷರ ಲೈಂಗಿಕ ಸ್ವೇಚ್ಛಾಚಾರದಿಂದಾಗಿ ಸೂಳೆ ವ್ಯವಸ್ಥೆ ರೂಪುಗೊಂಡಿತೇ? ಕೆಳವರ್ಗದ ಹೆಣ್ಣು ಮಾತ್ರ ಸೂಳೆಯಾಗುತ್ತಿದ್ದಳೇ? ಸೂಳೆ ರೂಪುಗೊಳ್ಳಲು ಧಾರ್ಮಿಕ ವ್ಯವಸ್ಥೆ ಕಾರಣವೇ? ಹೆಣ್ಣಿನಲ್ಲಿನ ಅತಿಯಾದ ಧನಮೋಹವು ಸೂಳೆಯಾಗುವುದಕ್ಕೆ ಪ್ರೇರೆಪಣೆ ನೀಡಿತೇ? ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ದೊರಕಿದಾಗ ಸ್ಪಷ್ಟತೆ ಸಿಗಲು ಸಾಧ್ಯ. ಜನಪದ ಗೀತೆಗಳಲ್ಲಿ ಒಡಮೂಡಿದ ಸೂಳೆಯು ವಾಸ್ತವದಲ್ಲಿ ಬೇರೆಯದೇ ರೀತಿಯಲ್ಲಿ ಬದುಕಿರಬಹುದಾದ ಸಾಧ್ಯತೆಗಳು ಹೆಚ್ಚಿವೆ. ಪುರುಷಾಧಿಕಾರದ ಬಲದಿಂದ ಸೃಷ್ಟಿಸಿದ ಪೂರ್ವಾಗ್ರಹಗಳನ್ನಿಟ್ಟುಕೊಂಡು ಅನೇಕ ಗರತಿಯರು ಗೀತೆಗಳನ್ನು ಸೃಷ್ಟಿಸಿದ್ದಾರೆಂಬುದನ್ನು ಅಲ್ಲಗಳೆಯಲಾಗದು. ಇದರ ಬೆನ್ನಲ್ಲಿಯೇ ಸಾಮಾಜಿಕ ಶಾಪವೆಂದು ಗುರುತಿಸಿಕೊಂಡ ಸೂಳೆಗಾರಿಕೆಯಲ್ಲಿ ಸಿಲುಕಿ ನರಳುತ್ತ ಮಾನವೀಯ ಸಂಬಂಧಗಳಿಗಾಗಿ ತುಡಿಯುವ ಸೂಳೆಯನ್ನು ಪ್ರತಿನಿಧಿಸಿದ ಅನೇಕ ಗೀತೆಗಳಿವೆ. ಸೂಳೆಗಾರಿಕೆಯಿಂದ ಬಿಡುಗಡೆಗೊಂಡು ಹೊಸ ಬದುಕನ್ನು ಸಾಗಿಸುವ ಮಹಿಳೆಯರ ಬದುಕನ್ನು ಚಿತ್ರಿಸಿದೆ. ಕೊನೆಯದಾಗಿ ಸೂಳೆ ವ್ಯವಸ್ಥೆಯು ಕುಟುಂಬಬಾಹಿರವಾದುದು. ಆದರೂ ಸಾಮಾಜಿಕ ಸ್ವಾಸ್ಥ್ಯದ ನೆಪದಲ್ಲಿ ಗಂಡಸರ ಲೈಂಗಿಕ ಸ್ವೇಚ್ಛಾಚಾರವನ್ನು ಪೋಷಿಸುತ್ತದೆ. ಪಿತೃಪ್ರಧಾನ ಅಥವಾ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಭಿನ್ನವಾಗಿ ಕಾಣುತ್ತಾಳೆ.

### ೬.೫ ಮಲತಾಯಿ – ಮಲಮಕ್ಕಳ ಸಂಬಂಧ

ಜನಪದರು ನೀತಿಯಿಂದ ಬದುಕೆಂಬ ಮಹತ್ವಾಕಾಂಕ್ಷೆ ಉಳ್ಳವರು. ಪ್ರತಿಯೊಂದು ಸಂಬಂಧಕ್ಕೂ ಪರಸ್ಪರ ಗೌರವಾದರಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ತಮ್ಮೊಳಗಿನ ಸಂಬಂಧಗಳು ಹದಗೆಡದಂತೆ ಎಚ್ಚರವಹಿಸುತ್ತಾರೆ. ಆದರೂ ಕೆಲವೊಂದು ಸಂದರ್ಭಗಳಲ್ಲಿ ಸಂಬಂಧಗಳಲ್ಲಿ ಒಡಕುಂಟಾಗುತ್ತದೆ. ಒಡೆದ ಸಂಬಂಧಗಳನ್ನು ಬೆಸೆಯಲು ಸಾಕಷ್ಟು ಪ್ರಯತ್ನಿಸಿ ಕೂಡಿ ಬಾಳುತ್ತಾರೆ. ಮಲತಾಯಿ-ಮಲಮಕ್ಕಳ ವಿಚಾರದಲ್ಲಿ ನಿರ್ಲಕ್ಷದ ಮನೋಭಾವ ಹೊಂದುವ ಜನಪದರು ಇಂತಹ ಸಂಬಂಧಗಳನ್ನು ತಿರಸ್ಕರಿಸುತ್ತಾರೆ.

ಮಲತಾಯಿ ತನ್ನದಲ್ಲದ ಮಕ್ಕಳನ್ನು ಮಮತೆಯಿಂದ ಸಾಕಿ ಬೆಳೆಸಿದ ಮತ್ತು ಮಲಮಕ್ಕಳು ತಮ್ಮ ಹೆತ್ತತಾಯಿಯಲ್ಲದ ಮಲತಾಯಿಯನ್ನು ಗೌರವಾದರಗಳಿಂದ ಸಲುಹಿದ ಉದಾಹರಣೆಗಳು

ಜನಪದ ಸಾಹಿತ್ಯದಲ್ಲಿ ಕಂಡುಬರುತ್ತವೆ. ಇಂತಹ ಸಂಬಂಧಗಳು ಜನಪದರ ಬದುಕಿನ ಆದರ್ಶ, ತ್ಯಾಗ, ಮಮತೆ ಮುಂತಾದ ಮೌಲ್ಯಗಳ ಪ್ರತೀಕವಾಗಿ ಕಂಡುಬರುತ್ತವೆ. ಮಲತಾಯಿ ಮಲಮಕ್ಕಳನ್ನು ಪ್ರೀತಿ-ಮಮತೆಯಿಂದ ಸಾಕುತ್ತಾಳೆ. ಅಂತೆಯೇ ಮಲಮಕ್ಕಳು ಮಲತಾಯಿಯನ್ನು ಗೌರವದಿಂದ ನೋಡುತ್ತಾರೆ. ಸ್ವಂತ ಮಕ್ಕಳು, ಹೆತ್ತ ತಾಯಿಯ ನಡುವೆಯೆ ಕೆಲವೊಮ್ಮೆ ವಿರಸಗಳುಂಟಾಗುವುದು ಸಹಜ. ಹೀಗಿರುವಾಗ ಮಲಮಕ್ಕಳು ಹಾಗೂ ಮಲತಾಯಿಯರ ನಡುವೆ ವಿರಸವುಂಟಾಗಿ ಸಮಾಜವು ಇಂತಹ ಬಿರುಕನ್ನು ನೋಡುವ ದೃಷ್ಟಿಕೋನವೇ ಬದಲಾಗಿಬಿಡುತ್ತದೆ.

ಮಕ್ಕಳು ತಪ್ಪು ಮಾಡಿದಾಗ ತಿದ್ದಿ ಬುದ್ಧಿಹೇಳಬೇಕಾದುದು ತಾಯಿಯ ಕರ್ತವ್ಯ. ಮಲತಾಯಿಯಾದ ಕಾರಣಕ್ಕೆ ಹಿಂಜರಿಕೆಯಿಂದ ಗದರಿಸಿದರೂ ಅದು ರಂಪವಾಗಿಬಿಡುತ್ತದೆ. ಪ್ರೀತಿಯಿಂದಲೇ ಮಕ್ಕಳನ್ನು ನೋಡಿಕೊಳ್ಳುವ ಮಲತಾಯಿಗೆ ಒಂದೇಟು ಮಕ್ಕಳನ್ನು ಹೊಡೆಯುವುದು. ಬೈಯ್ಯುವುದು ದುಸ್ತರವಾಗುತ್ತದೆ. ಒಂದು ವೇಳೆ ಹೊಡೆದರೆ, ಬೈದರೆ ಅದು ಬೇಡದ, ಸಹಿಸದ ಮನೋಗುಣವನ್ನು ಪ್ರತಿನಿಧಿಸುತ್ತದೆ. ಆಗ ಮಲತಾಯಿ-ಮಲಮಕ್ಕಳ ನಡುವಿನ ಸಂಬಂಧವು ಹಳಸುತ್ತದೆ. ಅದಕ್ಕಾಗಿಯೇ ಜನಪದರು ಮಲಮಕ್ಕಳಿರುವ ಮನೆಯೇ ಬೇಡವೆಂದು ನಿರಾಕರಿಸುತ್ತಾರೆ.

ಸಾವಿರ ಕೊಟ್ಟರೂ ಸವತಿಯ ಮನಿಬ್ಯಾಡ
ಸಾವಿರದ ಮ್ಯಾಲ ಐನೂರು । ಕೊಟ್ಟರು
ಮಲಮಕ್ಕಳಿರುವ ಮನಿಬ್ಯಾಡ । (ಹಲಸಂಗಿ ಗೆಳೆಯರು, ೧೯೩೧, ಪು-೧೦೨)

ಸಾವಿರ ರೂಪಾಯಿಯೋ, ಸಾವಿರ ಚಿನ್ನದ ನಾಣ್ಯಗಳೋ ಗೀತೆ ರಚನೆಯಾದ ಕಾಲದ ಹಣದಳತೆಯ ಪ್ರಮಾಣವನ್ನು ಹೇಳುತ್ತದೆ. ಸಾವಿರ ಕೊಟ್ಟರೂ ಸವತಿಯ ಮನೆ ಬೇಡವೆಂದು ಹೇಳುವ ಜನಪದರು ಸಾವಿರದ ಮೇಲೆ ಐದುನೂರು ಕೊಟ್ಟರೂ ಮಲಮಕ್ಕಳಿರುವ ಮನೆ ಬೇಡವೆಂದು ನಿರಾಕರಿಸುತ್ತಾರೆ. ಏಕೆಂದರೆ ಸವತಿಯಾಗುವುದು, ಮಲತಾಯಿಯಾಗುವುದು ಮುಳ್ಳಿನ ಹಾಸಿಗೆಯಂತಿರುವ ಬದುಕು. ಆದ್ದರಿಂದ ಸವತಿ, ಮಲತಾಯಿ ಎರಡೂ ಸಂಬಂಧಗಳು ಏರ್ಪಡದಂತೆ ನಿರಾಕರಿಸುತ್ತಾರೆ. ಮತ್ತೊಬ್ಬರಿಗೆ ಈ ಕುರಿತು ತಿಳಿಹೇಳುತ್ತಾರೆ. ಮಲಮಕ್ಕಳು ಕೊಡುವ ಕಷ್ಟದಿಂದಲೋ ಇಲ್ಲವೇ ಮಲಮಕ್ಕಳ ತಾಯಿಯಾಗಿ ಅನುಭವಿಸುವ ಸಂಕಷ್ಟಗಳು ಅರಿವಿಗೆ ಬಂದು 'ಮಲಮಕ್ಕಳಿರುವ ಮನೆಬೇಡ' ಎಂಬ ನಿರ್ಧಾರಕ್ಕೆ ಬರಲಾಗಿದೆ.

ಹಡೆದ ತಾಯಿ ಮುಂದ ಹಾಲು ಕುಡಿದರ ಛಂದ
ಮಲತಾಯಿ ಮುಂದ ಮರಿಗುದರಿ । ಏರಿದರ
ಮನದಾಗ ಚಿಟುಗಿ ಮುರುದಾಳ । (ಹಲಸಂಗಿ ಗೆಳೆಯರು, ೧೯೩೧, ಪು-೩೬)

ಹಡೆದ ತಾಯಿಯಾದವಳು ತನ್ನ ಮಕ್ಕಳ ಏಳ್ಗೆಯನ್ನು ಕಂಡು ಹರ್ಷಿಸುತ್ತಾಳೆ. ಬಂಧು-ಬಳಗದವರಲ್ಲಿ ಮಕ್ಕಳ ಏಳ್ಗೆಯನ್ನು ಕಂಡು ಅತಿಹೆಚ್ಚು ಸಂತೋಷಪಡುವ ಜೀವವೆಂದರೆ ಅದು ತಾಯಿಯದು. ಅವಳು ಹೆತ್ತವಳಾಗಿದ್ದರೆ ಮಾತ್ರ, ಮಲತಾಯಿಯಾಗಿದ್ದರೆ, ಮಲಮಕ್ಕಳ ಏಳ್ಗೆಯನ್ನು ಸಹಿಸದೇ ಅಸೂಯೆ ಭಾವವು ಒಡಮೂಡಿ 'ಚಿಟುಗಿ ಮುರದಾಳ' ಎಂದು ಜನಪದರು

ಅಭಿವ್ಯಕ್ತಿಸುತ್ತಾರೆ. ಜನಪದ ಲೋಕದಲ್ಲಿ ಮಲತಾಯಿಗೆ ನಿಷ್ಠುರಾಗಿರುವ ಮಕ್ಕಳು, ಮಲಮಕ್ಕಳಿಗೆ ಮಮತೆ ನೀಡುವ ತಾಯಿಂದಿರ ನಡುವೆ ಆದರ್ಶಗಳಿಗೆ ವ್ಯತಿರಿಕ್ತವಾದ ಸಂಬಂಧಗಳು ಕಂಡುಬರುತ್ತವೆ. ಇಂತಹ ಸಂಬಂಧಗಳನ್ನು ಜನಪದರು ಅಲಕ್ಷದಿಂದ ಕಾಣುತ್ತಾರೆ. ಇಲ್ಲವೇ ಸಾಮಾಜಿಕ ನಿಷೇಧ ಹೇರುತ್ತಾರೆ.

ಬಂಜೆ, ವಿಧವೆ, ಸೂಳೆ, ಮಲಮಕ್ಕಳು ಹಾಗೂ ಮಲತಾಯಿ ಮುಂತಾದ ಸಂಬಂಧಗಳನ್ನು ಹೊಂದುವಲ್ಲಿ ಜನಪದರು ನಿರ್ಲಕ್ಷ ತೋರುತ್ತಾರೆ. ಆದ್ದರಿಂದ ಇವುಗಳೊಂದಿಗೆ ಕೆಲವು ನಿಷೇಧಿತ ಸಂಬಂಧಗಳು ಕೂಡ ಜನಪದರಲ್ಲಿ ಆಚರಣೆಯಲ್ಲಿವೆ. ಪ್ರಪಂಚದ ಜೀವಿಗಳಲ್ಲಿಯೇ ಬುದ್ಧಿವಂತನಾದ ಮಾನವನು ಹುಟ್ಟಿನಿಂದ ಸಾವಿನವರೆಗೆ ಅನೇಕ ಬಂಧಗಳಲ್ಲಿ ಬಂಧಿತನಾಗುತ್ತಾನೆ. ಕಾರಣ ಬದುಕಿನಲ್ಲಿ ಸಂಘಟಿತಗೊಂಡು ಸಹ್ಯವಾಗಿ ಅನೇಕ ಸಂಬಂಧಗಳನ್ನು ಹೊಂದಬೇಕಾಗುತ್ತದೆ. ಅವುಗಳಲ್ಲಿ ವಿವಾಹವು ಒಂದಾಗಿದ್ದು, ಕೆಲವೊಂದು ಸಂಬಂಧಗಳಲ್ಲಿ ಮಾತ್ರ ವಿವಾಹವಾಗಬೇಕೆಂಬ ನಿರ್ಬಂಧ ಜನಪದರಲ್ಲಿದೆ.

ಒಡಹುಟ್ಟಿದವರ, ಸೋದರ–ಸೋದರಿಯರ, ಅಣ್ಣ ತಂಗಿಯರಾಗುವವರ ನಡುವಿನ ವಿವಾಹವನ್ನು ನಿಷೇಧಿಸಲಾಗಿದೆ. ಒಂದೇ ಕುಲದಲ್ಲಿ ಜನಿಸಿದ ಗಂಡು–ಹೆಣ್ಣು ವಿವಾಹವಾಗುವುದಿಲ್ಲ. ಒಂದೇ ಕುಲದವರು ಸೋದರ–ಸೋದರಿಯರೆಂಬ ಮನೋಭಾವವಿದೆ. ಕುಲ–ಗೋತ್ರ ನೋಡಿ ವಿವಾಹಗಳನ್ನು ಕುದುರಿಸುವುದು ವಾಡಿಕೆ. ಸೋದರಮಾವನ ಮಕ್ಕಳು, ಸೋದರತ್ತೆಯ ಮಕ್ಕಳು, ತಾಯಿಯ ತಮ್ಮ ಅಕ್ಕನ ಮಗಳು, ಮಾವನ ಮಗ, ಅತ್ತೆಯ ಮಗಳು ಹೀಗೆ ಸುತ್ತಿ ಬಳಸಿ ಸಂಬಂಧಗಳೊಳಗೆ ಸಂಬಂಧವನ್ನು ಕುದುರಿಸುವುದು ಜನಪದರಲ್ಲಿ ವ್ಯಾಪಕವಾಗಿದೆ. ಹಳೆಯ ಬಾಂಧವ್ಯಗಳಿಗೆ ವಿವಾಹದ ಮೂಲಕ ಹೊಸ ಸಂಬಂಧಗಳನ್ನು ಹೆಣೆದು ಭಾವನೆಗಳನ್ನು ನವೀಕರಿಸುತ್ತಿದ್ದರು.

ಜನಪದರು ಕುಟುಂಬ, ವಿವಾಹ, ಸಮಾಜದಲ್ಲಿ ಬಾಂಧವ್ಯಕ್ಕೆ ಕೊಟ್ಟಿರುವ ಮಹತ್ವ ಅಪರಿಮಿತವಾದುದು. ಶುದ್ಧ ಭಾವನೆಗಳಿಂದ ರೂಪುಗೊಂಡ ಸಂಬಂಧಗಳು ಬದುಕನ್ನು ಮುನ್ನಡೆಸುತ್ತವೆ ಎಂಬ ನಂಬಿಕೆ ಜನಪದರದು. ಆದರೀಗ ಅಂತಹ ಸಂಬಂಧಗಳು ಕಲುಷಿತಗೊಳ್ಳುತ್ತಿವೆ. ಅಪ್ಪ–ಮಗಳು, ತಾಯಿ–ಮಗ, ಅಣ್ಣ–ತಂಗಿ, ಅಕ್ಕ–ತಮ್ಮರ ನಡುವಿನ ಸಂಬಂಧಗಳಲ್ಲಿನ ಶುದ್ಧತೆ, ಪಾವಿತ್ರ್ಯತೆ ಮಾಯವಾದ ಉದಾಹರಣೆಗಳು ಕೆಲವು ಜನಪದ ಕಥೆಗಳಲ್ಲಿ ಅಭಿವ್ಯಕ್ತವಾಗಿವೆ. ಆದರೆ ಜನಪದ ಗೀತೆಗಳಲ್ಲಿ ಇಂತಹ ನಿಷೇಧಿತ ಸಂಬಂಧಗಳು ವಿರಳ. ಜನಪದ ಸಮಾಜವನ್ನು ಅವಲೋಕಿಸಿದಾಗ ಇಡಿ ಸಮಾಜವೇ ಪುರುಷ ಪ್ರಧಾನವಾಗಿರುವುದರಿಂದ ಸಂಬಂಧಗಳು ಹಳಿ ತಪ್ಪಿದಾಗ ಹೆಣ್ಣನ್ನು ಕಾರಣಿಕರ್ತಳೆಂದು ದೂಷಿಸುವುದು ಸಾಮಾನ್ಯವಾಗಿದೆ. ಹೆಣ್ಣು–ಗಂಡು ಸಮಾಜದ ಎರಡು ಕಣ್ಣು. ಇರ್ವರೂ ಸಮಾಜದಲ್ಲಿನ ಒಳಿತು–ಕೆಡುಕುಗಳಿಗೆ ಸಮಾನ ಹೊಣೆಗಾರರಾಗಿದ್ದಾರೆ. ಮನಸ್ಸನ್ನು ಪರಿಶುದ್ಧವಾಗಿಟ್ಟುಕೊಂಡ ಹೆಣ್ಣಾಗಲಿ–ಗಂಡಾಗಲಿ ಭಾವನೆಗಳಿಗೆ ಮೌಲ್ಯಯುತವಾದ ಸಂಬಂಧಗಳನ್ನು ರೂಪಿಸಿಕೊಳ್ಳುತ್ತಾರೆ. ಪರಿಶುದ್ಧತೆಯ ಕೊರತೆಯಿದ್ದಲ್ಲಿ ಮಗಳನ್ನೇ ಬಯಸುವ ತಂದೆ, ಅಣ್ಣನನ್ನೇ ಬಯಸುವ ತಂಗಿ, ಮಗನನ್ನೇ ಬಯಸುವ ತಾಯಿ, ತಂಗಿಯನ್ನೇ

ಬಯಸುವ ಅಣ್ಣ ಮುಂತಾದ ನಿಷೇಧಿತ ಸಂಬಂಧಗಳು ಹುಟ್ಟಿಕೊಳ್ಳುತ್ತವೆ. ಇವುಗಳನ್ನು ಸಮಾಜವು ಮಾನ್ಯ ಮಾಡುವುದಿಲ್ಲ. ಪ್ರಸ್ತುತ ಸಮಾಜದಲ್ಲಿ ಇಂತಹ ಸಂಕೀರ್ಣ ಸಂಬಂಧಗಳು ನೂರಕ್ಕೆ ಐದಾದರೂ ಕಂಡು ಬರುತ್ತವೆ. ಮನುಷ್ಯನಲ್ಲಿ ಒಡಮೂಡಬೇಕಾದ ಮಾನವೀಯ ಮೌಲ್ಯಗಳೇ ಇಲ್ಲವಾದಾಗ ಯಾರಿಗೆ ದೂರುವುದು? 'ಬೇಲಿಯೇ ಎದ್ದು ಹೊಲ ಮೇಯ್ದರೆ' ಬೆಳೆಯನ್ನು ಕಾಪಾಡುವುದು ಹೇಗೆ? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರ ಸಿಗುವುದು ಕಷ್ಟ.

ಪುರಾಣ, ಚರಿತ್ರೆ ಐತಿಹ್ಯ, ಇತಿಹಾಸಗಳನ್ನು ಅವಲೋಕಿಸಿದಾಗ ಪ್ರಾಚೀನ ಕಾಲದಿಂದಲೂ ನಿಷೇಧಿತ ಸಂಬಂಧಗಳು ಎಲೆಯ ಮರೆಯ ಕಾಯಿಯಂತೆ ಗೋಚರಿಸುತ್ತವೆ. ಮೇಲ್ನೋಟಕ್ಕೆ ಅಸಹ್ಯ, ಕೊಳಕು ಎನ್ನಿಸಿದರೂ, ವಾಸ್ತವವಾಗಿ ಇಂತಹ ಮೂಲದಿಂದಲೇ ಮನುಷ್ಯ ಹುಟ್ಟಿ ಬೆಳೆದದ್ದು, ವೈರುಧ್ಯದ ಬದುಕಿನಲ್ಲಿ ಒಳಿತು-ಕೆಡುಕುಗಳ ಕುರಿತು ಚಿಂತಿಸಿ ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯ ಎಲ್ಲರಲ್ಲೂ ಇರುತ್ತದೆ. ಆ ಮೂಲಕ ಬಾಂಧವ್ಯಗಳನ್ನು ಉತ್ತಮವಾಗಿ ರೂಪಿಸಿಕೊಳ್ಳಬಹುದು.

ಅಧ್ಯಾಯ – ೭

# ಜನಪದರ ಸಂಬಂಧಗಳು ಹಾಗೂ ಆಧುನಿಕತೆಯ ಮುಖಾಮುಖಿ

ಜಾಗತೀಕರಣದ ಸಂದರ್ಭದಲ್ಲಿ ಸರಳ ಬದುಕು, ಉತ್ತಮ ಮೌಲ್ಯ ಭಾಂದವ್ಯಗಳಿಗಿಂತ ಭೌತಿಕವಾದ ಸುಖವೇ ಪ್ರಧಾನವಾಗಿದೆ. ಆಧುನಿಕತೆಯ ಹೆಸರಿನಲ್ಲಿ ಬದುಕಿನ ನೆಮ್ಮದಿಯನ್ನು ಕಳೆದುಕೊಂಡು ಅಂತರಂಗದ ಸೌಂದರ್ಯಕ್ಕಿಂತ ಬಹಿರಂಗದ ಸೌಂದರ್ಯಕ್ಕೆ ಹೆಚ್ಚು ಮಹತ್ವ ನೀಡುವ ಸಂಗತಿಗಳು ಸಾಮಾನ್ಯವಾಗಿ ಮರುಕಳಿಸುತ್ತಿವೆ. ಇಂತಹ ಸಂದರ್ಭದಲ್ಲಿ ನಾವು ನಿಂತ ಜಾಗದಿಂದ ಹಿಂದೆ ಹೊರಳಿ ನೋಡಿ ಆತ್ಮಾವಲೋಕನ ಮಾಡಿಕೊಳ್ಳುವ ಅನಿವಾರ್ಯತೆ ಒದಗಿಬಂದಿದೆ. 'ಹಳೇಬೇರು ಹೊಸ ಚಿಗುರು ಕೂಡಿರಲು ಮರ ಸೊಬಗು' ಎಂಬ ಕವಿವಾಣಿಯಂತೆ ಹಳೆಬೇರಿನಂತಿರುವ ರೂಢಿ–ಸಂಪ್ರದಾಯಗಳು, ಭಾವ–ಬಾಂಧವ್ಯಗಳನ್ನು ಅವಲೋಕನ ಮಾಡಿ ಮುಂದಿನ ಹೆಜ್ಜೆಯನ್ನು ಇಡಬೇಕಾದದ್ದು ನಮ್ಮೆಲ್ಲರ ಕರ್ತವ್ಯವಾಗಿದೆ. ನಮಗೆ ಅರಿವಿಲ್ಲದಂತೆಯೇ ನಮ್ಮನ್ನು ಪಾಶ್ಚಾತ್ಯ ಸಂಸ್ಕೃತಿ ಆಳುತ್ತಿವೆ. ಭಾಷೆ–ಬಟ್ಟೆ, ಬೆಳೆ–ತಳಿ, ತಿಂಡಿ–ತಿನಿಸು, ಹಾಡು–ಕುಣಿತ, ರೂಢಿ–ಸಂಪ್ರದಾಯಗಳಲ್ಲಿ ನಮ್ಮ ಜನಪದ ಸಂಸ್ಕೃತಿಯನ್ನು ಮರೆತ ಇಂದಿನ ಪೀಳಿಗೆಗೆ ನೆರವಾಗುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನಗಳು ನಡೆಯಬೇಕಿದೆ. ಪ್ರೀತಿ, ತ್ಯಾಗ, ಮಮತೆ, ಸ್ನೇಹ ಮುಂತಾದ ಮಾನವೀಯ ಮೌಲ್ಯಗಳನ್ನು ಸಂಬಂಧಗಳ ಮೂಲಕ ಹಂಚುತ್ತಾ ಸವಿಯಬೇಕೇ ಹೊರತು ಫೋಟೋ ಫ್ರೇಮ್‌ಗಳಲ್ಲಿ ಬಂಧಿಸಿಡುವುದಲ್ಲ. ಅದರಾಚೆಗಿನ ಭಾವನೆಗಳಲ್ಲಿ ಅರಿತು ಬೆರೆತು ನಡೆಯಬೇಕು. ಬಾಂಧವ್ಯಗಳನ್ನು ಬೆಸೆಯಬೇಕು.

ಹಳೆಯದನ್ನು ಪರಂಪರೆಯೆಂದು ಇಂದಿನದನ್ನು ಆಧುನಿಕವೆಂದು ಪರಿಗಣಿಸುವುದು ರೂಢಿ. ಭೂತಕಾಲದ ಬದುಕಿಗೆ ವರ್ತಮಾನದಲ್ಲಿ ಬದಲಾವಣೆ ತಂದರೆ ಆಧುನಿಕತೆ ನಿರ್ಮಾಣವಾಗುತ್ತದೆ. ಇದು ಭೂತಕಾಲದ ತಿಳುವಳಿಕೆಯ ಕ್ರಮವನ್ನು ಕೂಡ ಬದಲಾಯಿಸುತ್ತದೆ. ದಿನಬಳಕೆಯ ವಸ್ತುಗಳಿಂದ ಹಿಡಿದು ಜನರ ಮನೋಭಾವ, ಚಿಂತನಾಕ್ರಮ, ಜೀವನ ವಿಧಾನದಲ್ಲಿ ಬದಲಾವಣೆ ಕಂಡುಬರುತ್ತದೆ. ಆಧುನಿಕತೆಗೆ ಸ್ಥಿರತೆಯಿಲ್ಲ. ಇದು ಕಾಲದಿಂದ ಕಾಲಕ್ಕೆ ಬದಲಾಗುವ ನಿರಂತರ ಪ್ರಕ್ರಿಯೆ. ಗತಕಾಲದ ಬದುಕಿಗೂ ಇಂದಿನ ಬದುಕಿಗೂ ವೈರುಧ್ಯ ಕಂಡುಬರುತ್ತದೆ.

'ಆಧುನಿಕತೆ' ಎಂಬ ಪದ ಆಂಗ್ಲಭಾಷೆಯ `Modern' ಎಂಬುದರ ಕನ್ನಡದ ಅನುವಾದವಾಗಿದೆ. `Modern' ಎಂಬ ಆಂಗ್ಲಪದವು ೧೫ನೇ ಶತಮಾನದ ಲ್ಯಾಟಿನ್‌ನ

`Modernus' ಎಂಬ ಪದದಿಂದ ರೂಪುಗೊಂಡಿದೆ. ಲ್ಯಾಟೀನ್‌ನಲ್ಲಿ `Modernus' ಎಂಬ ಪದವನ್ನು ಕ್ರಿಶ್ಚಿಯನ್ ಘಟ್ಟವನ್ನು ರೋಮನ್ನರು ಕ್ಷುದ್ರ ಧರ್ಮಗಳ ಭೂತಕಾಲದಿಂದ ಪ್ರತ್ಯೇಕಿಸಲು ಬಳಸಿದರು. ಮಧ್ಯಯುಗದಲ್ಲಿ `Modern' ಎಂಬ ಪದವನ್ನು ಪ್ರಾಚೀನ ಘಟ್ಟವನ್ನು ಸಮಕಾಲೀನ ಘಟ್ಟದಿಂದ ಬೇರ್ಪಡಿಸಲು ಬಳಸಿದರು. ೧೯ನೇ ಶತಮಾನದ ಹೊತ್ತಿಗೆ ಯೂರೋಪಿನಲ್ಲಿ ಹುಟ್ಟಿದ ಸಾಮಾಜಿಕ ಸಂಸ್ಥೆಗಳು `Modernity' ಎಂಬ ಪದವನ್ನು ಹೆಚ್ಚಿಗೆ ಬಳಸಿದವು. ನಂತರ ಭೂಮಂಡಲಗಳ ಶೋಧನೆ ಹಾಗೂ ವಸಹಾತೀಕರಿಸುವ ಕೆಲಸದಲ್ಲಿ `Modernity' ಎಂಬ ಪದವನ್ನು ಎಲ್ಲೆಡೆ ಪಸರಿಸುವಂತೆ ಯುರೋಪ್‌ನ ಸಾಮಾಜಿಕ ಸಂಸ್ಥೆಗಳು ಕಾರ್ಯನಿರ್ವಹಿಸಿದವು.

"ಪುನರುಜ್ಜೀವನ ಯುಗ ಹಾಗೂ ಸುಧಾರಣಾಯುಗಗಳು ಕೂಡ 'ಆಧುನಿಕ ಯುಗ' ಹಾಗೂ ಮಧ್ಯಯುಗ ಎಂಬ ನಿರ್ಣಾಯಕ ವರ್ಗೀಕರಣವನ್ನು ಮಾಡಿದವು. ಧರ್ಮ ಹಾಗೂ ಆಧ್ಯತೆಗಳಿಗೆ ಪರ್ಯಾಯವಾದ ಜ್ಞಾನವಾಗಿ ವಿಜ್ಞಾನ ಸ್ಥಾಪಿತಗೊಳ್ಳ ತೊಡಗಿದ ಘಟ್ಟ ಇದು. ಈ ದೃಷ್ಟಿಯಿಂದ ವಿಜ್ಞಾನ ಕೇಂದ್ರ ರಂಗಕ್ಕೆ ಬಂದ ನಂತರ ಸ್ಥಾಪಿತಗೊಂಡ ನೋಟಕ್ರಮ 'ಆಧುನಿಕತೆ' ಆದರೆ ೧೨ನೇ ಶತಮಾನದ ಚಾರ್ಲ್ಸ್ ದೊರೆಯ ಕಾಲದಲ್ಲೇ ಜನ ತಮ್ಮನ್ನು ತಾವು 'ಮಾಡರ್ನ್' ಎಂದು ಕರೆದುಕೊಂಡ ಉದಾಹರಣೆಗಳಿವೆ. ಅಂದರೆ ಒಂದು ಕಾಲದ ಜನ ಭೂತದೊಂದಿಗೆ ತಮ್ಮ ಸಂಬಂಧವನ್ನು ಪುನರ್‌ವ್ಯಾಖ್ಯಾನಿಸಿಕೊಂಡಾಗ ಅಥವಾ ಭೂತದಿಂದ ತಮ್ಮನ್ನು ತಾವು ಕಡಿದುಕೊಂಡಾಗ ಅಥವಾ ಭೂತದೊಂದಿಗೆ ಕಡಿದು ಹೋದ ಸಂಬಂಧವನ್ನು ಪುನರ್‌ಸ್ಥಾಪಿಸಿಕೊಳ್ಳಲೆತ್ನಿಸಿದಾಗ, ಈ ಮೂರು ಹಂತಗಳಲ್ಲಿ 'ಆಧುನಿಕತೆ' ಎಂಬ ಪರಿಕಲ್ಪನೆ ಇತಿಹಾಸದಲ್ಲಿ ಚಾಲ್ತಿಗೆ ಬಂದಂತಿದೆ. ಆದರೆ ಆಧುನಿಕತೆ ಒಂದು ಬಹುದೊಡ್ಡ ಆಳುವ ಭಾಷೆಯಾಗಿ, ಸಂಕಥನವಾಗಿ, ವ್ಯವಸ್ಥೆಯಾಗಿ, ಧೋರಣೆಯಾಗಿ, ನಿರ್ದೇಶಿಸುವ ಹಾಗೂ ನಿಯಂತ್ರಿಸುವ ಸಾಧನವಾಗಿ ಮಾನವಪ್ರಜ್ಞೆ ಹಾಗೂ ಸಂವೇದನೆಗಳನ್ನು ನಿರ್ಣಾಯಕವಾಗಿ ಬದಲಿಸುವ ನೋಟದ ಕ್ರಮವಾಗಿ ಪುನರುಜ್ಜೀವನದಿಂದೀಚೆಗೆ ಬೆಳೆದು ಬಂತು ಹಾಗೂ ಇಪ್ಪತ್ತನೆಯ ಶತಮಾನದ ಮುಖವನ್ನೆ ಬದಲಿಸಿತು." (ನಟರಾಜ್ ಹುಳಿಯಾರ್, ೨೦೦೪, ಪು-೧೩೪)

ಆಧುನಿಕತೆಯನ್ನು ಖಚಿತವಾಗಿ ವ್ಯಾಖ್ಯಾನಿಸುವುದು ಸುಲಭದ್ದಲ್ಲ. ಮಾನವನ ನಡೆ-ನುಡಿ, ಆಚಾರ-ವಿಚಾರ, ಉಡುಗೆ-ತೊಡುಗೆಗಳಲ್ಲಾದ ಬದಲಾವಣೆ ಆಧುನಿಕತೆಯೇ ಇಲ್ಲವೇ ಆತನ ಬೌದ್ಧಿಕ, ಭೌತಿಕ ಹಾಗೂ ಸಂವೇದನೆಗಳಲ್ಲಿ ಕಂಡುಬರುವ ಬದಲಾವಣೆಯೇ ಆಧುನಿಕತೆಯೇ? ತೀರ ಖಚಿತವಾಗಿ ಹೇಳುವುದು ಅಸಾಧ್ಯ. ಮನುಷ್ಯನ ಪ್ರಜ್ಞೆ ಮತ್ತು ಸಂವೇದನೆಯನ್ನು ಬದಲಿಸುವ ನೋಟವನ್ನು ಆಧುನಿಕತೆ ಎಂದು ಸರಳವಾಗಿ ಗ್ರಹಿಸಬಹುದು. ಆಧುನಿಕತೆ ಒಂದು ಕಾಲದ ಜನಸಮುದಾಯ ತಮ್ಮ ಹಿಂದಿನ ಕಾಲದ ಜನಸಮುದಾಯದ ಜೊತೆ ಹೋಲಿಕೆ ಮಾಡಿಕೊಳ್ಳುವ ಸಂದರ್ಭದಲ್ಲಿ ಆಧುನಿಕತೆ ಸ್ವರೂಪ ಮೈದಾಳುತ್ತದೆ.

ಪ್ರಸ್ತುತ ಅಧ್ಯಾಯದಲ್ಲಿ ಆಧುನಿಕತೆಯ ಪ್ರಭಾವದಿಂದ ಜನಪದರ ಸಂಬಂಧಗಳು ಹೇಗೆ ರೂಪಾಂತರಗೊಂಡಿವೆ? ಸಂಬಂಧಗಳಲ್ಲಾದ ಬದಲಾವಣೆಗಳೇನು? ಆಧುನಿಕತೆಯ ಪ್ರಭಾವದಿಂದ ಹುಟ್ಟಿಕೊಂಡ ಸಂಬಂಧಗಳು ಎಷ್ಟು ಸೂಕ್ತವಾದವು? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರಿಸುವ ಮಾರ್ಗದಲ್ಲಿ ಚರ್ಚಿಸಲಾಗಿದೆ. ಮುಖ್ಯವಾಗಿ ಹಳ್ಳಿ ಮತ್ತು ಪಟ್ಟಣ, ಬಡವ ಮತ್ತು ಶ್ರೀಮಂತ, ಕೆಳವರ್ಗ ಮತ್ತು ಮೇಲ್ವರ್ಗ, ಅನಕ್ಷರಸ್ಥ ಮತ್ತು ಅಕ್ಷರಸ್ಥ, ಯುವಕರು ಮತ್ತು ವೃದ್ಧರು ಹಾಗೂ ಗಂಡು ಮತ್ತು ಹೆಣ್ಣು ಎಂಬ ಆರು ನೆಲೆಗಳಲ್ಲಿ ಜನಪದ ಗೀತೆಗಳಲ್ಲಿ ಅಭಿವ್ಯಕ್ತವಾದ ಸಂಬಂಧಗಳು ಹಾಗೂ ಆಧುನಿಕತೆಯ ಮುಖಾಮುಖಿಯ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

## ೮.೧ ಹಳ್ಳಿ ಮತ್ತು ನಗರ

ಹದಿನೆಂಟನೆಯ ಶತಮಾನದಲ್ಲಿ ಜಗತ್ತಿನ ಅನೇಕ ಕಡೆಗಳಲ್ಲಿ ಕಂಡುಬಂದ ವಿವಿಧ ಕ್ರಾಂತಿಗಳಿಂದಾಗಿ ಆಧುನಿಕತೆಯು ಎಲ್ಲೆಡೆ ಆವರಿಸಿ ಸಂಬಂಧಗಳನ್ನೇ ಕಲುಷಿತಗೊಳಿಸಿತು. ಗರಿಷ್ಠ ಲಾಭ ಪಡೆಯಬೇಕೆಂಬ ಅವಸರದಲ್ಲಿ ಕನಿಷ್ಠ ಮಾನವೀಯತೆಯನ್ನು ಮರೆತು ಜಗತ್ತು ಅಭಿವೃದ್ಧಿಯತ್ತ ಮುಖ ಮಾಡಿತು. ಆಧುನಿಕತೆ ಕೊಟ್ಟ ಭೌತಿಕ ಸುಖಕ್ಕೆ ಸಾಂಪ್ರದಾಯಿಕ ಮೌಲ್ಯಗಳು ಕುಸಿಯತೊಡಗಿದವು. ಸಮಾಜದಲ್ಲಿ ಬದುಕಲು ಬೇಕಾದ ಮಾನವೀಯ ಸಂಬಂಧಗಳು ವಿನಾಶದ ಅಂಚನ್ನು ತಲುಪಿದವು ಹಿಂದಿನ ಕಾಲಘಟ್ಟದಲ್ಲಿ ಹಳ್ಳಿಗಳು ಸ್ವತಂತ್ರ ಘಟಕಗಳಂತೆ ಬದುಕುತ್ತಿದ್ದವು. ತಮ್ಮದೇ ಆದ ದೈವ, ಕುಲ, ಉದ್ಯೋಗಗಳನ್ನು ಹೊಂದಿದ್ದು, ತಮ್ಮೊಳಗೆ ನೆಂಟಸ್ಥನ ಬೆಳೆಸುತ್ತಿದ್ದರು. ಗ್ರಾಮೀಣ ಪರಿಧಿಯೊಳಗೆ ತಮ್ಮ ಬಾಂಧವ್ಯಗಳನ್ನು ಬೆಸೆದು ಸಂಬಂಧಗಳಿಗೆ ಒಂದು ಪ್ರಾದೇಶಿಕ ಮಿತಿಯನ್ನು ಹಾಕಿಕೊಂಡಿದ್ದರು. ಯಾವುದೇ ಸಂಬಂಧಗಳು ಬೆಸೆದುಕೊಳ್ಳುವಲ್ಲಿ ಇಲ್ಲವೇ ಯಾವುದೇ ಕಲಹಗಳಿಗೆ ಇತಿಶ್ರೀ ಹಾಡುವಲ್ಲಿ ಹಳ್ಳಿಯ ಹಿರಿಯರು ಪ್ರಮುಖವಾದ ಪಾತ್ರವಹಿಸುತ್ತಿದ್ದರು. ಅವರ ಮಾರ್ಗದರ್ಶನದಲ್ಲಿ ನೆಮ್ಮದಿಯ ಬದುಕನ್ನು ಸಂತೋಷದಿಂದ ಕಳೆಯುತ್ತಿದ್ದರು. ಆದರೆ ಈಗ ಕಾಲ ಬದಲಾಗಿದೆ. ಆಧುನಿಕತೆಯ ದಟ್ಟ ಪ್ರಭಾವದಿಂದ ಆಗಿನ ಹಳ್ಳಿಗಳು ಪಟ್ಟಣಗಳಾಗಿವೆ. ಇಂದಿನ ಹಳ್ಳಿಗಳು ಈಗಿನ ಪಟ್ಟಣಗಳೊಂದಿಗೆ ಬೆಸೆದುಕೊಂಡಿವೆ.

ಆಧುನಿಕ ನಾಗರಿಕತೆಯ ಪ್ರಭಾವ ಹಾಗೂ ಪಟ್ಟಣಗಳ ಸಂಪರ್ಕದಿಂದ ಮನುಷ್ಯನಿಗೆ ಬಾಹ್ಯ ಜಗತ್ತಿನ ಅರಿವು ಹೆಚ್ಚುತ್ತಿದೆ. ಅಂಗೈಯಲ್ಲಿಯೇ ಜಗತ್ತಿನ ಆಗುಹೋಗುಗಳ ಕುರಿತಾದ ಮಾಹಿತಿ ದೊರಕುತ್ತಿದೆ. ಒಂದೆಡೆ ಎಲ್ಲರೂ ಸೇರಿ ಮನರಂಜನೆ, ಸಂತೋಷವನ್ನು ಹೊಂದುತ್ತಿದ್ದ ಆಚರಣೆಗಳು ದೂರವಾಗಿವೆ. ಉದಾಹರಣೆಗೆ ಹಬ್ಬ-ಜಾತ್ರೆಗಳಲ್ಲಿ ಸಂಬಂಧಿಕರು, ನೆಂಟರು ಕೂಡಿಕೊಂಡು ಸಂತೋಷಪಡುತ್ತಿದ್ದ ಕಾಲವು ಮರೆಯಾಗಿದೆ. ದೂರದಿಂದಲೇ ಶುಭಕೋರುವ ಇಲ್ಲವೇ ಅಂಗೈನಲ್ಲಿಯೇ ದರ್ಶಿಸುವ ಸಂಪ್ರದಾಯದಿಂದ ಸಂಬಂಧಗಳು ಸಂಕುಚಿತಗೊಳ್ಳುತ್ತಿವೆ.

ಮಾನವನು ಸಂಘಜೀವಿ. ಆತನು ಕೂಡಿ ಬಾಳುವ, ಹಂಚಿ ತಿನ್ನುವ ಗುಣದೊಂದಿಗೆ ತನ್ನ ಭಾವನೆಗಳನ್ನು ಇತರರೊಂದಿಗೆ ವಿನಿಮಯ ಮಾಡಿಕೊಳ್ಳುತ್ತಾನೆ. ಹಾಗೆಯೇ ಇತರರ ಸುಖ-ದುಃಖಗಳಲ್ಲಿಯೂ ಪಾಲ್ಗೊಳ್ಳುತ್ತಾನೆ. ಈ ರೀತಿಯ 'ಸಮೂಹ ಬದುಕು' ಹೆಚ್ಚಾಗಿ ಹಳ್ಳಿಗಳಲ್ಲಿ ನೆಲೆಗೊಂಡಿದೆ. ಅಲ್ಲಿ ಯಾವುದೇ ಒಂದು ಮನೆಗೆ ಯಾರು ಬಂದರು? ನೆಂಟರೋ? ಸ್ನೇಹಿತರೋ? ಎಂಬಿತ್ಯಾದಿ ಸಂಗತಿಗಳು ಹಳ್ಳಿಯಲ್ಲಿರುವವರಿಗೆಲ್ಲ ತಿಳಿದಿರುತ್ತದೆ. ಊರಿಗೆ ಹೊಸಬರಾದರೂ ಅವರನ್ನು ಕರೆದು ಮಾತನಾಡಿಸಿ ಪರಿಚಿತರನ್ನಾಗಿ ಮಾಡಿಕೊಳ್ಳುವ ಸ್ವಭಾವ ಹಳ್ಳಿಯ ಜನರಲ್ಲಿದೆ. ಆದರೆ ನಗರಗಳಲ್ಲಿ ಪಕ್ಕದ ಮನೆಯಲ್ಲಿ ಯಾರು ವಾಸಿಸುತ್ತಾರೆಂಬುದು ಗೊತ್ತಿರುವುದಿಲ್ಲ. ಕೆಲವೊಮ್ಮೆ ನಮ್ಮ ಮನೆಗೆ ಯಾರು ಬಂದಿದ್ದಾರೆಂಬ ಸಂಗತಿಯೂ ಸಹಿತ ಗೊತ್ತಾಗದಷ್ಟು ನಾವು ಆಧುನಿಕತೆಯ ಕೈಗೊಂಬೆಗಳಾಗಿದ್ದೇವೆ.

ಬೆಳಗ್ಗೆ ಎದ್ದು ಹೊಲದಲ್ಲಿ ಕೆಲಸ ಮಾಡುವ, ಕುಲಕಸುಬುಗಳಲ್ಲಿ ತೊಡಗುವ ಹಳ್ಳಿಗರು ಸಂಜೆಯಾದೊಡನೆಯೇ ಅರಳಿಕಟ್ಟೆ, ಗುಡಿ-ಗುಂಡಾರಗಳಲ್ಲಿ ಕುಳಿತು ಸುಖ-ದುಃಖಗಳನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ನಂಬಿಕೆ, ವಿಶ್ವಾಸ, ಭರವಸೆಗಳ ಮೂಲಕ ಹೊಸ ಹೊಸ ಸಂಬಂಧಗಳನ್ನು ತಾವಾಗಿಯೇ ಹೆಣೆದುಕೊಳ್ಳುತ್ತಿದ್ದರು. ಇಂತಹ ಸಂಬಂಧಗಳು ಗಟ್ಟಿತನದಿಂದ ಕೂಡಿರುತ್ತಿದ್ದವು. ಹಾಗೆಂದ ಮಾತ್ರಕ್ಕೆ ಅವರಲ್ಲಿ ವಿರಸ, ದ್ವೇಷ, ಅಸೂಯೆಗಳು ಇಲ್ಲವೆಂದಲ್ಲ. ಆದರೆ ಅವುಗಳ ಪ್ರಮಾಣ ಕಡಿಮೆಯಿರುತ್ತಿತ್ತು. ದ್ವೇಷ, ಅಸೂಯೆಗಳಿಂದ ಹುಟ್ಟುವ ಕಲಹಗಳಿಗೆ ಅವರಲ್ಲಿರುವ ಒತ್ತಡಗಳೇ ಕಾರಣವಾಗಿದ್ದವು. ಇಂತಹ ಕಲಹಗಳು ದಾಯಾದಿಗಳಲ್ಲಿ ನೆರೆಹೊರೆಯವರಲ್ಲಿ ಒಂದೇ ಕೋಮಿಗೆ ಸೇರಿದವರಲ್ಲಿ ಜರುಗುತ್ತಿದ್ದವು. ಆಗ ನ್ಯಾಯ-ಅನ್ಯಾಯಗಳ ಪ್ರಶ್ನೆ ಮುಖ್ಯವಾಗಿರದೇ ಉಭಯರನ್ನು ರಾಜೀ ಮಾಡಿ ಮರು ಸಂಬಂಧಗಳನ್ನು ಏರ್ಪಡಿಸುವ ಮೂಲಕ ಹಳ್ಳಿಯ ಮುಖಂಡರು ಜನರಲ್ಲಿ ಶಾಂತಿ-ಸಹಬಾಳ್ವೆಯ ತತ್ವಗಳನ್ನು ಬಿತ್ತುತ್ತಿದ್ದರು.

ಆದರೆ ಪಟ್ಟಣಗಳಲ್ಲಿ ಕೋರ್ಟು-ಕಛೇರಿಗಳೆಂಬ ಆಧುನಿಕ ಸೇವೆಗಳಿಂದಾಗಿ ಮನುಷ್ಯನ ನೆಮ್ಮದಿಯೂ ಹದಗೆಟ್ಟಿದೆ. ಸಣ್ಣ ಸಣ್ಣ ಕಲಹಗಳಿಗೂ ಕಛೇರಿ, ನ್ಯಾಯಾಲಯ, ಆರಕ್ಷಕ ಠಾಣೆಗಳಿಗೆ ಅಲೆಯುವುದನ್ನು ಕಾಣುತ್ತೇವೆ. ಆದರೆ ಇಂತಹ ಸಮಸ್ಯೆಗಳಿಗೆ ಪರಿಹಾರ ಸಿಗುವುದು ಕಷ್ಟ. ಸಿಕ್ಕಾಗ ಆ ಸಂತೋಷವನ್ನು ಹೊಂದುವ ವಯಸ್ಸು ಕಾಲ ನಮ್ಮ ಜೊತೆಗೆ ಇರುವುದಿಲ್ಲ. ಹಳ್ಳಿಯೊಂದು ಜಗತ್ತಾದರೆ ಪಟ್ಟಣಗಳಲ್ಲಿ ಅನೇಕ ಜಗತ್ತುಗಳಿವೆ. ಪ್ರತಿಯೊಂದು ಬಡಾವಣೆಗಳಿಗೂ, ಮನೆಗಳಿಗೂ ಕೆಲವೊಮ್ಮೆ ಪ್ರತಿ ಮನೆಗಳಿಗೂ ತನ್ನದಾದ ಜಗತ್ತನ್ನು ಹೊಂದಿರುತ್ತದೆ. ಇದರಿಂದ ಪಟ್ಟಣಗಳಲ್ಲಿ ಸಮೂಹ ಬದುಕು ಕಟ್ಟಿಕೊಳ್ಳುವಲ್ಲಿ ವಿಫಲವಾಗಿವೆ. ಆಧುನಿಕ ಕಾಲದ ಮನರಂಜನೆಯ ತಾಣಗಳಾದ ಕ್ಲಬ್, ಸಿನಿಮಾ, ಪಾರ್ಟಿ, ಗೆಟ್ ಟುಗೆದರ್, ಡ್ರಿಂಕ್ಸ್-ಡಾನ್ಸ್ ಮುಂತಾದವುಗಳ ನಿಮಿತ್ತ ಒಂದೆಡೆ ಸೇರಿದರೂ ಬಾಂಧವ್ಯದ ತೀವ್ರತೆ ಕಡಿಮೆಯಿರುತ್ತದೆ. ನೂರಾರು ಜನರು ನೆರೆದರೂ ಸಹ ವ್ಯವಹಾರಿಕ

ಮನೋಭಾವದಲ್ಲಿ ಲಾಭವಿರುವ ವ್ಯಕ್ತಿಗಳೊಡನೆ ಮಾತ್ರ ಬೆರೆಯುವುದನ್ನು ಕಾಣುತ್ತೇವೆ. ವ್ಯವಹಾರ ಮುಗಿದ ಬಳಿಕ ಅವರವರ ಸಂಬಂಧವೂ ಮುರಿದು ಬೀಳುತ್ತದೆ. ಇಂತಹ ಅನೇಕ ಉದಾಹರಣೆಗಳು ಮೆಟ್ರೋ ಪಾಲಿಟನ್ ಪಟ್ಟಣಗಳಲ್ಲಿ ಕಂಡುಬರುತ್ತವೆ.

ಹಳ್ಳಿಗಳಲ್ಲಿ ಹಬ್ಬಗಳನ್ನು ಆಚರಿಸುವ ಮೂಲಕ ಸಂಬಂಧಗಳನ್ನು ಬೆಸೆಯುವ ಕಾರ್ಯ ನಡೆಯುತ್ತದೆ. ಜನಪದರ ಸಂಬಂಧಗಳು ಬಿಗಿಗೊಳ್ಳಲು ಹಬ್ಬ-ಜಾತ್ರೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಆಧುನಿಕತೆಯ ಪ್ರಭಾವ ಹಳ್ಳಿಗಳ ಮೇಲಾದರೂ ಕೆಲವು ಮೂಲ ಜನಪದ ಸಂಪ್ರದಾಯಗಳನ್ನು ಆಚರಿಸಿಕೊಂಡು ಬರುವುದು ರೂಢಿಯಲ್ಲಿದೆ. "ಒಂದೊಂದು ಹಬ್ಬಕ್ಕೆ ಒಂದೊಂದು ವಿಶೇಷತೆ. ಅವರವರ ಮನೆಯ ಸಂಪ್ರದಾಯಕ್ಕನುಗುಣವಾಗಿ ಒಂದೊಂದು ಬಗೆಯ ಆಚರಣೆ. ನಿಯಮ, ತಯಾರಿ, ಕೆಲಸ, ವ್ಯಾಪಾರ, ವಿದ್ಯಾಭ್ಯಾಸದ ನಿಮಿತ್ತ ಬೇರೆ ಬೇರೆ ಊರುಗಳಿಗೆ ತೆರಳಿರುವ ಅಕ್ಕ-ತಂಗಿ, ಅಣ್ಣ-ತಮ್ಮರು, ಬಂಧುಗಳು, ಸ್ನೇಹಿತರು ಒಂದೆಡೆ ಸೇರಬೇಕೆನ್ನುವ ಭಾವಕ್ಕೆ ಹಬ್ಬದ ಬೆಸುಗೆ. ಹಬ್ಬ ಅದೊಂದು ಸಂಭ್ರಮ. ಅದಕ್ಕೊಂದು ಆಧ್ಯಾತ್ಮಿಕತೆಯ ಸ್ಪರ್ಶ" (ಪದ್ಮಶ್ರೀ ಮೂರ್ತಿ, ೨೦-೮-೨೦೧೬, ಪು-೧) ಹೀಗೆ ಒಂದೆಡೆ ಆಧ್ಯಾತ್ಮ ಇನ್ನೊಂದೆಡೆ ಸಂಬಂಧಗಳ ಭಾವ ಬೆಸುಗೆಯನ್ನು ಮೂಲ ಉದ್ದೇಶಗಳನ್ನು ಹೊಂದಿದ ಹಬ್ಬಗಳು ಕಾಲಕಾಲಕ್ಕೂ ಸಂಬಂಧಗಳಿಗೆ ಇನ್ನಷ್ಟು ನೀರೆರೆಯುವ ಕಾರ್ಯವನ್ನು ಮಾಡುತ್ತ ಬಂದಿವೆ.

"ಆಧುನಿಕತೆಯ ಚಲನೆಯಲ್ಲಿ ನಗರಗಳ ಬೆಳವಣಿಗೆ ಮುಖ್ಯವಾದುದು. ಕೈಗಾರೀಕರಣ ಹೆಚ್ಚಾದಂತೆ ನಗರಗಳ ಸೃಷ್ಟಿ ಹೆಚ್ಚುತ್ತದೆ. ನಗರ ಎನ್ನುವುದು ತನಗೆ ತಾನೇ ಸೃಷ್ಟಿಯಾಗುವಂಥದ್ದಲ್ಲ. ಒಂದು ಉದ್ದೇಶಕ್ಕೆ ಒಂದು ಪ್ರದೇಶಕ್ಕೆ ಬೇರೆ ಕಡೆಯಿಂದ ವಲಸೆ ಬಂದವರ ಹಲವು ಭಾಷೆ, ಪ್ರದೇಶ, ಸಂಸ್ಕೃತಿಗಳ ಸಮ್ಮಿಶ್ರಣದಂತೆ ನಗರ ರೂಪುಗೊಳ್ಳುತ್ತಿರುತ್ತದೆ. ಹಳ್ಳಿಗಿಂತ ಭಿನ್ನವಾದ ಜೀವನ ಶೈಲಿಯನ್ನು ರೂಢಿಸಿಕೊಳ್ಳುತ್ತದೆ. ಗ್ರಾಮೀಣ ಪ್ರದೇಶದ ರೂಢಿಗತ ಆಚರಣೆ, ಪರಂಪರೆಗಳು ಹೊಸ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತಿರುತ್ತವೆ. ಹಳ್ಳಿಗರು ಉದ್ಯೋಗ ಅರಸಿ ನಗರಗಳಿಗೆ ವಲಸೆ ಬಂದು ನೆಲೆಸುತ್ತಾರೆ. ಹೀಗೆ 'ಹಳ್ಳಿ', 'ನಗರ'ಗಳು ಹಲವು ಭಿನ್ನತೆಗಳ ಕಾರಣಕ್ಕೆ ಬೇರೆಬೇರೆಯಾಗಿ ಕಾಣುತ್ತವೆ" (ಅರುಣ್ ಜೋಳದಕೂಡ್ಲಿಗಿ, ೨೦೧೨, ಪು-೨೩೫)

ಇತ್ತೀಚಿನ ದಿನಗಳಲ್ಲಿ ಹಳ್ಳಿ ಮತ್ತು ಪಟ್ಟಣಗಳೆನ್ನದೆ ಎಲ್ಲೆಡೆಯೂ ಆಧುನಿಕತೆಯ ಪ್ರಭಾವ ಉಂಟಾಗಿದೆ. ಉದಾಹರಣೆಗೆ ಕೊಳಲನು ಊದುತ್ತಾ ದನಕಾಯುತ್ತಿದ್ದ ದನಗಾಹೀ ಮೊಬೈಲ್ ಸಂಗೀತಕ್ಕೆ ಮೊರೆ ಹೋಗಿದ್ದಾನೆ. ಹಂತಿ ಪದಗಳನ್ನು ಹಾಡಿ ಸಂಭ್ರಮಿಸುತ್ತಿದ್ದ ರೈತ ಕಿಸೆಯೊಳಗಿನ ಯಾಂತ್ರಿಕ ಸಂಗೀತಕ್ಕೆ ಮಾರು ಹೋಗಿದ್ದಾನೆ. ಬೀಸುವ, ಕುಟ್ಟುವ ಮೂಲಕ ಪದಗಳನ್ನು ಹಾಡುತ್ತಿದ್ದ ಹೆಣ್ಣುಮಗಳ ಕೈಗೆ ಯಂತ್ರಗಳು ಬಂದು ಮೂಕಳನ್ನಾಗಿಸಿವೆ. ದನಗಾಹಿಯ ಕೊಳಲು, ರೈತನ ಹಂತಿ,

ಹೆಣ್ಣುಮಗಳ ಬೀಸುವ ಕುಟ್ಟುವ ಪದಗಳಲ್ಲಿ ಜೀವನ ಮೌಲ್ಯಗಳಿದ್ದವು. ಸಂಬಂಧಗಳನ್ನು ಬೆಸೆಯುವ ವಾಹಿನಿಗಳಾಗಿದ್ದವು. ಆದರೆ ಆಧುನಿಕತೆಯಲ್ಲಿ ಇವೆಲ್ಲವೂ ಮಾಯವಾಗಿವೆ.

### ೮.೨ ಬಡವ ಮತ್ತು ಶ್ರೀಮಂತ

ಪ್ರಾಚೀನ ಕಾಲದಿಂದಲೂ ಬಡವ ಮತ್ತು ಶ್ರೀಮಂತವೆಂಬ ಬೇಧವು ಸಮಾಜದಲ್ಲಿ ಗುರುತಿಸಲ್ಪಟ್ಟಿದೆ. ಸಾಮಾನ್ಯವಾಗಿ ಹಳ್ಳಿ, ಪಟ್ಟಣಗಳೆಲ್ಲಡೆ ಇದರ ನೆಲೆಯನ್ನು ಕಾಣುತ್ತೇವೆ. ಮನುಷ್ಯ ಬುದ್ಧಿವಂತ ಪ್ರಾಣಿ ತಾನು ಹುಟ್ಟಿದ ನಂತರ ತನ್ನ ಏಳಿಗೆಗಾಗಿ ಬದುಕಿನ ಸಂತೋಷಕ್ಕೆ ತನಗೆ ಬೇಕಾದ ರೀತಿಯಲ್ಲಿ ಸಮಾಜವನ್ನು ಕಟ್ಟಿಕೊಂಡು ಬದುಕನ್ನು ನಡೆಸುತ್ತಾ ಬಂದಿದ್ದಾನೆ. ಉಳ್ಳವರು ತಮ್ಮ ಅನುಕೂಲಕ್ಕಾಗಿ ಇಲ್ಲದವರನ್ನು ಬಳಸಿಕೊಂಡು ಬೆಳೆಯುತ್ತಾ ಬಂದಿದ್ದಾರೆ. ಕುಶಲಕರ್ಮಿಗಳು, ಕೆಲಸಗಾರರು, ಕೂಲಿಯಾಳುಗಳು ಮತ್ತಿತರ ದುಡಿಯುವ ವರ್ಗವನ್ನು ತಮ್ಮ ಹಣದಿಂದ ಕೊಂಡುಕೊಂಡು ಅಡಿಯಾಳಾಗಿ ದುಡಿಸಿಕೊಂಡ ಉದಾಹರಣೆಗಳು ಸಾಕಷ್ಟಿವೆ. ಅಂತೆಯೇ ಶ್ರೀಮಂತರು ಮನೆಯಾಳು, ಹೊಲದಾಳುಗಳನ್ನು ತಮ್ಮ ಮನೆಯ ಮಕ್ಕಳಂತೆ ಸಾಕಿ ಸಲುಹಿದ ಉದಾಹರಣೆಗಳು ಜನಪದರಲ್ಲಿ ಸಾಕಷ್ಟಿವೆ. ಅಂತೆಯೇ ಆಳುಗಳ ಸಹಿತ ಮನೆಯೊಡೆಯನಿಗೆ ನಿಷ್ಠರಾಗಿದ್ದ ಅನೇಕ ಸಂದರ್ಭಗಳನ್ನು ಕಾಣುತ್ತೇವೆ. ಒಂದು ರೀತಿಯ ಅವಿನಾಭಾವ ಸಂಬಂಧಗಳಲ್ಲಿ ಬಡವ ಮತ್ತು ಶ್ರೀಮಂತ ವರ್ಗದವರು ಬಂಧಿಯಾಗಿದ್ದರು. ಆಧುನಿಕತೆಯ ಪ್ರಭಾವದಿಂದ ಆಳು-ಅರಸ ಭಾವಬಂಧಗಳು ಕಳಚುತ್ತಾ ಬಂದಿವೆ.

ಸಂಬಂಧಗಳು ಹೀಗೆಯೇ ಇರಬೇಕೆನ್ನುವ ಸಾಂಪ್ರದಾಯಿಕ ಚೌಕಟ್ಟು ಜನಪದರಲ್ಲಿ ಆಚರಣೆಯಲ್ಲಿದೆ. ಇವುಗಳ ಮೀರುವಿಕೆಯೂ ಅಪರಾಧವೆಂದು ಪರಿಗಣಿತವಾಗುತ್ತಿತ್ತು. ಇಂದಿಗೂ ಅಂತಹ ಆಚರಣೆಗಳಿಗೆ ಅಡಚಣೆಯಾಗಿಲ್ಲ. ಬಡವ ಬಲ್ಲಿದರ ಸ್ಥಾನಮಾನಗಳು ಬದಲಾದರೂ ಸಂಬಂಧಗಳ ಅಸ್ತಿತ್ವವನ್ನು ಉಳಿಸಿಕೊಂಡಿವೆ. "ಶ್ರೀಮಂತವರ್ಗ ತನ್ನ ಅಸ್ತಿತ್ವದ ಉಳಿವಿಗೆ ಧಾರ್ಮಿಕ ಆಚರಣೆಗಳನ್ನು ಸಾಧನವನ್ನಾಗಿ ಬಳಸಿಕೊಂಡಿದೆ. ಇದು ಸಮಾಜದಲ್ಲಿ ಪ್ರತಿಷ್ಠೆ ಮತ್ತು ಗೌರವನ್ನು ಸಂಪಾದಿಸಲು ಶ್ರೀಮಂತವರ್ಗ ಹಿಡಿದಿರುವ ಮಾರ್ಗವೇ ಹೊರತು ಸಾಮಾಜಿಕ ಸಂಬಂಧಗಳನ್ನು ಕ್ರೂಢೀಕೃತಗೊಳಿಸಿಕೊಳ್ಳಲು ಅಲ್ಲ. ಅಂದರೆ ಇದನ್ನು ಶ್ರೀಮಂತವರ್ಗದ ರಾಜಕೀಯ ಎಂದಷ್ಟೇ ಕರೆಯಬಹುದು. (ವಿಜಯಲಕ್ಷ್ಮೀ ಮನಾಪುರ, ೨೦೧೨, ಪು-೪೩೮) ಆಧುನಿಕತೆಯ ಪ್ರಭಾವ ಜನಾಂಗದ ವೇಷ ಬದಲಿಸಿವೆ ಹೊರತು ಮೂಲ ಅಸ್ತಿತ್ವವನ್ನು ಹಾಗೆಯೇ ಪೋಷಿಸಿಕೊಂಡು ಬರುತ್ತಿದೆ.

ಆಧುನಿಕತೆಯ ಕಪಿಮುಷ್ಠಿಗೆ ಸಿಲುಕಿ ಜನಪದರ ಮೌಲ್ಯಗಳಿಗೆ ದಕ್ಕೆಯಾಗಿದೆ ಎಂಬ ಮಾತನ್ನು ಅಲ್ಲಗಳೆಯಲಾಗದು. ವ್ಯಕ್ತಿಗಳ ನಡುವೆ ಇದ್ದಂತಹ ಮಧುರ ಭಾಂದವ್ಯಗಳಿಂದು ಕಡಿದು ವ್ಯವಹಾರಿಕ

ಸಂಬಂಧಗಳಾಗಿ ಮಾರ್ಪಟ್ಟಿವೆ. ಸ್ವಪ್ರತಿಷ್ಠೆ, ಸಣ್ಣತನಗಳಿಂದ ಕೂಡೂಕ್ಕಲುಗಳಿಂದ ಮೂಡಿದ ಸಹಕಾರ, ಸಹಬಾಳ್ವೆಯು ಇಂದು ಕಾಣದಾಗಿದೆ. ಇಡೀ ಸಮಾಜವೇ ಒಂದು ಕುಟುಂಬದಂತೆ ವರ್ತಿಸುತ್ತಿದ್ದ ಭಾವ ಇನ್ನಿಲ್ಲವಾಗಿದೆ. ಉಳ್ಳವರು ಮತ್ತು ಇಲ್ಲದವರ ನಡುವೆ ಅಹಂ, ಪ್ರತಿಷ್ಠೆ, ಸ್ವಾಭಿಮಾನಗಳ ಕಂದಕವು ಏರ್ಪಟ್ಟಿದೆ. ಬದಲಾದ ಇಂದಿನ ಕಾಲಘಟ್ಟದಲ್ಲಿ ಜನಪದರ ಸಂಬಂಧಗಳು ಆದರ್ಶವಾಗಿ ನಿಲ್ಲುತ್ತವೆ. ಬಡವರ್ಗದವರು ಸಮಾಜವು ತಮ್ಮನ್ನು ನಿಷೇಧಿಸಬಹುದೆಂಬ ಕಾರಣಕ್ಕಾಗಿ ಸಾಂಪ್ರದಾಯಿಕ ಚೌಕಟ್ಟನ್ನು ಮುರಿಯದೇ ಗೌರವದಿಂದ ಬದುಕು ನಡೆಸುತ್ತಿದ್ದರು. ಸಾಂಪ್ರದಾಯಿಕ ಎಲ್ಲೆಯನ್ನು ದಾಟುವ ಬಡವರಲ್ಲಿದ್ದ ಭಯ ಕೆಲವೊಂದು ಸಂದರ್ಭದಲ್ಲಿ ಶ್ರೀಮಂತ ವರ್ಗದಲ್ಲಿರುತ್ತಿರಲಿಲ್ಲ. ಆಧುನಿಕ ಶ್ರೀಮಂತ ಕುಟುಂಬಗಳಲ್ಲಿ ಆಚರಣೆಯಲ್ಲಿರುವ ಲಿವ್ ಇನ್ ರಿಲೇಶನ್‌ಷಿಪ್[೧], ಲಿವಿಂಗ್ ಟುಗೆದರ್, ಡೇಟಿಂಗ್ ಹಾಗೂ ಬಾಡಿಗೆ ತಾಯ್ತನ[೨] ಮುಂತಾದವುಗಳು ಬಡವರಲ್ಲಿ ಕಾಣುವುದು ವಿರಳ. ಬಹುಪತ್ನಿತ್ವವು ಕೂಡ ಶ್ರೀಮಂತ ವರ್ಗದಲ್ಲಿಯೇ ಹೆಚ್ಚಾಗಿದ್ದು ಬಡವರ್ಗದಲ್ಲಿ ಆಚರಣೆಯಲ್ಲಿರುವುದು ತೀರ ವಿರಳವಾಗಿದೆ.

### ೮.೩. ಕೆಳವರ್ಗ ಮತ್ತು ಮೇಲ್ವರ್ಗ

ಕುಟುಂಬ, ಸಮಾಜವು ಆಧುನಿಕತೆಯತ್ತ ಮುಖ ಮಾಡಿದರೂ ಇಂದಿಗೂ ತನ್ನ ಅಂತರಾಳದಲ್ಲಿ ತರತಮಭಾವಗಳನ್ನು ಪೋಷಿಸುತ್ತಲೇ ನಡೆದಿದೆ. ಅನಾದಿ ಕಾಲದಿಂದಲೂ ಆಳು-ಅರಸ, ಬಡವ-ಬಲ್ಲಿದರೆಂಬ ಬೇಧಗಳು ಸಮಾಜದಲ್ಲಿ ಆಚರಣೆಯಲ್ಲಿದ್ದವು. ಕೆಳವರ್ಗ ಮತ್ತು ಮೇಲ್ವರ್ಗಗಳೆಂಬ ರಚನೆಗಳಿದ್ದವು. ಭಾರತದಲ್ಲಿ ವಸಾಹತುಶಾಹಿಗಳ ಪ್ರವೇಶದಿಂದಾಗಿ ಇವೆರಡರ ನಡುವಿನ ಮಧ್ಯಮ ವರ್ಗವು ಕೂಡ ಸೃಷ್ಟಿಯಾಯಿತು. ಕೆಳವರ್ಗ, ಮಧ್ಯಮವರ್ಗ ಮತ್ತು ಮೇಲ್ವರ್ಗಗಳ ರಚನೆಗೆ ಜಾತಿ ಹಾಗೂ ಸಂಪತ್ತು ಕಾರಣವಾಗಿದೆ. ಜಾತಿ ಮತ್ತು ಸಂಪತ್ತಿನಿಂದಲೇ ಇವುಗಳನ್ನು ಗುರುತಿಸಲಾಗುತ್ತಿದೆ. ತರತಮ ಭಾವಗಳು ಆಧುನಿಕತೆಯ ಪ್ರಭಾವದಿಂದ ಪಟ್ಟಣಗಳಲ್ಲಿ ಕಾಣಸಿಗುವುದು ವಿರಳ. ಆದರೆ ಹಳ್ಳಿಗಳಲ್ಲಿ ಇಂದಿಗೂ ಜೀವಂತಿಕೆಯನ್ನು ಹೊಂದಿದೆ. ಊರು ಮತ್ತು ಕೇರಿಗಳೂ ಬೇರೆ ಬೇರೆಯಾಗಿಯೇ ಬದುಕನ್ನು ಕಟ್ಟಿಕೊಂಡಿವೆ.

ಕೆಳವರ್ಗದ ಜನರ ಕಸುಬುಗಳೆಂದೇ ಗುರುತಿಸಲ್ಪಡುವ ಚಮ್ಮಾರಿಕೆ, ಕುಂಬಾರಿಕೆ, ಕಮ್ಮಾರಿಕೆ, ನೇಕಾರಿಕೆಗಳೆಂದು ಕೇವಲ ಆಯಾ ವರ್ಗದ ಕಸುಬುಗಳಾಗಿ ಉಳಿದಿಲ್ಲ. ಆಧುನಿಕತೆಯ ಪ್ರಭಾವದಿಂದ ಎಲ್ಲ ವರ್ಗದವರೂ ಸಹಿತ ಕರಕುಶಲ ಕಲೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದು ಉದ್ಯೋಗವನ್ನು ಹೊಂದುತ್ತಿದ್ದಾರೆ. ಇಂದಿಗೂ ಹಳ್ಳಿಗಳಲ್ಲಿ ತಮ್ಮ ಕುಲಕಸುಬುಗಳನ್ನೇ ಮುಂದುವರೆಸುತ್ತಿದ್ದಾರೆ. ಕೆಳವರ್ಗ ಹಾಗೂ ಮೇಲ್ವರ್ಗದವರ ನಡುವಿನ ಸಂಬಂಧಗಳಲ್ಲಿ ಭಿನ್ನತೆಯಿದೆ. ಕೆಳವರ್ಗದ ಜನರು ತಮ್ಮ ಕುಲದ ಎಲ್ಲೆಯನ್ನು ಮೀರದೆ, ಸಂಪ್ರದಾಯದ ಚೌಕಟ್ಟಿನೊಳಗೆ ಬದುಕು ನಡೆಸುತ್ತಿದ್ದರು.

ಜನಪದರಲ್ಲಿ ವಿವಾಹವು ಮಹತ್ವದ ಘಟ್ಟ. ಹೆಣ್ಣು–ಗಂಡಿನ ಮನಸ್ಸು–ದೇಹಗಳು ಒಂದಾಗುವುದಕ್ಕೆ ಸಮಾಜವು ನೀಡುವ ಅಂಗೀಕಾರವೇ ವಿವಾಹ. ಎಲ್ಲ ವರ್ಗದಲ್ಲಿಯೂ ಅವರವರ ಅನುಕೂಲಕ್ಕೆ ತಕ್ಕಂತೆ ವಿವಾಹಗಳು ಜರುಗಿ ಹೊಸ ಬಾಂಧವ್ಯಗಳಿಗೆ ನಾಂದಿಯಾಗುತ್ತಿದ್ದವು. ವಿವಾಹವಿಲ್ಲದೇ ಹೊಂದಿರುವ ಗಂಡು–ಹೆಣ್ಣಿನ ಸಂಬಂಧವನ್ನು ಸಮಾಜವು ಸಂಶಯ ದೃಷ್ಟಿಯಿಂದಲೇ ನೋಡುತ್ತಿತ್ತು. ಅನೈತಿಕತಯ ಹಾದಿಯು ಬಹಳ ಕೆಟ್ಟದೆಂದು ಭಾವಿಸಲಾಗಿತ್ತಿತ್ತು. ನಯವಾಗಿಯೇ ಬಹುಪತ್ನಿತ್ವವನ್ನು ತಿರಸ್ಕರಿಸುತ್ತಿತ್ತು. ಬಹುಪತ್ನಿತ್ವವು ಅಂದಿನ ಕೆಲವು ಮೇಲ್ವರ್ಗದ ಸಮಾಜದಲ್ಲಿ ಆಚರಣೆಯಲ್ಲಿತ್ತು. ಆದರೆ ಆಧುನಿಕ ಸಮಾಜದಲ್ಲಿನ ಕಾನೂನುಗಳಲ್ಲಿ ಬಹುಪತ್ನಿತ್ವಕ್ಕೆ ಅವಕಾಶ ಕಲ್ಪಿಸಿಲ್ಲ. ಇದರಿಂದಾಗಿ ಬಹುಪತಿತ್ವ, ಬಹುಪತ್ನಿತ್ವ ಸಂಬಂಧಗಳೆರಡೂ ಕಾನೂನಿನ ಪ್ರಕಾರ ಊರ್ಜಿತವಲ್ಲ. ಒಂದು ವೇಳೆ ಕಾನೂನನ್ನು ಮೀರಿ ಸಂಬಂಧವನ್ನು ಹೊಂದಿದ್ದರೂ, ಮೊದಲ ಪತ್ನಿಯ ಸಹಮತವಿದ್ದರೆ ಸರಿ. ಬಹುಪತಿತ್ವ, ಬಹುಪತ್ನಿತ್ವವು ಕೆಳವರ್ಗದಲ್ಲಿ ಮೌಢ್ಯತೆ, ಪರಂಪರೆಯ ಹೆಸರಿನಲ್ಲಿ ಆಚರಣೆಯಲ್ಲಿದ್ದರೆ, ಮೇಲ್ವರ್ಗದಲ್ಲಿ ಪ್ರತಿಷ್ಠೆಯ ವಿಷಯವಾಗಿತ್ತು. ಬಹುಪತ್ನಿಯರನ್ನು ಹೊಂದಿರುವುದು ಪೌರುಷ, ಸಿರಿವಂತಿಕೆಯ ಸಂಕೇತವೆಂದೇ ಭಾವಿಸಲಾಗುತ್ತಿತ್ತು. ಆಧುನಿಕ ಕಾಲಘಟ್ಟದಲ್ಲಿ ಪತ್ನಿಯನ್ನು ಹೊಂದಿದ್ದರೂ, ವಿಚ್ಛೇದನ ನೀಡಿ ಮತ್ತೊಬ್ಬಳನ್ನು ವಿವಾಹವಾಗುವ ಅನೇಕ ಘಟನೆಗಳು ನಮ್ಮ ನಡುವೆ ಜರುಗುತ್ತಿವೆ. ಇಂತಹ ವಿಚ್ಛೇದಿತ ಬೇರ್ಪಟ್ಟ ಸಂಬಂಧಗಳನ್ನು ಮೇಲ್ವರ್ಗ ಮತ್ತು ಶ್ರೀಮಂತರಲ್ಲಿ ಹೆಚ್ಚಾಗಿ ಕಾಣುತ್ತೇವೆ. ಇಂತಹ ಸಂಬಂಧಗಳಲ್ಲಿ ಸ್ತ್ರೀ–ಪುರುಷರೆಂಬ ಬೇಧಗಳಿಲ್ಲ. ಪರಸ್ಪರ ಗಂಡ–ಹೆಂಡತಿಯ ವಿಚ್ಛೇದನದ ಬಳಿಕ ಹೊಸ ಸಂಬಂಧಗಳನ್ನು ಹೊಂದಬಹುದಾಗಿದೆ.

ಆಧುನಿಕತೆಯ ಭಾರತೀಯ ಸಂಸ್ಕೃತಿಯ ಮೇಲೆ ಗಾಢವಾದ ಪರಿಣಾಮ ಬೀರಿತು. ಇದರಿಂದ ಮಹಿಳೆಯರನ್ನೊಳಗೊಂಡ ಎಲ್ಲ ಸಮಾಜವು ಆಧುನಿಕತೆಯ ಪ್ರಭಾವಕ್ಕೊಳಗಾದವು. ಈ ಸಂದರ್ಭದಲ್ಲಿ ಆಧುನಿಕತೆಯ ದಾಳಿಯಿಂದ ದೇಶಿಯತೆಯನ್ನು ಉಳಿಸಿಕೊಳ್ಳುವ ಸಲುವಾಗಿ ಜನಪದ ಸಾಹಿತ್ಯ ಸಂಗ್ರಹ ಹಾಗೂ ಅಧ್ಯಯನಗಳು ನಡೆದವು. ಇವುಗಳಲ್ಲಿ ಸಂಸ್ಕೃತಿ ಅಧ್ಯಯನಗಳೇ ಹೆಚ್ಚಿನ ಪ್ರಮಾಣದಲ್ಲಿವೆ. ಈ ಬಗೆಯ ಬದಲಾವಣೆಯನ್ನು ಕುರಿತು "ಆಧುನಿಕತೆ ಕುಟುಂಬವನ್ನು ವಿಚ್ಛಿದ್ರಗೊಳಿಸುತ್ತದೆ ಎಂದು ನಂಬಿದ ಮೇಲ್ಜಾತಿಯ ಮಧ್ಯಮವರ್ಗದ ಸಾಂಪ್ರದಾಯಿಕ ಪುರುಷ ಚಳುವಳಿಗಾರರು ಹೆಣ್ಣನ್ನು ಗೃಹಕೇಂದ್ರಿತವಾಗಿಯೇ ಕಟ್ಟಿಕೊಟ್ಟರು. ಈ ಆಶಯದಿಂದಲೇ ಜನಪದ ಸಾಹಿತ್ಯ ಸಂಗ್ರಹ ಹಾಗೂ ಅಧ್ಯಯನಗಳು ನಡೆದವು" (ಶೈಲಜಾ ಹಿರೇಮಠ, ನವೆಂಬರ್ ೨೦೦೩, ಪು–೨) ಎಂದು ಶೈಲಜಾ ಹಿರೇಮಠ ಅವರು ಅಭಿಪ್ರಾಯಪಡುತ್ತಾರೆ. ಕುಟುಂಬವನ್ನು ಉಳಿಸಿಕೊಳ್ಳುವ ಭರದಲ್ಲಿ ತಳಸಮುದಾಯದ ಮಹಿಳೆಯರನ್ನು ನಿರ್ಲಕ್ಷಕ್ಕೆ ಒಳಗು ಮಾಡಲಾಯಿತು. ಆದರೆ ಬಹುಮಟ್ಟಿಗೆ ಆ ಸಂದರ್ಭದಲ್ಲಿ ಭಾರತೀಯ ಸಂಸ್ಕೃತಿಯೇ ವಿನಾಶದಂಚಿನಲ್ಲಿರುವಾಗ ಸಾಹಿತ್ಯ, ಸಂಗ್ರಹ ಮತ್ತು ಅಧ್ಯಯನಗಳ ಮೂಲಕ ನಮ್ಮ ಸಂಸ್ಕೃತಿಯನ್ನು ಪುನಃ ಕಟ್ಟುವ ಅಗತ್ಯ ಅಂದಿನ

ಪೀಳಿಗೆಗೆ ಇತ್ತು. ಈಗಲೂ ಅದರ ಅವಶ್ಯಕತೆಯನ್ನು ಅಲ್ಲಗಳೆಯಲಾಗದು. 'ಮನೆಯೇ ಮೊದಲ ಪಾಠಶಾಲೆ' ಎಂಬುದನ್ನು ಅರಿತ ಆಗಿನ ಸಂಗ್ರಹಕಾರರು ಮತ್ತೆ 'ಕುಟುಂಬ'ದ ಪರಿಕಲ್ಪನೆಯನ್ನು ಕಟ್ಟಿಕೊಡಲು ನೆರವಾದರು. ಅದು ಮೇಲ್ವರ್ಗವಾಗಿರಬಹುದು ಇಲ್ಲವೇ ತಳವರ್ಗವೇ ಆಗಿರಬಹುದು ಮುಖ್ಯವಾಗಿ ಎರಡೂ ವರ್ಗದಲ್ಲಿರುವ 'ಆದರ್ಶ ಕುಟುಂಬ'ದ ಪರಿಕಲ್ಪನೆಯನ್ನು ಸಮಾಜಕ್ಕೆ ತಿಳಿಸುವುದು ನವೋದಯ ಕಾಲದ ಸಂಗ್ರಹಕಾರರ ಮತ್ತು ಅಧ್ಯಯನಕಾರರ ಮುಖ್ಯ ಆಶಯವಾಗಿತ್ತು.

### ೮.೪ ಅನಕ್ಷರಸ್ಥ ಹಾಗೂ ಅಕ್ಷರಸ್ಥ

ಆದಿವಾಸಿ ನೆಲೆಯಿಂದ ಕೃಷಿ ನೆಲೆಗೆ, ಕೃಷಿಯಿಂದ ಕೈಗಾರಿಕಾ ಪ್ರಗತಿಯೆಡೆಗೆ, ಅನಕ್ಷರಸ್ಥತೆಯಿಂದ ಅಕ್ಷರಸ್ಥನಾಗುವ ಕಡೆಗೆ, ಕೈಗಾರಿಕೆಯಿಂದ ವಿಜ್ಞಾನ-ತಂತ್ರಜ್ಞಾನದೆಡೆಗೆ, ತಂತ್ರಜ್ಞಾನದ ನೆರವಿನಿಂದ ಬಾಹ್ಯಾಕಾಶಕ್ಕೂ ದಾಪುಗಾಲು ಹಾಕಿರುವ ಮಾನವ ಸಮಾಜವು ಅನ್ಯ ಗ್ರಹಗಳ ಮೇಲೆ ಮನೆಕಟ್ಟಲು ತಯಾರಿ ನಡೆಸಿದ್ದಾನೆ. ಆಧುನಿಕತೆಯು ಮಾನವ ಸಮಾಜವನ್ನು ಭೌತಿಕವಾಗಿ, ಲೌಕಿಕವಾಗಿ ಮುನ್ನಡೆಸುತ್ತಿದೆ. ಆದರೆ ಅಕ್ಷರಸ್ಥನಾದರೂ ಬೌದ್ಧಿಕವಾಗಿ ಮನುಕುಲ ಜಡಗಟ್ಟುತ್ತಿದೆ. ಅನಕ್ಷರಸ್ಥ ಮಾನವ ಸಮಾಜದಲ್ಲಿದ್ದ ಬಾಂಧವ್ಯದ ನೆಲೆಗಳಿಂದು ಬತ್ತಿಹೋಗಿವೆ. ಸಂಬಂಧಗಳ ನೆಲೆಗಳು ನಾಶವಾಗುತ್ತಿವೆ. ಮಾನವ ಸಮಾಜವು ಅಕ್ಷರಸ್ಥನಾದಂತೆಲ್ಲ ತನ್ನ ಸುತ್ತಲೂ ವಿಷವರ್ತುಲವನ್ನೇ ನಿರ್ಮಿಸಿಕೊಂಡಿದ್ದಾನೆ. ಅದರಿಂದ ಹೊರಬಂದು ಸಂಬಂಧಗಳ ಮೌಲ್ಯಗಳನ್ನರಿತು ಬದುಕಬೇಕಾದ ಅನಿವಾರ್ಯತೆ ಇಂದಿನ ಸಮಾಜಕ್ಕಿದೆ.

ಈ ಹಿಂದೆ ಚರ್ಚೆಗೊಳಪಟ್ಟ ಹಳ್ಳಿ, ಬಡವ ಹಾಗೂ ಕೆಳವರ್ಗಗಳ ಸಾಲಿಗೆ ಅನಕ್ಷರಸ್ಥನನ್ನು ಸೇರಿಸಬಹುದು. ಏಕೆಂದರೆ ಹಳ್ಳಿಗಳಲ್ಲಿ ಬಡತನ, ಅನಕ್ಷರತೆ, ಕೆಳವರ್ಗದವರು ವಾಸಿಸುವ ಪ್ರಮಾಣ ಹೆಚ್ಚಾಗಿದೆ. ಕೆಳವರ್ಗದವರಲ್ಲಿ ಅನಕ್ಷರತೆ, ಬಡತನವು ಹೆಚ್ಚಿಗಿದೆ. ಹೀಗೆ ಇವು ಒಂದಕ್ಕೊಂದು ಅಂತರಸಂಬಂಧಗಳನ್ನು ಹೊಂದಿವೆ. ಇತ್ತೀಚಿನ ದಿನಗಳಲ್ಲಿ ಅನಕ್ಷರತೆ, ಬಡತನ, ಕೆಳವರ್ಗ ಹಾಗೂ ಹಳ್ಳಿಗಳ ಸುಧಾರಣೆಗೆ ಒತ್ತು ನೀಡಲಾಗುತ್ತಿದೆ. ಆದರೆ ಆಧುನಿಕತೆಯ ಪ್ರಭಾವದಿಂದ ಶಿಕ್ಷಣ ವಂಚಿತರಾದ ಗ್ರಾಮೀಣರು ಮೂಲ ಸಂಸ್ಕೃತಿಯನ್ನು ಮರೆತು ಬದುಕು ಕಟ್ಟಿಕೊಳ್ಳುವ ಧಾವಂತದಲ್ಲಿದ್ದಾರೆ. ಬಡತನದಿಂದ ಪಾರಾಗಲು ಕೂಲಿ ಅರಸಿ ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಅಕ್ಷರಪ್ರಜ್ಞೆಯೇ ಇರದ ಗ್ರಾಮೀಣರು ನಗರದ ಜೀವನಕ್ಕೆ ಮಾರುಹೋಗಿ ಬದುಕಿನ ಸ್ವಾರಸ್ಯವನ್ನು ಕಳೆದುಕೊಳ್ಳುತ್ತಿದ್ದಾರೆ.

ಇಂದಿನ ಕಾಲಘಟ್ಟದಲ್ಲಿ ಅರಿಯದೇ ಮಾಡುವ ಅಪರಾಧಗಳ ಪ್ರಮಾಣಕ್ಕಿಂತ ಅರಿತುಮಾಡುವ ಅಪರಾಧಗಳ ಸಂಖ್ಯೆಯೇ ಜಾಸ್ತಿಯಿದೆ. ಸುದ್ದಿ ಮಾಧ್ಯಮಗಳನ್ನು ಕ್ಷಣ ಅವಲೋಕಿಸಿದಾಗ ನಾನಾ ತರದ ಸುದ್ದಿಗಳು ನಮ್ಮ ಕಣ್ಣುಮುಂದೆಯೇ ಬರುತ್ತವೆ. ಬದುಕಿನ ಸುಂದರ

ಕ್ಷಣಗಳಿಗೆ, ನೆಮ್ಮದಿಯ ಬದುಕಿಗೆ ಕಾರಣವಾಗಬೇಕಿದ್ದ ಮಾನವ ಸಂಬಂಧಗಳು ಇಂದು ಆಸ್ತಿ, ಹಣ, ಅಕ್ರಮಗಳಿಂದ ಅವಸಾನದತ್ತ ಸಾಗಿವೆ. ಇಂದಿನ ಶಿಕ್ಷಣ ಪದ್ಧತಿಯನ್ನು ಅವಲೋಕಿಸಿದಾಗ ಬದುಕಿನ ಮೌಲ್ಯಗಳಿಗೆ ಒತ್ತು ಕೊಡದೇ ವೃತ್ತಿ ಶಿಕ್ಷಣವನ್ನು ಕಲಿಸಿ ಯಂತ್ರ ಮಾನವರನ್ನಾಗಿಸುತ್ತಿದೆ. ವ್ಯಕ್ತಿಗೆ ಶಾಲೆಯ ಪಾಠವು ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ಬದುಕಿನ ಪಾಠ. ಇವೆರಡರ ಸಮ್ಮಿಶ್ರಣದಿಂದ ವ್ಯಕ್ತಿ ಸಂಸ್ಕಾರಗಳನ್ನು ಪಡೆಯಲು ಸಾಧ್ಯ. "'ವಿದ್ಯೆಗೆ ಸಂಸ್ಕಾರ ಬೆರೆತರೆ ಹಾಲಿಗೆ ಜೇನು ಬೆರೆತಂತೆ' ಎಂಬ ಮಾತಿದೆ. ಪದವಿ ಪಡೆದವರೆಲ್ಲ ಸುಶಿಕ್ಷತರಲ್ಲ; ಸುಶಿಕ್ಷಿತರೆಲ್ಲ ಸಂಸ್ಕಾರವಂತರಾಗಿಯೇ ಇರುತ್ತಾರೆ ಎಂದೇನಿಲ್ಲ. ಶಿಕ್ಷಣ ಮತ್ತು ಸಂಸ್ಕಾರ ಭಿನ್ನ ಭಿನ್ನವಾದವು, ಆದರೆ ಒಂದಕ್ಕೊಂದು ಪೂರಕವಾಗಿ ಇರಬೇಕಾದ ಪ್ರಕ್ರಿಯೆಗಳು. ಶಿಕ್ಷಣ ಶಾಲಾ ಕಾಲೇಜುಗಳಿಂದ ಪ್ರಾಪ್ತವಾದರೆ ಸಂಸ್ಕಾರವೂ ಉತ್ತಮ ಕೌಟುಂಬಿಕ ಹಿನ್ನಲೆಯಿಂದಲೂ ಸತ್ಸಂಗದಿಂದಲೂ ದೊರೆಯುತ್ತದೆ" (ಸುರೇಶ ದೇಸಾಯಿ, ೦೪-೦೨-೨೦೧೩, ಪು- ೧)

ಅಕ್ಷರಸ್ಥರ ಸಂಖ್ಯೆಯೂ ಇಂದು ಸಮಾಜದಲ್ಲಿ ಹೆಚ್ಚಿನ ಪ್ರಮಾಣದಲ್ಲಿದೆ. ಹಾಗಿದ್ದರೆ ಜಗತ್ತಿನಲ್ಲಿ ಅಪರಾಧಗಳ ಸಂಖ್ಯೆ ಕ್ಷೀಣಿಸಿ, ಉತ್ತಮ ಬಾಂಧವ್ಯ ಎಲ್ಲರಲ್ಲಿಯೂ ಒಡಮೂಡಬೇಕಾಗಿತ್ತು. ಆದರೆ ಹಾಗಾಗುತ್ತಿಲ್ಲ. "ಕಾಲಚಕ್ರ ಉರುಳಿದಂತೆ ಮಾನವ ಆದಿಮಾನವನಿಂದ ಆಧುನಿಕ ಮಾನವನೆಡೆಗೆ ಬೆಳದು ಬಂದಂತೆ ಮನುಷ್ಯ ಸಂಬಂಧಗಳೂ ಬದಲಾಗತೊಡಗಿದವು. ಸಂಬಂಧಗಳು ಬದಲಾದವು ಎನ್ನವುದಕ್ಕಿಂತಲೂ ಆ ಸಂಬಂಧಗಳ ವ್ಯಾಖ್ಯೆಗಳು ಬದಲಾದವು ಎನ್ನಬಹುದು." (ಲಕ್ಷ್ಮೀಶ ಹೆಗಡೆ, ೦೫-೧೧-೨೦೧೬) ಅನಕ್ಷರಸ್ಥರು ಕಟ್ಟಿದ ಸಂಬಂಧಗಳನ್ನು ಮರೆತು ಅಕ್ಷರಸ್ಥರು ಲಿವ್ ಇನ್, ಡೇಟಿಂಗ್‌ಗಳಂತಹ ಆಧುನಿಕ ಸಂಬಂಧಗಳ ಬಲೆಯೊಳಗೆ ಸಿಲುಕಿಕೊಳ್ಳುತ್ತಿದ್ದಾರೆ. ಯಾವುದೇ ಒಂದು ಗಟ್ಟಿ ಸಂಬಂಧದಲ್ಲಿ ನೆಲೆಗೊಳ್ಳದೇ ಅತಂತ್ರ ಸ್ಥಿತಿಯನ್ನು ತನ್ನ ಸುತ್ತ ನಿರ್ಮಿಸಿಕೊಂಡಿದ್ದಾನೆ. 'ಗಂಡ-ಹೆಂಡಿರ ಜಗಳ ಉಂಡು ಮಲಗುವ ತನಕ' ಎಂಬ ಅನಕ್ಷರಸ್ಥ ಜನಪದರು ಕಟ್ಟಿದ ಗಾದೆಯನ್ನು ಅನಕ್ಷರಸ್ಥರೆಂದು ಹುಸಿ ಮಾಡಿದ್ದಾರೆ. ಗಂಡ-ಹೆಂಡಿರ ನಡುವಿನ ಸಣ್ಣಪುಟ್ಟ, ವಿರಸಗಳು ನ್ಯಾಯಾಲಯದ ಮೆಟ್ಟಿಲೇರಿ ಹಲವು ವರ್ಷಗಳು ಕಳೆದರೂ ವ್ಯಾಜ್ಯ ಬಗೆಹರಿಯದೇ ಬಾಕಿ ಉಳಿದ ಅನೇಕ ಉದಾಹರಣೆಗಳಿವೆ.

ಅನಕ್ಷರಸ್ಥರು ಸಮಾಜಕ್ಕೆ ಹೆದರಿ ಹಿರಿಯರ ಬುದ್ಧಿವಾದ ಮಾರ್ಗದರ್ಶನದಿಂದ ಮನೆಯೊಳಗಿನ, ಮನೆಯ ಹೊರಗಿನ ವಿರಸಗಳಿಗೆ ಅಂತ್ಯ ಕಂಡುಕೊಂಡು ಸಮತೆಯಿಂದ ಬದುಕುತ್ತಿದ್ದಾರೆ. ಆದರೆ ಆಧುನಿಕತೆಯ ಪ್ರವೇಶದಿಂದಾಗಿ ಅಲ್ಪ ಜ್ಞಾನದಿಂದ ಅನಕ್ಷರಸ್ಥರಲ್ಲಿಯೂ ಕೇವಲ ಅವಿವೇಕದ ಅನಾಹುತಗಳೂ ಜರುಗುವ ಅಪಾಯದ ಗಂಟೆಯೊಂದು ಅವರ ಮುಂದಿದೆ.

### ೮.೫ ಯುವಕರು ಹಾಗೂ ವೃದ್ಧರು

ಹಿರಿಯರನ್ನು ಗೌರವಿಸಬೇಕು, ಹಿರಿಯರು ತೋರಿದ ಮಾರ್ಗದಲ್ಲಿ ನಡೆಯಬೇಕು. ಕುಟುಂಬದಲ್ಲಿ ಹಿರಿಯರಿಗೆ ಪ್ರಥಮ ಆದ್ಯತೆ ಕೊಡಬೇಕೆಂಬುದು ಭಾರತೀಯ ಸಂಸ್ಕೃತಿಯು ಹಿರಿಯರಿಗೆ ಕೊಟ್ಟ ಪ್ರಾಮುಖ್ಯತೆಯನ್ನು ತೋರುತ್ತದೆ. ಬಹುಕಾಲದಿಂದಲೂ ಮಾತೃಪ್ರಧಾನ ಇಲ್ಲವೇ ಪಿತೃಪ್ರಧಾನ ಅವಿಭಕ್ತ ಕುಟುಂಬಗಳಿಂದ ಹಿರಿಯರ ನೆರಳಲ್ಲಿ ಕಿರಿಯರು ಬದುಕನ್ನು ರೂಪಿಸಿಕೊಳ್ಳುತ್ತ ಬಂದಿದ್ದಾರೆ. ಜನಪದರು ಹಿರಿಯರನ್ನು ದೈವಸಮಾನರೆಂದೇ ಭಾವಿಸುತ್ತಿದ್ದರು. ಹಿರಿಯರಿಗೆ ಅತ್ಯುನ್ನತ ಗೌರವ ನೀಡುತ್ತಿದ್ದ ಕುರಿತು ಜನಪದ ಗೀತೆಗಳಲ್ಲಿ ವ್ಯಕ್ತವಾಗಿದೆ. ಇಂದಿನ ಸಂದರ್ಭದಲ್ಲಿ ಯುವಕರು ಮತ್ತು ವೃದ್ಧರ ನಡುವಿನ ಬಾಂಧವ್ಯದ ಕುರಿತು ಪರಾಮರ್ಶೆ ಮಾಡಬೇಕಿದೆ. ಯುವಕರು ಬಾಂಧವ್ಯಗಳಿಗೆ ನೀಡುವ ಪ್ರಾಶಸ್ತ್ಯ ಹಾಗೂ ವೃದ್ಧರು ಸಂಬಂಧಗಳಿಗೆ ಕೊಡುವ ಮೌಲ್ಯಗಳ ಕುರಿತು ಚಿಂತಿಸುವ ಅಗತ್ಯವಿದೆ. ಆಧುನಿಕತೆಯ ಪ್ರಭಾವದಿಂದ ಅವಿಭಕ್ತ ಕುಟುಂಬ ಪದ್ಧತಿಯೂ ವಿಭಕ್ತವಾಗಿ ಸಂಬಂಧಗಳು ನಿಧಾನಕ್ಕೆ ತಮ್ಮ ಬೆಲೆಯನ್ನು ಕಳೆದುಕೊಳ್ಳಲಾರಂಭಿಸಿವೆ.

ಇಂದಿನ ಯುವಕರು ಆಧುನಿಕತೆಯ ಪ್ರಭಾವದಿಂದ ಮಾನವೀಯ ಮೌಲ್ಯಗಳನ್ನು ದೂರಕ್ಕೆಸೆದಿದ್ದಾರೆ. ಬದುಕುವ ಶೈಲಿ, ಸಮಾಜ, ದೇಶ, ವಿಜ್ಞಾನ-ತಂತ್ರಜ್ಞಾನ ಎಲ್ಲವೂ ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಸಂಬಂಧಗಳು ಇನ್ನೂ ಗಟ್ಟಿಗೊಳ್ಳಬೇಕಿತ್ತು. ಆದರೆ ಮಾನವ ಸಂಬಂಧಗಳು ವಿನಾಶದಂಚಿನಲ್ಲಿವೆ. "ಇಂದಿನ ಯುವಜನತೆಯೂ ಅಸಂಖ್ಯಾತರಾಗಿ ನಗರ ಸೇರುತ್ತಿದ್ದಾರೆ. ಒಮ್ಮೆ ತಮ್ಮ ಹಳ್ಳಿಯನ್ನು ಬಿಟ್ಟೊಡನೆ ಅಲ್ಲಿನ ಸಂಪರ್ಕದ ಕೊಂಡಿಗಳನ್ನು ಅನೇಕರು ಕಳಚಿಕೊಳ್ಳುತ್ತಾರೆ. ಮನುಷ್ಯ ಸಂಬಂಧಗಳನ್ನು ಕಳೆದುಕೊಂಡರೆ ಮುಂದೆ ಎಂತಹ ಬೆಲೆ ತೆರಬೇಕಾಗಬಹುದೆಂದು ಯುವಜನತೆಗೆ ತಿಳಿದಿಲ್ಲ." (ಲಕ್ಷ್ಮೀಶ ಹೆಗಡೆ, ೦೫-೦೧-೨೦೧೬) ಹೀಗೆ ಯುವಜನರು ಸಂಬಂಧಗಳನ್ನು ತಿರಸ್ಕರಿಸುವುದರೊಂದಿಗೆ ಜೀವನ ಪ್ರೀತಿಯಿಂದ ತಾವು ವಂಚಿತರಾಗುತ್ತಿದ್ದಾರೆ. ಹಿರಿಯ ಜೀವಗಳನ್ನು ನರಳಿಸುತ್ತಿದ್ದಾರೆ. ಇಳಿವಯಸ್ಸು ಎಂದರೆ ಮರಳಿ ಬಾಲ್ಯ ಪಡೆದ ಕಾಲ. ಅರವತ್ತು ದಾಟುತ್ತಿದ್ದಂತೆ ಮನಸ್ಸು ಮಗುವಿನಂತಾಗುತ್ತದೆ. ಆ ಮನಸ್ಸನ್ನು ಅರ್ಥೈಸಿಕೊಂಡು ಯುವ ಜನತೆ ನಡೆಯಬೇಕಾಗುತ್ತದೆ.

ಯುವಜನತೆಗೆ ಹಿರಿಯರ ಮಾರ್ಗದರ್ಶನ ಅತಿಅವಶ್ಯವಾಗಿದೆ. ಹಿರಿಯರ ಮಾರ್ಗದರ್ಶನದಿಂದ ಉತ್ತಮ ಸಂಸ್ಕಾರವನ್ನು ಯುವಪೀಳಿಗೆ ಹೊಂದಬಹುದು. ಗಂಡ, ಹೆಂಡತಿ ಮತ್ತು ಮಗು ಈ ಮೂವರೇ ಒಂದು ಕುಟುಂಬವಾಗಿರುವ ಇಂದಿನ ಕಾಲಘಟ್ಟದಲ್ಲಿ ಯುವಜನತೆಯು ಸಂಸ್ಕಾರವಿಲ್ಲದೆಯೇ ಅಡ್ಡದಾರಿ ಹಿಡಿಯುವ ಸಾಧ್ಯತೆಗಳು ಹೆಚ್ಚಾಗಿವೆ. ಎಲ್ಲವನ್ನು ಹಣದಿಂದಲೇ ಅಳೆಯುವ ಇಂದಿನ ಸಮಾಜದಲ್ಲಿ ಹಣಕ್ಕಿಂತಲೂ ಮಿಗಿಲಾದದ್ದು ಮನುಷ್ಯ ಪ್ರೀತಿ, ಸಂಬಂಧಗಳು ಎಂಬ ಅರಿವೇ ಇಲ್ಲದಂತಾಗಿ ಕೊನೆಗೆ ತಮಗೆ ತಾವೇ ಅಪರಿಚಿತರಾಗಿ ಬದುಕುವ ಪ್ರಸಂಗ

ಯುವಜನತೆಗೆ ಎದುರಾಗಿದೆ. ಹಿರಿಯರು ಹೊಂದಿರುವ ಸಂಬಂಧಗಳನ್ನು ಉಳಿಸಿಕೊಂಡು, ಜೀವನ ಪ್ರೀತಿಯನ್ನು ಹೆಚ್ಚಿಸುವ ಜವಾಬ್ದಾರಿ ಯುವಜನತೆಯ ಮೇಲಿದೆ. ಆಧುನಿಕತೆಯ ಪ್ರಭಾವಕ್ಕೊಳಗಾಗಿರುವ ಇಂದಿನ ಯುಗದಲ್ಲಿ ತಮ್ಮ ಬದುಕು ಯಾಂತ್ರಿಕೃತವಾಗದಂತೆ ತಡೆದು ಮನುಷ್ಯ ಸಂಬಂಧಗಳು ರೂಪುಗೊಳ್ಳುವಲ್ಲಿ ಪ್ರಮುಖ ಪಾತ್ರವಹಿಸಬೇಕು.

ಹಿರಿಯರು ಸಂಬಂಧಗಳಿಗೆ ನೀಡುವ ಗೌರವಾದರಗಳನ್ನು ರೂಢಿಸಿಕೊಳ್ಳುವುದು ಅನಿವಾರ್ಯವಾಗಿದೆ. ಹಿರಿಯರ ಬದ್ಧತೆ, ಬಾಂಧವ್ಯ, ಜೀವನ ಪ್ರೀತಿ, ಜೀವನಾನುಭವ ಎಲ್ಲವೂ ಅನುಕರಣೀಯ. ಜನಪದರು ಹಿರಿಯರಿಗೆ ನೀಡಿದ ಗೌರವ, ಹಿರಿಯರು ಯುವಜನತೆಗೆ ನೀಡಿದ ಜೀವನಾನುಭವಗಳೆಲ್ಲವೂ ಜನಪದ ಗೀತೆಗಳಲ್ಲಿ ಅಭಿವ್ಯಕ್ತವಾಗಿವೆ. ಜನಪದರ ಆದರ್ಶಗಳು ಇಂದಿನ ಪೀಳಿಗೆಗೆ ದಾರಿದೀಪವಾಗಲಿ ಎಂಬ ಆಶಯದೊಂದಿಗೆ ಪ್ರಸ್ತುತ ಅಧ್ಯಯನವು ನಡೆದಿದೆ. ಸಂಬಂಧಗಳೆಂದರೇನು? ಅವು ಹೇಗಿರಬೇಕು? ಆ ಸಂಬಂಧಗಳನ್ನು ಹೇಗೆ ಉಳಿಸಿಕೊಂಡು ಹೋಗಬೇಕು? ಎಂಬುದನ್ನು ಜನಪದರ ಕೌಟುಂಬಿಕ, ವೈವಾಹಿಕ ಹಾಗೂ ಸಾಮಾಜಿಕ ಸಂಬಂಧಗಳಲ್ಲಿ ಅಭಿವ್ಯಕ್ತಗೊಂಡಿವೆ. ಸಂಬಂಧಗಳು ಪ್ರತಿಕ್ಷಣದಲ್ಲಿಯೂ ಜನಪದರ ಜೀವನ ಪ್ರೀತಿಗೆ ಜ್ವಲಂತ ಸಾಕ್ಷಿಯಾಗಿವೆ. 'ಸಂಬಂಧಗಳು' ಮಾನವನನ್ನು ಇತರ ಜೀವಿಗಳಿಗಿಂತ ಭಿನ್ನವಾಗಿ ನಿಲ್ಲುವಂತೆ ಮಾಡಿವೆ. ಕಾಲಚಕ್ರಕ್ಕೆ ಸಿಲುಕಿ ಸಂಬಂಧಗಳು ಅಳಿಯಲು ಅವಕಾಶವನ್ನು ಕಲ್ಪಿಸಬಾರದು.

ಹಿರಿಯರು ಓದು, ಪೂಜೆ, ಕಾರ್ಯಕ್ರಮಗಳಲ್ಲಿ, ನೆಂಟರ-ಸಂಬಂಧಿಗಳ ಭೇಟಿಯಲ್ಲಿ, ಬಂಧುಗಳ ಕುಶಲೋಪರಿಯಲ್ಲಿ ಕಾಲಕಳೆದರೆ ಇಂದಿನ ಯುವಪೀಳಿಗೆ ಎಲ್ಲವನ್ನು ಮರೆತು ಫೇಸ್‌ಬುಕ್, ವಾಟ್ಸ್ಆ್ಯಪ್, ಟ್ವಿಟರ್‌ಗಳ ಮೂಲಕ ಸಂಬಂಧಗಳನ್ನು ಬೆಸೆದುಕೊಳ್ಳುತ್ತಿರುವುದು ಪ್ರಶಂಸನೀಯ ಸಂಗತಿಯಾದರೂ ಇಲ್ಲಿನ ಸಂಬಂಧಗಳಲ್ಲಿ ಗಟ್ಟಿತನವಿರುವುದಿಲ್ಲ. ನಿತ್ಯವೂ ಕಣ್ಮುಂದೆಯೇ ಗೋಚರಿಸುವ ತಾಯಿ, ಮಗ, ತಂದೆ, ಮಗಳು, ಅಣ್ಣ, ತಮ್ಮ, ಅಕ್ಕ, ತಂಗಿ, ಪತಿ, ಪತ್ನಿ, ಅತ್ತೆ, ಮಾವ, ಅತ್ತೆ, ಸೊಸೆ, ಭಾವ, ಮೈದುನ, ನೆಗೆಣ್ಣಿ, ನಾದಿನಿ, ಅತ್ತಿಗೆ, ಓರಗಿತ್ತಿ, ಗೆಳೆಯ, ಗೆಳತಿ ಮುಂತಾದ ಸಂಬಂಧಿಗಳಿಗೆ ವಿವಿಧ ಶುಭಾಶಯಗಳನ್ನು ನೇರವಾಗಿ ಹೇಳಿ ಸಂಭ್ರಮಿಸದೇ ಸಾಮಾಜಿಕ ಜಾಲತಾಣಗಳಿಗೆ ಮೊರೆಹೊಗುವುದು ಎಷ್ಟು ಸೂಕ್ತ. ಆಧುನಿಕತೆಯ ಭರದಲ್ಲಿ ಸಣ್ಣಪುಟ್ಟ ಸಂತೋಷದ ಕ್ಷಣಗಳನ್ನು ಸಹಿತ ಆನಂದಿಸಲು ಸಾಧ್ಯವಾಗುತ್ತಿಲ್ಲ.

ಮೇಲ್ಕಂಡ ನೆಲೆಗಳಲ್ಲಿ ಹಳ್ಳಿ, ಬಡವ, ಕೆಳವರ್ಗ, ಅನಕ್ಷರಸ್ಥ ಹಾಗೂ ವೃದ್ಧರು ಸಂಬಂಧಗಳ ಪೋಷಣೆ, ಜೀವನ ಪ್ರೀತಿ, ಬಾಂಧವ್ಯಗಳ ಬೆಸುಗೆ ಸಾಮಾನ್ಯವಾಗಿ ಕಂಡುಬಂದರೂ ಆಧುನಿಕತೆಯ ಪ್ರಭಾವದಿಂದ ಬದಲಾವಣೆಯ ಹಾದಿಯನ್ನು ಹಿಡಿದಿವೆ. ಪಟ್ಟಣ, ಶ್ರೀಮಂತ, ಮೇಲ್ವರ್ಗ, ಅಕ್ಷರಸ್ಥ ಹಾಗೂ ಯುವಪೀಳಿಗೆಯು ಹಳೆ ಬಾಂಧವ್ಯಗಳನ್ನು ಮರೆತು ಸಂಬಂಧಗಳಿಗೆ ಹೊಸ ವ್ಯಾಖ್ಯಾನವನ್ನು ನೀಡುವತ್ತ ಸಾಗಿವೆ. ಆಧುನಿಕತೆಯ ಪ್ರಭಾವದಿಂದ ಸಮಾಜದಲ್ಲಿ ಲಿವ್ ಇನ್, ಡೇಟಿಂಗ್, ಬಾಡಿಗೆ

ತಾಯ್ತನ, ಫೇಸ್‌ಬುಕ್ ಫ್ರೆಂಡ್‌ಶಿಫ್, ಗರ್ಲ್‌ಫ್ರೆಂಡ್, ಬಾಯ್‌ಫ್ರೆಂಡ್ ಮುಂತಾದ ಸಂಬಂಧಗಳು ಹುಟ್ಟಿಕೊಂಡಿವೆ. ಇಂತಹ ಸಂಬಂಧಗಳು ಜನಪದರಲ್ಲಿಯೂ ರೂಢಿಯಲ್ಲಿದ್ದವು. ಆದರೆ ಅವುಗಳಲ್ಲಿ ಜನಪದರು ತೋರುತ್ತಿದ್ದ ಬದ್ಧತೆ ಶ್ರೇಷ್ಠವಾಗಿತ್ತು. ಆದರೆ ಇಂತಹ ಆಧುನಿಕ ಸಂಬಂಧಗಳಿಗೆ ಗಟ್ಟಿತನ ಇಲ್ಲ. ಇವು ಪಾಶ್ಚಾತ್ಯ ಕೊಳ್ಳುಬಾಕ ಸಂಸ್ಕೃತಿಯ ಪ್ರತಿನಿಧಿಯಾಗಿವೆ. ಇವು ಭಾರತದಂತಹ ಸಂಪ್ರದಾಯನಿಷ್ಠ ರಾಷ್ಟ್ರಗಳಿಗೆ ಎಷ್ಟು ಪೂರಕ ಎಂಬ ಚರ್ಚೆಗಳೂ ಅಲ್ಲಲ್ಲಿ ನಡೆಯುತ್ತಿವೆ.

## ೮.೬ ಗಂಡು ಮತ್ತು ಹೆಣ್ಣು

ಜನಪದರ ಬದುಕಿನ ದಿನಚರಿಯಂತೆ ಸ್ತ್ರೀ-ಪುರುಷರಿಬ್ಬರಿಂದಲೂ ಜನಪದ ಗೀತೆಗಳು ಹಾಡಾಗಿ ಹೊರಹೊಮ್ಮಿವೆ. ಹಂತಿ ಹೊಡೆಯುವ, ಹೊಲ ಉಳುವ ಸಂದರ್ಭದಲ್ಲಿ ಪುರುಷನೂ, ಕುಟ್ಟುವ ಬೀಸುವ, ತೊಟ್ಟಿಲು ತೂಗುವ ಸಂದರ್ಭದಲ್ಲಿ ಸ್ತ್ರೀಯರಿಂದ ಗೀತೆಗಳು ಅಭಿವ್ಯಕ್ತಗೊಂಡಿವೆ. ಜನಪದ ಗೀತೆಗಳಲ್ಲಿ ಸ್ತ್ರೀ ಪ್ರತಿನಿಧಿಕರಣವೇ ಹೆಚ್ಚಾಗಿದ್ದರೂ ಪುರುಷ ಪ್ರಧಾನ ಸಂಸ್ಕೃತಿಯ ಛಾಪು ಒಡಮೂಡಿದೆ. ಪಿತೃಪ್ರಧಾನ ಸಮಾಜದಲ್ಲಿ ಗಂಡು-ಹೆಣ್ಣಿನ ಸಂಬಂಧ ಇಂದಿಗೂ ಹೆಚ್ಚಾಗಿ ಗಂಡಿನ ಪರವಾಗಿಯೇ ಇದೆ ಎಂದರೆ ಅತಿಶಯೋಕ್ತಿಯಾಗುವುದಿಲ್ಲ.

ಗಂಡು-ಹೆಣ್ಣಿನ ಸಂಬಂಧ ಸುಂದರವೂ ಹೌದು. ಸಂಕೀರ್ಣವೂ ಹೌದು. ಪವಿತ್ರ-ಅಪವಿತ್ರ, ಉತ್ಕೃಷ್ಟ-ನಿಕೃಷ್ಟ ಎನ್ನುವಂತಹ ವ್ಯಾಖ್ಯೆಗಳನ್ನೆಲ್ಲ ಮೀರಿದ ಸಂಬಂಧವೇ ಗಂಡು-ಹೆಣ್ಣಿನ ಸಂಬಂಧ. ಸರಸ, ವಿರಸ, ಪ್ರೀತಿ ಪ್ರೇಮ, ಕಾಮ, ಮಮತೆ, ವಾತ್ಸಲ್ಯ, ಕರುಣೆ, ಸ್ನೇಹ, ದ್ವೇಷ, ಅಸೂಯೆ, ಉದಾಸೀನತೆ ಮುಂತಾದವುಗಳ ಮೊತ್ತವೇ ಗಂಡು-ಹೆಣ್ಣಿನ ಸಂಬಂಧದಲ್ಲಿ ಅಡಗಿದೆ. ಪ್ರಕೃತಿಯು ಹೇಗೆ ಸಹಜವಾದುದೋ ಗಂಡು-ಹೆಣ್ಣಿನ ಸಂಬಂಧವೂ ಅಷ್ಟೇ ಸಹಜವಾದುದು. ಜನಪದರ ಜೀವನದಲ್ಲಿಯೂ ಸಹಜತೆಯು ಕಂಡುಬರುತ್ತದೆ. ಸಮಾಜ ಒಪ್ಪಿಕೊಂಡಿರುವ ಗಂಡು-ಹೆಣ್ಣಿನ ಸಂಬಂಧವನ್ನು ಗೌರವಿಸುತ್ತದೆ. ಎಲ್ಲೆ ಮೀರಿದ ಸಂಬಂಧಗಳನ್ನು ನಿಷೇಧಿಸುತ್ತದೆ ಕೆಲವೊಮ್ಮೆ ಶಿಕ್ಷೆಯನ್ನು ಕೂಡ ನೀಡುತ್ತದೆ. ಆಧುನಿಕ ಸಮಾಜದಲ್ಲಿ ಗಂಡು-ಹೆಣ್ಣಿನ ಸಂಬಂಧವು ಹೇಗೆ ರೂಪುಗೊಂಡಿದೆ? ಅದರಿಂದ ಸಾಮಾಜಿಕ ಆರೋಗ್ಯವನ್ನು ಕಾಪಾಡಲಾದೀತೇ? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಬೇಕಿದೆ.

ಗಂಡು-ಹೆಣ್ಣಿನ ಸಂಬಂಧವು ಪ್ರಕೃತಿ ಸಹಜವಾದದು. ಅದು ಗಂಡ-ಹೆಂಡತಿ, ಅಣ್ಣ-ತಂಗಿ, ನಲ್ಲ-ನಲ್ಲೆ, ಅಕ್ಕ-ತಮ್ಮ ಮುಂತಾದ ರೂಪಗಳಲ್ಲಿ ಸಂಬಂಧಗಳು ಹೆಣೆದುಕೊಂಡಿರಬಹುದು. ಗಂಡು-ಹೆಣ್ಣಿನ ನಡುವಿನ ಆಕರ್ಷಣೆಯ ಕುರಿತು ವಿಜ್ಞಾನವು ಇರ್ವರಲ್ಲಿ ಸ್ರವಿಸುವ ಹಾರ್ಮೋನುಗಳೇ ಕಾರಣವೆಂದು ಹೇಳುತ್ತದೆ. ಆದ್ದರಿಂದ ಪರಸ್ಪರರಲ್ಲಿ ದೈಹಿಕ ಹಾಗೂ ಮಾನಸಿಕವಾಗಿ ಹಲವು ಬಯಕೆಗಳು ಮೂಡುತ್ತವೆ. ಅದನ್ನು ಹೊರತುಪಡಿಸಿ ಇರ್ವರ ನಡುವೆ ಉತ್ತಮ ಬಾಂಧವ್ಯ ಬೆಳೆಯಲು

ಸಮಾಜ ಅವಕಾಶ ನೀಡುತ್ತದೆ. ಆದರೆ ವಿಭಿನ್ನ ತರ್ಕ, ನಿಲುವು, ಆದರ್ಶಗಳಿಂದ ಸಂಬಂಧಗಳಲ್ಲಿ ತೊಡಕುಂಟಾಗುತ್ತದೆ. ಇಂತಹ ತೊಡಕುಗಳು ಗಂಡು-ಹೆಣ್ಣಿನ ಸಂಬಂಧಗಳಿಗೆ ಮಾತ್ರ ಸೀಮಿತವಾಗಿಲ್ಲ. ಎಲ್ಲ ಬಗೆಯ ಸಂಬಂಧಗಳಲ್ಲಿ ಸಹಜವಾದುದು.

ಜನಪದರದು ಬಹುತೇಕ ಪಿತೃಪ್ರಧಾನ ಸಮಾಜ. ಇಲ್ಲಿ ಗಂಡು-ಹೆಣ್ಣಿನ ಸಂಬಂಧವು ಪ್ರಾಚೀನ ಕಾಲದಿಂದಲೂ ಬಹುಪಾಲು ಗಂಡಿನ ಪರವಾಗಿಯೇ ಇದೆ. ಭಾರತೀಯ ಸಮಾಜವು ಇದಕ್ಕೆ ಹೊರತಾಗಿಲ್ಲ. ಇಂದಿಗೂ ಕೂಡ ಹೆಚ್ಚಾಗಿ ಗಂಡಿನ ಪರವಾಗಿಯೇ ಇದೆ ಎಂದರೆ ಅತಿಶಯೋಕ್ತಿಯಾಗುವುದಿಲ್ಲ. ಅಶಿಕ್ಷಿತ ಕುಟುಂಬಗಳಷ್ಟೇ ದಾಸ್ಯದ ಆಚರಣೆ ಇಲ್ಲ. ಶಿಕ್ಷಿತ ಕುಟುಂಬಗಳಲ್ಲೂ ಬಾಲ್ಯದಿಂದಲೇ ಹೆಣ್ಣಿಗೆ ತಗ್ಗಿಬಗ್ಗಿ ನಡೆಯಬೇಕೆಂದು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ತಿಳಿಸಿಕೊಡಲಾಗುತ್ತದೆ. ಆದರೆ ಗಂಡಿಗೆ ಸ್ವಾತಂತ್ರ್ಯದ ಪರಿಧಿ ಹೆಚ್ಚಿರುತ್ತದೆ. ಇದರಲ್ಲಿ ತಾಯಿಯ ಪಾತ್ರವೂ ಇರುತ್ತದೆ. ಏಕೆಂದರೆ ಆಕೆಯು ಪಿತೃಪ್ರಧಾನತೆಯ ಭಾಗವಾಗಿಯೇ ತನ್ನ ಜೀವನವನ್ನು ರೂಪಿಸಿಕೊಂಡಿರುತ್ತಾಳೆ. ಅವಳು ಸಹ ಅದರಡಿಯಲ್ಲಿಯೇ ಜೀವನ ಕಟ್ಟಿಕೊಂಡಿರುತ್ತಾಳೆ. ಆಧುನಿಕ ಸಂದರ್ಭದಲ್ಲಿ ಹೆಣ್ಣಿಗೆ ಸ್ವಾತಂತ್ರ್ಯ ನೀಡಲಾಗಿದೆ ಎಂದು ಹೇಳುವುದಷ್ಟೇ ವಾಸ್ತವದಲ್ಲಿ ಪುರುಷ ಧೋರಣೆಗಳು ಅರಿವಿಲ್ಲದಂತೆಯೇ ಹೇರಲ್ಪಟ್ಟಿರುತ್ತವೆ.

ಆಧುನಿಕ ಸಮಾಜದಲ್ಲಿಯೂ ಕೂಡ ಹೆಣ್ಣಿನ ಸ್ಥಾನಮಾನವನ್ನು ಗಂಡಿನ ಅಧಿಕಾರದ ನೆಲೆಯಿಂದಲೇ ಗುರುತಿಸಲಾಗುತ್ತದೆ. ಚಿಕ್ಕಂದಿನಿಂದಲೇ ಗಂಡಿನ ಬೆಳವಣಿಗೆ ಅಧಿಕಾರದ ಆಯಾಮಕ್ಕೆ ಆತುಕೊಂಡಿರುತ್ತದೆ. ಗಂಡಿಗೆ ಆಯ್ಕೆಯ ಸ್ವಾತಂತ್ರ್ಯವೂ ಹೆಚ್ಚಿನ ಮಟ್ಟದಲ್ಲಿರುತ್ತದೆ. ಆದರೆ ಹೆಣ್ಣಿನ ವಿಷಯದಲ್ಲಿ ಓದು, ಊಟ, ಬಟ್ಟೆಯಿಂದ ಹಿಡಿದು ಸಂಗಾತಿಯ ಆಯ್ಕೆಯಲ್ಲಿಯೂ ಹಲವು ಮಹಿಳೆಯರು ಸಾರ್ವಜನಿಕ ಜೀವನದಲ್ಲಿ ಗಂಡಸರ ನೆರಳಿನಲ್ಲೇ ಮುಂದುವರೆದಾಗ ಮಾತ್ರ ಅವರಿಗೆ ಒಂದು ಅಸ್ಮಿತೆ ಸಿಗುತ್ತದೆ ಎಂದರೆ ತಪ್ಪಾಗುವುದಿಲ್ಲ.

ಸಮಾಜದಲ್ಲಿ ಬಳಸುವ ಭಾಷೆ, ರೂಢಿ, ಸಂಪ್ರದಾಯ, ಆಚರಣೆಗಳೆಲ್ಲವೂ ಪುರುಷಪ್ರಧಾನ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಪುರುಷಾಧಿಕಾರದ ನೆಲೆಯಲ್ಲಿಯೇ ಇವು ರೂಪುಗೊಂಡಿವೆ. ಉದಾಹರಣೆಗೆ ಬೈಗುಳಗಳಲ್ಲಿ ಪುರುಷನನ್ನು ನಿಂದಿಸುವ ಪದಗಳು ತೀರ ಕಡಿಮೆ. ಅವೆಲ್ಲವೂ ಸ್ತ್ರೀಯರ ಸುತ್ತವೇ ಕೇಂದ್ರಿಕೃತಗೊಂಡಿವೆ. ಇಂದಿನ ಸಾರ್ವಜನಿಕ ಜೀವನದಲ್ಲಿ ಬಳಕೆಗೊಳ್ಳುವ ಬೈಗುಳಗಳನ್ನು ಪರಾಮರ್ಶಿಸಿ ನೋಡಿದಾಗ ಈ ಸತ್ಯದ ಅರಿವು ನಮಗಾಗುತ್ತದೆ. ಹೆಣ್ಣು ಸ್ವಲ್ಪ ಧೈರ್ಯದಂತೆ, ಚೂಟಿಯಾಗಿದ್ದರೆ ಅವಳಿಗೆ ಗಂಡುಬೀರಿಯ ಪಟ್ಟವನ್ನು ದಯಪಾಲಿಸಲಾಗುತ್ತದೆ. ಆದರೆ ಗಂಡಿನಲ್ಲಿ ಈ ಗುಣಗಳಿದ್ದರೆ ಅದು ಆತನ ಪುರುಷತ್ವದ ಸಂಕೇತವಾಗುತ್ತದೆ. ಹೆಣ್ಣು ಗಂಡಿನೊಂದಿಗೆ ಸಲಿಗೆಯಿಂದ ವರ್ತಿಸಿದರೆ, ಆಕೆಯನ್ನು ಕೀಳಾಗಿ ಕಾಣಲಾಗುತ್ತದೆ. ಅದೇ ಗಂಡಿಗೆ ಈ ವಿಷಯಕ್ಕೆ ಹೆಚ್ಚಿನ ವಿನಾಯಿತಿಯನ್ನು ತೋರಿಸಲಾಗುತ್ತದೆ. ಆಧುನಿಕ ಸಮಾಜದಲ್ಲಿಯೂ ಇಬ್ಬಂದಿತನವು ಮನೆ

ಮಾಡಿದೆ. ಇಂತಹ ಇಬ್ಬಂದಿತನದ ಧೋರಣೆಗಳನ್ನು ಜನಪದ ಗೀತೆಗಳಲ್ಲಿ ಅಭಿವ್ಯಕ್ತಗೊಂಡಿದ್ದನ್ನು ಕಾಣುತ್ತೇವೆ.

ಸಮಾಜದಲ್ಲಿ ಕೌಟುಂಬಿಕ ಸಂಬಂಧಗಳು ಎಷ್ಟು ಮುಖ್ಯವೋ ಅಷ್ಟೇ ಸಾಮಾಜಿಕ ಸಂಬಂಧಗಳನ್ನು ಹೊಂದುವುದು ಅಷ್ಟೇ ಮುಖ್ಯ. ಕುಟುಂಬದೊಳಗೆ ಮತ್ತು ಹೊರಗೆ ಎಂದು ಎರಡು ಜಗತ್ತಿನಲ್ಲಿ ನಾವು ಬದುಕಬೇಕಾಗಿದೆ. ಹೊರಜಗತ್ತಿಗೆ ನಮ್ಮನ್ನು ಬೆಸೆದುಕೊಳ್ಳಲು ನಮಗೆ ಬೇಕಿರಲಿ, ಬೇಡದಿರಲಿ ಸಂಬಂಧಗಳು ಏರ್ಪಡುತ್ತವೆ. ಇಂತಹ ಸಂಬಂಧಗಳು ಕೆಲವೊಮ್ಮೆ ಕೇವಲ ವ್ಯವಹಾರಿಕ ಮಟ್ಟದಲ್ಲಿ ಉಳಿದುಕೊಳ್ಳಬಹುದು. ಕೆಲವು ಸ್ನೇಹವಾಗಿ ಪರಿವರ್ತನೆ ಹೊಂದಬಹುದು. ಇಲ್ಲವೇ ನಮ್ಮನ್ನು ಭಾವನಾತ್ಮಕವಾಗಿಯೇ ಬೆಸೆದು ಬಿಡಬಹುದು. ಭಾವನಾತ್ಮಕ ಹಾಗೂ ಸ್ನೇಹ ಸಂಬಂಧಗಳಲ್ಲಿ ವಿಶೇಷವಾಗಿ ಗಂಡು-ಹೆಣ್ಣಿನ ಸಂಬಂಧ ಸದಾ ಜಾರು ದಾರಿಯಲ್ಲಿ ಸಾಗುವ ಸಾಧ್ಯತೆಯಿದೆ.

ಗಂಡು-ಹೆಣ್ಣಿನ ನಡುವಣ ಅನಿವಾರ್ಯ ಸಾಮೀಪ್ಯ ಸಂಬಂಧ ಬೆಳೆಯುವುದಕ್ಕೆ ಕಾರಣವಾಗುತ್ತದೆ. ಸಾಮೀಪ್ಯದಿಂದ ಸ್ನೇಹ, ಸ್ನೇಹದಿಂದ ಪ್ರೇಮ, ಪ್ರೇಮದಿಂದ ಕಾಮಕ್ಕೆ ಎಳೆದುಕೊಂಡು ಹೋಗುತ್ತದೆ. ಭ್ರಾಮಕ ಆಕರ್ಷಣೆಗಳು ಗಂಡು-ಹೆಣ್ಣನ್ನು ಸುಳಿಗೆ ಸಿಲುಕಿಸಬಹುದು. ಜಾಗರೂಕತೆಯ ನಡೆಯಿಂದ ವಿವಾಹ ಸಂಬಂಧವು ಏರ್ಪಟ್ಟರೆ ಸಮಾಜವು ಗೌರವಿಸುತ್ತದೆ. ಇಲ್ಲದಿದ್ದರೆ ಅನೈತಿಕ ಸಂಬಂಧವೆಂಬ ಆರೋಪ, ಆಕ್ಷೇಪಗಳು ಬರುತ್ತವೆ. ಮಾನಸಿಕವಾಗಿ ಕುಗ್ಗಿ ಬದುಕು ದುರಂತದೆಡೆಗೆ ಸಾಗುತ್ತದೆ. ಗಂಡು-ಹೆಣ್ಣಿನ ಸಂಬಂಧವನ್ನು ಸಂಕುಚಿತ ದೃಷ್ಟಿಕೋನದಿಂದ ಕಾಣುವ ಹಲವರ ನಡುವೆ ನಾವು ಬದುಕು ನಡೆಸುತ್ತಿದ್ದೇವೆ. ಒಂದು ಹೆಣ್ಣು ಗಂಡಿನೊಂದಿಗೆ ನಿಕಟವಾಗಿದ್ದರೆ, ಒಂದು ವಿವಾಹಿತ ಹೆಣ್ಣು ಮತ್ತೊಬ್ಬ ವಿವಾಹಿತ ಗಂಡಿನೊಂದಿಗೆ ನಿಕಟವಾಗಿದ್ದರೆ ಅವರನ್ನು ಕಂಡ ಬಲ್ಲವರ ನಾಲಿಗೆಗಳು ಉದ್ದವಾಗುತ್ತವೆ. ಇಲ್ಲಸಲ್ಲದ ಪುಕಾರುಗಳು ಹಬ್ಬುತ್ತವೆ. ಅಂತೆಕಂತೆಗಳು ಬೆಸೆದು ಕಥೆಗಳಾಗುತ್ತವೆ. ಇತ್ತೀಚಿನ ಸಂದರ್ಭದಲ್ಲಿ ಗಂಡು-ಹೆಣ್ಣಿನ ಸಂಬಂಧಗಳೆಷ್ಟೇ ಗೌಪ್ಯವಾಗಿರಲಿ, ಪವಿತ್ರವಾಗಿರಲಿ ಅವುಗಳಲ್ಲಿ ಮೂಗು ತೂರಿಸುವವರ ಸಂಖ್ಯೆ ಹೆಚ್ಚಾಗಿದೆ. ವಿವಾಹಿತ ಮತ್ತು ಅವಿವಾಹಿತ ಗಂಡು-ಹೆಣ್ಣಿನ ಸಂಬಂಧಗಳನ್ನು ಕೆದಕುವುದು, ಚುಚ್ಚುವುದು, ಅಂತೆಕಂತೆಗಳನ್ನು ಸೃಷ್ಟಿಸುವ ಅನೇಕ ವ್ಯಕ್ತಿಗಳನ್ನು ಗಮನಿಸುತ್ತವೆ. ಈ ನಡೆಯು ಸಮಾಜದ ಆರೋಗ್ಯದ ದೃಷ್ಟಿಯಿಂದ ಕ್ಷೇಮವಲ್ಲ. ಕೆಲವು ಸಂದರ್ಭಗಳಲ್ಲಿ ನೈತಿಕತೆಗಿಂತ ಮಾನವೀಯತೆ, ಮನುಷ್ಯರ ನಡುವಿನ ಸಂಬಂಧಗಳೇ ಮುಖ್ಯವಾಗಬೇಕು. ಆಧುನಿಕ ಸಮಾಜವು ಮನುಷ್ಯ ಸಂಬಂಧಗಳನ್ನು ಮುರಿದು ಬದುಕುತ್ತಿದೆ. ಇಂತಹ ಸಂದರ್ಭದಲ್ಲಿ ಜನಪದರ ಸಂಬಂಧಗಳು ಆದರ್ಶವಾಗಿ ನಿಲ್ಲುತ್ತವೆ.

ಕುಟುಂಬದೊಳಗೆ ನಡೆಯುತ್ತಿದ್ದ ಸಣ್ಣಪುಟ್ಟ ಕಲಹಗಳು ಇಂದು ಇಡಿ ಸಮಾಜವೇ ಚರ್ಚೆಯಲ್ಲಿ ತೊಡಗುವಂತೆ ಬಹಿರಂಗಗೊಳ್ಳುತ್ತಿವೆ. ಗಂಡ-ಹೆಂಡತಿ, ಅಣ್ಣ-ತಂಗಿ, ಅಕ್ಕ-ತಮ್ಮ ತಂದೆ-ಮಗ, ತಾಯಿ-ಮಗ ಮುಂತಾದ ಸಹೋದರತೆ, ಮಮತೆ, ಪ್ರೀತಿ-ವಾತ್ಸಲ್ಯದ ಪ್ರತೀಕವಾದ

ಸಂಬಂಧಗಳು ಹಳಸಿ, ನ್ಯಾಯಾಲಯ, ಕಛೇರಿಗಳನ್ನು ಅಲೆದಾಡುವಂತೆ ಮಾಡಿವೆ. ಕೆಲವು ಅತಿರೇಕವಾಗಿ ಆರಕ್ಷಕ ಠಾಣೆಯ ಬಾಗಿಲನ್ನು ಮೆಟ್ಟಿವೆ. 'ಗಂಡ ಹೆಂಡಿರ ಜಗಳ ಉಂಡು ಮಲಗುವ ತನಕ' ಎಂಬ ಜನಪದ ಗಾದೆಯೇ ಸುಳ್ಳೆಂಬಂತೆ ಗಂಡು-ಹೆಣ್ಣಿನ ನಡುವಿನ ವೈಮನಸ್ಸು ತಾರಕಕ್ಕೇರಿದೆ. ಆಧುನಿಕತೆಯ ಪ್ರವೇಶದಿಂದಾಗಿ ಒಬ್ಬರನ್ನೊಬ್ಬರು ಅರಿತುಕೊಳ್ಳಲು ಸಮಯವೇ ಸಿಗದಿರುವಾಗ ಸಂಬಂಧಗಳು ಹೇಗೆ ಬಿಗಿಗೊಳ್ಳಲು ಸಾಧ್ಯ? ಪರಸ್ಪರ ಮನದ ಮಾತುಗಳನ್ನು ಹಂಚಿಕೊಂಡಾಗ ಮಾತ್ರ ಸಂಬಂಧಗಳಲ್ಲಿ ಗಟ್ಟಿತನ ಬರಲು ಸಾಧ್ಯ.

ಪ್ರಸ್ತುತ ಕಾಲದಲ್ಲಿ ಸಂಬಂಧಗಳನ್ನು ಬಳಸಿಕೊಳ್ಳುತ್ತಿದ್ದಾರೆ. ಸಂಬಂಧಗಳ ಬಳಸಿಕೊಳ್ಳುವಿಕೆ ಜನಪದರಲ್ಲಿಯೂ ಸಾಮಾನ್ಯವಾಗಿತ್ತು. ಪರಸ್ಪರ ಅವಲಂಬನೆ, ಪ್ರೀತಿ, ವಿಶ್ವಾಸ, ನಂಬಿಕೆ ಹಾಗೂ ಪ್ರಾಮಾಣಿಕತೆಯ ಸಲುವಾಗಿ, ಒಳ್ಳೆಯ ಬದುಕಿನ ಹಂಬಲದಿಂದ ಬಳಸಿಕೊಳ್ಳುವಿಕೆ ಇತ್ತು. ಆ ಮೂಲಕ ಉತ್ತಮ ಸಮಾಜವನ್ನು ನಿರ್ಮಾಣ ಮಾಡುವ ಉದ್ದೇಶ ಅವರದಾಗಿತ್ತು. ಆದರೆ ಇಂದಿನ ಕಾಲಘಟ್ಟದಲ್ಲಿ ಪರಸ್ಪರ ಕೆಸರೆರಚಿಕೊಳ್ಳುವ, ಹೊಡೆದಾಡುತ್ತಿರುವ, ಹೊಂದಾಣಿಕೆಯಿರದ ಸಂಬಂಧಗಳನ್ನು ಅವಲೋಕಿಸಿದಾಗ 'ಬಳಸಿಕೊಳ್ಳುವಿಕೆ' ದುಷ್ಟಮಾರ್ಗದಲ್ಲಿ ಬಳಕೆಯಾಗುತ್ತಿದೆ. ಬಳಸಿಕೊಳ್ಳುವಿಕೆಯು ಭಾವನಾತ್ಮಕ ಕೌಟುಂಬಿಕ, ವೈವಾಹಿಕ, ಮಾನವೀಯ ಹಾಗೂ ರಕ್ತಸಂಬಂಧಗಳಲ್ಲಿ ಅಲ್ಪ ಪ್ರಮಾಣದಲ್ಲಿರುತ್ತದೆ. ಆದರೆ ಅದು ತನ್ನ ಎಲ್ಲೆಯನ್ನು ಮೀರಿ ಎಲ್ಲ ಸಂಬಂಧಗಳನ್ನು ಮುರಿದುಬಿಡುವಷ್ಟು ಇಲ್ಲವೇ ತ್ಯಜಿಸಿಬಿಡುವಷ್ಟು ಪ್ರಬಲವಾಗಿ ಬಳಕೆಗೊಳ್ಳುತ್ತಿದೆ.

"ಆಧುನಿಕತೆಯ ಪ್ರವೇಶದಿಂದಾಗಿ ಸ್ಥಳೀಯವಾದ ಸಂಬಂಧಗಳು ಹಾಗೂ ಮತ ಧರ್ಮಾಧಾರಿತ ದೃಷ್ಟಿಕೋನಗಳ ಸ್ಥಾನವನ್ನು ವಿಶ್ವಾಸಾತ್ಮಕ ಬದ್ಧತೆಗಳು ಹಾಗೂ ವಿಶ್ವಾಸಾತ್ಮಕ ಕಾಸ್ಮೋಪಾಲಿಟನ್ ಧೋರಣೆಗಳು ಆಕ್ರಮಿಸುತ್ತವೆ. ಸಾಂಪ್ರದಾಯಿಕ ಜಗತ್ತಿನ ಕೇಂದ್ರ ಸ್ಥಾನದಲ್ಲಿದ್ದ ಪಾವಿತ್ರ್ಯದ ಕಲ್ಪನೆ ಹಾಗೂ ಅವೈಚಾರಿಕ ಧೋರಣೆಗಳ ಸ್ಥಾನವನ್ನು ವಿಜ್ಞಾನ ಪ್ರಯೋಜನತತ್ವ (utility) ಮುಂತಾದ ಮೌಲ್ಯಗಳು ಆಕ್ರಮಿಸಿಕೊಳ್ಳಲೆತ್ನಿಸುತ್ತವೆ. ಸಮೂಹದ ಬದಲಿಗೆ ವ್ಯಕ್ತಿಯ ಸಮಾಜದ ಹಾಗೂ ರಾಜಕೀಯ ಪ್ರಾಥಮಿಕ ಘಟಕವಾಗುತ್ತಾನೆ. ಮನುಷ್ಯರು ಬದುಕುವ ರೀತಿ ಹಾಗೂ ಕೆಲಸ ಮಾಡುವ ಬಗೆಗಳು ಹುಟ್ಟಿನಿಂದ ನಿರ್ಧರಿತವಾಗುವ ಬದಲು ಆಯ್ಕೆಯಿಂದ ನಿರ್ಧರಿತವಾಗುತ್ತವೆ. ವ್ಯಕ್ತಿಯೊಬ್ಬನಿಗೆ ವಿಶಿಷ್ಟ ಅಸ್ತಿತ್ವ ದಕ್ಕುವುದು ಸಾಧನೆಯಿಂದಲೇ ಹೊರತು ಅದು ಹುಟ್ಟಿನಿಂದ ಬಂದದ್ದಾಗಲೀ, ಕೊಡಲ್ಪಟ್ಟದ್ದಾಗಲೀ ಅಲ್ಲ ಎಂದು ಈ ಘಟ್ಟ ಪ್ರತಿನಿಧಿಸುತ್ತದೆ. ವೃದ್ಧಾಪ್ಯಕ್ಕಿಂತ ತಾರುಣ್ಯಕ್ಕೆ, ಹೆಚ್ಚು ಅಧಿಕಾರ ಪಾತ್ರವಾಗುತ್ತದೆ. ಅಧಿಕಾರಶಾಹಿ ಸಂಸ್ಥೆಗಳಲ್ಲಿನ ಉದ್ಯೋಗಗಳು ಜಾತಿ ಮತ್ತು ಕುಟುಂಬಗಳ ಚೌಕಟ್ಟಿನಿಂದ ಬೇರ್ಪಡುತ್ತವೆ. ಪ್ರಭುತ್ವ ಎನ್ನುವುದು ಮಾನವಾತೀತವಾದ ಅಧಿಕಾರ ಕೇಂದ್ರವೆನ್ನುವ ಕಲ್ಪನೆಯ ಬದಲಿಗೆ ಅದು ಬಹುಸಂಖ್ಯಾತರ ಒಪ್ಪಿಗೆ.

ಭಾಗವಹಿಸುವಿಕೆ ಹಾಗೂ ಸಾಂದರ್ಭಿಕ ಜವಾಬ್ದಾರಿಯಿಂದ ಕೂಡಿದ ವ್ಯವಸ್ಥೆಯಾಗಿರುತ್ತದೆ.” (ನಟರಾಜ್ ಹುಳಿಯಾರ್, ೨೦೦೪, ಪು-೧೩೪)

ಆಧುನಿಕತೆಯಲ್ಲಿ ಜಾಗತೀಕರಣ, ನಗರೀಕರಣ, ಪಾಶ್ಚಾತ್ಯೀಕರಣ, ಕೈಗಾರೀಕರಣ, ಗಣಕೀಕರಣ ಮುಂತಾದವುಗಳ ಪ್ರಭಾವ ದಟ್ಟವಾಗಿದೆ. ಇವು ಒಂದಕ್ಕೊಂದು ಪೂರಕವಾಗಿ ಬೆಳೆದುಬಂದಿವೆ. ಜಾಗತೀಕರಣದ ಹೆಸರಲ್ಲಿ ವಿಶ್ವದ ಬಹುತೇಕ ರಾಷ್ಟ್ರಗಳ ನಡುವಿನ ಸಂಬಂಧಗಳು ಸುಧಾರಿಸುತ್ತವೆ. ಜಾಗತಿಕ ಮಟ್ಟದಲ್ಲಿ ತನ್ನ ಸಂಪರ್ಕವನ್ನು ಹೊಂದುವುದರೊಂದಿಗೆ ಇಡೀ ಜಗತ್ತು ಒಂದು ಪುಟ್ಟ ಹಳ್ಳಿಯಂತಾಗುತ್ತದೆ. ವಿಭಿನ್ನ ಜನರ ನಡುವಿನ ಸಂಪರ್ಕದ ಕೊಂಡಿಯಾಗಿ ಆಧುನಿಕತೆಯ ಪ್ರವೇಶವಾಯಿತು. ಜಗತ್ತಿನೆಲ್ಲೆಡೆ ಸೌಹಾರ್ದತೆ ಮತ್ತು ಭ್ರಾತೃತ್ವ ಬೆಸೆಯುತ್ತದೆ ಎಂಬ ಭ್ರಮೆಗೆ ಆಧುನಿಕತೆ ಕಾರಣವಾಗಿತ್ತು. ಒಂದೇ ಕ್ಷಣದಲ್ಲಿ ದೇಶ-ವಿದೇಶಗಳಲ್ಲಿ ಸುತ್ತಿ ಬರುವ ಆಧುನಿಕತೆಯನ್ನು ಮನುಷ್ಯ ಹೊಂದಿದ್ದಾನೆ. ಆಧುನಿಕತೆಯ ಪ್ರಭಾವದಿಂದ ಭೌತಿಕವಾಗಿ ಮನುಷ್ಯ ವಿಶ್ವಮಾನವನಾಗಿದ್ದಾನೆ. ಆದರೆ ಭಾವನಾತ್ಮಕವಾಗಿ, ಬೌದ್ಧಿಕವಾಗಿ ಇನ್ನು ಬೆಸೆಯಲು ಸಾಧ್ಯವಾಗಿಲ್ಲ. ಸಣ್ಣ ಮನಸ್ತಾಪಗಳು ತೀವ್ರ ಸ್ವರೂಪ ಪಡೆದು ಕುಟುಂಬ ವಿಘಟನೆಗೆ ಕಾರಣವಾಗುತ್ತಿವೆ. ಆದರೆ ಜನಪದರ ಸಮಾಜದಲ್ಲಿ ಗಾದೆಗಳನ್ನು ಬಲ್ಲಂತಹ ಹಿರಿಯರು ಕಲಹಗಳನ್ನು ಶಮನಗೊಳಿಸಿ, ಸೌಹಾರ್ದ ಬದುಕಿಗೆ ನಾಂದಿ ಹಾಡುತ್ತಿದ್ದರು. ಕುಟುಂಬ ಹಾಗೂ ಸಮಾಜದಲ್ಲಿ ಹಿರಿಯರಿಗೆ ಗೌರವ ನೀಡುತ್ತಿದ್ದರು. ಹಿರಿಯರ ಮಾತುಗಳನ್ನು ಅನುಸರಿಸಿ ಸ್ವಸ್ಥ ಸಮಾಜದ ನಿರ್ಮಾಣ ಮಾಡುವಲ್ಲಿ ಪ್ರಮುಖವಾಗಿ ಎಲ್ಲರೂ ಕೂಡಿಕೊಂಡು ಶ್ರಮಿಸುತ್ತಿದ್ದರು. ಮತ್ತದೇ ಆದರ್ಶಗಳು ಆಚರಣೆಗೆ ಬಂದಾಗ ಮಾತ್ರ ಗಂಡು-ಹೆಣ್ಣಿನ ಸಂಬಂಧದಿಂದ ಎಲ್ಲ ಸಂಬಂಧಗಳೂ ಪುನಶ್ಚೇತನ ಪಡೆಯಲು ಸಾಧ್ಯ. ಹೆಚ್ಚುತ್ತಿರುವ ಪಾಶ್ಚಾತ್ಯೀಕರಣದ ವ್ಯಾಮೋಹದಿಂದ ಹೆಣ್ಣು-ಗಂಡು ಮಾನವೀಯ ಮೌಲ್ಯಗಳೊಂದಿಗೆ ನಾಡಿನ ಸಂಸ್ಕೃತಿಗೆ ದಕ್ಕೆಯನ್ನು ತರುತ್ತಿದ್ದಾರೆ. ಮಾನವನ ಪ್ರಜ್ಞೆ ಹಾಗೂ ಸಂವೇದನೆಗೆ ಸಂಬಂಧಿಸಿದ ಆಧುನಿಕತೆಯು ಆತನ ಜೀವನ, ಸಂಸ್ಕೃತಿ, ಸಂಬಂಧಗಳಲ್ಲಿ ಬದಲಾವಣೆಯನ್ನು ತರುವಲ್ಲಿ ಪ್ರಭಾವಿಸಿರುತ್ತದೆ. ಜನಪದರ ಸಂಬಂಧಗಳನ್ನು ಅವಲೋಕಿಸುವುದರೊಂದಿಗೆ ಆಧುನಿಕತೆ ಪಾತ್ರವನ್ನು ಚಿಂತನೆಗೆ ತರುವುದು ಇಲ್ಲಿ ಮುಖ್ಯವಾಗಿದೆ. ಯಾವಾಗಲೂ ಹಳೆಯದು ಪರಂಪರೆಯನ್ನಾಗಿ ಇಂದಿನದು ಆಧುನಿಕತೆಯಾಗಿ ಪರಿಗಣಿಸಲ್ಪಡುತ್ತದೆ. ಆದ್ದರಿಂದ ಜನಪದರ ಸಂಬಂಧಗಳನ್ನು ಆಧುನಿಕತೆಯೊಂದಿಗೆ ಮುಖಾಮುಖಿಯಾಗಿಸುವ ಪ್ರಯತ್ನ ಮಾಡಲಾಗಿದೆ.

## ಕೊನೆ ಟಿಪ್ಪಣಿಗಳು

೧. **ಲಿವ್-ಇನ್:** ಇದು ಪಾಶ್ಚಿಮಾತ್ಯರ ಪರಿಕಲ್ಪನೆ. ಇಲ್ಲಿ ಒಟ್ಟಿಗಿರುವ ಗಂಡು-ಹೆಣ್ಣಿನ ನಂಟು ಗಂಡ-ಹೆಂಡತಿಯಂತೆಯೇ ಇರುತ್ತದೆ. ಆದರೆ ಅವರು ದಂಪತಿಗಳಲ್ಲ. ಒಂದೇ ಸೂರಿನಡಿ ಸಹಜೀವನ ನಡೆಸಿದರೂ ಅವರದು ಸಂಸಾರವಲ್ಲ ಎಂಬ ಪರಿಕಲ್ಪನೆಯಡಿ ಬದುಕುವುದೇ 'ಲಿವ್-ಇನ್'. ಒಬ್ಬರ ಮೇಲೆ ಇನ್ನೊಬ್ಬರು ಅಧಿಕಾರ ಚಲಾಯಿಸದೆ ಇರುವುದು. ಹಾಗೂ ಪರಸ್ಪರರು ಹೊರೆಯಾಗದೆ ಇರುವುದು. 'ಲಿವ್-ಇನ್'ನಲ್ಲಿನ ಎದ್ದು ಕಾಣುವ ಗುಣ. ಇಲ್ಲಿ ಹೆಣ್ಣು-ಗಂಡು ಇಬ್ಬರೂ ಸಮಾನರು. ಬಹುತೇಕ ಜೋಡಿಗಳು ಮನಸ್ಸು, ದೇಹದ ಜೊತೆಗೆ ಖರ್ಚುಗಳನ್ನೂ ಹಂಚಿಕೊಳ್ಳುತ್ತಾರೆ. ಸಂಗಾತಿ ಬೇರೆ ಅನ್ನಿಸಿದರೆ ಅಥವಾ ಅವರೊಂದಿಗೆ ಹೊಂದಾಣಿಕೆ ಕಷ್ಟ ಅನ್ನಿಸಿದರೆ ಇಬ್ಬರೂ ಬೇರಾಗುತ್ತಾರೆ. ಆದರೆ 'ಲಿವ್-ಇನ್'ನಲ್ಲಿ ಇದ್ದುಕೊಂಡೇ ಕೆಲವು ವರ್ಷಗಳ ನಂತರ ಮದುವೆ ಆಗುವವರೂ ಇದ್ದಾರೆ. ತರುಣ-ತರುಣಿಯರಲ್ಲಿ ಪುಳಕವನ್ನೂ ಸಂಪ್ರದಾಯವಾದಿ ಹಿರಿಯರಲ್ಲಿ ತುಸು ನಡುಕವನ್ನು ಹುಟ್ಟಿಸುವ ಪದ 'ಲಿವ್-ಇನ್'. ಸ್ವಾತಂತ್ರ್ಯ, ಸ್ವಚ್ಛಂದ, ಸಮಾನತೆ, ಹೀಗೆ 'ಲಿವ್-ಇನ್'ಗೆ ಹಲವು ಅರ್ಥಸಾಧ್ಯತೆಗಳೂ. 'ಬಂಧ ಒಲ್ಲೆ' ಎನ್ನುತ್ತಲೇ ಹೊಸ ಸಂಬಂಧವೊಂದಕ್ಕೆ ಕಾರಣವಾಗುವ ಅನುಬಂಧದಲ್ಲಿ ತಲೆಮಾರುಗಳ ನಡುವಣ ಸಂಘರ್ಷವೂ ಇದ್ದಂತಿದೆ.

'ಲಿವ್-ಇನ್' ಎನ್ನುವುದೀಗ ಪಶ್ಚಿಮ ದೇಶಗಳಿಗಷ್ಟೇ ಮೀಸಲಾದ ಸಂಗತಿಯಾಗಿ ಉಳಿದಿಲ್ಲ. ಬೆಂಗಳೂರು, ಮಂಗಳೂರು-ಮೈಸೂರುಗಳಂಥ ನಗರಗಳಲ್ಲಿ ಬಲು ಅಪರೂಪ ನಂ ಜೋಡಿ ಎನ್ನುವ 'ಲಿವ್-ಇನ್' ಸಂಗಾತಿಗಳು ಕಾಣಸಿಗುತ್ತಾರೆ. ಬಟ್ಟೆ, ಊಟದ ಜೊತೆಯಲ್ಲಿ ಪಾಶ್ಚಾತ್ಯ ಸಂಸ್ಕೃತಿಯನ್ನು ಬದುಕಿನ ಕೆಲವು ಹಂತಗಳಲ್ಲಿ ಅನುಸರಿಸುತ್ತಿರುವ ಭಾರತೀಯರು ಕಳೆದ ಕೆಲವು ವರ್ಷಗಳಿಂದ 'ಲಿವ್-ಇನ್' ಸಂಬಂಧದ ಮೊರೆಹೋಗುತ್ತಿದ್ದಾರೆ. (ಇ. ಎಸ್. ಸುಧೀಂದ್ರಪ್ರಸಾದ್(ಲೇ.), ೨೩-೦೬-೨೦೧೩)

೨. **ಬಾಡಿಗೆ ತಾಯ್ತನ** – ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಬಾಡಿಗೆ ತಾಯ್ತನದ ಕಲ್ಪನೆ ಹುಟ್ಟಿಕೊಂಡಿತು. ಇದಕ್ಕೆ ಮುಖ್ಯ ಕಾರಣ ದತ್ತು ತೆಗೆದುಕೊಳ್ಳಲು ವಿಶ್ವದ ಕೆಲವಡೆ ಮಕ್ಕಳ ಅಭಾವ ಸೃಷ್ಟಿಯಾದದ್ದು. 'ವಿಟ್ರೋ ಫರ್ಟಿಲೈಸೇಷನ್'ನಂತಹ ವೈದ್ಯಕೀಯ ವಿಧಾನಗಳಿಂದ ಹೆಣ್ಣು ಗರ್ಭಧರಿಸಿ ಮಗುವನ್ನು ಪಡೆದ ಮೇಲೆ ಪೋಷಕರಿಗೆ ಹಸ್ತಾಂತರಿಸುವುದೇ ಬಾಡಿಗೆ ತಾಯ್ತನ. ಇದಕ್ಕೆ ಪ್ರತಿಯಾಗಿ ಪೋಷಕರು ಮಗುವಿನ ನಿಜವಾದ ತಾಯಿಗೆ ಮಗುವನ್ನು ಹೆತ್ತದ್ದಕ್ಕೆ ಪೂರ್ವ ಒಪ್ಪಂದದಂತೆ ಹಣ ನೀಡುತ್ತಾರೆ. ಅಮೆರಿಕ ಬಾಡಿಗೆ ತಾಯ್ತನಕ್ಕೆ ಹೆಸರುವಾಸಿಯಾದ ದೇಶ. ಭಾರತ 'ದೇಶಾಂತರ ಬಾಡಿಗೆ ತಾಯ್ತನ'ದ ಪ್ರಮುಖ ನೆಲೆಯಾಗಿ

ಹೊಮ್ಮುತ್ತಿರುವ ದೇಶ. ಅಮೆರಿಕ ಮಾತ್ರವಲ್ಲದೇ ಇಂಗ್ಲೆಂಡ್, ಇಸ್ರೇಲ್, ಆಸ್ಟ್ರೇಲಿಯಾ ಮತ್ತಿತರ ದೇಶಗಳಿಂದ ದಂಪತಿ ಹಾಗೂ ವ್ಯಕ್ತಿಗಳು ಇಲ್ಲಿಗೆ ಬಂದು ಮಕ್ಕಳನ್ನು ಪಡೆಯುತ್ತಿದ್ದಾರೆ. 'ಬಾಡಿಗೆ ತಾಯ್ತನ' ನಮ್ಮ ಹೆಣ್ಣು ಮಕ್ಕಳ ನೈತಿಕ ಪರಿಕಲ್ಪನೆಯಲ್ಲಿನ ಬದಲಾವಣೆಯನ್ನು ಸೂಚಿಸುವಂತೆಯೇ ಬದುಕಿನ ಕಟುವಾಸ್ತವದ ಅನಿವಾರ್ಯತೆಯ ಸಂಕೇತವೂ ಆಗಿದೆ. ಬಾಡಿಗೆ ತಾಯ್ತನವು ಒಂದು 'ಸೃಷ್ಟಿಶೀಲ ಉದ್ಯೋಗ' ಎನ್ನುವುದೇ ಸರಿ. ಈ ಕುರಿತಂತೆ ಬೇರೆ ಬೇರೆ ಧರ್ಮಗಳು ವಿಭಿನ್ನ ನಿಲುವು ತಳೆದಿವೆ. ಇಸ್ಲಾಂನಲ್ಲಿ ಎಲ್ಲ ಬಗೆಯ ಬಾಡಿಗೆ ತಾಯ್ತನ ನಿಷಿದ್ಧ. ಕ್ಯಾಥೋಲಿಕ್ ಚರ್ಚುಗಳಲ್ಲಿ ಬಾಡಿಗೆ ತಾಯ್ತನಕ್ಕೆ ಕೆಲವು ನಿರ್ಬಂಧಗಳೊಂದಿಗೆ ಅನುಮತಿ ನೀಡಲಾಗಿದೆ. ಭಾರತೀಯ ಸಂಪ್ರದಾಯವಾದಿಗಳ ವಿರೋಧವು ಕೂಡ ಇದೆ. ಕೆಲವು ಧರ್ಮಗಳಲ್ಲಿ ವಿವಾಹವಾದ ದಂಪತಿಗಳಿಗೆ ಹುಟ್ಟುವ ಮಗು ಮಾತ್ರ ಧಾರ್ಮಿಕ ಮಾನ್ಯತೆ ಪಡೆಯುತ್ತದೆ. ಉಳಿದದ್ದೆಲ್ಲಾ ಅನೈತಿಕ ಎಂಬ ಅಭಿಪ್ರಾಯವಿದೆ. (ಶರ್ಮಿಳಾ ರುದ್ರಪ್ಪ, ೨೦-೦೧-೨೦೧೩)

ಅಧ್ಯಾಯ – ೮

# ಸಮಾರೋಪ

ಕನ್ನಡದಲ್ಲಿ ಇದುವರೆಗೆ ಸಂಗ್ರಹಿಸಿದ ಜನಪದ ಗೀತೆಗಳಲ್ಲಿನ ಸಂಬಂಧಗಳ ಕುರಿತಾದ ವಿಶ್ಲೇಷಣೆ ಪ್ರಸ್ತುತ ಅಧ್ಯಯನದಲ್ಲಿ ಸಾಧ್ಯವಾಗಿದೆ. ಜನಪದರು ತಮ್ಮ ಬದುಕನ್ನು ಸಾಹಿತ್ಯದಲ್ಲಿ ಕಟ್ಟಿಕೊಟ್ಟಿದ್ದಾರೆ. ಜಗತ್ತಿನ ಇತರ ವ್ಯಕ್ತಿಗಳ ಬದುಕಿನಂತೆಯೇ ಜನಪದರ ಬದುಕಿನಲ್ಲಿ ಸರಸ–ವಿರಸ, ಕಷ್ಟ–ಸುಖಗಳಿವೆ. ಜನಪದ ಗೀತೆಗಳಲ್ಲಿ ಜನಪದರು ಆದರ್ಶ ಹಾಗೂ ವಿಷಮ ಸಂಬಂಧಗಳನ್ನು ನಿರ್ವಹಿಸುವಲ್ಲಿ ಅವರ ಬದುಕಿನ ಪ್ರೀತಿಯನ್ನು ಗುರುತಿಸಲು ಸಾಧ್ಯವಾಗಿದೆ. ಆಧುನಿಕತೆಯ ಪ್ರಭಾವದಿಂದ ಒಂದೆಡೆ ಜನಪದ ಸಾಹಿತ್ಯ ಅವಸಾನದತ್ತ ಸಾಗಿದರೆ, ಇನ್ನೊಂದೆಡೆ ಜನಪದ ಸಂಸ್ಕೃತಿ ಇಲ್ಲವಾಗುತ್ತದೆ. ಜನಪದ ಸಾಹಿತ್ಯ ಒಂದು ನಾಡಿನ ಶಕ್ತಿ. ಜನಪದರ ಬದುಕಿನ ಪ್ರತಿಬಿಂಬ ಜನಪದ ಸಂಸ್ಕೃತಿಯ ವಾಹಿನಿ. ಅದು ಹುಟ್ಟಿದ ಸಮುದಾಯದ ಚಿಂತನೆ, ಅನುಭವ, ಕಲ್ಪನೆ, ಮನೋಧರ್ಮಗಳ ಸಾರ. ನಮ್ಮ ಜನಪದರ ಬದುಕು ದಿನನಿತ್ಯದ ಬದುಕು. ಸಾಹಿತ್ಯದಿಂದಲೇ ಪ್ರಾರಂಭವಾಗಿ ಸಾಹಿತ್ಯದಲ್ಲಿಯೇ ವಿಜೃಂಭಿಸಿ ಸಾಹಿತ್ಯದಲ್ಲಿಯೇ ಮುಕ್ತಾಯಗೊಳ್ಳುತ್ತದೆ. ಅಂತಹ ಜನಪದ ಸಾಹಿತ್ಯದಲ್ಲಿ ಗೀತೆಗಳದ್ದು ಸಿಂಹಪಾಲು. ಪ್ರಸ್ತುತ ಅಧ್ಯಯನದಲ್ಲಿ ಜನಪದ ಗೀತೆಗಳನ್ನು ಕೇಂದ್ರವಾಗಿರಿಸಿಕೊಂಡು ಜನಪದರ ಆದರ್ಶ ಹಾಗೂ ವಿಷಮ ಸಂಬಂಧಗಳನ್ನು ಇಲ್ಲಿ ಗುರುತಿಸಲಾಗಿದೆ.

'ಪ್ರೀತಿ ಮತ್ತು ದ್ವೇಷ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ' ಅಂತೆಯೇ ಜನಪದರ ಸಂಬಂಧಗಳಲ್ಲಿಯೂ ಎರಡೂ ಮುಖಗಳು ಪ್ರಮುಖವಾಗಿ ಕಂಡುಬರುತ್ತವೆ. ಅಧ್ಯಯನದಲ್ಲಿ ಜನಪದರ ವಿಷಮ ಸಂಬಂಧಗಳಿಗೆ ಒತ್ತನ್ನು ಕೊಡದೇ ಆದರ್ಶ ಸಂಬಂಧಗಳ ಪರಂಪರೆಯು ಪ್ರಸ್ತುತ ಸಮಾಜಕ್ಕೆ ಅಗತ್ಯವೆಂದು ಭಾವಿಸಿ ಆದರ್ಶ ಸಂಬಂಧಗಳನ್ನು ಹೆಚ್ಚಾಗಿ ಗುರುತಿಸುವ ಕಾರ್ಯ ಅಧ್ಯಯನದಲ್ಲಿ ನಡೆದಿದೆ. ಬಾಂಧವ್ಯಗಳು ಜನಪದ ಸಂಸ್ಕೃತಿಯ ಅಂಗವಷ್ಟೇ. ಜನಪದ ಸಂಸ್ಕೃತಿಯ ಪರಿಧಿ ಹಿರಿದಾಗಿದೆ. ಕೆಲವು ಸಂಬಂಧಗಳು ಜನಪದರ ಚಿಂತನೆಯಲ್ಲಿ ಹೆಚ್ಚಿನ ವಿಶ್ಲೇಷಣೆಗೆ ಎಡೆಮಾಡಿಕೊಟ್ಟರೂ ಅವುಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಒಂದು ಮಿತಿಯನ್ನು ಹಾಕಿಕೊಂಡು ವಿಶ್ಲೇಷಿಸಲಾಗಿದೆ.

ಪ್ರಸ್ತುತ ಸಂಶೋಧನಾ ಪ್ರಬಂಧದಲ್ಲಿ ಜನಪದರ ಸಂಬಂಧಗಳನ್ನು ಗುರುತಿಸುವುದು ಎಷ್ಟು ಮುಖ್ಯವಾಗಿತ್ತೋ ಅಷ್ಟೇ ಅವರಲ್ಲಿನ ಪ್ರೀತಿ, ವಾತ್ಸಲ್ಯ, ಮಮತೆ, ಸಹೋದರತೆ, ಸಹಕಾರ, ತ್ಯಾಗ, ಕರುಣೆ, ಅನ್ಯೋನ್ಯತೆ, ದಯೆ ಮುಂತಾದ ಮಾನವೀಯ ಮೌಲ್ಯಗಳ ನೆಲೆಗಳನ್ನು ಶೋಧಿಸುವುದು ಅಷ್ಟೇ ಮುಖ್ಯವಾಗಿತ್ತು. ಜೀವನ ಮೌಲ್ಯಗಳ ಹಿನ್ನೆಲೆಯಲ್ಲಿ ಸಂಬಂಧಗಳು ಹೊರಹೊಮ್ಮಿರುವ

ಬಗೆಯನ್ನು ಜನಪದ ಗೀತೆಗಳು ಕಟ್ಟಿಕೊಡುವ ಹಾಗೆ ಬೇರೆ ಯಾವ ಸಾಹಿತ್ಯದಿಂದ ಸಾಧ್ಯವಿಲ್ಲ. ಕೌಟುಂಬಿಕ, ಸಾಮಾಜಿಕ, ವೈವಾಹಿಕ ಸಂಬಂಧಗಳಲ್ಲಿನ ಬಾಂಧವ್ಯಗಳನ್ನು ಜನಪದರು ಬಹುವಾಗಿ ಗೀತೆಗಳಲ್ಲಿ ವರ್ಣಿಸಿದ್ದಾರೆ. ಅಂತಹ ಜನಪದರ ಜೀವನದಲ್ಲಿನ ಸಂಬಂಧಗಳ ಮಧುರತೆಯನ್ನು ಅವಲೋಕಿಸುವ ಸಂಬಂಧಗಳ ಆಂತರ್ಯವನ್ನು ತಿಳಿಯುವ ಬದುಕಿನ ರಸನಿಮಿಷಗಳನ್ನು ಬಿಂಬಿಸುವ ಒಟ್ಟಾರೆಯಾಗಿ ಜನಪದ ಗೀತೆಗಳಲ್ಲಿ ಅಡಗಿರಬಹುದಾದ ಜನಪದರ ಸಂಬಂಧಗಳನ್ನು ಹುಡುಕುವ ಪ್ರಯತ್ನವಿಲ್ಲಿ ನಡೆದಿದೆ.

ಜನಪದರ ಕೌಟುಂಬಿಕ, ವೈವಾಹಿಕ, ಸಾಮಾಜಿಕ ಹಾಗೂ ಮಾನವೇತರ ಸಂಬಂಧಗಳನ್ನು ವಿಶ್ಲೇಷಿಸುವ ಉದ್ದೇಶವನ್ನು ಅಧ್ಯಯನದ ಆರಂಭದಲ್ಲಿ ಹೇಳಿದ ಹಾಗೆ ಈ ಹಂತದಲ್ಲಿ ಈಡೇರಿಸಲಾಗಿದೆ. ಒಟ್ಟಾರೆ ಅಧ್ಯಯನವನ್ನು ಅವಲೋಕಿಸಿದಾಗ ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳ ಬಂಧ ಪ್ರತಿಬಿಂಬಿತಗೊಂಡಿದೆ. ಅಗತ್ಯ-ಅನಗತ್ಯಗಳ ಚಿಂತೆಯಲ್ಲಿ ಮುಳುಗದೇ ಬದುಕನ್ನು ಬಂದ ಹಾಗೆ ಸ್ವೀಕರಿಸುವ ಗುಣ ಜನಪದರಲ್ಲಿದೆ. ಜೀವನ ಮೌಲ್ಯಗಳು ನಿರ್ದೇಶಿತಗೊಳ್ಳುವಲ್ಲಿ ಬಾಂಧವ್ಯ ಹೊರಹೊಮ್ಮಿರುವ ಬಗೆಯನ್ನು ಜನಪದ ಸಾಹಿತ್ಯ ಚಿತ್ರಿಸಿಕೊಡುವ ಹಾಗೆ ಬೇರಾವ ಸಾಹಿತ್ಯವು ಕಟ್ಟಿಕೊಡಲು ಸಾಧ್ಯವಿಲ್ಲ. ಕೌಟುಂಬಿಕ, ವೈವಾಹಿಕ, ಸಾಮಾಜಿಕ ಹಾಗೂ ಮಾನವೇತರ ಸಂಬಂಧಗಳಿಗೆ ಜೀವತುಂಬುವ ಬಾಂಧವ್ಯ ಬಹುವಾಗಿ ಜನಪದ ಗೀತೆಗಳಲ್ಲಿ ವ್ಯಾಪಿಸಿಕೊಂಡಿದೆ. ಬಾಂಧವ್ಯ ಒಂದು ಮಾನವೀಯ ಮೌಲ್ಯವಾಗಿ ಮನುಷ್ಯನನ್ನು ಮುನ್ನಡೆಸಿಕೊಂಡು ಬಂದ ಬಗೆಗೆ ಜನಪದ ಸಾಹಿತ್ಯವೇ ಮೂಲ ಆಧಾರವೆನಿಸುತ್ತದೆ.

ಪ್ರಸ್ತುತ ಅಧ್ಯಯನವು ಜನಪದ ಗೀತೆಗಳ ಒಡಲಾಳದಲ್ಲಿ ಅಡಗಿರಬಹುದಾದ ಸಂಬಂಧಗಳನ್ನು ಅನ್ವೇಷಿಸುವ; ಕೌಟುಂಬಿಕ, ವೈವಾಹಿಕ, ಸಾಮಾಜಿಕ ಹಾಗೂ ಮಾನವೇತರ ಸಂಬಂಧಗಳನ್ನು ಜನಪದ ಗೀತೆಗಳಿಗೆ ಅನುಗುಣವಾಗಿ ವಿಶ್ಲೇಷಿಸುವ ಉದ್ದೇಶ ಹೊಂದಿದೆ. ಈ ಹಿನ್ನೆಲೆಯಲ್ಲಿ ಇದುವರೆಗೂ ಜನಪದ ಸಾಹಿತ್ಯ ನಡೆದು ಬಂದ ದಾರಿಯನ್ನು ಅವಲೋಕಿಸಿ, ಅಲ್ಲದೇ ಜನಪದ ಸಾಹಿತ್ಯದ ಕುರಿತಾದ ಇದುವರೆಗಿನ ಅಧ್ಯಯನಗಳನ್ನು ಗಮನಿಸಿ ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳ ವಿಶ್ಲೇಷಣೆ ಎಂಬ ಪ್ರಸ್ತುತ ಅಧ್ಯಯನವು ಸೂಕ್ತವೆನಿಸಿದ ನಂತರ ಕಾರ್ಯರೂಪಕ್ಕೆ ಬರಲಾಗಿದೆ. ಆದ್ದರಿಂದ ಕನ್ನಡದಲ್ಲಿ ಇದುವರೆಗೂ ಸಂಗ್ರಹಿಸಲ್ಪಟ್ಟ ಜನಪದ ಗೀತೆಗಳ ಸಂಪಾದಿತ ಕೃತಿಗಳನ್ನು ಮೂಲ ಆಕರಗಳನ್ನಾಗಿ ಬಳಸಿಕೊಂಡು ಸಂಬಂಧಗಳ ನೆಲೆಯನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ.

ಜಾಗತೀಕರಣದ ಪ್ರಸ್ತುತ ಸಂದರ್ಭದಲ್ಲಿ ಜನಪದರ ಜೀವನ ಮೌಲ್ಯಗಳು ಕುಸಿಯತೊಡಗಿವೆ. ಜನಪದರ ಬದುಕು, ಕಲೆ, ಸಾಹಿತ್ಯ, ಆಚರಣೆಗಳಿಂದು ಕೇವಲ ಪ್ರದರ್ಶನದ ಸರಕಾಗಿ ಮಾರ್ಪಟ್ಟಿರುವುದು ವಿಪರ್ಯಾಸದ ಸಂಗತಿ. ಈ ನೆಲದ ಆಚರಣೆ, ಸಾಹಿತ್ಯ, ಭಾಷೆ, ಕುಣಿತ, ತಿಂಡಿತಿನಿಸು ಎಲ್ಲವೂ ಕಣ್ಮರೆಯಾಗುತ್ತಿವೆ. ನಮಗೆ ಗೊತ್ತಿಲ್ಲದಂತೆಯೇ ಅನ್ಯಸಂಸ್ಕೃತಿಯ ಪ್ರವೇಶವಾಗಿದೆ. ನಮ್ಮ ನೆಲದ ಸಂಸ್ಕೃತಿ ಪೂರ್ಣ ನಶಿಸುವ ಮುನ್ನ ನಾವು ಎಚ್ಚೆತ್ತುಕೊಳ್ಳಬೇಕಾದ

ಅನಿವಾರ್ಯತೆಯಿದೆ. ಬದುಕಿನ ಸೆಲೆಯಾದ ಜನಪದರ ಸಂಬಂಧಗಳು, ವಿಧಿ-ವಿಧಾನಗಳು, ಆಚರಣೆಗಳು, ಹಬ್ಬ-ಹರಿದಿನಗಳು, ಹಾಡು-ಕುಣಿತಗಳು ಎಲ್ಲವನ್ನು ಪುನರ್ ಅವಲೋಕನ ಮಾಡುವುದು. ಇಂದಿನ ಯುವಪೀಳಿಗೆಗೆ ವರ್ಗಾಯಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ನಮ್ಮ ಸಂಸ್ಕೃತಿಯ ಮೂಲ ನೆಲೆಗಳನ್ನು ನಾವಲ್ಲದೆ ಮತ್ತಾರು ಹುಡುಕಿಕೊಡಬಲ್ಲರು ? ಆದ್ದರಿಂದ ಜನಪದರ ಸಂಬಂಧಗಳ ಮಧುರ ಬಂಧವನ್ನು ಅವಲೋಕಿಸುವ, ವಿಶ್ಲೇಷಿಸುವ ಹಾಗೂ ಭಿನ್ನ ಆಯಾಮಗಳಿಂದ ನೋಡುವ ಕಾರ್ಯ ಪ್ರಸ್ತುತ ಅಧ್ಯಯನದಲ್ಲಿ ನಡೆದಿದೆ.

ಈ ಹಿನ್ನೆಲೆಯಲ್ಲಿ ಜನಪದ ಸಾಹಿತ್ಯವನ್ನು ಸಂಕ್ಷಿಪ್ತವಾಗಿ ಆರಂಭದಲ್ಲಿ ಅಧ್ಯಯನಕ್ಕೆ ಅಡಿಪಾಯವೆಂಬಂತೆ ಅವಲೋಕಿಸಲಾಗಿದೆ. ಆದರೆ ಅದು ಪೂರ್ಣಾವಲೋಕನ ಅಲ್ಲ. ಅಧ್ಯಯನಕ್ಕೆ ಪೂರಕವಾಗಿ ನೀಡಲಾಗಿದೆ. ಜನಪದರ ಸಂಬಂಧಗಳನ್ನು ಜನಪದ ಗೀತೆಗಳ ಚೌಕಟ್ಟಿನಲ್ಲಿ ವಿಶ್ಲೇಷಿಸುವುದು ಅಧ್ಯಯನದ ಮುಖ್ಯ ಉದ್ದೇಶ. ಆದುದರಿಂದ ಸಂಬಂಧದ ಅರ್ಥ, ಸ್ವರೂಪ, ವರ್ಗೀಕರಣ ಹಾಗೂ ಸಂಬಂಧವಾಚಕಗಳ ಕುರಿತಾಗಿ ಸಮಗ್ರವಾದ ನೋಟ ಹರಿಸಲಾಗಿದೆ. ಇಲ್ಲಿ ಸಂಬಂಧವಾಚಕಗಳು ಸಂಬಂಧ ಮತ್ತು ಬಾಂಧವ್ಯಗಳ ನಡುವಿನ ವ್ಯತ್ಯಾಸವನ್ನು ಸ್ಪಷ್ಟವಾಗಿ ಮನದಟ್ಟು ಮಾಡಿಕೊಡುತ್ತವೆ. ಸಂಬಂಧವಾಚಕಗಳೇ ವ್ಯಕ್ತಿಯ ಸಂಬಂಧಗಳು ಕೌಟುಂಬಿಕವೋ, ವೈವಾಹಿಕವೋ, ಸಾಮಾಜಿಕವೋ ಎಂಬುದನ್ನು ತಿಳಿಸಿಕೊಡುತ್ತವೆ. ಕೌಟುಂಬಿಕ, ಸಾಮಾಜಿಕವಾಗಿ ಮನುಷ್ಯ ಸಂಬಂಧಗಳನ್ನು ಕಟ್ಟಿಕೊಡುವ ವಿವಿಧ ಬಗೆಯ ಸಂಬಂಧವಾಚಕಗಳು ಜನಪದ ಗೀತೆಗಳಲ್ಲಿ ಹೇರಳವಾಗಿ ಬಳಕೆಗೊಂಡಿವೆ.

ಹುಟ್ಟಿನಿಂದಲೇ ಮನುಷ್ಯನ ಸಂಬಂಧ ನಿರ್ಧಾರಗೊಳ್ಳುತ್ತದೆ. ಆದರೆ ಅವನ ಹುಟ್ಟಿನಾಚೆಗಿನ ಜೀವನ ವಿಕಾಸಗೊಳ್ಳುವುದು ಸಂಬಂಧದಿಂದ. ಕುಟುಂಬ, ವಿವಾಹ, ಸಮಾಜ, ಸಂಸ್ಕೃತಿಗಳು ಉಚ್ಛ್ರಾಯಗೊಳ್ಳುವಲ್ಲಿ ಸಂಬಂಧದ ಪಾತ್ರ ಮಹತ್ವದ್ದು. ಈ ಪರಿಕಲ್ಪನೆಯ ಬೆನ್ನುಹತ್ತಿ ಕನ್ನಡ ಜನಪದ ಗೀತೆಗಳನ್ನು ಪರಾಮರ್ಶಿಸಿದಂತೆಲ್ಲ ಕೌಟುಂಬಿಕ, ವೈವಾಹಿಕ, ಸಾಮಾಜಿಕ ಹಾಗೂ ಮಾನವೇತರ ಸಂಬಂಧದ ವಿಭಿನ್ನ ಮುಖಗಳು ಬೆಳಕಿಗೆ ಬಂದವು. ಜನಪದರ ಕೌಟುಂಬಿಕ ಸಂಬಂಧಗಳು ಸಂದರ್ಭಾನುಸಾರ, ಧನಾತ್ಮಕ, ಋಣಾತ್ಮಕ ಲಕ್ಷಣಗಳಿಂದ ಹೊರಹೊಮ್ಮಿದರೂ ರಕ್ತಸಂಬಂಧಗಳ ನಡುವೆ ಹೊಂದಾಣಿಕೆ ಸಹಬಾಳ್ವೆ, ಸಂಘಟನಾತ್ಮಕ ನಿಲವು ಮೌಲ್ಯ ಕಂಡುಕೊಂಡಿದ್ದವು. ಪ್ರೀತಿ ತುಂಬಿದ ಕುಟುಂಬದಲ್ಲಿ ವ್ಯಕ್ತಿ ಪ್ರತಿಷ್ಠೆಗಿಂತ ಕುಟುಂಬ ಗೌರವ ಮುಖ್ಯವಾಗಿತ್ತು. ಒಗ್ಗಟ್ಟು ಕುಟುಂಬದ ಶಕ್ತಿಯಾಗಿತ್ತು. ಸಂಬಂಧಗಳು ಹೀಗೆಯೇ ಇರಬೇಕೆನ್ನುವ ಸಾಂಪ್ರದಾಯಿಕ ಚೌಕಟ್ಟು ಅಂದಿನ ಕಾಲಮಾನದ್ದಾಗಿತ್ತು. ಕೌಟುಂಬಿಕ ಸಂಬಂಧಗಳಲ್ಲಿ ಹಿರಿಯರ ಕಟ್ಟುಪಾಡು, ಶ್ರದ್ಧೆ, ಶಿಸ್ತು ಮಕ್ಕಳ ಮೇಲೆ ತೀವ್ರ ಪ್ರಭಾವ ಬೀರುತ್ತಿದ್ದವು. ಒಟ್ಟಾರೆ ಕೌಟುಂಬಿಕ ಸಂಬಂಧಗಳು ಜನಪದ ಗೀತೆಗಳಲ್ಲಿ ರಸತುಂಬಿ ಮನೋಜ್ಞಗೊಂಡಿವೆ.

ಕೌಟುಂಬಿಕ ಸಂಬಂಧಗಳಿಗೆ ಪೂರಕವಾಗಿ ವೈವಾಹಿಕ ಸಂಬಂಧಗಳು ಸಹ ಪ್ರೀತಿ, ವಾತ್ಸಲ್ಯ, ಮಮತೆ, ನಂಬಿಕೆಯ ಮೇಲೆ ನಿಂತಿವೆ. ಕೌಟುಂಬಿಕ ಬಾಂಧವ್ಯದ ಪ್ರಾಥಮಿಕ ಸಂಬಂಧವೇ ದಾಂಪತ್ಯ.

ಇದು ವಿವಾಹದಿಂದ ಏರ್ಪಡುತ್ತದೆ. 'ಅಹಂ' ಭಾವಗಳಿಲ್ಲದೆಯೇ ಹೊಸ ಸಂಬಂಧಗಳಿಗೆ ಒಗ್ಗಿಕೊಳ್ಳುವ, ಸಾಂಸಾರಿಕ ಜವಾಬ್ದಾರಿಯನ್ನು ನಿಭಾಯಿಸುವ ವೈವಾಹಿಕ ಸಂಬಂಧಗಳು ಜನಪದರಲ್ಲಿವೆ. ಆದರೆ ಸಂಬಂಧಿಗಳ ನಡುವಿನ ಸಣ್ಣತನ, ಸ್ವಪ್ರತಿಷ್ಠೆಗಳಿಂದಾಗಿ ಇಂದು ಹಲವಾರು ಸಂಬಂಧಗಳು ಹಳಸಿವೆ. ಜನಪದರ ಬಾಂಧವ್ಯವು ಇಂದಿನ ಪೀಳಿಗೆಗೆ ಆದರ್ಶವಾಗಬೇಕಾದ ಅನಿವಾರ್ಯತೆಯಿದೆ.

ಜನಪದರಲ್ಲಿ ಕೌಟುಂಬಿಕ, ವೈವಾಹಿಕ ಸಂಬಂಧಗಳ ಹಾಗೆಯೇ ಸಾಮಾಜಿಕ ಸಂಬಂಧಗಳೂ ಸಹ ಬಾಂಧವ್ಯವನ್ನು ಆಧರಿಸಿಯೇ ನಿರ್ಧಾರಗೊಳ್ಳುತ್ತಿದ್ದವು. ಸಾಮಾಜಿಕ ವ್ಯವಸ್ಥೆಯ ನಿಯಂತ್ರಣಕ್ಕೆ ವ್ಯಕ್ತಿಯ ಸಾಮಾಜಿಕ ವರ್ತನೆ ಒಳಪಟ್ಟಿತ್ತು. ವಿಶ್ವಾಸಾರ್ಹ, ನಂಬಿಕೆಯುಳ್ಳ ಸಾಮಾಜಿಕ ಸಂಬಂಧಗಳಲ್ಲಿ ಬಾಂಧವ್ಯ ನಿರೀಕ್ಷೆಗೆ ನಿಲುಕುವಂತಿತ್ತು. 'ಮನಕ್ಕ ಮನ ಕೂಡಿದ್ರ ಮನಿಮಾರ, ಜನಕ್ಕ ಜನ ಕೂಡಿದ್ರ ಸಹಕಾರ' ಎಂಬ ಗಾದೆಯಂತೆ ಸಾಮಾಜಿಕ ಜೀವನದ ಮೂಲಮಂತ್ರವಾಗಿತ್ತು. ಜನಪದರ ಸಮಾಜವು ಮೋಸ, ಕಪಟ, ವಂಚನೆಗಳಂತಹ ಕೆಟ್ಟ ಗುಣಗಳಿಂದ ಮುಕ್ತವಾಗಿತ್ತು.

ಮೇಲ್ಕಂಡ ಎಲ್ಲ ಸಂಬಂಧಗಳಲ್ಲಿ ಕಂಡು ಬರುವ ಜನಪದರ ಜೀವನಮೌಲ್ಯಗಳು ಮಾನವೇತರ ಸಂಬಂಧಗಳಲ್ಲಿ ಹೇರಳವಾಗಿವೆ. ಭೂಮಿ, ಬಸವ, ದೈವ, ಪ್ರಕೃತಿ, ಪ್ರಾಣಿ, ಪಕ್ಷಿಗಳನ್ನು ತಮ್ಮ ಮನೆಯ ಸದಸ್ಯರಂತೆಯೇ ತಮ್ಮನ್ನು ಪೋಷಿಸುವ ತಾಯಿಯಂತೆಯೇ ಪೂಜಿಸುವ, ಗೌರವಿಸುವ ಬಾಂಧವ್ಯಗಳು ಜನಪದರಲ್ಲಿವೆ. ಮಾನವನು ಇರುವವರೆಗೂ ಮಾನವೀಯ ಸಂಬಂಧಗಳಿರುತ್ತವೆ. ಮಾನವೀಯ ಸಂಬಂಧಗಳು ಇರುವವರೆಗೂ ಬಾಂಧವ್ಯವಿರುತ್ತದೆ. ಬಾಂಧವ್ಯದ ಸ್ವರೂಪ. ಬದುಕಿನ ಶೈಲಿ ಬೇರೆ ಬೇರೆಯಾದರೂ ಬದುಕು ಮಾತ್ರ ಎಂದಿಗೂ ಬಾಂಧವ್ಯವನ್ನು ತಬ್ಬಿಯೇ ಮುನ್ನಡೆಯುತ್ತಿರುತ್ತದೆ. ಆಧುನಿಕ ಸಂಸ್ಕೃತಿಯ ಅಬ್ಬರದಲ್ಲೂ ಜನಪದರ ಬಾಂಧವ್ಯ ಜನಮನದಿಂದ ದೂರವಾಗಿಲ್ಲ ಎನ್ನುವುದನ್ನು ಹಲವು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿ ಸಂಬಂಧದ ಪ್ರಸ್ತುತತೆಯನ್ನು ದೃಢೀಕರಿಸಲಾಗಿದೆ.

ಪ್ರಸ್ತುತ ಅಧ್ಯಯನ ಮಾಡುವ ಸಂದರ್ಭದಲ್ಲಿ ಹಲವು ತೊಡಕುಗಳು ಎದುರಾದವು. ಅಂತಹ ತೊಡಕುಗಳನ್ನು ಬಿಡಿಸಿಕೊಳ್ಳುವ ಮೂಲಕ ಅಧ್ಯಯನಕ್ಕೊಂದು ಚೌಕಟ್ಟು ರೂಪಿಸಿಕೊಳ್ಳಬೇಕಾಯಿತು. ಕರ್ನಾಟಕದಲ್ಲಿ ಇದುವರೆಗೆ ನಡೆದ ಶೀರ್ಷಿಕೆಯನ್ನು ಅವಲೋಕಿಸಲಾಯಿತು. ಆದರೆ ಜನಪದ ಸಾಹಿತ್ಯವನ್ನು ಇಡೀಯಾಗಿ ಅವಲೋಕಿಸಿ ಸಂಬಂಧಗಳನ್ನು ವಿಶ್ಲೇಷಿಸುವುದೇ? ಜಾನಪದ ಕಥೆ, ಗಾದೆ, ಒಗಟು, ಕಥನಗೀತೆಗಳು, ಮಹಾಕಾವ್ಯಗಳಲ್ಲಿ ಸಂಬಂಧಗಳನ್ನು ವಿಶ್ಲೇಷಿಸುವುದೇ? ಎಂಬುದು ಮೊದಲಿಗೆ ಎದುರಾದ ಬಹುಮುಖ್ಯವಾದ ತೊಡಕಾಗಿತ್ತು. ಎರಡನೆಯದಾಗಿ ಈಗಾಗಲೇ ಸಂಪಾದಿತ ಜನಪದ ಸಾಹಿತ್ಯದ ಪಠ್ಯಗಳನ್ನು ಆಕರಗಳಾಗಿ ಬಳಸುವುದೇ? ಇಲ್ಲವೇ ಕ್ಷೇತ್ರಕಾರ್ಯದ ಮೂಲಕ ಹೊಸದಾಗಿ ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಅಧ್ಯಯನ ಕೈಗೊಳ್ಳುವುದೇ? ಕರ್ನಾಟಕದಲ್ಲಿ ಇದುವರೆಗೆ ಸಂಪಾದನೆಯಾದ ಜನಪದ ಕೃತಿಗಳ ಆಯ್ಕೆ ಮಾಡುವಾಗಲೂ ಸ್ವಾತಂತ್ರ್ಯನಂತರದ

ಕೃತಿಗಳನ್ನು ಆಕರವಾಗಿಟ್ಟುಕೊಳ್ಳಬೇಕೆ? ಅಥವಾ ಸ್ವಾತಂತ್ರ್ಯಪೂರ್ವ ಕೃತಿಗಳನ್ನು ಆಕರವಾಗಿಟ್ಟುಕೊಳ್ಳಬೇಕೆ? ಇಂತಹ ಹಲವು ಪ್ರಶ್ನೆಗಳು ತೊಡಕಾಗಿ ಕಂಡವು.

ಜನಪದ ಸಾಹಿತ್ಯದ ಕುರಿತಾಗಿ ನಡೆದ ಇದುವರೆಗಿನ ಅಧ್ಯಯನಗಳನ್ನು ಪರಿಶೀಲಿಸುವ ಮೂಲಕ ನನ್ನ ಅಧ್ಯಯನದ ವ್ಯಾಪ್ತಿಯನ್ನು ಜನಪದ ಗೀತೆಗಳಿಗೆ ಸೀಮಿತಗೊಳಿಸಿಕೊಳ್ಳಲಾಯಿತು. ಆದ್ದರಿಂದ ಶೀರ್ಷಿಕೆಯಲ್ಲಿಯೇ 'ಕನ್ನಡ ಜನಪದ ಗೀತೆಗಳಲ್ಲಿ' ಸಂಬಂಧಗಳ ವಿಶ್ಲೇಷಣೆ ಎಂಬುದನ್ನು ಸ್ಪಷ್ಟಪಡಿಸಲಾಯಿತು. ಇಲ್ಲಿ ಜನಪದ ಸಾಹಿತ್ಯವನ್ನು ಇಡೀಯಾಗಿ ಅಧ್ಯಯನಕ್ಕೆ ಒಳಗೊಳ್ಳುವಂತೆ ಮಾಡಿದ್ದರೆ ಕೇವಲ ಉಲ್ಲೇಖ ನೀಡುವಲ್ಲೇ ಅಧ್ಯಯನ ಮುಗಿಯುವ ಸಂಭವವಿತ್ತು. ಅದು ಕೇವಲ ಅವಲೋಕನ ಮಾದರಿಯ ಅಧ್ಯಯನವಾಗಿ ಹೆಚ್ಚಿನ ವಿಶ್ಲೇಷಣೆಗೆ ಅವಕಾಶ ಸಿಗುತ್ತಿರಲಿಲ್ಲವೆಂಬುದು ನನ್ನ ಭಾವನೆ. ಆದ್ದರಿಂದ ಜನಪದ ಗೀತೆಗಳಿಗೆ ನನ್ನ ಅಧ್ಯಯನದ ಮಿತಿಯನ್ನು ಗುರುತಿಸಿಕೊಳ್ಳಲಾಯಿತು.

ಎರಡನೆಯದಾಗಿ ಕ್ಷೇತ್ರಕಾರ್ಯ ಮಾಡುವುದೇ? ಬೇಡವೇ? ಎಂಬುದು. ಇದುವರೆಗೆ ಸಂಗ್ರಹಗೊಂಡ ಅನೇಕ ಜನಪದ ಗೀತೆಗಳ ಸಂಕಲನಗಳನ್ನು ಅವಲೋಕಿಸಿದಾಗ ಹಲವಾರು ಗೀತೆಗಳು ಪುನಃ ಪುನಃ ಸಂಗ್ರಹಗೊಂಡಿದ್ದನ್ನು ಮನಗಂಡು ಅಲ್ಲದೇ ಮೂಲ ಜನಪದ ಗೀತೆಗಳು ಸಿಗಲಾರದೆಂದು ಭಾವಿಸಿ ಈಗಾಗಲೇ ಸಂಪಾದಿತ ಕೃತಿಗಳನ್ನು ಆಕರಗಳನ್ನಾಗಿ ಇಟ್ಟುಕೊಂಡು ಅಧ್ಯಯನ ಮಾಡುವುದೆಂದು ನಿರ್ಧರಿಸಲಾಯಿತು. ಕನ್ನಡ ಜಾನಪದ ಕ್ಷೇತ್ರಕ್ಕೆ ಹಲವಾರು ವಿದ್ವಾಂಸರು ಬಹುದೊಡ್ಡ ಕೊಡುಗೆಯನ್ನು ನೀಡಿದ್ದಾರೆ. ಸಿಂಪಿ ಲಿಂಗಣ್ಣ, ಬಿ. ಎಸ್. ಗದ್ದಗೀಮಠ, ಹಲಸಂಗಿ ಗೆಳೆಯರು, ಗೊರೂರು ರಾಮಸ್ವಾಮಿ ಅಯ್ಯಂಗಾರ್, ದೇ. ಜವರೇಗೌಡ, ಕಾಪಸೆ ರೇವಪ್ಪ, ಎಸ್. ಕೆ. ಕರೀಂಖಾನ್, ಕರಾಕೃ, ಎಲ್. ಗುಂಡಪ್ಪ, ಜಿ. ಶಂ. ಪರಮಶಿವಯ್ಯ, ವಿನೀತ ರಾಮಚಂದ್ರರಾಯ, ಮತಿಘಟ್ಟ ಕೃಷ್ಣಮೂರ್ತಿ, ಆರ್. ಎಸ್. ಪಂಚಮುಖಿ ಮುಂತಾದ ಸಂಪಾದನಾಕಾರರು ಸಂಗ್ರಹಿಸಿಕೊಟ್ಟ ಜನಪದ ಗೀತೆಗಳನ್ನು ಅಧ್ಯಯನಕ್ಕೆ ಆಕರವಾಗಿ ಬಳಸಿಕೊಳ್ಳಲಾಯಿತು. ಅಧ್ಯಯನವು ನಿರ್ದಿಷ್ಟ ಕಾಲಮಿತಿಯನ್ನು ಹೊಂದಿದ್ದು ನವೋದಯ ಕಾಲಘಟ್ಟದಲ್ಲಿ ಸಂಪಾದನೆಯಾದ ಜನಪದ ಗೀತೆಗಳ ಸಂಕಲನಗಳನ್ನು ಪ್ರಸ್ತುತ ಅಧ್ಯಯನಕ್ಕೆ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಇವುಗಳಲ್ಲಿ ವಿಪುಲವಾದ ಸಂಬಂಧಗಳ ಸೆಲೆಯಿರುವುದನ್ನು ಅಧ್ಯಯನದಿಂದ ಸಾಬೀತುಮಾಡಲಾಗಿದೆ. ಉಳಿದಂತೆ ಇತರೆ ಜನಪದ ಗೀತೆ ಪ್ರಕಾರಗಳನ್ನು ಪರಾಮರ್ಶಿಸಿ ಅಧ್ಯಯನ ಮಾಡಲಾಗಿದೆ. ಮುಖ್ಯವಾಗಿ ಇತರೆ ಜನಪದ ಗೀತೆ ಪ್ರಕಾರಗಳನ್ನು ಕಡೆಗಣಿಸಲಾಗಿದೆ ಎಂಬ ಪ್ರಶ್ನೆಯನ್ನು ಎತ್ತಲು ಸಾಧ್ಯವಿದೆ. ಆದರೆ ಅಧ್ಯಯನಕ್ಕೆ ಸ್ಪಷ್ಟತೆ, ನಿಖರತೆಯಲ್ಲದೇ ಸಂಬಂಧಗಳನ್ನು ವಿಶ್ಲೇಷಿಸುವಾಗ ಸಂಕುಚಿತ ಅರ್ಥ ಬರದಿರಲಿ ಎಂಬ ಕಾರಣಕ್ಕಾಗಿ ಜನಪದ ಗೀತೆಗಳನ್ನು ವಿಶ್ಲೇಷಿಸುವ ಮಾದರಿಯನ್ನು ಆಯ್ದುಕೊಳ್ಳಲಾಗಿದೆ.

ಅಧ್ಯಯನಕ್ಕೆ ವಿಷಯ ಆಯ್ಕೆ ಮಾಡಿಕೊಂಡ ನಂತರ ಆರಂಭದಲ್ಲಿ ಜನಪದ ಗೀತೆಗಳಲ್ಲಿ ಸಂಬಂಧಗಳನ್ನು ಸ್ತ್ರೀ-ಪುರುಷರ ನಡುವಿನ ಸಂಬಂಧಗಳು, ಸ್ತ್ರೀಯರ ನಡುವಿನ ಸಂಬಂಧಗಳು.

ಪುರುಷರ ನಡುವಿನ ಸಂಬಂಧಗಳು ಹಾಗೂ ಇತರೆ ಸಂಬಂಧಗಳೆಂದು ವಿಂಗಡಿಸಲಾಗಿತ್ತು. ಆದರೆ ಅಧ್ಯಯನ ಹಂತಹಂತವಾಗಿ ಮುಂದುವರೆದಾಗ ಅವು ಸೂಕ್ತ ವಿಂಗಡಣೆಯಲ್ಲ ಎಂಬುದನ್ನು ಗುರುತಿಸಲಾಯಿತು. ಮತ್ತೆ ಅವುಗಳನ್ನು ಮಾನವ ಸಂಬಂಧಗಳು ಹಾಗೂ ಮಾನವೇತರ ಸಂಬಂಧಗಳೆಂದು ವಿಂಗಡಿಸಿಕೊಳ್ಳಲಾಯಿತು. ಇಲ್ಲಿ ಧಾರ್ಮಿಕ ಅಥವಾ ದೈವಕ್ಕೆ ಸಂಬಂಧಿಸಿದ ಸಂಬಂಧಗಳನ್ನು ಮಾನವೇತರ ಸಂಬಂಧಗಳಲ್ಲಿ ಸೇರಿಸುವ ಪ್ರಯತ್ನ ಮಾಡಲಾಗಿದೆ. ಹೀಗೆ ವಿಂಗಡಣೆ ಮಾಡುವಾಗ ಕುಟುಂಬ, ವಿವಾಹ, ಸಮಾಜದ ಅವಿಭಾಜ್ಯ ಅಂಗಗಳಾಗಿದ್ದು ಇವು ಸಾಮಾಜಿಕ ಸಂಬಂಧಗಳಲ್ಲಿಯೇ ಒಳಗೊಳ್ಳುತ್ತವೆ ಆದರೆ ಕುಟುಂಬ, ವಿವಾಹಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಸಮಾಜಶಾಸ್ತ್ರದ ಹಿನ್ನೆಲೆಯಲ್ಲಿ ಪರಿಗಣಿಸದೇ ಸಂಬಂಧವಾಚಕಗಳು ಬಳಕೆಗೊಳ್ಳುವ ರೀತಿ ಹಾಗೂ ಸಂಬಂಧಗಳು ರೂಪುಗೊಳ್ಳುವ ನೆಲೆಯಲ್ಲಿ ಕೌಟುಂಬಿಕ ಹಾಗೂ ವೈವಾಹಿಕ ಸಂಬಂಧಗಳನ್ನು ಸಾಮಾಜಿಕ ಸಂಬಂಧಗಳಿಂದ ಬೇರ್ಪಡಿಸಿ ಅಧ್ಯಯನ ಮಾಡಲಾಗಿದೆ.

'ಕನ್ನಡ ಜನಪದ ಗೀತೆಗಳಲ್ಲಿ ಸಂಬಂಧಗಳ ವಿಶ್ಲೇಷಣೆ' ಎಂಬ ಅಧ್ಯಯನಕ್ಕೆ ಆಯ್ದುಕೊಂಡ ವಿಷಯವೇ ಜನಪದರಲ್ಲಿ ಕಂಡುಬರುವ ಸಂಬಂಧಗಳ ವಿಶ್ಲೇಷಣೆಯ ಅಗತ್ಯತೆಯನ್ನು ಸ್ಪಷ್ಟಪಡಿಸಿದೆ. ಅವಶ್ಯಕ ಎನಿಸಿದಲ್ಲಿ ಜನಪದರ ಸಂಬಂಧಗಳನ್ನು ಆಧುನಿಕ ಸಂಬಂಧಗಳ ಚಹರೆಗಳೊಡನೆ ಕೆಲವೊಮ್ಮೆ ಸಮೀಕರಿಸಲಾಗಿದೆ. ಜನಪದ ಗೀತೆಗಳಲ್ಲಿ ಕಂಡುಬರುವ ಸಂಬಂಧಗಳ ನೆಲೆಗಳನ್ನು ಶೋಧಿಸಿ, ಗೀತೆಗಳ ಉದಾಹರಣೆಗಳನ್ನು ನೀಡುವ ಮೂಲಕ ವಿಶ್ಲೇಷಿಸಲಾಗಿದೆ. ಹೀಗಾಗಿ ಜನಪದ ಗೀತೆಗಳಲ್ಲಿ ಜನಪದರು ಅಭಿವ್ಯಕ್ತಿಸಿದ ಬದುಕಿದ ಬಾಂಧವ್ಯ ತುಂಬಿದ ಬದುಕನ್ನೇ ವಿಶ್ಲೇಷಿಸುವುದರ ಮೂಲಕ ಪುನರ್‌ಸೃಷ್ಟಿಸಿ ಕೊಡಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಮಾನವೇತರ ಸಂಬಂಧಗಳೆಂದರೆ ಯಾವುವು? ಎಂಬುದನ್ನು ಅರ್ಥೈಸಿಕೊಳ್ಳುವಲ್ಲಿ ತೊಡಕಾಗಬಹುದು. ಆದರೆ ನನ್ನ ಗ್ರಹಿಕೆಗೆ ಒಳಪಟ್ಟಂತೆ ಜನಪದರು ಜನರೊಂದಿಗೆ ಮಾತ್ರ ಸಂಬಂಧಗಳನ್ನು ನಿಭಾಯಿಸಿಲ್ಲ. ಬದಲಾಗಿ ಭೂಮಿ, ಬಸವ, ದೈವ, ಮಳೆ, ಪ್ರಾಣಿ, ಪಕ್ಷಿಗಳೊಂದಿಗೂ ನಿಕಟ ಸಂಪರ್ಕದಲ್ಲಿದ್ದರು. ಆದ್ದರಿಂದ ಜನಪದರ ಈ ರೀತಿಯ ಸಂಬಂಧಗಳನ್ನು ಒಂದೇ ಚೌಕಟ್ಟಿನಲ್ಲಿ ತರುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಆದ್ದರಿಂದ ಮನುಷ್ಯ ಸಂಬಂಧಗಳನ್ನು ಹೊರತುಪಡಿಸಿ ಜನಪದರ ಇತರೆ ಸಂಬಂಧಗಳನ್ನು ಮಾನವೇತರ ಸಂಬಂಧಗಳಲ್ಲಿ ವಿಶ್ಲೇಷಿಸಲಾಗಿದೆ. ಪ್ರಸ್ತುತ ಅಧ್ಯಾಯಕ್ಕೆ ಈ ಶೀರ್ಷಿಕೆಯು ನ್ಯಾಯ ಒದಗಿಸಿಲ್ಲ ಎಂದು ಅನಿಸಿದರೂ ಹಲವು ತಾತ್ವಿಕ ಚರ್ಚೆಗಳ ನಂತರವೂ ಇದೇ ಶೀರ್ಷಿಕೆಯನ್ನು ಉಳಿಸಿಕೊಳ್ಳಲಾಗಿದೆ.

ಮುಖ್ಯವಾಗಿ ಸಂಶೋಧಕರು ಗುರುತಿಸಿಕೊಂಡ ತೊಡಕು ಮತ್ತು ಅದನ್ನು ಬಿಡಿಸಿಕೊಂಡ ಬಗೆಯ ಒಂದು ಸ್ಥೂಲ ಚಿತ್ರಣವನ್ನು ಈ ಮೇಲೆ ಕೊಡಲಾಗಿದೆ. ಒಂದು ಸಂಶೋಧನೆಯ ಮಿತಿಯನ್ನು ಅಧ್ಯಯನಕಾರರೇ ಕಂಡುಕೊಳ್ಳುವುದು, ತಾವೇ ಕೆಲವು ಪ್ರಶ್ನೆಗಳನ್ನು ಎತ್ತಿಕೊಳ್ಳುವುದು, ಅವುಗಳಿಗೆ ಉತ್ತರಿಸಿಕೊಳ್ಳುವುದು ಬಹಳ ಮುಖ್ಯವಾದ ಮಾದರಿ ಎನ್ನುವುದು ಸಂಶೋಧಕರ ನಂಬಿಕೆ.

## ೮.೧ ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನವು ಮುಖ್ಯವಾಗಿ ವಿಶ್ಲೇಷಣೆ ಪ್ರಧಾನವಾದ್ದರಿಂದ ಆಯಾ ಅಧ್ಯಾಯ ಮತ್ತು ಅದರ ಉಪಶೀರ್ಷಿಕೆಗಳ ಅಡಿಯಲ್ಲಿ ಸಂಬಂಧಗಳ ಹಲವಾರು ಒಳನೋಟಗಳನ್ನು ಚರ್ಚಿಸಿ ವಿಶ್ಲೇಷಿಸಲಾಗಿದೆ. ಪ್ರತಿಯೊಂದು ಅಂಶವನ್ನು ಅಧ್ಯಯನದ ಫಲಿತಗಳಲ್ಲಿ ಸೇರಿಸುತ್ತಾ ಹೋದರೆ ಅವುಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾದ ಬಹುಮುಖ್ಯ ಎನಿಸುವ ಕೆಲವು ಫಲಿತಗಳನ್ನು ಈ ಕೆಳಗೆ ಕೊಡಲಾಗಿದೆ.

**೧. ತ್ಯಾಗ, ಮಮತೆ, ವಾತ್ಸಲ್ಯ ಮುಂತಾದ ಜೀವನ ಮೌಲ್ಯಗಳ ಪ್ರತಿಬಿಂಬವೆಂಬಂತೆ ಜನಪದರಲ್ಲಿ ಕೌಟುಂಬಿಕ ಸಂಬಂಧಗಳಿವೆ.**

ಜನಪದರು ಹೀಗೆಯೇ ಬದುಕಬೇಕೆಂದು ಸಂವಿಧಾನ ಮಾಡಿಕೊಂಡಿದ್ದಿಲ್ಲ. ಆದರೆ ಸಂಬಂಧಗಳು ಹೀಗೆಯೇ ಇರಬೇಕೆನ್ನುವ ಸಾಂಪ್ರದಾಯಿಕ ಚೌಕಟ್ಟು ಅವರದಾಗಿತ್ತು. 'ಹಿರಿಯರ ಬದುಕು ಕಿರಿಯರಿಗೆ ಆದರ್ಶ' ಎನ್ನುವ ಮಾತಿನಂತೆ ಕೌಟುಂಬಿಕ ಸಂಬಂಧಗಳಲ್ಲಿ ಹಿರಿಯರ ಪ್ರೀತಿ, ತ್ಯಾಗ, ಶ್ರದ್ಧೆ, ಶಿಸ್ತು, ಕಟ್ಟುಪಾಡುಗಳು ಮಕ್ಕಳ ಮೇಲೆ ತೀವ್ರ ಪ್ರಭಾವ ಬೀರುತ್ತಿದ್ದವು. ಭಾವಪ್ರಧಾನವಾಗಿದ್ದ ಅವರ ಕೌಟುಂಬಿಕ ವ್ಯವಸ್ಥೆಯಲ್ಲಿ ಪ್ರೀತಿ, ನಂಬಿಕೆ, ವಿಶ್ವಾಸವೇ ಶ್ರೇಷ್ಠವಾಗಿತ್ತು. ಕೆಲವೊಂದು ಸಂದರ್ಭಾನುಸಾರ ಋಣಾತ್ಮಕ ಹಾಗೂ ಧನಾತ್ಮಕ ಅಂಶಗಳು ಕಂಡುಬಂದರೂ ಆದರ್ಶವೇ ಅವರಿಗೆ ಮುಖ್ಯವೆನಿಸಿತ್ತು. ಕೌಟುಂಬಿಕ ಸಮಸ್ಯೆಗಳು ಏನೇ ಉದ್ಭವಿಸಿದರೂ ಅವುಗಳನ್ನು ತೋರ್ಪಡಿಸದೇ ಹೊಂದಿಕೊಳ್ಳುತ್ತಿದ್ದರು. ತ್ಯಾಗ, ಮಮತೆ, ವಾತ್ಸಲ್ಯ, ಸಹಕಾರ, ಹೊಂದಾಣಿಕೆಯಿಂದಾಗಿ ಜನಪದರ ಬದುಕು ಸುಂದರವಾಗಿತ್ತು.

ಜನಪದರು ಕುಟುಂಬದಲ್ಲಿ ಸ್ವಪ್ರತಿಷ್ಠೆಗಿಂತ ಕುಟುಂಬದ ಪ್ರತಿಷ್ಠೆಗೆ ತಲೆಬಾಗುತ್ತಿದ್ದರು. ಕುಟುಂಬದ ಹಿರಿತನಕ್ಕೆ ಅನುಗುಣವಾಗಿ ಬದುಕನ್ನು ನಡೆಸುತ್ತಿದ್ದರು. ಯಜಮಾನನು ಕೂಡ ಯಾವುದೇ ಅಹಂಕಾರವಿಲ್ಲದೆ ಕುಟುಂಬದ ಹಿರಿತನಕ್ಕೆ ಅನುಗುಣವಾಗಿ ಶ್ರಮಿಸುತ್ತಿದ್ದನು. ಇಂತಹ ಕೂಡು ಕುಟುಂಬಗಳ ಒಗ್ಗಟ್ಟಿನಿಂದ ಬಾಂಧವ್ಯ ರೂಪುಗೊಂಡು ಸಂಬಂಧಗಳು ಬಿಗಿಗೊಳ್ಳುತ್ತಿದ್ದವು. 'ಒಗ್ಗಟ್ಟಿನಲ್ಲಿ ಬಲವಿದೆ' ಎಂಬಂತೆ ಒಗ್ಗೂಡುವಿಕೆಯೇ ಕೌಟುಂಬಿಕ ಸಂಬಂಧಗಳ ಮೂಲನೆಲೆಯಾಗಿತ್ತು. ಜೀವನ ಮೌಲ್ಯಗಳ ಆಚರಣೆಯೇ ಆದರ್ಶ ಬದುಕಿಗೆ ಆಧಾರವಾಗಿತ್ತು.

ಆದರೆ ಪ್ರಸ್ತುತ ಸಮಾಜದ ಕುಟುಂಬಗಳನ್ನು ಗಮನಿಸಿದಾಗ ಸಣ್ಣತನ, ಕೊಂಕು, ಮತ್ಸರ, ದ್ವೇಷ, ಅಸೂಯೆ ಮುಂತಾದ ಕಾರಣಗಳಿಂದಾಗಿ ಕುಟುಂಬ ವಿಘಟನೆಗಳು ಹೆಚ್ಚಾಗಿವೆ. ಹೆತ್ತವರು-ಮಕ್ಕಳು, ದಾಯಾದಿಗಳ ನಡುವೆ ಕಲಹಗಳು ಏರ್ಪಟ್ಟು ಬದುಕಿನಲ್ಲಿ ನೆಮ್ಮದಿ ಇಲ್ಲದಂತಾಗಿದೆ. ಅಲ್ಲದೇ ರಕ್ತಸಂಬಂಧಿಗಳೇ ಅಪರಿಚಿತರಂತೆ ಬದುಕುವ ಸ್ಥಿತಿ ನಿರ್ಮಾಣವಾಗಿದೆ. ಕುಟುಂಬದ ನೆರಳಲ್ಲಿ ಬದುಕಿನ ಸವಿಯನ್ನು ಉಣ್ಣುತ್ತಿದ್ದ ಅಂದಿನ ಕ್ಷಣಗಳು ಇಂದು ಇಲ್ಲವಾಗಿವೆ. ಆಸರೆಯಿಲ್ಲದೆ ಅನಾಥವಾಗಿ ಜೀವಿಸುವ ಮಕ್ಕಳು, ಅಣ್ಣ-ತಮ್ಮ, ಅಕ್ಕ-ತಂಗಿ ಎಲ್ಲರಿದ್ದೂ ಏಕಾಂಗಿಯಂತೆ ಎಲ್ಲಿಯೇ

ಬದುಕುವವರ ಸಂಖ್ಯೆ ಇಂದು ಹೆಚ್ಚುತ್ತಿದೆ. ಜನಪದರ ಬದುಕಿನಲ್ಲಿ ಇವೆಲ್ಲಾ ಕಂಡುಬರುವುದಿಲ್ಲವೆಂದು ಹೇಳಲಾಗದು. ಇದ್ದರೂ ಅವುಗಳ ಪ್ರಮಾಣ ಪ್ರಸ್ತುತ ಕಾಲಕ್ಕಿಂತ ಕಡಿಮೆಯಾಗಿತ್ತು. 'ಕೂಡಿ ಬಾಳಿದರೆ ಸ್ವರ್ಗ ಸುಖ' ಎಂಬ ಗಾದೆ ಮಾತಿನಂತೆ ಐಕ್ಯತೆಯ ಪ್ರದರ್ಶನವಿತ್ತು. ಜನಪದ ಗೀತೆಗಳಲ್ಲಿ ಅಭಿವ್ಯಕ್ತಗೊಂಡ ಜನಪದರ ಕೌಟುಂಬಿಕ ಸಂಬಂಧಗಳಲ್ಲಿನ ಜೀವನ ಮೌಲ್ಯಗಳು ಇಂದಿನ ಪೀಳಿಗೆಗೆ ಆದರ್ಶವಾಗಬೇಕಾದ ಅನಿವಾರ್ಯತೆ ಇದೆ.

**೨. ಜನಪದ ಗೀತೆಗಳಲ್ಲಿ ವೈವಾಹಿಕ ಸಂಬಂಧಗಳು ಪ್ರೀತಿ, ನಂಬಿಕೆ, ಮಧುರತೆಯ ದ್ಯೋತಕ ಎನಿಸಿವೆ.**

'ಬೆಟ್ಟದ ನೆಲ್ಲಿ ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ' ಎಂಬ ವಚನದ ಸಾರದಂತೆ ಎಲ್ಲಿಯದೋ ಗಂಡು, ಎಲ್ಲಿಯದೋ ಹೆಣ್ಣು ಮದುವೆಯ ಬಂಧದಿಂದ ಒಂದಾಗುತ್ತಾರೆ. ಗಂಡ–ಹೆಂಡತಿಯರಾಗಿ ಬದುಕಿನಲ್ಲಿ ಬಾಂಧವ್ಯ ಹೊಂದುತ್ತಾರೆ. ಮದುವೆಯಿಂದ ಕೇವಲ ಗಂಡ–ಹೆಂಡತಿಯರ ಬಾಂಧವ್ಯದ ಕೊಂಡಿ ಮಾತ್ರ ಬೆಸೆಯುವುದಿಲ್ಲ. ಬದಲಾಗಿ ಅತ್ತೆ, ಮಾವ, ನಾದಿನಿ, ಭಾವ, ಅತ್ತಿಗೆ ಹೀಗೆ ಮುಂತಾದ ಸಂಬಂಧಗಳಿಗೆ ಮದುವೆಯೇ ಮುನ್ನುಡಿ ಎನಿಸಿದೆ. ವಿವಾಹದಿಂದ ಗಂಡ–ಹೆಂಡತಿಯಾಗಿ ಹೊಸಜೀವಗಳಿಗೆ ಜನ್ಮನೀಡಿ ತಂದೆ–ತಾಯಿಗಳಾಗುತ್ತಾರೆ. ಅಲ್ಲಿಯೂ ಸಂಭ್ರಮ, ಸಡಗರ ಜೊತೆಗೆ ಹೊಸ ಸಂಬಂಧ ಚಿಗುರುತ್ತದೆ.

ಜನಪದರ ಬದುಕಿನ ವಾಸ್ತವದ ಸಂತೋಷ, ಸಮಸ್ಯೆಗಳೆಲ್ಲವೂ ಅವರ ಮನಸ್ಸಿನ ಮೂಲಭೂತ ಭಾವನೆಗಳೊಂದಿಗೆ ಸಮ್ಮಿಳಿತಗೊಂಡಿವೆ. ಎಷ್ಟೇ ಕಷ್ಟಗಳು ಬಂದರೂ ನಗುಮೊಗದಿಂದ ಕಾಲವನ್ನು ನೂಕುತ್ತಾರೆ. ಎಲ್ಲರನ್ನು ಪ್ರೀತಿ, ವಿಶ್ವಾಸದಿಂದ ಕಾಣುತ್ತಾರೆ. ಕೆಲವೊಮ್ಮೆ ನಂಬಿಕೆಗೆ ಅರ್ಹನಲ್ಲ ಎಂದು ತಿಳಿದರೆ ತಮ್ಮಿಂದ ದೂರವಿರಿಸುತ್ತಾರೆ. ವಿವಾಹದ ನಂತರ ಹೊಸ ಮನೆಯ ವಾತಾವರಣಕ್ಕೆ ಹೊಂದಿಕೊಳ್ಳಲು ಹೆಣ್ಣುಮಗಳು ಪ್ರಯತ್ನಿಸುತ್ತಾಳೆ. ತನ್ನಲ್ಲಿನ ಗುಣಗಳಿಂದ ಎಲ್ಲರ ಮನಸ್ಸನ್ನು ಗೆದ್ದು ಮುದ್ದಿನ ಸೊಸೆಯಾಗುತ್ತಾಳೆ. ಅದಕ್ಕೆ ಅವಳಲ್ಲಿನ ನಂಬಿಕೆ, ವಿಶ್ವಾಸಗಳೇ ಕಾರಣ. 'ನಂಬಿಕೆಯೇ ನಾಕ' ಎಂಬ ಗಾದೆಯಂತೆ ಎಲ್ಲರನ್ನು ಪ್ರೀತಿ ಆದರಗಳಿಂದ ಕಂಡು ಅವರಲ್ಲಿ ತಾನೊಬ್ಬಳು ಎಂದು ತಿಳಿದುಕೊಳ್ಳುತ್ತಾಳೆ.

ಗಂಡನಾದವನು ಪ್ರತಿಯಾಗಿ ತನ್ನ ಮಡದಿಯ ಬೇಕು ಬೇಡಗಳನ್ನು ಈಡೇರಿಸುತ್ತಾನೆ. ಮಡದಿಗೆ ನೈತಿಕ ಬೆಂಬಲ ನೀಡಿ ಆತ್ಮವಿಶ್ವಾಸ ಮೂಡಿಸುತ್ತಾನೆ. ಹೆಣ್ಣಿನ ಮನೆಯವರೊಂದಿಗೆ ಒಡನಾಟ ಬೆಳೆಸಿ, ಅವರ ಸಂಬಂಧಗಳನ್ನು ಸೂಕ್ತವಾಗಿ ನಿಭಾಯಿಸುತ್ತಾನೆ. ತಮ್ಮ ದಾಂಪತ್ಯದಲ್ಲಿ ವಿರಸ ಮೂಡದ ಹಾಗೆ ಸಮರಸವನ್ನು ಕಾಪಾಡಿಕೊಳ್ಳುತ್ತಾನೆ. ವಿವಾಹದ ನಂತರದ ಸಂಬಂಧಗಳಲ್ಲಿ ಪ್ರೀತಿ, ಪ್ರೇಮ, ಸ್ನೇಹ, ತ್ಯಾಗ, ವಿಶ್ವಾಸ, ನಂಬಿಕೆ, ಪರಸ್ಪರ ಗೌರವ, ಸಹಕಾರ, ಮಧುರತೆಗಳು ಇರುವುದರಿಂದ ಜನಪದರ ಸಂಸ್ಕೃತಿಯು ಇಂದಿಗೂ ಆದರಣೀಯ ಎನಿಸಿದೆ.

**೩. ಜನಪದರ ಸಾಮಾಜಿಕ ಸಂಬಂಧಗಳು ರೂಪುಗೊಳ್ಳಲು ಪರಸ್ಪರ ಗೌರವ, ಸಹಕಾರ, ಸಹಬಾಳ್ವೆಯು ಕಾರಣವಾಗಿವೆ.**

ಜನಪದರಲ್ಲಿ ಕೌಟುಂಬಿಕ, ವೈವಾಹಿಕ ಸಂಬಂಧಗಳ ಹಾಗೆಯೇ ಸಾಮಾಜಿಕ ಸಂಬಂಧಗಳೂ ಸಹ ಬಾಂಧವ್ಯವನ್ನು ಆಧರಿಸಿಯೇ ನಿರ್ಧಾರಗೊಳ್ಳುತ್ತಿದ್ದವು. ಸಾಮಾಜಿಕ ವ್ಯವಸ್ಥೆಯ ನಿಯಂತ್ರಣಕ್ಕೆ ವ್ಯಕ್ತಿಯ ಸಾಮಾಜಿಕ ವರ್ತನೆ ಒಳಪಟ್ಟಿತ್ತು. ಮಾನವೀಯ ಗುಣಗಳಿಂದ ಕೂಡಿದ ಸಾಮಾಜಿಕ ನಡುವಳಿಕೆಗಳ ನಡೆ ಕೌಟುಂಬಿಕ ಸಂಬಂಧಗಳ ಆಪ್ತತೆಯನ್ನು ಸರಿಗಟ್ಟಿತ್ತು. ವಿಶ್ವಾಸಾರ್ಹ, ಸಹಕಾರ ಹಾಗೂ ಸಹಬಾಳ್ವೆಯುಳ್ಳ ಸಾಮಾಜಿಕ ಸಂಬಂಧಗಳಲ್ಲಿ ಬಾಂಧವ್ಯ ನಿರೀಕ್ಷೆಗೆ ನಿಲುಕುವಂತಿತ್ತು.

ಜನಪದರ ಸಮಾಜವು ಸುಳ್ಳು, ಮೋಸ, ಕಪಟಗಳಿಂದ ಮುಕ್ತವಾಗಿತ್ತು. ಆದ್ದರಿಂದ ಸಮಾಜದಲ್ಲಿ ಶಾಂತಿ, ನೆಲೆಸಿ ನಿರ್ಮಲ ವಾತಾವರಣ ರೂಪುಗೊಂಡಿತ್ತು. 'ಆಡದಲೇ ಮಾಡುವವನು ರೂಢಿಯೊಳಗೆ ಉತ್ತಮನು' ಎಂಬ ನುಡಿಯಂತೆ ಆಡದೆಯೇ ನಡೆದು ತಮ್ಮ ಸಾಂಘಿಕ ಬದುಕನ್ನು ಕಂಡುಕೊಂಡಿದ್ದರು. ಇಡಿ ಗ್ರಾಮವನ್ನೇ ಒಂದು ಕುಟುಂಬವೆಂದು ಭಾವಿಸಿ, ಸರ್ವಜಾತಿಯನ್ನು ಅಲ್ಲಗಳೆದು ನೀತಿಪ್ರಧಾನ ಸಮಾಜವನ್ನು ಜನಪದರು ಕಟ್ಟಿದ್ದಾರೆ. 'ಹನಿ ಹನಿ ಕೂಡಿದರೆ ಹಳ್ಳ, ತೆನೆ ತೆನೆ ಕೂಡಿದರೆ ಬಳ್ಳ' ಎನ್ನುವಂತೆ ಕೈಗೆ ಕೈ ಜೋಡಿಸಿ ಸಾಮಾಜಿಕ ಬದುಕಿನ ಸಮನ್ವಯತೆ ಸಾಧಿಸಿದ್ದರು.

ಆದರೆ ಇಂದಿನ ಸಮಾಜದ ಲಕ್ಷಣಗಳು ಜನಪದರ ಸಮಾಜಕ್ಕೆ ತದ್ವಿರುದ್ಧವಾಗಿವೆ. ಅಕ್ಕಪಕ್ಕದಲ್ಲಿ ಯಾರಿದ್ದಾರೆ? ಅವರು ಹೇಗಿದ್ದಾರೆ? ಮುಂತಾದ ವಿಚಾರಗಳು ಸಹಿತ ತಿಳಿಯಲಾರದಷ್ಟು ಅಪರಿಚಿತ ಜಗತ್ತಿನಲ್ಲಿ ಮನುಷ್ಯ ಬದುಕುತ್ತಿದ್ದಾನೆ. ಇಂದಿನವರ ಆಸೆ, ಆಕಾಂಕ್ಷೆಗಳೇ ಬೇರೆ; ಆಲೋಚನೆಗಳೇ ಬೇರೆ. ತಮ್ಮಲ್ಲಿನ ಸ್ವಾರ್ಥಪರ ವಿಚಾರಗಳಿಂದ ಸಾಮಾಜಿಕ ಸಂಬಂಧಗಳಿಗೆ ಧಕ್ಕೆ ಉಂಟಾಗುತ್ತಿದೆ. ನಾನು ನನ್ನದು ಎನ್ನುವುದರ ಬದಲಾಗಿ ನಾವು ನಮ್ಮದು ಎಂಬ ವಿಶಾಲ ಭಾವನೆ ಇಂದಿನವರ ಮನಸ್ಸಿನಲ್ಲಿ ಒಡಮೂಡಬೇಕಿದೆ. ಪ್ರತಿಯೊಬ್ಬರಲ್ಲಿಯೂ, 'ಮನಕ್ಕ ಮನ ಕೂಡಿದ್ರ ಮನಿಮಾರ, ಜನಕ್ಕ ಜನ ಕೂಡಿದ್ರ ಸಹಕಾರ' ಎಂಬ ಮಾತು ಸಾಮಾಜಿಕ ಮೂಲಮಂತ್ರವಾಗಬೇಕಿದೆ. ಜನಪದರ ಸಮಾಜದ ಒಳನೋಟಗಳನ್ನು ಅರಿಯಬೇಕಿದೆ.

**೪. ಮಾನವೇತರ ಸಂಬಂಧಗಳಲ್ಲಿ ಭಯ, ಭಕ್ತಿ, ಸ್ನೇಹ, ದಯೆ, ಸೇವೆ, ಗೌರವ ಮುಂತಾದ ಭಾವನೆಗಳು ಸಮತೋಲಿತ ಜೀವನದ ಕುರುಹಾಗಿ ಕಂಡುಬರುತ್ತವೆ.**

ಜನಪದರು ಆಲ, ಅರಳಿ, ಬನ್ನಿ ಮೊದಲಾದ ಮರಗಳನ್ನು ದೈವವೆಂದೂ ಹಸುವನ್ನು ಕಾಮಧೇನುವೆಂದೂ ಎತ್ತನ್ನು ಬಸವನೆಂದೂ ಭೂಮಿಯನ್ನು ಹೊತ್ತ ತಾಯಿಯೆಂದೂ ಸದ್ಭಾವನೆಯಿಂದ ಪೂಜಿಸುತ್ತಾರೆ. ಅಲ್ಲದೇ ಗೌರವಿಸುತ್ತಾರೆ. ಜನಪದರ ಬದುಕಿನೊಂದಿಗೆ ಇವು ಬೆಸೆದುಕೊಂಡಿವೆ. ಪ್ರಕೃತಿಯ ಕೂಸಾಗಿರುವ ಜನಪದರಿಗೆ ಬೆಳಗು-ಬೈಗುಳಗಳಲ್ಲಿಯೂ ಬದುಕಿಗೆ ಆಸರೆಯಾಗಿರುವ ಭೂಮಿ, ಬಸವ, ಪ್ರಕೃತಿ, ಸಸ್ಯಸಂಪತ್ತು, ಪ್ರಾಣಿ ಸಂಪತ್ತು ಎಲ್ಲವನ್ನೂ ಆದ್ದರಿಂದ

ಕಂಡು, ಸಾಧ್ಯವಾದಷ್ಟು ಮಟ್ಟಿಗೆ ಅವುಗಳನ್ನು ಉಳಿಸಿಕೊಂಡು ಹೋಗಬೇಕೆಂಬ ಉದ್ದೇಶದೊಂದಿಗೆ ಮಾನವೇತರ ಸಂಬಂಧಗಳನ್ನು ಜನಪದರು ನಿಭಾಯಿಸಿಕೊಂಡು ಬಂದಿದ್ದಾರೆ.

ಜನಪದರು ಅನಕ್ಷರಸ್ಥರಾದರೂ ಬುದ್ಧಿವಂತರು. ಅವರಲ್ಲಿರುವ ಪರಿಸರದ ಬಗೆಗಿನ ಕಾಳಜಿಯು ಅನುಕರುಣೀಯವಾದುದು. ನಾವು ಪರಿಸರವನ್ನು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ ಎಂಬ ವಿಚಾರ ತಿಳಿದು ಪೂಜ್ಯ ಭಾವನೆಯನ್ನು ಪ್ರಕೃತಿಯೊಂದಿಗೆ ಹೊಂದುತ್ತ ಬಂದಿದ್ದಾರೆ. ಇಲಿ, ಗರುಡ, ಕೋಣ, ನವಿಲು, ಸಿಂಹ, ಹುಲಿ, ಹಾವು ಹೀಗೆ ವಿವಿಧ ಪ್ರಾಣಿಪಕ್ಷಿಗಳನ್ನು ದೇವತೆಗಳ ವಾಹನಗಳೆಂದು ಗುರುತಿಸಿ, ಪ್ರಾಣಿಪಕ್ಷಿಗಳ ಬೇಟೆಯನ್ನು ಜನಪದರು ತಡೆಗಟ್ಟಿದ್ದಾರೆ. ಪರಸ್ಪರ ದ್ವೇಷವನ್ನು ಅಳಿಸಿ ಹಾಕಿ, ಪ್ರೀತಿಯ ಬದುಕನ್ನು ನಡೆಸಬೇಕೆಂಬ ಆಸೆಯಿಂದ ಪರಿಸರ ಪ್ರಜ್ಞೆಯನರಿತು ಸಮತೋಲನ ಕಾಪಾಡಿಕೊಂಡಿದ್ದಾರೆ.

ಜನಪದರು ಭೂಮಿಯನ್ನು ಅನ್ನ ಕೊಡುವ ದೈವ, ಭೂತಾಯಿ ಎಂದು ಬಸವ(ಎತ್ತು)ನನ್ನು ನೆಚ್ಚಿನ ಬಂಟನೆಂದು, ಪ್ರಕೃತಿಯನ್ನು ಜೀವ ಪೊರೆಯುವ ಪಾಲಕನೆಂದು ಭಾವಿಸುತ್ತಾರೆ. ಇನ್ನು ದೈವಗಳಲ್ಲಿ ಶಿವ, ಗಣಪತಿ, ತಿರುಪತಿ ತಿಮ್ಮಪ್ಪ, ನಾರಾಯಣ, ಬ್ರಹ್ಮ, ಹನುಮಂತ, ದ್ಯಾಮವ್ವ, ದುರ್ಗವ್ವ, ಲಕ್ಷ್ಮಿ, ಸರಸ್ವತಿ, ಪಾರ್ವತಿಯರನ್ನು ಗುರುತಿಸಿ ಪೂಜಿಸುತ್ತಾರೆ. ದ್ಯಾಮವ್ವ, ದುರ್ಗವ್ವ, ಮಾರಮ್ಮ, ಕೆಂಪಮ್ಮ, ಚೌಡಮ್ಮನಂತಹ ಹೆಣ್ಣು ದೈವಗಳು ಗ್ರಾಮದೇವತೆಯ ಸ್ಥಾನದಲ್ಲಿದ್ದು ಊರಿಗೆ ಬಂದ ರೋಗ-ರುಜಿನಗಳನ್ನು ದೂರ ಮಾಡುತ್ತವೆಂಬ ನಂಬಿಕೆ ಹೊಂದಿದವರಾಗಿದ್ದಾರೆ. ಗಣಪತಿ, ಸರಸ್ವತಿ ವಿದ್ಯಾದೇವರುಗಳೆನಿಸಿದ್ದು ಬುದ್ಧಿ ನೀಡುತ್ತಾರೆ. ಲಕ್ಷ್ಮಿಯನ್ನು ಪೂಜಿಸಿದರೆ ಸಂಪತ್ತು ಹೆಚ್ಚುತ್ತದೆ. ಶಿವನನ್ನು ನೆನೆದರೆ ಕಷ್ಟಗಳು ಕಡೆಗಾಗುತ್ತವೆ. ನಾರಾಯಣನೆಂಬ ನಾಮದಿಂದ ನಾಲಗೆಗೆ ಒಳ್ಳೆಯದಾಗುತ್ತದೆ. ಹೀಗೆ ಹಲವಾರು ನಂಬಿಕೆಗಳನ್ನು ಹೊಂದಿರುವ ಜನಪದರು ದೇವರೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದ್ದಾರೆ.

ಮನುಷ್ಯನದು ಭೌತಿಕ, ವ್ಯವಹಾರಿಕ, ಲೌಕಿಕ ಬದುಕು ಇಂತಹ ಬದುಕನ್ನು ಅಲೌಕಿಕ ಚೌಕಟ್ಟಿನೊಳಗೆ ಸೆಳೆದುಕೊಂಡು ಎತ್ತು, ಭೂಮಿ, ದೈವ, ಮಳೆ, ಪಶುಪಕ್ಷಿ ಮುಂತಾದ ಮಾನವೇತರ ಸಂಬಂಧಗಳಿಗೆ ಜೀವ ತುಂಬುವ ಸಂಬಂಧಗಳು ಜನಪದ ಸಾಹಿತ್ಯದಲ್ಲಿ ಬಹುವಾಗಿ ವ್ಯಾಪಿಸಿಕೊಂಡಿವೆ. ಇಂತಹ ಸಂಬಂಧಗಳು ಜನಪದರ ಹೃದಯವೈಶಾಲ್ಯತೆಗೂ ಸಾಕ್ಷಿ ಎನಿಸಿವೆ. ರಕ್ತಸಂಬಂಧ, ಕುಲಸಂಬಂಧ, ಕೌಟುಂಬಿಕ ಸಂಬಂಧಗಳನ್ನೇ ಸೂಕ್ತವಾಗಿ ನಿಭಾಯಿಸಲಾಗದ ಪ್ರಸ್ತುತ ಕಾಲದಲ್ಲಿ ಜನಪದರ ಜೀವನ ಮೌಲ್ಯಗಳು ಇಂದಿಗೂ ಕ್ರಿಯಾಶೀಲ ಎನಿಸಿವೆ.

**೫. ಜನಪದರು ಸಂಬಂಧಗಳಲ್ಲಿ ದೊಡ್ಡಪ್ಪ, ಚಿಕ್ಕಪ್ಪ, ಮಾವ, ಅತ್ತೆ ಮುಂತಾದ ಹಿರಿಯರಿಗೆ ಗೌರವ, ಪ್ರಾಧಾನ್ಯತೆ ನೀಡಿದ್ದಾರೆ.**

ಇಂದು ಮಾನವನ ಜೀವನಶೈಲಿ ಬದಲಾಗಿದೆ. ಆಧುನಿಕತೆಯ ಬದುಕಿಗೆ ಆತ ತನ್ನನ್ನು ಒಗ್ಗಿಸಿಕೊಳ್ಳುತ್ತಿದ್ದಾನೆ. ಬದುಕು ಮತ್ತು ಮೌಲ್ಯಗಳು ಒಂದೇ ನಾಣ್ಯದ ಎರಡು ಮುಖಗಳೆಂದು

ಅರಿಯದೆ, ಬದುಕಿಗೆ ಪ್ರಾಶಸ್ತ್ಯ ನೀಡಿ ಮೌಲ್ಯಗಳನ್ನು ಕಡೆಗಣಿಸುತ್ತಿದ್ದಾನೆ. ಯಂತ್ರದಂತೆ ಕೆಲಸ ಮಾಡುವ ಮನುಷ್ಯನು ಭಾವನೆ, ಬಂಧುತ್ವ, ಸಂಬಂಧಗಳಿಗೆ ಪ್ರಾಶಸ್ತ್ಯ ನೀಡುತ್ತಿಲ್ಲ. ಇದು ಆಧುನಿಕ ಕಾಲದ ಮಾನವನ ಯಾಂತ್ರೀಕೃತ ಬದುಕಿನ ಲಕ್ಷಣವಾಗಿದೆ.

ಎಲ್ಲರನ್ನು ಗೌರವ ಭಾವನೆಯಿಂದ ಕಂಡು, ಎಲ್ಲ ಸಂಬಂಧಗಳಿಗೂ ಪ್ರಾಶಸ್ತ್ಯ ನೀಡುವ ಜನಪದರು ಪ್ರಾಚೀನ ಬದುಕಿನ ಶೈಲಿಯನ್ನು ಇಂದಿಗೂ ಜೀವಂತವಾಗಿರಿಸಿದ್ದಾರೆ. ಕಾಲ ಬದಲಾದರೂ ಇಂತಹ ಭಾವನೆಗಳು ಇಂದಿಗೂ ಗ್ರಾಮೀಣ ಭಾಗಗಳಲ್ಲಿ ಜಾಗೃತವಾಗಿವೆ. ತನಗಿಂತ ಹಿರಿಯರಿಗೆ ಗೌರವಿಸುವುದು. ದೊಡ್ಡಪ್ಪ, ಚಿಕ್ಕಪ್ಪ ಹೇಳಿದ ಮಾತುಗಳನ್ನು ಕಾರ್ಯರೂಪಕ್ಕೆ ತರುವುದು. ಪರಸ್ಪರ ಸಹಕಾರ ಮನೋಭಾವನೆಯಿಂದ ವರ್ತಿಸುವುದು. ಜನಪದರ ಬದುಕಿನ ಶೈಲಿಯಲ್ಲಿ ಅಡಕಗೊಂಡ ಪಾವಿತ್ರ್ಯತೆ ಮತ್ತು ಪರಿಶುದ್ಧತೆಯನ್ನು ಎತ್ತಿ ತೋರಿಸುತ್ತವೆ.

ಗ್ರಾಮೀಣ ಭಾಗದಲ್ಲಿ ವಾಸಿಸುವ ನೆರೆಹೊರೆಯವರನ್ನು ಸಹಿತ ದೊಡ್ಡಪ್ಪ, ಚಿಕ್ಕಪ್ಪ, ದೊಡ್ಡಮ್ಮ, ಚಿಕ್ಕಮ್ಮನೆಂದು ಕರೆಯುವ ರೂಢಿಯಿದೆ. ಪರಸ್ಪರರಲ್ಲಿ ಯಾವುದೇ ರಕ್ತಸಂಬಂಧವಿರದಿದ್ದರೂ, ಅವರು ಅನ್ಯ ಧರ್ಮ, ಜಾತಿಗೆ ಸೇರಿದವರಾಗಿದ್ದಾಗಲೂ ಪರಸ್ಪರ ಸಂಬಂಧವಾಚಕಗಳನ್ನು ಬಳಸಿ ಕರೆಯುವುದು ರೂಢಿಯಲ್ಲಿದೆ. ಇದರಿಂದ ಸಮಾಜದಲ್ಲಿ ಸೌಹಾರ್ದ ವಾತಾವರಣ ಬೆಳೆದು, ಏಳಿಗೆಯನ್ನು ಹೊಂದಬಹುದು. ಹಿರಿಯರಿಗೆ ಗೌರವ ಪ್ರಾಧಾನ್ಯತೆ ಜನಪದರಲ್ಲಿ ಕಂಡುಬರುತ್ತದೆ.

**೬) ಜನಪದರಲ್ಲಿ ಹಿರಿಯರು-ಕಿರಿಯರು, ನೆರೆಹೊರೆಯವರು ಪರಸ್ಪರ ಸಂಬೋಧಿಸುವಾಗ ವಿಶೇಷ ಪದ್ಧತಿಗಳು ರೂಢಿಯಲ್ಲಿವೆ.**

ಜನಪದರಿಗೆ ಜಾತಿಯ ಹಂಗಿಲ್ಲ. ಸಮಾಜದಲ್ಲಿರುವ ಎಲ್ಲ ಜನರೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದ್ದಾರೆ. ಹಿರಿಯರಿಗೆ, ಕಿರಿಯರಿಗೆ, ಸಮವಯಸ್ಕರಿಗೆ ಹಾಗೂ ನೆರೆಹೊರೆಯವರಿಗೆ ಸಂಬೋಧಿಸುವಾಗ ವಿಶೇಷ ಪದ್ಧತಿಗಳನ್ನು ಬಳಕೆಗೆ ತಂದಿದ್ದಾರೆ. ಎಲ್ಲರೂ ತಮ್ಮ ಬಂಧುಗಳಂತೆ ಭಾವಿಸಿ ಹಲವಾರು ಸಂಬಂಧವಾಚಕಗಳನ್ನು ಬಳಸಿ ಸಂಬೋಧಿಸುತ್ತಾರೆ. ಹಿರಿಯರನ್ನು ಮಾತನಾಡಿಸುವಾಗ ಅಪ್ಪ, ಅಣ್ಣ, ಚಿಕ್ಕಪ್ಪ, ಅವ್ವ, ಅಕ್ಕ, ಮಾವ, ಅತ್ತೆ ಮುಂತಾದ ಸಂಬಂಧವಾಚಕಗಳನ್ನು ಯಾವುದೇ ಸಂಬಂಧವಿಲ್ಲದಿದ್ದರೂ ಬಳಸುತ್ತಾರೆ. ಅದು ಸಮಾಜದಲ್ಲಿ ಗೌರವದಿಂದ ಬದುಕಲು ಹಾಗೂ ಬಾಂಧವ್ಯವನ್ನು ಗಟ್ಟಿಗೊಳಿಸಲು ಸಹಾಯಕವಾಗುತ್ತವೆ.

ಇನ್ನು ಕಿರಿಯರನ್ನು ಸಂಬೋಧಿಸುವಾಗ ತಂಗಿ, ತಮ್ಮ, ಮಗಳೇ, ಮಗನೇ ಎಂಬ ಸಂಬಂಧವಾಚಕಗಳ ಬಳಕೆಯು ಜನಪದರಲ್ಲಿದೆ. ಯಾವುದೇ ಅಪರಿಚಿತರು ಪರಸ್ಪರ ಮಾತನಾಡುವಾಗ ಮೊದಲಿಗೆ ಬಳಕೆಗೆ ಬರುವ ಪದಗಳೇ ಸಂಬಂಧವಾಚಕಗಳು ಎಂಬುದನ್ನು ಮರೆಯುವ ಹಾಗಿಲ್ಲ. ಉದಾಹರಣೆಗೆ 'ಅಕ್ಕಾ ಸ್ವಲ್ಪ ನೀರು ಕೊಡಿ, ತಮ್ಮಾ ಈ ವಿಳಾಸ ಎಲ್ಲಿ ಬರುತ್ತದೆ?, ಅಪ್ಪಾವ್ರು ಹೇಳಿ ಕಳುಹಿಸಿದ್ರು' ಹೀಗೆ ಪರಸ್ಪರ ರಕ್ತಸಂಬಂಧ, ಕೌಟುಂಬಿಕ ಸಂಬಂಧ, ವೈವಾಹಿಕ ಸಂಬಂಧಗಳಿಲ್ಲದಿದ್ದರೂ ಗಾಢಸಂಬಂಧ ಇರುವಂತೆಯೇ ಪರಸ್ಪರರು ಒಡನಾಡುತ್ತಾರೆ.

ನೆರೆಹೊರೆಯವರ ವಿಚಾರಕ್ಕೆ ಬಂದರಂತೂ ಪಕ್ಕದ ಮನೆಯಲ್ಲಿ ವಾಸಿಸುವ ಯಾವುದೇ ಜಾತಿ, ಜನಾಂಗ, ಕುಲ, ಗೋತ್ರಕ್ಕೆ ಸೇರಿದ ಕುಟುಂಬವಾಗಿದ್ದರೂ ಸಹಿತ ಅವರೊಂದಿಗೆ ಉತ್ತಮಬಾಂಧವ್ಯವನ್ನು ಇಟ್ಟುಕೊಳ್ಳುವ ಸಂಪ್ರದಾಯ ಜನಪದರಲ್ಲಿದೆ. ಅವರನ್ನು ಕೂಡ ಮೇಲ್ಕಂಡ ರೀತಿಯಲ್ಲಿಯೇ ಸಂಬೋಧಿಸುವ ರೂಢಿ ಜನಪದರಲ್ಲಿ ಇದೆ. ಇವುಗಳಿಂದ ಸಮಾಜದಲ್ಲಿ ಶಾಂತಿ, ಸಹಕಾರ, ಸಹಬಾಳ್ವೆ ತತ್ವಗಳು ಒಡಮೂಡಿ ಐಕ್ಯತೆಯಿಂದ ನೆಮ್ಮದಿಯ ಬದುಕನ್ನು ಬದುಕಲು ಸಹಾಯವಾಗುತ್ತವೆ. ಇಂದಿನ ಜಾತಿ, ಮತ, ಪಂಥಗಳ ಲೆಕ್ಕಾಚಾರದ ಬದುಕಿನಲ್ಲಿ ಜನಪದರ ಇಂತಹ ವಿಶೇಷ ಪದ್ಧತಿಗಳು ಎಲ್ಲರಿಗೂ, ಎಲ್ಲ ಸಮಾಜಕ್ಕೂ ಅನುಕರಣೀಯ.

**೭) ಜನಪದರಲ್ಲಿ ಸಹ್ಯ ಸಂಬಂಧಗಳಿಗೆ ಸಮನಾಗಿ ವೈರುಧ್ಯ ಸಂಬಂಧಗಳೂ ಕಂಡುಬರುತ್ತವೆ.**

ಜನಪದ ಗೀತೆಗಳಲ್ಲಿ ಸಂಬಂಧಗಳು ವೈವಿಧ್ಯಮಯವಾಗಿ ದಾಖಲಾಗಿವೆ. ಯಾವುದೇ ಹೊಸ ಬಾಂಧವ್ಯ ಬೆಸೆದುಕೊಂಡಾಗ ಕೆಲವು ಸಂದರ್ಭಗಳಲ್ಲಿ ಪೂರ್ವದ ಸಂಬಂಧಗಳು ಮುಂಚಿನ ಪ್ರೀತಿಯನ್ನು ಪಡೆಯಲು ವಿಫಲವಾಗುತ್ತವೆ. ಮದುವೆಯ ಬಳಿಕ ಗಂಡನಾಗಲಿ ಅಥವಾ ಹೆಂಡತಿಯಾಗಲಿ ಪೂರ್ವದ ಸಂಬಂಧಗಳನ್ನು ಅಷ್ಟಾಗಿ ಪರಿಗಣಿಸುವುದಿಲ್ಲ. ಮದುವೆಯ ನಂತರ ಹೆಂಡತಿಗೆ ಗಂಡನೇ, ಗಂಡನ ಮನೆಯೇ ಸರ್ವಶ್ರೇಷ್ಠವಾಗುತ್ತದೆ. ತವರಿನ ಮೋಹವಿದ್ದರೂ ತನ್ನ ಭವಿಷ್ಯತ್ತಿಗಾಗಿ ತಾಯಿ, ತಂದೆ, ಅಣ್ಣ, ತಮ್ಮ, ತಂಗಿ ಮುಂತಾದವರ ವಾತ್ಸಲ್ಯದಿಂದ ವಂಚಿತಳಾಗುತ್ತಾಳೆ. ಮದುವೆಗೂ ಮುನ್ನ ಇದ್ದ ಅಣ್ಣ-ತಂಗಿಯರ ಪ್ರೀತಿ-ಬಾಂಧವ್ಯ ಅಣ್ಣನ ಮದುವೆಯ ನಂತರ ಕಾಣೆಯಾದ ಉದಾಹರಣೆಗಳಿವೆ. ಹಾಗೆಯೇ ತಂದೆಗೆ ಹಿರಿಯಮಗ ಮತ್ತು ಹಿರಿಯ ಮಗಳ ಮೇಲಿರುವ ಪ್ರೀತಿ, ವಾತ್ಸಲ್ಯವು ಕಿರಿಯ ಮಗ ಮತ್ತು ಕಿರಿಯ ಮಗಳ ಮೇಲೆ ಇಲ್ಲ. ಇದಕ್ಕೆ ವಿರುದ್ಧವಾಗಿ ತಾಯಿಗೆ ಕಿರಿಯ ಮಗ ಮತ್ತು ಕಿರಿಯ ಮಗಳ ಮೇಲಿರುವ ಪ್ರೀತಿ, ವಾತ್ಸಲ್ಯವು ಹಿರಿಯ ಮಗ ಮತ್ತು ಹಿರಿಯ ಮಗಳ ಮೇಲೆ ಇಲ್ಲ. ಈ ರೀತಿ ಲಭ್ಯವಿರುವ ಅಸಂಖ್ಯಾತ ಜನಪದ ಗೀತೆಗಳಲ್ಲಿ ಸಹ್ಯ ಸಂಬಂಧಗಳಿಗೆ ಸಮನಾಗಿ ವೈರುಧ್ಯ ಸಂಬಂಧಗಳೂ ಕಂಡುಬರುತ್ತವೆ.

ಅತ್ತೆ-ಸೊಸೆಯು ತಾಯಿ-ಮಗಳಂತೆ, ಮಾವ-ಅಳಿಯನು ತಂದೆ-ಮಗನಂತೆ, ಅತ್ತೆ-ಮಾವರನ್ನು ತಾಯಿ-ತಂದೆಯಂತೆ, ತಮ್ಮನಂತೆ ಮೈದುನನ್ನು, ತಂಗಿಯಂತೆ ನಾದಿನಿಯನ್ನು, ಭಾವನಲ್ಲಿ ಹಿರಿಯಣ್ಣನ ಔಚಿತ್ಯಗಳನ್ನು ಕಂಡುಕೊಳ್ಳುವುದರ ಜೊತೆಗೆ ಸಾಂಪ್ರದಾಯಿಕ ಚೌಕಟ್ಟಿನಿಂದ ಹೊರಬಂದು ಪ್ರೀತಿ, ವಾತ್ಸಲ್ಯಗಳ ನೆಲೆಯಲ್ಲಿ ಬಾಂಧವ್ಯವು ಒಡಮೂಡಿ ಸಂಬಂಧಗಳನ್ನು ಗಟ್ಟಿಗೊಳಿಸಿದ ಉದಾಹರಣೆಗಳು ಸಾಕಷ್ಟಿವೆ. ಆದರೆ ಕೆಲವು ಸಂಬಂಧಗಳು ಸಮಾಜದ ಎಲ್ಲೆ ಮೀರಿ, ನೈತಿಕತೆಯ ಚೌಕಟ್ಟನ್ನು ಮುರಿದು ಅನೈತಿಕತೆಯ ಹಾದಿ ಹಿಡಿದ ಸಂದರ್ಭಗಳುಂಟು. ಭಾವನು ತನ್ನ ನಾದಿನಿಯನ್ನು ಮೋಹಿಸುವುದು, ಸೂಳೆಯರ ಸಹವಾಸ ಮಾಡುವುದು, ವಿವಾಹದ ಬಳಿಕವೂ ಪ್ರೇಮಿಯನ್ನು ಕೂಡುವುದು ಮುಂತಾದ ವೈರುಧ್ಯ ಸಂಬಂಧಗಳನ್ನು ಗುರುತಿಸಲಾಗಿದೆ. ಜನಪದರು ಇಂತಹ ವೈರುಧ್ಯ ಸಂಬಂಧಗಳಿಗೆ ಮಣೆ ಹಾಕದೆ ಸಹ್ಯ ಸಂಬಂಧಗಳನ್ನು ಹೊಂದುವುದರೊಂದಿಗೆ

ಆದರ್ಶ ಸಮಾಜಕ್ಕೆ ಬುನಾದಿಯನ್ನು ಹಾಕಿದ್ದಾರೆ. ಜನಪದ ಗೀತೆಗಳಲ್ಲಿ ಬಹುಪಾಲು ಸಹ್ಯ ಸಂಬಂಧಗಳನ್ನು ಅಭಿವ್ಯಕ್ತಿಸಿದ್ದಾರೆ. ಅನೈತಿಕತೆಯಿಂದ ಆಗುವ ಅಪಾಯವನ್ನು ಸಮಾಜಕ್ಕೆ ತಿಳಿಸಲು ವೈರುಧ್ಯ ಸಂಬಂಧಗಳ ದೃಷ್ಟಾಂತಗಳನ್ನು ನೀಡಿದ್ದಾರೆ.

**೮) ಅತ್ತೆ-ಅಳಿಯ-ಮಾವ, ಭಾವ-ಭಾಮೈದ ನಾದಿನಿ ಮುಂತಾದ ಸಂಬಂಧಗಳಲ್ಲಿ ತಮಾಷೆ ಮಾಡುವ ವೈನೋದಿಕ ಪ್ರವೃತ್ತಿ ರೂಢಿಯಲ್ಲಿದೆ.**

ಜನಪದರ ಬದುಕಲ್ಲಿ ಏಳಿರಲಿ, ಬೀಳಿರಲಿ ಹಿಗ್ಗದೆಯೇ ಕುಗ್ಗದೆಯೇ ಬಾಳಿದವರು. ಬದುಕಿನ ಎಲ್ಲ ಹಂತಗಳಲ್ಲಿಯೂ ಸಹನೆಯಿಂದ ನಡೆದವರು. ಆದ್ದರಿಂದಲೇ ಅವರ ಬದುಕು ಸುಂದರವಾಗಿದೆ. ಅಪ್ಪ-ಅಮ್ಮನನ್ನು ಕಂಡಾಗ ಗೌರವ, ಚಿಕ್ಕಪ್ಪ-ದೊಡ್ಡಪ್ಪನನ್ನು ಕಂಡಾಗ ಭಯ, ಅತ್ತೆ-ಮಾವನನ್ನು ಕಂಡಾಗ ಗೌರವದಿಂದಲೆ ಕಾಲೆಳೆಯುವ ಮನೋಭಾವ, ಸೊಸೆ-ಅಳಿಯನನ್ನು ಕೀಟಲೆ ಮಾಡುವ ಬುದ್ಧಿ ಹೀಗೆ ಮುಂತಾದವುಗಳು ಜನಪದರ ಸಮರಸ ಬದುಕಿಗೆ ಸಾಕ್ಷಿಯಾಗಿವೆ. ಕೋಪ, ಹರ್ಷ, ಉತ್ಸಾಹ, ದುಃಖ, ಹಾಸ್ಯ ಮುಂತಾದ ಹಲವು ಸ್ಥಾಯಿಭಾವಗಳನ್ನು ಜನಪದರು ಹೊಂದಿದ್ದಾರೆ. ಅವುಗಳಂತೆಯೇ ಸಂಬಂಧಗಳನ್ನು ನಿಭಾಯಿಸುತ್ತ ಬಂದಿದ್ದಾರೆ.

ಅತ್ತೆಯು ಅಳಿಯನಿಗೆ ಕಾಲೆಳೆಯುವುದು, ಅಳಿಯ ಮಾವನಿಗೆ ವ್ಯಂಗ್ಯ ಮಾತನಾಡುವುದು, ಭಾವ-ನಾದಿನಿಯರ ಸರಸ; ಸೋದರಮಾವ-ಸೋದರಸೊಸೆಯರ ನಡುವಿನ ಕೀಟಲೆಗಳು ಮುಂತಾದ ಸನ್ನಿವೇಶಗಳು ಜನಪದರ ಬದುಕಿನ ದುಃಖವನ್ನು ಕಳೆದು ಹರ್ಷವನ್ನು ತುಂಬುವಂತಿವೆ. ಸಂಪ್ರದಾಯಗಳ ಚೌಕಟ್ಟನ್ನು ಮುರಿಯದೆ, ಸಂಬಂಧಗಳಿಗೆ ದಕ್ಕೆ ಬಾರದ ಹಾಗೆ ಎಲ್ಲವನ್ನು ನಿಭಾಯಿಸುವ ಜನಪದರ ಕೌಶಲ್ಯವನ್ನು ಮೆಚ್ಚತಕ್ಕದ್ದು. ಅನೇಕ ಸಂದರ್ಭಗಳಲ್ಲಿ ಜನಪದರ ನಗೆಚಾಟಿಕೆ ಸ್ವಭಾವವನ್ನು ಇಂದಿನವರು ಅವಮಾನವೆಂದು ಭಾವಿಸುವುದುಂಟು. ಕೇವಲ ಮನೋರಂಜನೆಗಾಗಿ, ನಕ್ಕು-ನಲಿಯುವುದಕ್ಕಾಗಿ ಜನಪದರು ನಗೆಚಾಟಿಕೆ ಮಾಡಿದರೆ, ಇಂದಿಗೆ ಅವು ಅಪಾರ್ಥಗೊಂಡು ಮನೋಶ್ಲೇಷೆಯನ್ನು ತಂದೊಡ್ಡುತ್ತವೆ.

ಇಲ್ಲಿನ ಬಾಂಧವ್ಯಗಳಲ್ಲಿನ ವ್ಯಂಗ್ಯವು ಕೀಳಲ್ಲ. ಬದುಕಿನ ಸಮರಸದ ಪ್ರತೀಕ. ಬದುಕಿನ ಏಳುಬೀಳಲ್ಲಿ ಸಹಿಸಿಕೊಳ್ಳುವ ಸಾಮರ್ಥ್ಯವನ್ನು ಕಟ್ಟಿಕೊಡಲು ನೆರವಾಗುತ್ತವೆ. ವೈನೋದಿಕ ಪ್ರವೃತ್ತಿಯಿಂದ ಸಂತೋಷ ಹೊಂದಲು ಕಾರಣವಾಗುತ್ತವೆ. ನಗಲು-ನಗಿಸಲು ದುಡ್ಡು ಕೊಡಬೇಕಾದ ಪ್ರಸ್ತುತ ಸಂದರ್ಭದಲ್ಲಿ ಇಂತಹ ಸಂಬಂಧಗಳು ಅಗತ್ಯವೆನಿಸಿವೆ. ತನ್ನ ನೋವು-ಅವಮಾನವನ್ನು ಮರೆತು ಇನ್ನೊಬ್ಬರ ಮುಖದಲ್ಲಿ ನಗು ತರುವ ಕಾಯಕವು ಯಾವಾಗಲೂ ಶ್ರೇಷ್ಠವಾಗಿರುತ್ತದೆ. ಬದುಕಿನ ಜಂಜಡಗಳನ್ನು, ಒತ್ತಡಗಳನ್ನು, ಗಂಭೀರತೆಯನ್ನು ಸ್ವಲ್ಪ ಮಟ್ಟಿಗೆ ನಿವಾರಿಸುವ ಹಾಗೂ ಸಂತೋಷವನ್ನು ಹೊಂದುವ ಗುಣ ಜನಪದರಲ್ಲಿದೆ. ಬದುಕಿನ ಏಕಾನತೆಯನ್ನು ಮುರಿದು ಕೂಡಿ ಜೀವಿಸುವ ಸಹಕಾರ ಮನೋಭಾವವನ್ನು ಬೆಳೆಸಲು ಮೇಲ್ಕಂಡ ಸಂಬಂಧಗಳು ಸಹಕಾರಿಯಾಗಿವೆ.

**೯) ಭೂಮಿ, ಪ್ರಕೃತಿ, ದೇವರು, ಪ್ರಾಣಿ ಮತ್ತು ಪಕ್ಷಿಗಳೊಂದಿಗೆ ಜನಪದರು ಕೃತಜ್ಞತೆ ಹಾಗೂ ಪೂಜ್ಯ ಭಾವನೆಗಳನ್ನು ಹೊಂದಿದ್ದಾರೆ.**

ಪ್ರಸ್ತುತ ಅಧ್ಯಯನದಲ್ಲಿ ಮಾನವೇತರ ಸಂಬಂಧಗಳೆಂದರೆ ಭೂಮಿ, ಪ್ರಕೃತಿ, ಬಸವ (ಎತ್ತು), ಪ್ರಾಣಿ ಮತ್ತು ಪಕ್ಷಿಗಳೊಂದಿಗೆ ಜನಪದರು ಹೊಂದಿರುವ ವಿಶೇಷ ಸಂಬಂಧಗಳ ಕುರಿತಾಗಿ ವಿಶ್ಲೇಷಿಸಲಾಗಿದೆ. ಜನಪದರಿಗೆ ಭೂಮಿಯೇ ತಾಯಿ, ಮಳೆಯೇ ರಾಜ, ಪ್ರಕೃತಿಯೇ ಮಾತೆ, ಎತ್ತುಗಳೇ ಗೆಳೆಯರು ಎಂಬುದನ್ನು ಹಲವಾರು ಸಂದರ್ಭಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ತಮ್ಮ ಎಲ್ಲ ಚಟುವಟಿಕೆಗಳಲ್ಲಿ ನೆರವಾಗುವ ಪ್ರತಿಯೊಂದು ಭೌತಿಕ ವಸ್ತುಗಳನ್ನು, ಪ್ರಾಣಿ-ಪಕ್ಷಿಗಳನ್ನು ಕೃತಜ್ಞತೆಯ ಭಾವನೆಯಿಂದ ಕಾಣುತ್ತಾರೆ. ಜನಪದರು ತಮ್ಮ ದೈನಂದಿನ ಜೀವನದಲ್ಲಿ ಅವುಗಳನ್ನು ಸ್ಮರಿಸುತ್ತಾರೆ.

ಪ್ರಕೃತಿಯು ಮಾನವನ ಕುತೂಹಲವನ್ನು ಹೆಚ್ಚಿಸಿದ್ದು, ಭಯ-ಭೀತಿಯನ್ನು ಹುಟ್ಟಿಸಿದ್ದು, ಪ್ರಕೃತಿಯ ಅನಂತ ಶಕ್ತಿಯು ವಿವಿಧ ಬಗೆಯಲ್ಲಿ ಪ್ರಕಟಗೊಂಡು ಮಾನವನಲ್ಲಿ ಬಗೆಬಗೆಯ ಭಾವನೆಗಳನ್ನು ಹುಟ್ಟುಹಾಕಿತು. ಆರಂಭದಲ್ಲಿ ಪ್ರಕೃತಿಯ ಪ್ರತಿಯೊಂದು ಘಟನೆಗಳಿಗೂ ಒಂದೊಂದು ಕಥೆ ಕಟ್ಟಿ ಗೌರವಿಸತೊಡಗಿದ. ಪೂಜಿಸತೊಡಗಿದ. ದುರ್ಘಟನೆಗಳು ಜರುಗಿದಾಗ ಭಯಭೀತನಾಗತೊಡಗಿದ. ಹೀಗೆಯೇ ಪ್ರಕೃತಿಯೊಂದಿಗೆ ಮಾನವನ ಬಾಂಧವ್ಯ ಬೆಳೆಯಿತು.

ಜನಪದರ ಮೂಲವೃತ್ತಿ ಕೃಷಿ ಮತ್ತು ಕೃಷಿಯಾಧಾರಿತ ಕಾರ್ಯಗಳು. ಕೃಷಿಯಲ್ಲಿ ತಮಗೆ ನೆರವಾಗುವ ಭೂಮಿ, ಬಸವ, ಮಳೆಯೊಂದಿಗೆ ಭಾವನಾತ್ಮಕ ಸಂಬಂಧವನ್ನು ಜನಪದರು ಹೊಂದಿದ್ದಾರೆ. ಭೂಮಿಯನ್ನು ಅನ್ನ ನೀಡುವ ತಾಯಿ. ತಮ್ಮನ್ನು ಸಲಹುವ ಮಾತೆ ಎಂದಿದ್ದಾರೆ. ಬಸವನನ್ನು ಮಾರ್ಗದರ್ಶಕ, ಗೆಳೆಯನೆಂದು ಕರೆದು ಕೃತಜ್ಞತೆಯನ್ನು ಅರ್ಪಿಸುವ ಜನಪದರು ಹಲವಾರು ಪ್ರಸಂಗಗಳಲ್ಲಿ ಪೂಜ್ಯ ಭಾವನೆಯಿಂದ ಪೂಜಿಸುತ್ತಾರೆ. ಮಳೆಯು ಕೂಡ ಕೃಷಿಯಲ್ಲಿ ಪ್ರಮುಖ ಪಾತ್ರವಹಿಸುವುದರಿಂದಲೋ ಏನೋ ಜನಪದರ ಬದುಕಿನಲ್ಲಿ ಮಳೆ 'ರಾಜ'ನಾಗಿ ಮಾರ್ಪಟ್ಟಿದ್ದಾನೆ. ಅವನ ಮುನಿಸಿಗೆ ಕಾರಣರಾದರೆ ಬರಗಾಲ ಬರುವುದೆಂದು ಭಾವಿಸಿ, ಪೂಜೆ ಪುನಸ್ಕಾರಗಳ ಮೂಲಕ ಸಂತೈಸಿ ಮಳೆಯನ್ನು ಬರಮಾಡಿಕೊಳ್ಳುತ್ತಾರೆ.

ಜನಪದರು ತಮ್ಮ ಜೊತೆಯಲ್ಲಿಯೇ ಪ್ರಾಣಿ-ಪಕ್ಷಿಗಳು, ಗಿಡಮರಗಳಿರಬೇಕೆಂಬ ಉದ್ದೇಶವನ್ನು ಹೊಂದಿದವರಾಗಿದ್ದಾರೆ. ಪ್ರಕೃತಿಯಿಲ್ಲದ ಬದುಕು ಬದುಕೇ ಅಲ್ಲವೆಂಬುದನ್ನು ಅರಿತು ಸಕಲ ಪ್ರಾಣಿ-ಪಕ್ಷಿಗಳಲ್ಲಿ ದಯೆಯನ್ನು ತೋರುತ್ತ ಬಂದಿದ್ದಾರೆ. ಹಾಲು-ಹಯನಕ್ಕೆ, ಉಸಿರು-ನೆರಳಿಗೆ, ಮಳೆ-ಬೆಳೆಗಾಗಿ ಪ್ರಾಣಿ-ಪಕ್ಷಿ ಹಾಗೂ ಗಿಡಮರಬಳ್ಳಿಗಳು ನೆರವಾಗುತ್ತವೆ ಎಂಬುದನ್ನು ಅರಿತವರಾಗಿದ್ದರು. ಆದ್ದರಿಂದಲೇ ಕೆಲವು ಪ್ರಾಣಿ, ಪಕ್ಷಿ, ಗಿಡ, ಮರಗಳನ್ನು ಇಂದಿಗೂ ಪೂಜಿಸುವ ರೂಢಿ ಜನಪದರಲ್ಲಿದೆ. ಕೇವಲ ಮಾನವ ಸಂಬಂಧಗಳನ್ನು ಮಾತ್ರ ನಿಭಾಯಿಸದೇ ಎಲ್ಲ ಹಂತದ ಬದುಕಿಗೂ ರಹದಾರಿಯನ್ನು ಜನಪದರು ನಿರ್ಮಿಸಿಕೊಟ್ಟಿದ್ದಾರೆ. ಅವುಗಳನ್ನು ಗ್ರಹಿಸಿ ಬದುಕುವ ಅನಿವಾರ್ಯತೆ ಇಂದಿನ ಪ್ರಪಂಚಕ್ಕೆ ಅಗತ್ಯವೆನಿಸಿದೆ.

೧೦) **ಜನಪದರ ಸಂಬಂಧಗಳಲ್ಲಿ ಪರಸ್ಪರ ದೂರವಿಡುವ, ಅಲಕ್ಷಿಸುವ ಹಾಗೂ ನಿಷೇಧಿಸುವ ಆಚರಣೆಗಳು ರೂಢಿಯಲ್ಲಿವೆ.**

ಜನಪದರ ಸಮಾಜವು ಪ್ರತಿಯೊಂದು ಬಾಂಧವ್ಯಗಳಿಗೆ ತನ್ನದೆ ಅರ್ಥವನ್ನು ಹೊಂದಿದೆ. ರೂಢಿ, ಸಂಪ್ರದಾಯ, ಆಚರಣೆಗಳ ಹೆಸರಿನಲ್ಲಿ ಕೆಲವು ಬಾಂಧವ್ಯಗಳನ್ನು ದೂರವಿಟ್ಟರೆ, ಇನ್ನು ಕೆಲವು ಸಂಬಂಧಗಳನ್ನು ಬದುಕಿಗೆ ತೊಡಕಾಗಬಹುದೆಂದು ಅಲಕ್ಷಿಸುತ್ತಾರೆ. ಹೆಣ್ಣನ್ನು ಕೇಂದ್ರವಾಗಿಟ್ಟುಕೊಂಡು ರೂಪುಗೊಂಡ ಸಂಬಂಧಗಳಲ್ಲಿ ಹೆಣ್ಣನ್ನೇ ಅಲಕ್ಷಿಸುವುದು ಹಾಗೂ ದೂರವಿಡುವುದು ವಿಪರ್ಯಾಸದ ಸಂಗತಿ. ಜನಪದರು ಉಳಿದ ಸಂಬಂಧಗಳಿಗಿಂತ ಬಂಜೆ, ವಿಧವೆ, ಸೂಳೆ, ಮಲತಾಯಿ, ಮಲಮಕ್ಕಳು ಮುಂತಾದವುಗಳನ್ನು ನೋಡುವ ಕ್ರಮವೇ ಭಿನ್ನವಾಗಿದೆ. ಇಂತಹ ಸಂಬಂಧಗಳೊಡನೆ ವ್ಯವಹರಿಸುವಲ್ಲಿ ಜನಪದರ ನಿರ್ಲಕ್ಷ್ಯ ಧೋರಣೆಯು ಕಂಡುಬರುತ್ತದೆ.

ಮಾನವೀಯ ನೆಲೆಯಲ್ಲಿ ಅಲಕ್ಷಿತ ಸಂಬಂಧಗಳನ್ನು ನಿಷೇಧಿಸಿದರೂ ಸಮಾಜದಲ್ಲಿ ಜೀವಿಸುವ ಅವಕಾಶವನ್ನು ನೀಡಿರುತ್ತಾರೆ. ಬಹಿಷ್ಕಾರ, ಉಗ್ರ ಶಿಕ್ಷೆಗಳಂತಹ ಕ್ರೌರ್ಯಕ್ಕೆ ಇಳಿಯುವುದಿಲ್ಲ. ಜನಪದರಿಗೆ ವಿಧವೆ, ಬಂಜೆಯರ ವಿಚಾರದಲ್ಲಿ ಕರುಣೆ, ಕನಿಕರ ಹುಟ್ಟುತ್ತದೆ. ಅವರ ಸ್ಥಿತಿಗೆ ಮರುಗುತ್ತಾರೆ. ಆದರೆ ಸಂಪ್ರದಾಯವು ಕೆಲವೊಮ್ಮೆ ಕರುಣೆಯನ್ನು ಕಸಿದುಕೊಳ್ಳುತ್ತದೆ. ಸಮಾಜದ ರೀತಿ-ರಿವಾಜುಗಳಿಗೆ ಹೆದರಿ ಜನಪದರೂ ಎಲ್ಲರಂತೆಯೇ ಬದುಕಬೇಕಾದ ಅನಿವಾರ್ಯತೆ ಸೃಷ್ಟಿಯಾಗುತ್ತದೆ. ಎಲ್ಲೆಯಿರದ ಪ್ರಸ್ತುತ ಜಗತ್ತಿನಲ್ಲಿ ಇಂತಹ ಸೂಕ್ಷ್ಮಗಳನ್ನು ಅರಿತರೆ ಸಹಬಾಳ್ವೆ ಒಡಮೂಡಲು ಸಾಧ್ಯವಾಗುತ್ತದೆ.

ಆಧುನಿಕ ಜಗತ್ತಿನಲ್ಲಿ ವಿಜ್ಞಾನದ ಅರಿವಿನ ಮೂಲಕ ಪರಸ್ಪರ ದೂರವಿರುವ ಅಥವಾ ಅಲಕ್ಷಿಸುವ ಮನೋಭಾವ ದೂರವಾಗಿದೆ. ಶಿಕ್ಷಿತರಾಗುವ ಮೂಲಕ ಮೌಢ್ಯಗಳನ್ನು ತೊಡೆದು ವಿಧವೆಗೆ ಪುನರ್ ವಿವಾಹಗಳು ನಡೆಯುತ್ತಿವೆ. ಮಕ್ಕಳಿಲ್ಲದ ಹೆಣ್ಣುಮಕ್ಕಳು ದತ್ತು ಮಕ್ಕಳನ್ನು ಹೊಂದುವ ಮೂಲಕ ತಾಯ್ತನವನ್ನು ಪಡೆಬಹುದಾಗಿದೆ. ಇಲ್ಲವೇ ಆಧುನಿಕ ವೈದ್ಯಕೀಯ ಸೇವೆಗಳ ಸಹಾಯದಿಂದ ತಮ್ಮದೇ ಮಗುವನ್ನು ಹೊಂದುವ ಅವಕಾಶವಿದೆ. ಮಲತಾಯಿ-ಮಲಮಕ್ಕಳೆಂಬ ಬೇಧವು ದೂರವಾಗಿ ವಿಶಾಲ ಮನೋಭಾವವು ಬೆಳೆದಿದೆ. ಜನಪದರ ಸಮಾಜದಲ್ಲಿ ತೆರೆಮರೆಯ ಮತ್ತು ಬಹಿಷ್ಕಾರದ ನಡುವೆಯು ಜೀವಂತವಾಗಿದ್ದ ಸೂಳೆಗಾರಿಕೆಯು ಕೆಲವು ದೇಶಗಳಲ್ಲಿ ಉದ್ಯಮವಾಗಿ ರೂಪುಗೊಂಡಿದೆ. ಹೀಗಿರುವಾಗ ಜನಪದರಲ್ಲಿನ ಮೌಢ್ಯಗಳು ದೂರವಾಗಿ ಆಧುನಿಕ ಬದುಕಿನ ಮೌಲ್ಯಗಳನ್ನು ಹೊಂದುವ ಮೂಲಕ ಶ್ರೇಷ್ಠತೆಯನ್ನು ಸಾಧಿಸಬೇಕು. ಬಂಜೆ, ವಿಧವೆ, ಮಲತಾಯಿ, ಮಲಮಕ್ಕಳ ಕುರಿತು ಉದಾರತೆಯನ್ನು ತೋರಿದ ಸಮಾಜವು ಸೂಳೆಯ ಕುರಿತಂತೆ ಇನ್ನು ಮೌನವಾಗಿದೆ.

**೧೧) ಆಧುನಿಕತೆಯ ಪ್ರವೇಶದಿಂದ ಜನಪದರ ಬಾಂಧವ್ಯಗಳಲ್ಲಿನ ಸೆಳೆತವು ಕಡಿಮೆಯಾಗಿ ಅಪಾಯದಂಚಿನಲ್ಲಿವೆ.**

ಆಧುನಿಕತೆ ಬೆಳೆದಂತೆಲ್ಲ ಮಾನವೀಯ ಸಂಬಂಧಗಳಲ್ಲಿನ ಪ್ರೀತಿ, ವಿಶ್ವಾಸ, ನಂಬಿಕೆ, ಸಹಕಾರ ಮುಂತಾದ ಮೌಲ್ಯಗಳು ಕಡಿಮೆಯಾಗುತ್ತಿವೆ. ಜೀವನದಲ್ಲಿ ಸಾಧನೆ ಮಾಡಬೇಕೆಂಬ ಕನಸನ್ನು ಕಟ್ಟಿಕೊಂಡ ಆಧುನಿಕ ಮಾನವ ಹಣ, ಅಂತಸ್ತು, ಆಸ್ತಿಗಳ ಬೆನ್ನುಹತ್ತಿದ್ದಾನೆ. ಸ್ವಾರ್ಥವೇ ತುಂಬಿದ ಬದುಕಿನಲ್ಲಿ ಅಹಂಕಾರದ ಗೋಡೆ ಕಟ್ಟಿಕೊಂಡಿದ್ದಾನೆ. ಸಾಧನೆಯ ಜೊತೆಗೆ ಬದುಕಿನ ಅರ್ಥವನ್ನು ಕಂಡುಕೊಳ್ಳಬೇಕು ಎಂಬುದನ್ನು ಮರೆತಿದ್ದಾನೆ. ಆಧುನಿಕತೆಯ ಪ್ರಭಾವದಿಂದ ವಿಶ್ವವೇ ಒಂದು ಕುಟುಂಬದಂತೆ ರೂಪುಗೊಂಡಿರುವ ಜಗತ್ತಿನಲ್ಲಿ ತನ್ನದೇ ಏಕಾಂತ ಲೋಕವನ್ನು ಸೃಷ್ಟಿಸಿಕೊಂಡಿದ್ದಾನೆ. ಸಮಾಜದ ಚಟುವಟಿಕೆಗಳಲ್ಲಿನ ಪಾಲ್ಗೊಳ್ಳುವಿಕೆ ಕಡಿಮೆಯಾಗಿದೆ. ಹಬ್ಬ ಹರಿದಿನಗಳಲ್ಲಿ ಒಂದಾಗಿ ನಲಿಯುತ್ತಿದ್ದ ದಿನಗಳು ಕಣ್ಮರೆಯಾಗಿ ಸಾಮಾಜಿಕ ಜಾಲತಾಣಗಳಲ್ಲಿ ತೊಡಗಿಕೊಂಡು ಮಾನವೀಯ ಮೌಲ್ಯಗಳನ್ನು ಮರೆತಂತಿದೆ.

ಒಲವಿನ ಮಾತು, ಬೌದ್ಧಿಕ ಚರ್ಚೆ, ಉಭಯಕುಶಲೋಪರಿ, ಆರೋಗ್ಯಕರ ಸಂವಾದ, ಪರಸ್ಪರ ಭೇಟಿ, ವನಭೋಜನ, ಆಟೋಟಗಳು, ತುಂಟಾಟಗಳು, ದೇವತಾರಾಧನೆ, ಜಾತ್ರೆ–ಉತ್ಸವಗಳಲ್ಲಿನ ಪಾಲ್ಗೊಳ್ಳುವಿಕೆ ಇವೆಲ್ಲವೂ ಪ್ರಸ್ತುತ ಕಾಲಘಟ್ಟದಲ್ಲಿ ಗೌಣವಾಗುತ್ತಿವೆ. ಜನಪದರ ಸಮಾಜವು ಮೇಲ್ಕಂಡ ಚಟುವಟಿಕೆಗಳ ಮೂಲಕ ಸಂಬಂಧಗಳನ್ನು ರೂಪಿಸಿಕೊಂಡು ಬಾಂಧವ್ಯಗಳಿಗೆ ಉತ್ತಮ ನೆಲೆಗಟ್ಟನ್ನು ಸೃಷ್ಟಿಸಿಕೊಡುತ್ತಿತ್ತು. ಇವುಗಳಲ್ಲದೇ ಇಂದಿನ ಯುವ ಪೀಳಿಗೆಯಲ್ಲಿ ಬಾಂಧವ್ಯದಲ್ಲಿನ ಸೆಳೆತದ ಕೊಂಡಿ ಕಳಚಿಕೊಂಡಿದೆ. ಭಾವನೆಗಳೇ ಬತ್ತಿಹೋಗಿ, ಸಂವೇದನೆಗಳ ನೆಲೆಗಳು ನಾಶವಾಗುತ್ತಿವೆ. ಗ್ರಾಮೀಣ ಪರಂಪರೆಯು ಮಾಯವಾಗಿ ನಗರೀಕರಣದಿಂದ ಆಚಾರ–ವಿಚಾರಗಳಲ್ಲಿ ಬದಲಾವಣೆ ಕಂಡಿವೆ. ಕೂಡು ಕುಟುಂಬಗಳು ಒಂದೊಂದಾಗಿ ಬಿಡಿ ಕುಟುಂಬಗಳಾಗಿವೆ. ಜೀವನ, ಸಂಸ್ಕೃತಿ, ಸಂಬಂಧಗಳೆಲ್ಲವೂ ಪರಿಷ್ಕರಣೆಗೊಂಡು ಹೊಸ ರೂಪ ಪಡೆಯುತ್ತಿವೆ.

ಜೀವನಶೈಲಿ, ಸಂಸ್ಕೃತಿ, ಆರೋಗ್ಯ, ಆರ್ಥಿಕತೆ, ವೈಜ್ಞಾನಿಕತೆ, ವೈಚಾರಿಕತೆಗಳಲ್ಲಿ ಆಧುನಿಕತೆಯ ಪ್ರವೇಶದಿಂದಾಗಿ ಗಟ್ಟಿ ನೆಲೆಯನ್ನು ಕಂಡುಕೊಳ್ಳುವತ್ತ ಸಾಗಿವೆ. ಎಲ್ಲವೂ ಅಭಿವೃದ್ಧಿಪಥದತ್ತ ಸಾಗುತ್ತಿರುವ ಸಂದರ್ಭದಲ್ಲಿ ಸಂಬಂಧಗಳು ಮಾತ್ರ ಇನ್ನೂ ಗಟ್ಟಿಗೊಳ್ಳುವುದರ ಬದಲು ವಿನಾಶದಂಚಿಗೆ ಹೋಗುವ ಅಪಾಯವನ್ನು ಎದುರಿಸುತ್ತಿವೆ. ಅಪ್ಪ–ಅಮ್ಮ, ಅಪ್ಪ–ಮಗಳು, ಅಮ್ಮ–ಮಗ, ಅಣ್ಣ–ತಮ್ಮ, ಅಕ್ಕ–ತಂಗಿ ಮುಂತಾದ ಸಂಬಂಧಗಳೊಂದಿಗೆ ಸ್ನೇಹ ಬಾಂಧವ್ಯಗಳು ಅರ್ಥಕಳೆದುಕೊಳ್ಳುತ್ತಿವೆ. ಮಾನವನ ಏಳಿಗೆಗೆ ಪೂರಕವಾಗಬೇಕಿದ್ದ ಎಷ್ಟೋ ಬಾಂಧವ್ಯಗಳು ಮಾರಕವಾಗಿವೆ. ಮಾನವ ಹೆಚ್ಚೆಚ್ಚು ಯಾಂತ್ರೀಕೃತಗೊಂಡಂತೆ ತನ್ನ ಸಂಬಂಧಗಳನ್ನು ವಿನಾಶದತ್ತ ತಳ್ಳುತ್ತಿದ್ದಾನೆ. ಮಾನವೀಯ ಸಂಬಂಧಗಳನ್ನು ಪುನಃ ಸ್ಥಾಪಿಸಲು ನೆಮ್ಮದಿಗೆ ಮಾರಕವಾದ ಕೆಲವು ಯಂತ್ರಗಳನ್ನು ದೂರವಿಟ್ಟು ಬದುಕಿನ ನೆಮ್ಮದಿಯನ್ನು ಪಡೆಯಬೇಕಾದ ಅನಿವಾರ್ಯತೆ ಇದೆ.

**೧೨) ಜನಪದರ ಬದುಕಿನಲ್ಲಿ ಆದರ್ಶ ಸಂಬಂಧಗಳು ಹೆಚ್ಚಾಗಿದ್ದು ನೈತಿಕತೆಯ ಪ್ರತೀಕವಾಗಿವೆ. ಇವು ಇಂದಿನ ಪೀಳಿಗೆಗೆ, ಸಮಾಜಕ್ಕೆ ಮಾದರಿ ಎನಿಸಿವೆ.**

ಪ್ರಸ್ತುತ ಕಾಲಘಟ್ಟದಲ್ಲಿ ಸಂಬಂಧಗಳು ಹೀಗೆಯೇ ಇರಬೇಕೆನ್ನುವ ಚೌಕಟ್ಟು ಇಲ್ಲವಾಗಿದೆ. ಹಿರಿಯರಿಂದ ಕಿರಿಯರಿಗೆ ವರ್ಗಾವಣೆಗೊಳ್ಳುತ್ತಿದ್ದ ಶ್ರದ್ಧೆ, ನಂಬಿಕೆ, ಪ್ರೀತಿ, ಗೌರವ, ಸಂಪ್ರದಾಯಗಳು ಇಂದು ವರ್ಗಾವಣೆಗೊಳ್ಳುತ್ತಿಲ್ಲ. ಇಂದಿನ ಸಂಬಂಧಗಳು ಜವಾಬ್ದಾರಿಯ ನೆಪದಲ್ಲಿ ಅನೇಕರ ತಲ್ಲಣಗಳನ್ನು ಅಲಕ್ಷಿಸುವಷ್ಟು ವ್ಯವಹಾರಿಕವಾಗಿವೆ. ಸಂಬಂಧಗಳನ್ನು ಅಲಕ್ಷಿಸುವ ಯುವಪೀಳಿಗೆಗೆ ಜನಪದರ ಸಂಬಂಧಗಳು ಆದರ್ಶ ಎನಿಸಿವೆ. ಭೂಮಿಯ ಮೇಲಿನ ಎಲ್ಲ ಪ್ರಾಣಿಗಳಲ್ಲಿ ಮಾನವನೊಬ್ಬನೇ ತನ್ನ ನಡುವಳಿಕೆಯನ್ನು ನಿಯಂತ್ರಿಸಿಕೊಳ್ಳುವ ಜಾಣ್ಮೆ ಹೊಂದಿದ್ದಾನೆ. ಒಳ್ಳೆಯ ಹಾಗೂ ಕೆಟ್ಟ ಕೆಲಸಗಳ ನಡುವೆ ವ್ಯತ್ಯಾಸ ಕಂಡುಕೊಳ್ಳುವ ಯೋಚನೆ ಹಾಗೂ ಕೆಲಸಗಳ ನಡುವೆ ವಿಭಿನ್ನವಾದ ಮೌಲ್ಯ ಹೊಂದಿರುವ ಏಕಮೇವ ಜೀವಿಯಾಗಿದ್ದಾನೆ. ಒಬ್ಬ ವ್ಯಕ್ತಿಯು ಇತರರೊಡನೆ ಹೊಂದಿರುವ ಸಂಬಂಧದ ಆಧಾರದ ಮೇಲೆ ಆತನ ನೈತಿಕತೆಯು ಸಾಮಾನ್ಯ ಅಥವಾ ವಸ್ತುನಿಷ್ಠವಾದದ್ದೆಂಬುದನ್ನು ಗುರುತಿಸಬಹುದು. ಅಂತೆಯೇ ಜನಪದರ ಸಂಬಂಧಗಳನ್ನು ಅವಲೋಕಿಸಿದಾಗ ಅವು ನೈತಿಕತೆಯ ಪ್ರತೀಕ ಎನಿಸಿವೆ. ಆದರ್ಶ ಸಮಾಜವನ್ನು ಕಟ್ಟುವಲ್ಲಿ ಇಂದಿನ ಯುವಪೀಳಿಗೆಗೆ ಮಾದರಿಯಾಗುತ್ತವೆ.

ಜನಪದರ ಸಮಾಜದಲ್ಲೂ ದ್ವೇಷ, ಈರ್ಷೆ, ಅಸೂಯೆಗಳು ಸಹಜವಾಗಿದ್ದವು. ಅವುಗಳಿಗೆ ಅನೇಕ ಒತ್ತಡಗಳೇ ಕಾರಣ. ಹೀಗೆ ವಿರಸಕ್ಕೆ ಒಳಗೊಳ್ಳುವ ಬಹುಮಂದಿ ಒಡಹುಟ್ಟು, ನೆರೆಹೊರೆ, ಜಾತಸ್ಥರೇ ಆಗಿರುತ್ತಿದ್ದರು. ಅವರ ವಿರಸ ಜಗಳಗಳಿಗೆ ಮೂಲ ಕಾರಣ ಲಾಭನಷ್ಟಗಳಾಗಿರಲಿಲ್ಲ. ಬದಲಿಗೆ ತಮ್ಮದೇ ಹಕ್ಕು, ಕರ್ತವ್ಯ, ಸಾಮಾನ್ಯ ನಡವಳಿಕೆಗಳಿಗಾಗಿ ಪರಸ್ಪರರ ನಡುವೆ ಸೆಣಸಾಟ ಏರ್ಪಡುತ್ತಿತ್ತು. ಸೂಕ್ತವಾದ ನ್ಯಾಯ ತೀರ್ಮಾನ ಮಾಡಿ ಉಭಯರನ್ನು ರಾಜೀ ಮಾಡುತ್ತಿದ್ದ ಮುಖಂಡರಲ್ಲಿಯೂ ಸಹ ಜನರಲ್ಲಿ ಶಾಂತಿ ಸ್ಥಾಪಿಸುವ, ಮರುಸಂಬಂಧಗಳನ್ನು ಏರ್ಪಡಿಸುವ ಮೂಲ ಉದ್ದೇಶವಿತ್ತು. ಹಲವು ಸಂದರ್ಭಗಳಲ್ಲಿ ನ್ಯಾಯ-ಅನ್ಯಾಯಗಳ ಪ್ರಶ್ನೆ ಅಲ್ಲಿ ಮುಖ್ಯವಾಗಿರಲಿಲ್ಲ. ಅಂದರೆ ಯಾವ ಕಾರಣಕ್ಕೂ ಜೀವನ ಮೌಲ್ಯಗಳನ್ನು ನೈತಿಕ ಸಂಪ್ರದಾಯವನ್ನು, ಬದುಕಿನ ರೀತಿ-ನೀತಿ; ನಂಬಿಕೆಗಳನ್ನು ಬಿಟ್ಟುಕೊಡದೆ ಜನಪದರು ಬಾಂಧವ್ಯವನ್ನು ತಬ್ಬಿಕೊಂಡೆ ಮುನ್ನಡೆಯುತ್ತಿದ್ದರು.

ಕೌಟುಂಬಿಕ, ವೈವಾಹಿಕ, ಸಾಮಾಜಿಕ ಮತ್ತು ಮಾನವೇತರ ಸಂಬಂಧಗಳಲ್ಲಿ ಜನಪದರ ಬದುಕಿನ ಆದರ್ಶಗಳು, ನೈತಿಕತೆ, ಜೀವನ ಮೌಲ್ಯಗಳು ಸಾಕಷ್ಟು ಕಂಡುಬಂದಿವೆ. ಅವು ಪ್ರಸ್ತುತ ಜನಾಂಗಕ್ಕೆ ಪ್ರೇರಣೆಯಾದರೆ ಶಾಂತಿ, ಸಹಬಾಳ್ವೆಯ ನೂತನ ಜಗತ್ತನ್ನೇ ನಿರ್ಮಿಸಬಲ್ಲವು ಎಂಬುದನ್ನು ಮರೆಯುವ ಹಾಗಿಲ್ಲ. ಅಂತಹ ಶಾಂತಿ, ಸಹಬಾಳ್ವೆ ತುಂಬಿದ ಜಗತ್ತಿನ ಸೃಷ್ಟಿಗೆ ಈ ಪ್ರಬಂಧ ಮುನ್ನುಡಿಯಾದೀತು ಎಂಬ ನಂಬಿಕೆ.

ಕರ್ನಾಟಕದಲ್ಲಿ ನಡೆದ ಜನಪದ ಸಾಹಿತ್ಯದ ಕುರಿತಾದ ಅಧ್ಯಯನಗಳ ಸೂಕ್ಷ್ಮ ಅವಲೋಕನ ಪ್ರಸ್ತುತ ಅಧ್ಯಯನದಿಂದ ಸಾಧ್ಯವಾಯಿತು. ಜನಪದ ಸಾಹಿತ್ಯದ ಪ್ರತಿಯೊಂದು ಪ್ರಕಾರಗಳನ್ನು ಪ್ರತ್ಯೇಕವಾಗಿ ಸಂಬಂಧಗಳ ಹಿನ್ನೆಲೆಯಲ್ಲಿ ಅಧ್ಯಯನಕ್ಕೊಳಪಡಿಸಿದರೆ ಒಂದೊಂದು ಮಹಾಪ್ರಬಂಧ ರೂಪುಗೊಳ್ಳಬಹುದು. ಇಲ್ಲಿ ಸೂಚಿಸಬಹುದಾದ ಹೊಸ ಆಲೋಚನಾ ಕ್ರಮಗಳು ಈ ಕ್ಷೇತ್ರಕ್ಕೆ ಪ್ರವೇಶಿಸುವ ಹೊಸ ಅಧ್ಯಯನಕಾರರಿಗೆ ಹೆಚ್ಚು ಉಪಯುಕ್ತವಾಗಬಹುದೆಂಬ ನಂಬಿಕೆ ಸಂಶೋಧಕರದು. ಸಂಬಂಧಗಳ ಹಿನ್ನೆಲೆಯಲ್ಲಿ ಜನಪದ ಗೀತೆಗಳನ್ನು ಪರಾಮರ್ಶಿಸಿದ್ದು ಮುಂದಿನ ಅಧ್ಯಯನಕಾರರಿಗೆ ಕೆಲವು ನೂತನ ಸಾಧ್ಯತೆಗಳನ್ನು, ಕ್ರಿಯಾಶೀಲ ಸಂಗತಿಗಳನ್ನು ಇಲ್ಲಿ ಗುರುತಿಸಲಾಗಿದೆ.

ಜಾನಪದ ಜೀವಂತ ಪಳೆಯುಳಿಕೆ. ಅದು ಈ ಕಾಲದಲ್ಲಿ ಭಿನ್ನವಾದ ಚಲನೆಗಳನ್ನು ಪಡೆಯುತ್ತಿದೆ. ಆಧುನಿಕತೆಯ ಪ್ರಭಾವದಿಂದ ಅಭಿವ್ಯಕ್ತವಾಗುತ್ತಿರುವ ನವಮೌಖಿಕತೆಯು ಹೊಸ ಕಾಲದಲ್ಲಿ ರೂಪುಗೊಳ್ಳುತ್ತಿರುವುದು ಜಾನಪದವೆ ಹೌದು ಎಂದಾದರೆ ನವಮೌಖಿಕತೆಯಲ್ಲಿ ಅಭಿವ್ಯಕ್ತಗೊಳ್ಳುತ್ತಿರುವ ಜೀವನ ವಿಧಾನ, ಕುಟುಂಬ, ಸಮಾಜದ ಪರಿಕಲ್ಪನೆಯನ್ನು ಅಧ್ಯಯನಕ್ಕೊಳಪಡಿಸುವ ಸಾಧ್ಯತೆ ಇದೆ. ಜನಪದ ಗೀತೆಗಳಿಗೆ ಸೀಮಿತವಾದ ನನ್ನ ಅಧ್ಯಯನವು ಕಥನಗೀತೆಗಳು, ಲಾವಣಿಗಳು, ಜಾನಪದ ಕಥೆಗಳನ್ನು ಅಭ್ಯಸಿಸಲು ಪ್ರೇರಣೆ ನೀಡಿತು. ಇದರಿಂದ ಜನಪದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿಯೂ ಸಂಬಂಧಗಳನ್ನು ವಿಶ್ಲೇಷಿಸುವ ಅಗತ್ಯವಿದೆ ಎಂಬುದು ಅರಿವಾಯಿತು. ಜನಪದ ಸಾಹಿತ್ಯದಲ್ಲಿ ಬಾಂಧವ್ಯದ ನೆಲೆಗಳು ವಿಭಿನ್ನ ದೃಷ್ಟಿಕೋನದಲ್ಲಿ ಅಭಿವ್ಯಕ್ತವಾಗಿವೆ. ಬೇರೆಯದೇ ಮಗ್ಗುಲಲ್ಲಿ ಇಲ್ಲವೇ ತೌಲನಿಕವಾಗಿ ನೋಡುವ ಸಾಧ್ಯತೆಯನ್ನು ಅಲ್ಲೆಗಳೆಯಲಾಗದು.

ಪ್ರಸ್ತುತ ಅಧ್ಯಯನದಲ್ಲಿ ಜನಪದರ ಮಾನವೀಯ, ಮಾನವೇತರ ಸಂಬಂಧಗಳ ಕುರಿತು ಸ್ಥೂಲ ನೋಟ ಬೀರಲು ಸಾಧ್ಯವಾಗಿದೆ. ಜೊತೆಯಲ್ಲಿ ಜನಪದರ ಅಲಕ್ಷಿತ ಸಂಬಂಧಗಳು ಕುರಿತು ಚರ್ಚಿಸಲಾಗಿದೆ. ಇಡಿಯಾಗಿ ಎಲ್ಲ ಸಂಬಂಧಗಳನ್ನು ಒಂದು ಅಧ್ಯಯನದಲ್ಲಿ ಒಳಪಡಿಸುವುದಕ್ಕಿಂತ ಬಿಡಿಯಾಗಿ ಒಂದೊಂದೇ ಸಂಬಂಧಗಳನ್ನು ವ್ಯಾಪಕವಾಗಿ ಅಧ್ಯಯನಕ್ಕೆ ಒಳಪಡಿಸುವ ಅಗತ್ಯತೆಯು ಇದೆ. ಇದರಿಂದ ಪ್ರಸ್ತುತ ಪ್ರಬಂಧದಲ್ಲಿ ತಳೆದ ಫಲಿತಗಳಿಗಿಂತ ಭಿನ್ನವಾದ ಒಳನೋಟಗಳನ್ನು ಕೊಡುವ ಸಾಧ್ಯತೆ ಇದೆ. ಮಾತೃವಂಶೀಯ ಹಾಗೂ ಪಿತೃವಂಶೀಯ ಕುಟುಂಬಗಳಲ್ಲಿನ ಸಂಬಂಧಗಳಲ್ಲಿ ಹಲವು ಭಿನ್ನತೆಗಳಿವೆ. ಪ್ರತ್ಯೇಕ ಪರಿಕಲ್ಪನೆಗಳ ಮೂಲಕ ಭಾರತೀಯ ಸಮಾಜ ಅಧ್ಯಯನದೊಂದಿಗೆ ಕರ್ನಾಟಕದ ಸಾಮಾಜಿಕ ಪರಿಸರವನ್ನು ಸೂಕ್ಷ್ಮವಾಗಿ ಗ್ರಹಿಸಿ ಕನ್ನಡ ಜನಪದ ಪರಂಪರೆಯನ್ನು ವಿಶೇಷವಾಗಿ ರೂಪಿಸಲು ಸಾಧ್ಯತೆ ಇದೆ. ಕರ್ನಾಟಕದಲ್ಲಿನ ಜಾತಿ, ಧರ್ಮ, ಸಂಸ್ಕೃತಿಗಳ ಹಿನ್ನೆಲೆಯಲ್ಲಿ ಹೊಸ ಬಗೆಯ ಸಂಕರಶೀಲತೆ ಉಂಟಾಗಿದೆ. ವರ್ತಮಾನದ ಸಂಕರಶೀಲತೆಗಳನ್ನು ಗುರುತಿಸುವ ಮೂಲಕ ಕನ್ನಡ ಜನಪದ ಪರಂಪರೆಯನ್ನು ಕನ್ನಡ ಜಾನಪದಕ್ಕೆ ಕಟ್ಟಿಕೊಡಬಹುದು.

ಜನಪದ ಮಹಾಕಾವ್ಯಗಳು ನಿರೂಪಿಸುವ ಕೆಲವು ಸಂಗತಿಗಳು ವಾಸ್ತವಕ್ಕೆ ದೂರವಾಗಿವೆಯೇ? ಜನಪದ ಕಥೆ-ಕಾವ್ಯಗಳಲ್ಲಿ ಬಿಂಬಿತವಾದ ಜೀವನಕ್ಕೂ, ಗೀತೆಗಳಲ್ಲಿ ಅಭಿವ್ಯಕ್ತವಾದ ಜೀವನಕ್ಕೂ ವ್ಯತ್ಯಾಸಗಳಿವೆಯೇ? ಎಂಬುದನ್ನು ಕುರಿತು ಅಧ್ಯಯನಗಳು ನಡೆಯಬೇಕಿದೆ. ಜನಪದ ಕಥೆ ಕಾವ್ಯಗಳಲ್ಲಿ ಅಭಿವ್ಯಕ್ತವಾದ ಬದುಕನ್ನು ಹೊಸದೊಂದು ದೃಷ್ಟಿಕೋನದಿಂದ ನೋಡಬೇಕಾದ ಅಗತ್ಯತೆ ಇದೆ. ಜನಪದರ ಬದುಕನ್ನು ಬಹುಶಿಸ್ತೀಯ ಅಧ್ಯಯನಗಳ ಮೂಲಕ ವಿಭಿನ್ನವಾಗಿ ಚಿಂತಿಸುವ ಅಗತ್ಯವಿದೆ. ಸಮಾಜದಲ್ಲಿ ವರ್ಗ ಹಾಗೂ ವರ್ಣ ವ್ಯವಸ್ಥೆಯು ಪ್ರಾಚೀನ ಕಾಲದಿಂದಲೂ ಶ್ರೇಣೀಕರಣಗೊಂಡಿದೆ. ಈ ವ್ಯವಸ್ಥೆಯೂ ಜನಪದರ ಸಂಬಂಧಗಳನ್ನು ಪ್ರಭಾವಿಸಿವೆಯೇ? ಹೌದು ಎಂದಾದರೆ ಬಾಂಧವ್ಯದಲ್ಲಿನ ಭಿನ್ನತೆಯನ್ನು ಗುರುತಿಸುವ ಅಗತ್ಯವಿದೆ. ವರ್ಣವ್ಯವಸ್ಥೆಯೊಳಗಿನ ವರ್ಗವ್ಯವಸ್ಥೆಯನ್ನು ಗುರುತಿಸಬೇಕಿದೆ. ಅಂದರೆ ವರ್ಣವ್ಯವಸ್ಥೆಯೊಳಗೆ ಶ್ರೀಮಂತ, ಮಧ್ಯಮ ಮತ್ತು ಬಡವರ್ಗಗಳೆಂದು ಆಚರಣೆಗೊಳ್ಳುತ್ತಿವೆ. ಇಂತಹ ವ್ಯವಸ್ಥೆಯಲ್ಲಿನ ಬದಲಾವಣೆಗಳನ್ನು ವಿಭಿನ್ನವಾಗಿ ನೋಡುವ ಅಗತ್ಯವಿದೆ.

ಪಶ್ಚಿಮದ ಜನಪದ ಸಾಹಿತ್ಯವನ್ನು ದೇಶೀಯ ಸಾಹಿತ್ಯದೊಂದಿಗೆ ತೌಲನಿಕವಾಗಿ ಅಧ್ಯಯನಕ್ಕೊಳಪಡಿಸಿ ಸಾಮ್ಯತೆ ಭಿನ್ನತೆಗಳನ್ನು ಗುರುತಿಸುವ ಅಗತ್ಯವಿದೆ. ಪ್ರಪಂಚದ ಜನಪದರ ಜೀವನಶೈಲಿ, ಬಾಂಧವ್ಯಗಳು ಹಾಗೂ ಆಲೋಚನಾ ಕ್ರಮವು ಒಂದೆಯಾಗಿವೆಯೇ ಇಲ್ಲವೇ ಭಿನ್ನತೆಯಿದೆಯೇ ಎಂದು ಗುರುತಿಸುವ ಮೂಲಕ ಪ್ರಸ್ತುತ ಸಂದರ್ಭಕ್ಕೆ ಅಗತ್ಯವಿರುವ ಚಿಂತನೆಗಳನ್ನು ಕೊಡುವ ಸಾಧ್ಯತೆ ಇದೆ. ಕನ್ನಡದಲ್ಲಿ ಇದುವರೆಗೆ ಸಂಗ್ರಹಗೊಂಡ ಜನಪದ ಸಾಹಿತ್ಯದ ಕುರಿತಂತೆ ನಡೆದ ಅಧ್ಯಯನಗಳು ಈಗಾಗಲೇ ಕೊಟ್ಟಿರುವ ಫಲಿತಗಳನ್ನು ಮರು ವಿಮರ್ಶಿಸಿ ಇಂದಿನ ತಿಳುವಳಿಕೆಯ ಮೂಲಕ ಹೊಸ ಓದನ್ನು ಮಾಡಬೇಕಾಗಿದೆ. ಅಂದಾಗ ಮಾತ್ರ ಈಗಾಗಲೇ ಕೊಟ್ಟಿರುವ ನಂಬಿಕೆಯ ಲೋಕವನ್ನು ಮೀರಲು ಸಾಧ್ಯವಾಗುತ್ತದೆ. ಗತಕಾಲದ ನಂಬಿಕೆಗಳಲ್ಲಿ ಹುಟ್ಟಿದ ವಿಶ್ಲೇಷಣೆಯನ್ನು ಪ್ರಸ್ತುತ ಕಾಲದ ಹೊಸ ಓದಿನ ಮೂಲಕ ಕರ್ನಾಟಕದ ಜನಪದ ಪರಂಪರೆಯನ್ನು, ಕರ್ನಾಟಕದ ಚರಿತ್ರೆಯನ್ನು ಕಟ್ಟುವ ಸಾಧ್ಯತೆ ಇದೆ. ಕರ್ನಾಟಕದ ಚರಿತ್ರೆಯನ್ನು ಕಟ್ಟುವ ನೆಲೆಯೊಂದನ್ನು ಶೋಧಿಸುವ ಗಂಭೀರ ಅಧ್ಯಯನಗಳು ನಡೆಯಬೇಕಿದೆ.

ಅನುಬಂಧ ೧

# ಆಕರ ಗ್ರಂಥಗಳು


- ಕರಾಕೃ (ಸಂ.), ೧೯೫೭, ಜೇನಹನಿಗಳು, ಜನಪದ ಸಾಹಿತ್ಯ ಅಕಾಡೆಮಿ, ಸರಸ್ವತಿಪುರಂ, ಮೈಸೂರು, ೧೯೬೨
- ಕರಾಕೃ (ಸಂ.), ೧೯೫೯, ಜಾನಪದ ಕಥನ ಗೀತೆಗಳು, ಜನಪದ ಸಾಹಿತ್ಯ ಅಕಾಡೆಮಿ, ಸರಸ್ವತಿಪುರಂ, ಮೈಸೂರು, ೧೯೬೨
- ಕರಾಕೃ (ಸಂ.), ೧೯೫೭, ಜಾನಪದ ಪ್ರೇಮಗೀತೆಗಳು, ಚೇತನ ಮುದ್ರಣಾಲಯ, ರಾಮಾವಿಳಾಸ ಅಗ್ರಹಾರ, ಮೈಸೂರು, ೧೯೬೨
- ಕರಾಕೃ (ಸಂ), ೧೯೫೭, ಜಾನಪದ ಜೇನು, ಕಾವ್ಯೋದಯ ಪ್ರಕಾಶನ, ಮೈಸೂರು, ೧೯೫೮
- ಕರಾಕೃ (ಸಂ.), ೧೯೫೮, ಮಲ್ಲಿಗೆ ನಗುತಾವೆ, ಕಾವ್ಯೋದಯ ಪ್ರಕಾಶನ, ವಿದ್ಯಾಶ್ರಮ, ಸರಸ್ವತಿಪುರಂ, ಮೈಸೂರು.
- ಕರಾಕೃ (ಸಂ.), ೧೯೫೯, ಆಯ್ದ ಮುತ್ತುಗಳು, ಕಾವ್ಯೋದಯ ಪ್ರಕಾಶನ, ವಿದ್ಯಾಶ್ರಮ, ಸರಸ್ವತಿಪುರಂ, ಮೈಸೂರು.
- ಕರಾಕೃ (ಸಂ.), ೧೯೫೭, ಅಂಬಿಗರ ಗಂಗ ಮತ್ತು ಇತರ ಹಾಡುಗಳು, ಕಾವ್ಯೋದಯ ಪ್ರಕಾಶನ, ವಿದ್ಯಾಶ್ರಮ, ಸರಸ್ವತಿಪುರಂ, ಮೈಸೂರು.
- ಕರೀಂಖಾನ್ ಎಸ್. ಕೆ. (ಸಂ.), ೧೯೫೫, ಜನಪದ ಗೀತೆ, ರಾಮರಾಜ್ಯ ಪ್ರಕಾಶನ, ಗಾಂಧಿನಗರ, ಬೆಂಗಳೂರು
- ಕಾಪಸೆ ರೇವಪ್ಪ (ಸಂ.), ೧೯೩೫, ಮಲ್ಲಿಗೆ ದಂಡೆ , ಸಮಾಜ ಪುಸ್ತಕಾಲಯ, ಧಾರವಾಡ. ೨೦೦೦
- ಗದ್ದಗಿಮಠ ಬಿ.ಎಸ್. (ಸಂ.), ೧೯೫೨, ಬಿ ಎಸ್ ಗದ್ದಗೀಮಠ, ಘೂಲ್‌ಬಾಗ್ ಗಲ್ಲಿ, ಬೆಳಗಾವಿ.
- ಗದ್ದಗಿಮಠ ಬಿ.ಎಸ್. (ಸಂ.), ೧೯೫೬, ಜನತಾ ಗೀತೆಗಳು, ಕರ್ನಾಟಕ ಸಹಕಾರಿ ಸಾಹಿತ್ಯ ಸಂಘ, ಲಿ. ಧಾರವಾಡ.

- ಗದ್ದಗಿಮಠ ಬಿ.ಎಸ್. (ಸಂ.), ೧೯೫೯, ಮಲ್ಲ ಮಲ್ಲಾಣಿ, ಡಾ. ಬಿ ಎಸ್ ಗದ್ದಗೀಮಠ, ವಿಶ್ವವಿದ್ಯಾಲಯ ವಸಹಾತು, ಧಾರವಾಡ.
- ಗೊರೂರು ರಾಮಸ್ವಾಮಿ ಅಯ್ಯಂಗಾರ್ (ಸಂ.), ೧೯೩೮, ಹಳ್ಳಿಯ ಹಾಡುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯
- ಗೊರೂರು ರಾಮಸ್ವಾಮಿ ಅಯ್ಯಂಗಾರ್ (ಸಂ.), ೧೯೪೩, ಹಳ್ಳಿಯ ಬಾಳು, ಕಾವ್ಯಾಲಯ, ಜಯನಗರ, ಮೈಸೂರು. ೧೯೮೧
- ಗುಂಡಪ್ಪ ಎಲ್. (ಸಂ.), ೧೯೪೭, ನಾಡಪದಗಳು, ಎಲ್ ಗುಂಡಪ್ಪ, ಬೆಂಗಳೂರು.
- ಚಂದ್ರಶೇಖರನಾಥ ಸ್ವಾಮೀಜಿ (ಸಂ.), ೧೯೫೯, ಶ್ರೀ ಆದಿಚುಂಚನಗಿರಿ ಜನಪದ ಗೀತೆಗಳು, ಶ್ರೀ ಆದಿಚುಂಚನಗಿರಿ ಗ್ರಂಥಮಾಲೆ, ಶ್ರೀ ಆದಿಚುಂಚನಗಿರಿ.
- ಪರಮಶಿವಯ್ಯ ಜೀ.ಶಂ (ಸಂ.), ೧೯೬೦, ಅವರ ನೆನೆದೇವು, ಶ್ರೀ ಆದಿಚುಂಚನಗಿರಿ ಗ್ರಂಥಮಾಲೆ, ಆದಿಚುಂಚನಗಿರಿ.
- ಪಂಚಮುಖಿ ಆರ್. ಎಸ್. (ಸಂ.), ೧೯೫೩, ಕರ್ನಾಟಕದ ಜಾನಪದ ಗೀತೆಗಳು, ಕನ್ನಡ ರಿಸರ್ಚ್ ಇನ್ಸ್ಟ್ಯೂಟ್, ಧಾರವಾಡ.
- ಮತಿಘಟ್ಟ ಕೃಷ್ಣಮೂರ್ತಿ (ಸಂ.), ೧೯೫೨, ನಮ್ಮ ಹಳ್ಳಿಯ ಹಾಡುಗಳು, ಮಯೂರ ಮುದ್ರಣಾಲಯ, ಬೇಲೂರು. ೧೯೫೬
- ವಿನೀತ ರಾಮಚಂದ್ರರಾಯ (ಸಂ.), ೧೯೬೦, ಹಳ್ಳಿಯ ಹಾಡುಗಳು, ಅರುಣೋದಯ ಪ್ರಕಾಶನ, ಬೆಂಗಳೂರು.
- ಸಿಂಪಿ ಲಿಂಗಣ್ಣ (ಸಂ.), ೧೯೩೩, ಜೀವನ ಸಂಗೀತ, ಜಯ ಕರ್ನಾಟಕ ಗ್ರಂಥಮಾಲೆ, ಧಾರವಾಡ.
- ಶ್ರೀಕಂಠಯ್ಯ ತೀ. ನಂ. (ಸಂ.), ೧೯೫೩, ಹೆಣ್ಣು ಮಕ್ಕಳ ಪದಗಳು, ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.
- ಹಲಸಂಗಿ ಗೆಳೆಯರು (ಸಂ.), ೧೯೩೧, ಗರತಿಯ ಹಾಡು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

ಅನುಬಂಧ ೨

# ಪರಾಮರ್ಶನ ಗ್ರಂಥಗಳು


- ಅನಸೂಯ ಎಸ್., ೨೦೧೧, ಜನಪದ ಕತೆಗಳಲ್ಲಿ ಪಾತಿವ್ರತ್ಯದ ಪರಿಕಲ್ಪನೆ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮೈಸೂರು.
- ಅಂಗಡಿ ಎಸ್. ಎಸ್., ೨೦೦೨, ಸಂಬಂಧವಾಚಕಗಳು ಮತ್ತು ಸಂಬೋಧನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.
- ಅಂಗಡಿ ಎಸ್. ಎಸ್., ೨೦೦೮, ಜನಪದ ಸಾಹಿತ್ಯದ ಭಾಷೆ, ವಿಕಾಸ ಪ್ರಕಾಶನ, ಹೊಸಪೇಟೆ.
- ಅಂಬಳಿಕೆ ಹಿರಿಯಣ್ಣ, ೧೯೯೨, ಸೈದ್ಧಾಂತಿಕ ಜಾನಪದ, ಪ್ರಜ್ವಲ ಪ್ರಕಾಶನ, ಮೈಸೂರು
- ಅಂಬಳಿಕೆ ಹಿರಿಯಣ್ಣ, ೧೯೯೪, ಜಾನಪದ; ಕೆಲವು ಅಧ್ಯಯನಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.
- ಇಂದಿರಾ ಆರ್., ೧೯೯೫, ಭಾರತೀಯ ಸಮಾಜ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
- ಕಾಳೇಗೌಡ ನಾಗವಾರ, ೧೯೭೫, ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೨೦೦೦
- ಕೃಷ್ಣಕುಮಾರ್ ಸಿ. ಪಿ., ೨೦೦೪, ಜಾನಪದ ಸತ್ವ ಮತ್ತು ತತ್ವ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.
- ಕೇಶವಭಟ್ಟ. ಬಿ (ಸಂ.), ೧೯೯೬, ದಕ್ಷಿಣ ಕನ್ನಡ ಜಿಲ್ಲೆಯ ಜನಪದ ಗೀತೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಕೆಂಪೇಗೌಡ ಕೆ., ೨೦೧೧, ಜನಪದ ಭಾಷಾವಿಜ್ಞಾನ ರೂಪರೇಷೆಗಳು, ಗಜಾನನ ಪಬ್ಲಿಕೇಷನ್ಸ್, ಮೈಸೂರು.
- ಕ್ಯಾತನಹಳ್ಳಿ ರಾಮಣ್ಣ, ೨೦೧೧, ಜಾನಪದ ವಿಹಾರ, ಕರ್ನಾಟಕ ಸಂಘ, ಮಂಡ್ಯ.
- ಗವೀಶ ಹಿರೇಮಠ, ೨೦೦೮, ಮಹಿಳೆ ಮತ್ತು ಆಧುನಿಕತೆ, ಸಂಗಮೇಶ್ವರ ಮಹಿಳಾ ಮಂಡಳ, ಗುಲ್ಬರ್ಗಾ.

- ಗಾಯಿತ್ರಿ ನಾವಡ, ೧೯೯೯, ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ಸಿರಿ ಪ್ರಕಾಶನ, ಹೊಸಪೇಟೆ.
- ಗುರುಮೂರ್ತಿ ಕೆ. ಜಿ., ೨೦೧೨, ಜಾನಪದ ಸಮಾಜ ಮತ್ತು ಸಂಸ್ಕೃತಿ, ಕಾರ್ತೀಕ್ ಎಂಟರ್‌ಪ್ರೈಸಸ್, ಬೆಂಗಳೂರು.
- ಗೊರೂರು ರಾಮಸ್ವಾಮಿ ಅಯ್ಯಂಗಾರ್, ೧೯೪೩, ಹಳ್ಳಿಯ ಬಾಳು, ಕಾವ್ಯಾಲಯ, ಮೈಸೂರು, ೧೯೮೧.
- ಜವರೇಗೌಡ ದೇ. (ಸಂ), ೧೯೭೮, ಜನಪದ ಗೀತಾಂಜಲಿ, ಸ್ವಪ್ನ ಬುಕ್ ಹೌಸ್, ಬೆಂಗಳೂರು. ೨೦೧೨
- ಜ್ಯೋತಿ ಹೊಸೂರು (ಸಂ.), ೧೯೭೮, ಬೆರೆಸಿ ಇಟ್ಟೇನಿ ಬೆಲ್ಲ ನೆನಗಡಲಿ, ಜಾನಪದ ಮಂಟಪ, ರಾಯಭಾಗ, ಬೆಳಗಾವಿ.
- ಜೋಳದಕೂಡ್ಲಿಗಿ ಅರುಣ್, ೨೦೧೨, ಕನ್ನಡ ಜಾನಪದ ಅಧ್ಯಯನದ ತಾತ್ವಿಕ ನೆಲೆಗಳು, ರೂಪ ಪ್ರಕಾಶನ, ಮೈಸೂರು
- ಜೋಗನ್‌ಶಂಕರ್, ೧೯೯೫, ಗ್ರಾಮ ಸಮಾಜ, ಜೀವ ಪ್ರಕಾಶನ, ಮೈಸೂರು
- ಚಕ್ಕೆರೆ ಶಿವಶಂಕರ್, ೨೦೧೦, ಜಾನಪದ ಪ್ರವೇಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೨.
- ಚನ್ನಬಸಪ್ಪ ಗೋ. ರು.(ಸಂ.), ೧೯೭೭, ಕರ್ನಾಟಕ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಚಿದಾನಂದಮೂರ್ತಿ ಎಂ., ೨೦೦೨, ಜನ-ಜನಪದ-ಜಾನಪದ, ಸ್ವಪ್ನ ಬುಕ್ ಹೌಸ್, ಬೆಂಗಳೂರು.
- ಚಂದ್ರಶೇಖರ ಕಂಬಾರ, ೧೯೮೦, ನಮ್ಮ ಜಾನಪದ, ಅಭಿಜಾತ ಗ್ರಂಥಮಾಲೆ, ಬೆಂಗಳೂರು.
- ಚಂದ್ರಶೇಖರ ಐತಾಳ ಗುಂಡ್ಮಿ (ಸಂ.), ೧೯೭೩, ಮದ್ದುಂಟೆ ಜನನ ಮರಣಕೆ, ಆನಂದ ಪ್ರಕಾಶನ, ಮಂಗಳೂರು
- ತಪಸ್ವಿಕುಮಾರ ನಂ., ೧೯೮೨, ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ತಪಸ್ವಿಕುಮಾರ ನಂ., ೧೯೯೯, ಜಾನಪದ ಅಧ್ಯಯನದ ಸಂಕ್ಷಿಪ್ತ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

- ತಿಪ್ಪೇರುದ್ರಸ್ವಾಮಿ ಎಚ್., ೧೯೬೮, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ. ವಿ. ಕೆ. ಮೂರ್ತಿ, ಮೈಸೂರು, ೨೦೧೫
- ತಿಪ್ಪೇಸ್ವಾಮಿ ಜಿ.ಆರ್. (ಸಂ.), ೨೦೦೯, ದಕ್ಷಿಣ ಕರ್ನಾಟಕದ ಬೇಸಾಯದ ಹಾಡುಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
- ದಸ್ತಗೀರ್ ಅಲ್ಲಿಭಾಯಿ, ೧೯೯೯, ಮೊಹರಂ ಪದಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
- ದೇವೇಂದ್ರಕುಮಾರ ಹಕಾರಿ, ೧೯೮೫, ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ದೊಡ್ಡರಂಗೇಗೌಡ, ೨೦೦೦, ಜೀವಂತ ಜಾನಪದ, ಅಳಿಲು ಸೇವಾ ಸಂಸ್ಥೆ. ಬೆಂಗಳೂರು.
- ನಟರಾಜ್ ಹುಳಿಯಾರ್, ೨೦೦೪, ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ನಾಯಕ ಎನ್. ಆರ್., ೧೯೮೨, ಕಾರವಾರ ಜಿಲ್ಲೆಯ ಜನಪದ ಗೀತೆಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ನಾಯಕ ಹಾ. ಮಾ., ೧೯೭೧, ಜಾನಪದ ಸ್ವರೂಪ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.
- ನಾಯಕ ಹಾ. ಮಾ.(ಸಂ.), ಬೆಳಗಾಂ ಜಿಲ್ಲೆಯ ಜನಪದ ಕತೆಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ನಾಗೇಗೌಡ ಎಚ್.ಎಲ್. (ಸಂ.), ೧೯೯೫, ದುಂಡಮಲ್ಲಿಗಿ ಹೂವ ಬುಟ್ಟಿಲಿ ಬಂದಾವ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.
- ನಾಯಕ ಡಿ. ಬಿ. (ಸಂ.), ೨೦೦೯, ಹಬ್ಬದ ಹಾಡುಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
- ನೇಗಿನಹಾಳ ಎಂ. ಬಿ.(ಸಂ.), ೧೯೯೯, ಜಾನಪದ ಸಾಹಿತ್ಯ ದರ್ಶನ ೨೩ (ಜನಪದ ನಂಬಿಕೆಗಳು), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ನಂಜೇಗೌಡ ಎಚ್., ೨೦೦೨, ಜಾನಪದ ಕೋಶ, ತನುಮನ ಪ್ರಕಾಶನ, ಮೈಸೂರು
- ಪದ್ಮಪ್ರಸಾದ್ ಎಸ್. ಪಿ., ೧೯೯೪, ಮಳೆ–ಒಂದು ಜಾನಪದೀಯ ಅಧ್ಯಯನ, ಸುಂದರ ಪ್ರಕಾಶನ, ಧಾರವಾಡ.

- ಪರಮಶಿವಯ್ಯ ಜಿ. ಶಂ, ೧೯೯೮, ಜಾನಪದ ಕೆಲವು ವಿಚಾರಗಳು, ಚೇತನ ಬುಕ್ ಹೌಸ್, ಮೈಸೂರು
- ಪರಮಶಿವಯ್ಯ ಜಿ. ಶಂ. (ಸಂ), ೧೯೯೪, ಜನಪದ ಮಂಗಳ ಗೀತೆಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.
- ಪರಮಶಿವಯ್ಯ ಜಿ. ಶಂ., ೧೯೭೯, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಪರಮಶಿವಯ್ಯ ಜಿ. ಶಂ., ೧೯೭೦, ಕನ್ನಡ ಜನಪದ ಕತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.


- ಪರಮಶಿವಯ್ಯ ಜಿ. ಶಂ. (ಸಂ), ೧೯೯೪, ಜನಪದ ಮಂಗಳ ಗೀತೆಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.


- ಬಸವರಾಜ ಪೊಲೀಸ್‌ಪಾಟೀಲ, ೨೦೦೧, ಜಾನಪದ ಚಿಂತನ, ಅಮರ ಪ್ರಕಾಶನ, ಕಲಬುರ್ಗಿ.
- ಬಿರಾದಾರ ಮ. ಗು., ೨೦೦೦, ಹೋಳಿಯ ಹಾಡುಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
- ಭಟ್ ಎಲ್.ಜಿ. (ಸಂ.), ೧೯೭೪, ಹಾಲಕ್ಕಿ ಪಾಯಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಭಾಸ್ಕರ್ ಟಿ. ಎಂ. (ಸಂ.), ೨೦೦೯, ಕಸುಬಿನ ಹಾಡುಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
- ಭಾನುಮತಿ ವೈ. ಸಿ., ೨೦೦೩, ಜಾನಪದ ಆಂತರ್ಯ, ತಳಗವಾರಿ ಪ್ರಕಾಶನ, ಮೈಸೂರು.
- ಮಲ್ಲಿಕಾರ್ಜುನ ಕುಂಬಾರ, ೨೦೧೦, ಜಾನಪದ ಲೇಖನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಮಹೇಶ್ವರಯ್ಯ ಎಚ್. ಎಂ., ೧೯೯೪, ಜಾನಪದ ಹೊಸ ದೃಷ್ಟಿ, ಸಹಿತಾ ಪ್ರಕಾಶನ ಧಾರವಾಡ.
- ಮಾಳಿ ಎಚ್. ಬಿ., ೧೯೯೨, ಸಮಾಜ ಅಧ್ಯಯನ, ಭಾರತ ಬುಕ್ ಡಿಪೋ ಮತ್ತು ಪ್ರಕಾಶನ, ಧಾರವಾಡ.
- ಮಂಗಳಾ ಪ್ರಿಯದರ್ಶನಿ ಡಿ., ೨೦೦೭, ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* ಮಂಜುನಾಥ ಬೇವಿನಕಟ್ಟಿ, ೨೦೦೩, ಜನ ಜಾನಪದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ರಂಗಾರೆಡ್ಡಿ ಕೋಡಿರಾಂಪುರ (ಸಂ), ೧೯೯೩, ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
* ರಹಮತ್ ತರೀಕೆರೆ, ೨೦೦೭, ಕನ್ನಡ ಸಂಶೋಧನೆ ತಾತ್ವಿಕ ವಿಚಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ರಹಮತ್ ತರೀಕೆರೆ (ಸಂ.),. . . . . ಇಂಗ್ಲೀಷ್ ಗೀತೆಗಳ ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
* ರಾಗೌ, ೨೦೦೯, ಜಾನಪದ ತತ್ವಾರ್ಥ ಪ್ರವೇಶ, ಕರ್ನಾಟಕ ಸಂಘ, ಮಂಡ್ಯ
* ರಾಗೌ, ೧೯೬೯, ಕರ್ನಾಟಕ ಜನಪದ ಕತೆಗಳು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.
* ರಾಜಪ್ಪ ಟಿ. ಎಸ್. (ಸಂ.), ೧೯೭೫, ಧಾರವಾಡ ಜಿಲ್ಲೆಯ ಜನಪದ ಕಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
* ರಾಜಪ್ಪ ಟಿ. ಎಸ್. (ಸಂ.), ೧೯೭೬, ರಾಯಚೂರು ಜಿಲ್ಲೆಯ ಜನಪದ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
* ರಾಜಶೇಖರ್ ಎಸ್., ೧೯೯೦, ಭಾರತೀಯ ಸಮಾಜ, ಭ್ರಮರ ಪ್ರಕಾಶನ, ಶಿವಮೊಗ್ಗ.
* ರಾಜೇಂದ್ರ ಡಿ.ಕೆ., ೧೯೭೩, ನಮ್ಮ ಸುತ್ತಿನ ನಂಬಿಕೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
* ರಾಜೇಂದ್ರ ಯರನಾಳೆ (ಸಂ.), ೨೦೦೬, ಹಂತಿಯ ಹಾಡುಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
* ರಾಮಚಂದ್ರೇಗೌಡ ಹಿ. ಶಿ., ೧೯೮೭, ಜಾನಪದ ಅಂತರಂಗ, ಮಾನವಿ ಪ್ರಕಾಶನ, ಮೈಸೂರು
* ಲಕ್ಕಪ್ಪಗೌಡ ಎಚ್. ಜೆ., ೧೯೭೭, ಜಾನಪದ ಕೈಪಿಡಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
* ವಿಜಯಲಕ್ಷ್ಮೀ ಮನಾಪುರ, ೨೦೧೨, ಕನ್ನಡ ಜನಪದ ಸಾಹಿತ್ಯ: ಬಂಧ-ಸಂಬಂಧ, ಉನ್ನತಿ ಪ್ರಕಾಶನ, ಮೈಸೂರು

- ವೀರಣ್ಣ ದಂಡೆ, ೨೦೦೪, ಜನಪದ ಕಾವ್ಯ ಮೀಮಾಂಸೆ ಹಾಗೂ ವಿಮರ್ಶಾ ಪ್ರಸ್ತಾವನೆಗಳು, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು. ೨೦೦೭
- ವೀರಣ್ಣ ದಂಡೆ (ಸಂ.), ೨೦೦೬, ಸುವರ್ಣ ಜಾನಪದ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
- ವೀರೇಶ ಬಡಿಗೇರ, ೨೦೦೦, ಹಳೆಯ ಲಾವಣಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ವಿರುಪಾಕ್ಷಗೌಡ ಕೆ. (ಸಂ.), ೧೯೭೦, ಹೊಲಮನಿ ಪದಗಳು, ಶ್ರೀ ಕೊಟ್ಟೂರೇಶ್ವರ ಪ್ರಕಾಶನ, ಹಗರಿಬೊಮ್ಮನಳ್ಳಿ.
- ಶಶಿಕಲಾ ಮೋಳ್ದಿ (ಸಂ.), ೨೦೦೯, ಉತ್ತರ ಕರ್ನಾಟಕದ ಮದುವೆ ಹಾಡುಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
- ಶಾರದಾ ಶಾಮಣ್ಣ, ೧೯೯೬, ಜಾನಪದ ಜಾಹ್ನವಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಶಾಂತಾ ಇಮ್ರಾಪುರ, ೨೦೦೧, ಮಹಿಳೆ-ಸಾಹಿತ್ಯ-ಸಂಸ್ಕೃತಿ, ಚೇತನಾ ಪ್ರಕಾಶನ, ಧಾರವಾಡ.
- ಶಾಂತಕುಮಾರಿ ಪಾಟೀಲ (ಸಂ.), ೧೯೭೯, ಜನಪದ ತ್ರಿಪದಿಗಳು, ಚೇತನ ಪ್ರಕಾಶನ, ಧಾರವಾಡ
- ಶಿವಣ್ಣ ಡಿ.ಕೆ., ೧೯೮೪, ಮಾನವಶಾಸ್ತ್ರ, ಕಲಾ ಪ್ರಕಾಶನ, ಗುಟ್ಟಹಳ್ಳಿ, ಬೆಂಗಳೂರು.
- ಶಿವಾನಂದ ಬ. ಟವಳಿ ೨೦೧೨, ಗ್ರಾಮೀಣ ಬದುಕು ಮತ್ತು ಜಾನಪದ, ಬಸು ಪ್ರಕಾಶನ, ಧಾರವಾಡ, ೨೦೧೬
- ಶ್ರೀಕಂಠ ಕೆ. ಕೂಡಿಗೆ. (ಸಂ.), ೧೯೭೩, ಅಂಟಿಗೆ-ಪಂಟಿಗೆ ಗೀತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಶ್ರೀಕಂಠ ಕೆ. ಕೂಡಿಗೆ, ೧೯೯೯, ಕನ್ನಡ ಲಾವಣಿಗಳು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಶ್ರೀಮತಿ ಎಚ್. ಎಸ್., ೨೦೧೨, ಸ್ತ್ರೀವಾದಿ ಸಂಶೋಧನೆ ವಿಧಿ-ವಿಧಾನಗಳು, ಬರಹ ಪಬ್ಲಿಸಿಂಗ್ ಹೌಸ್, ಬೆಂಗಳೂರು.
- ಶ್ರೀಮತಿ ಎಚ್. ಎಸ್.(ಸಂ.), ೨೦೦೬, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

- ಸಬಿಹಾ ಭೂಮಿಗೌಡ (ಸಂ), ೨೦೦೬, ಕನ್ನಡ ಸಾಹಿತ್ಯ ಮತ್ತು ಮಹಿಳೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.
- ಸಂಧ್ಯಾರೆಡ್ಡಿ ಕೆ. ಆರ್., ೧೯೮೨, ಕನ್ನಡ ಜನಪದ ಕಥೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಸಿದ್ಧರಾಮಯ್ಯ ಎಸ್. ಜಿ. (ಸಂ.), ೨೦೦೬, ಸುವರ್ಣ ಜನಪದ ಕಾವ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
- ಸುಂದರಂ ಆರ್. ವಿ. ಎಸ್., ೧೯೭೭, ಜನಪದ ಸಾಹಿತ್ಯದ ಮೂಲತತ್ವಗಳು, ಅರ್ಕಾವತಿ ಪ್ರಕಾಶನ, ಮೈಸೂರು
- ಸುಂಕಾಪುರ ಎಂ. ಎಸ್. (ಸಂ.), ೧೯೭೧, ಜೀವನ ಜೋಕಾಲಿ ಭಾಗ ೨, ಸರಸ–ವಿರಸ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಸುಂಕಾಪುರ ಎಂ. ಎಸ್. (ಸಂ.), ೧೯೭೨, ಜೀವನ ಜೋಕಾಲಿ ಭಾಗ ೩ ಗರತಿಯ ಹಿರಿಮೆ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಸುಂಕಾಪುರ ಎಂ. ಎಸ್. (ಸಂ.), ೧೯೭೪, ಜೀವನ ಜೋಕಾಲಿ ಭಾಗ ೪ ಹೋಳಿ ಹಾಡು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಸುಂಕಾಪುರ ಎಂ. ಎಸ್. (ಸಂ.), ೧೯೭೫, ಜೀವನ ಜೋಕಾಲಿ ಭಾಗ ೫, ದುಂದುಮೆಪದ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಸುಂಕಾಪುರ ಎಂ. ಎಸ್. (ಸಂ.), ೧೯೭೬, ಜೀವನ ಜೋಕಾಲಿ ಭಾಗ ೬, ಡೊಳ್ಳಿನ ಹಾಡು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಸುಂಕಾಪುರ ಎಂ. ಎಸ್. (ಸಂ.), ೧೯೭೬, ಜೀವನ ಜೋಕಾಲಿ ಭಾಗ ೮, ಕೋಲುಪದ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಸುಧಾಕರ, ೧೯೭೩, ನಮ್ಮ ಸುತ್ತಿನ ಗಾದೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಸೋಮನಾಥ ನುಚ್ಚಾ (ಸಂ.), ೨೦೦೬, ಕೋಲಾಟದ ಪದಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
- ಸೋಮಶೇಖರ ಇಮ್ರಾಪುರ (ಸಂ.), ೧೯೭೯, ಜಾನಪದ ವ್ಯಾಸಂಗ (ಭಾಗ–೧), ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಸೋಮಶೇಖರ ಇಮ್ರಾಪುರ, ೨೦೦೧, ಜಾನಪದ ಸಾಹಿತ್ಯ ದರ್ಶನ ೨೪ (ಪರಿಸರ ಮತ್ತು ಜಾನಪದ ಸಂಸ್ಕೃತಿ), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

- ಹನೂರು ಕೃಷ್ಣಮೂರ್ತಿ, ೨೦೦೫, ಸಾವಿರದ ಸಿರಿ ಬೆಳಗು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಹಲಸಂಗಿ ಗೆಳೆಯರು (ಸಂ), ೨೦೦೦, ಹಲಸಂಗಿ ಹಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಹನುಮಂತರಾವ್ ದೊಡ್ಡಮನಿ, ೨೦೦೪, ಜಾನಪದ ಹಬ್ಬಗಳು ಮತ್ತು ಉತ್ಸವಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
- ಹಿರೇಮಠ ಆರ್.ಸಿ. (ಸಂ.), ೧೯೭೪, ಜಾನಪದ ಸಾಹಿತ್ಯ ದರ್ಶನ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಅನುಬಂಧ ೩

## ಸಂಶೋಧನಾ ಪ್ರಬಂಧಗಳು


- ಅನಿತಾ ಬಂಡಾರೆ, ೨೦೦೧, ಜನಪದ ಸಾಹಿತ್ಯದಲ್ಲಿ ಮಹಿಳಾ ಸಂವೇದನೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಗದ್ದಗಿಮಠ ಬಿ.ಎಸ್., ೧೯೬೨, ಕನ್ನಡ ಜಾನಪದ ಗೀತೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಜಯಮಾಲಾ ಹಿರೇಮಠ, ೧೯೯೬, ಕನ್ನಡ ಜಾನಪದ ಐತಿಹಾಸಿಕ ಕಾವ್ಯಗಳು ಒಂದು ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
- ಬಿರಾದಾರ ಬಿ. ಬಿ, ೧೯೯೨, ಉತ್ತರ ಕರ್ನಾಟಕದ ಹಂತಿ ಒಂದು ಜನಪದ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ಬಂದವ್ವನ್ನವರ ಎಸ್. ಎಸ್, ೨೦೦೪, ಹಾವೇರಿ ಜಿಲ್ಲೆಯ ಜನಪದ ಕಾವ್ಯ ಪ್ರಕಾರಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ವತ್ಸಮಾಲಾ ಅರಗಂಜಿ, ೨೦೦೫, ಜನಪದ ಪದ್ಯ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
- ವಿರೇಶ ಬಡಿಗೇರ, ೧೯೯೬, ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
- ಹಿರೇಮಠ ಎಸ್. ಆಯ್, ೧೯೯೫, ಜನಪದ ಸಾಹಿತ್ಯ ಮಹಿಳಾ ಸಂಸ್ಕೃತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಅನುಬಂಧ ೪

# ಲೇಖನಸೂಚಿ


- ಜ್ಯೋತ್ಸ್ನಾ ಚಂದ್ರಕಾಂತ(ಲೇ.), ಜಾನಪದ ಮತ್ತು ಮಹಿಳೆ, ಜಾನಪದ ಕರ್ನಾಟಕ ಸಂಪುಟ–೭, ಸಂಚಿಕೆ–೨, ೨೦೧೦, ಕನ್ನಡ ವಿಶ್ವವಿದ್ಯಾಲಯ ಹಂಪಿ
- ಪದ್ಮಶ್ರೀ ಮೂರ್ತಿ (ಲೇ.), ೨೦ ಆಗಸ್ಟ್ ೨೦೧೬, ಹಬ್ಬ: ಸಂಬಂಧಗಳ ಭಾವ–ಬೆಸುಗೆ, ಭೂಮಿಕಾ ಪುರವಣಿ, ಪ್ರಜಾವಾಣಿ ದಿನಪತ್ರಿಕೆ
- ರಾಮು ಮೂಲಗಿ (ಲೇ.), ೨೯–೧೦–೨೦೧೨, ಸೀಗಿಹುಣ್ಣಿಮೆ ಮೆಟ್ರೋ ಪುರವಣಿ, ಪ್ರಜಾವಾಣಿ ದಿನಪತ್ರಿಕೆ.
- ಲಕ್ಷ್ಮೀಶ ಹೆಗಡೆ (ಲೇ.), ಜನವರಿ ೦೫, ೨೦೧೬, ಅರ್ಥ ಕಳೆದುಕೊಳ್ಳುತ್ತಿವೆ ಮನುಷ್ಯ ಸಂಬಂಧಗಳು, http.//kannada.readoo.in
- ವಾಲಿ ಎಂ.ಎಸ್.(ಲೇ.) ೨೦೧೩, ಜಾನಪದದಲ್ಲಿ ತಾಯಿ, ಲೋಕಸಿರಿ, ವಿಶೇಷ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು
- ಶರ್ಮಿಳಾ ರುದ್ರಪ್ಪ (ಲೇ.), ೨೦–೦೧–೨೦೧೩, ಬಾಡಿಗೆ ತಾಯ್ತನ, ಸಾಪ್ತಾಹಿಕ ಪುರವಣಿ, ಪ್ರಜಾವಾಣಿ ದಿನಪತ್ರಿಕೆ.
- ಶಿವಾನಂದ ಬ. ಟವಳಿ (ಲೇ.), ೧೦–೮–೨೦೧೩, ನಮಜೀಕ ಮಿಂಚಿ ಮುಗಲೀಗೆ ಏರಲಿ, ಮೆಟ್ರೊ ಪುರವಣಿ, ಪ್ರಜಾವಾಣಿ ದಿನಪತ್ರಿಕೆ.
- ಶೈಲಜಾ ಹಿರೇಮಠ (ಲೇ.), ನವೆಂಬರ್ ೨೦೦೩, ಮಾನಸ ತಿಂಗಳ ಪತ್ರಿಕೆ
- ಸುಧೀಂದ್ರಪ್ರಸಾದ್ ಇ.ಎಸ್., (ಲೇ.), ೨೩–೦೬–೨೦೧೩, 'ಲಿವ್–ಇನ್' ಮುಕ್ತ ಮುಕ್ತ ಮುಕ್ತ, ಸಾಪ್ತಾಹಿಕ ಪುರವಣಿ, ಪ್ರಜಾವಾಣಿ ದಿನಪತ್ರಿಕೆ.
- ಸುರೇಶ ದೇಸಾಯಿ (ಲೇ.), ೦೪–೦೨–೨೦೧೩, ಮಕ್ಕಳಿಗೆ ಹಾಕಿ ಸಂಸ್ಕಾರದ ಲಸಿಕೆ, ಶಿಕ್ಷಣ ಪುರವಣಿ, ಪ್ರಜಾವಾಣಿ ದಿನಪತ್ರಿಕೆ.
- ಹಿ. ಶಿ. ರಾಮಚಂದ್ರೇಗೌಡ(ಲೇ.), ಜನವರಿ ೨೦೦೧, ಜನಪದ ಸಾಹಿತ್ಯ ದರ್ಶನ ಭಾಗ–೨೪, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಅನುಬಂಧ ೫

# ವಿಶ್ವಕೋಶ ಹಾಗೂ ನಿಘಂಟುಗಳು


- ಅನ್ನಪೂರ್ಣ ಎಂ.(ಸಂ.), ೨೦೦೬, ಮಾನವಶಾಸ್ತ್ರ ಪದ ವಿವರಣಾ ಕೋಶ, ಭಾಗಿರಥಿ ಟ್ರಸ್ಟ್, ಮೈಸೂರು
- ಕನ್ನಡ ವಿಷಯ ವಿಶ್ವಕೋಶ, ಸಂಪುಟ-೧೩, ೧೯೯೮, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
- ಕನ್ನಡ ಸಂಕ್ಷಿಪ್ತ ನಿಘಂಟು, ೧೯೭೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೦
- ನಿಂಗಣ್ಣ ಚಿ. ಸಿ. (ಸಂ.), ೨೦೦೮, ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೧೨
- ಮಹಾದೇವಯ್ಯ ಟಿ. ಆರ್. (ಸಂ.), ೧೯೯೮, ಕನ್ನಡ ಜಾನಪದ ಕೋಶ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು
- ಶ್ರೀಮತಿ ಎಚ್.ಎಸ್. (ಸಂ.), ೨೦೦೬, ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

